ಮಿಂಚಿನಬಳ್ಳಿಯ ೧೯ನೆಯ ವರ್ಷದ ೨, ೩ ಹಾಗೂ ೪ನೇ ಕುಡಿ

# ಲೋಕಮಾನ್ಯ
# ಬಾಳ ಗಂಗಾಧರ ಟಿಳಕ

ಲೇಖಕರು :
ಸ್ವಾತಂತ್ರ್ಯಪ್ರಿಯ

ಮಿಂಚಿನಬಳ್ಳಿಯ ಕಾರ್ಯಾಲಯ
ಧಾರವಾಡ

ಮಕರ ಸಂಕ್ರಮಣ
೧೪-೧-೧೯೫೭

ಉತ್ತಮ ಪ್ರತಿ ೫-೮-೦

ಸಾದಾ ಪ್ರತಿ ೪-೮-೦

# ಒಂದೆರಡು ಮಾತುಗಳು

ಈಶ ಸಂಕಲ್ಪ ಒಂದೇ ಸತ್ಯ ಎಂಬ ಮಾತು ಹೆಜ್ಜೆ ಹೆಜ್ಜೆಗೆ ಅನುಭವಕ್ಕೆ ಬರುತ್ತಲಿದೆ. ಲೋಕಮಾನ್ಯರ ಚರಿತ್ರೆಯು ಪ್ರಕಾಶವನ್ನು ಕಂಡು ಹಳೆಯ ಮಾತಾಗಬೇಕಾಗಿದ್ದಿತು. ಅವನ ಇಚ್ಛೆ ಇರಲಿಲ್ಲ. ಈಗ ಅದು ಬೆಳಕಿಗೆ ಬರುತ್ತಿರುವದು ಆತನ ಅನುಗ್ರಹವೇ.

ಕನ್ನಡದಲ್ಲಿ ಇಲ್ಲಿಯ ವರೆಗೆ ಲೋಕಮಾನ್ಯರ ಬಗ್ಗೆ ವಿಸ್ತೃತವಾದ ಚರಿತ್ರೆಯು ಪ್ರಕಟವಾಗಿಲ್ಲ. ಭಾರತದ ರಾಷ್ಟ್ರೀಯ ಹೋರಾಟದ ಸೂತ್ರ ಚಾಲಕರಾಗಿ ಅನೇಕ ಕಷ್ಟನಷ್ಟಗಳನ್ನನುಭವಿಸಿ, ಜನಾಂಗದಲ್ಲಿ ರಾಷ್ಟ್ರೀಯ ಆಕಾಂಕ್ಷೆಗಳನ್ನು ಹುಟ್ಟಿಸಿ, ಮೃತಪ್ರಾಯರಾದ ಜನರನ್ನು ಹೋರಾಟಕ್ಕೆ ಹುರಿದುಂಬಿಸಿದ ಮಹಾಪುರುಷರಿರುವರು.

ಭಾರತದ ರಾಷ್ಟ್ರೀಯ ಹೋರಾಟದ ೪೦ ವರ್ಷಗಳ ಇತಿಹಾಸ ವೆಂದರೆ ಲೋಕಮಾನ್ಯರ ಜೀವನ. ಅಪ್ರತಿಮವಾದ ಬುದ್ಧಿಮತ್ತೆ, ಅಚಲ ವಾದ ಶ್ರದ್ಧೆ, ನಿಶ್ಚಿತವಾದ ರಾಷ್ಟ್ರೀಯ ಕಲ್ಪನೆ, ಆಳವಾದ ದೇಶಭಕ್ತಿ, ವೀರೋಚಿತವಾದ ಧೈರ್ಯ, ಸೋಲರಿಯದ ಮುಂದಾಳುತನ, ಅತುಲ ಪರಾಕ್ರಮ, ಸ್ಫಟಿಕದಂಥಹ ದಿವ್ಯಚಾರಿತ್ರ್ಯಗಳಿಂದ ಲೋಕಮಾನ್ಯರು ಇತಿಹಾಸದಲ್ಲಿ ಕಂಗೊಳಿಸುತ್ತಿದ್ದಾರೆ. ಭಾರತೀಯರಿಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ. ತರುಣರಿಗೆ ಮುಂಬೆಳಕಾಗಿದ್ದಾರೆ. ಇಂತಹ ಲೋಕ ಮಾನ್ಯರ ಈ ವಿಸ್ತೃತವಾದ ಚರಿತ್ರೆಯು ಕನ್ನಡ ತರುಣರಿಗೆ ಹೊಸ ಹುರುಪನ್ನು ಕೊಡುವದೆಂದು ಬಗೆಯುತ್ತೇನೆ.

ಈ ಗ್ರಂಥದಲ್ಲಿ ಚರಿತ್ರೆಯು ವಿಸ್ತೃತವಾಗಿ ವರ್ಣಿಸಲ್ಪಟ್ಟಿದೆ. ರಾಷ್ಟ್ರ ನಿರ್ಮಾಣದ ಈ ಕಾಲದಲ್ಲಿ ಅವರ ದಿವ್ಯ ರಾಷ್ಟ್ರದ ಕಲ್ಪನೆ ಏನಿತ್ತೆಂಬುದು ಜನಾಂಗದ ಎದುರಿಗೆ ಬರಬೇಕಾಗಿದೆ. ರಾಷ್ಟ್ರಪುನರ್ರಚನೆಯು ಯಾವ ತತ್ವ ಗಳ ಮೇಲೆ, ಯಾವ ಮಾರ್ಗದಿಂದ ಆಗಬೇಕೆಂಬ ಬಗ್ಗೆ, ಅವರು ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ ಮುಂಡಿಸಿದ್ದಾರೆ. ಅವರ ಎದುರಿಗೆ ಆ ಕಾಲಕ್ಕೆ

ಸ್ವಾತಂತ್ರ್ಯದ ಹೋರಾಟವೇ ಮುಖ್ಯವಾಗಿದ್ದುದರಿಂದ ರಾಷ್ಟ್ರ ನಿರ್ಮಾಣದ ಅವರ ವಿಚಾರಗಳು ಆಗ ರೂಪಗೊಂಡಿಲ್ಲ. ರಾಷ್ಟ್ರವು ಸ್ವತಂತ್ರವಾದನಂತರ, ಆ ಕಾಲವು ಈಗ ಸನ್ನಿಹಿತವಾಗಿದೆ. ಭಾರತವು ಭಾರತೀಯವಾಗಿಯೇ ಉಳಿಯಬೇಕೇ ಹೊರತು, ಪಾಶ್ಚಾತ್ಯ ರಾಷ್ಟ್ರವಾಗಬಾರದು ಎಂಬುದೇ ಅವರ ಹೆಬ್ಬಯಕೆ. ಈ ದೃಷ್ಟಿಯಿಂದಲೇ ಭಾರತೀಯ ಸಂಸ್ಕೃತಿ, ಸಾಂಪ್ರದಾಯಗಳನ್ನು ಪ್ರೋತ್ಸಾಹಿಸಿ, ಅವುಗಳನ್ನು ಪುನರುಜ್ಜೀವನಗೊಳಿಸಿ, ಹೊಸ ಕಾಲಕ್ಕೆ ತಕ್ಕಂತೆ ಹೊಸ ದೃಷ್ಟಿಯಿಂದ ಆ ತತ್ವಗಳನ್ನೂ ಶಕ್ತಿಯನ್ನೂ ಸಂಗ್ರಹಿಸಿ, ಅದರ ಆಧಾರದ ಮೇಲೆಯೇ ಆಧ್ಯಾತ್ಮ ತೇಜದಿಂದ ಬೆಳಗುವ ಸಂಪತ್ ಸಮೃದ್ಧಿಗಳಿಂದೊಡಗೂಡಿದ ವೀರಭಾರತವನ್ನು ನಿರ್ಮಿಸುವದೇ ಅವರ ಕನಸಾಗಿದ್ದಿತು. ಆ ಬಗೆಯ ಹೊಳವನ್ನು ಕೂಡ ಅವರು ಹಾಕಿದ್ದಾರೆ, ಮಾರ್ಗದರ್ಶನ ಮಾಡಿದ್ದಾರೆ. ಈ ದೃಷ್ಟಿಯಿಂದ ಲೋಕಮಾನ್ಯರ ಚರಿತ್ರೆಯನ್ನು ನೋಡಬೇಕೆಂದು ನನ್ನ ಬಿನ್ನಹ.

ಚಂದಾದಾರರಿಗೆ ಈ ಗ್ರಂಥವನ್ನು ಅರ್ಪಿಸಿದರೆ, ಈ ವರ್ಷ ೭೦೦ ಪುಟಕ್ಕಿಂತಲೂ ಹೆಚ್ಚು ಪುಟಗಳನ್ನು ಕೊಟ್ಟಂತಾಗುತ್ತದೆ. ಬಳ್ಳಿಯ ಪರಿಸ್ಥಿತಿಯನ್ನು ಮೇಲಿಂದ ಮೇಲೆ ಹೇಳುವದರಿಂದ ಅರ್ಥವಿಲ್ಲ. ತಮ್ಮ ನೆರವನ್ನೇ ಅದು ಅವಲಂಬಿಸಿದೆ ಎಂದು ಇಷ್ಟೇ ಹೇಳಬಲ್ಲೆ. ರಾಷ್ಟ್ರೀಯ ಪುನರುಜ್ಜೀವನದ ಈ ಕಾರ್ಯದಲ್ಲಿ ಎಲ್ಲರೂ ಸಹಾಯಮಾಡಬೇಕೆಂದು ಇನ್ನೊಮ್ಮೆ ಬಿನ್ನವಿಸುವೆ.

ಈ ಕಾರ್ಯದಲ್ಲಿ ನೆರವಾದ ಪಂಡಿತ ಪೂಜ್ಯ ಗುರುರಾಜಾಚಾರ್ಯರಿಗೂ ನನ್ನ ಗೆಳೆಯರಿಗೂ ಮುನ್ನುಡಿಯನ್ನು ಬರೆದುಕೊಟ್ಟ, ನಮ್ಮ ಹಿರಿಯರೂ ಮುಂದಾಳುಗಳೂ ಆದ ಶ್ರೀ ಹುಕ್ಕೇರಿಕರ ರಾಮರಾಯರಿಗೂ ಬಳ್ಳಿಯು ಚಿರಋಣಿಯಾಗಿದೆ.

ಧಾರವಾಡ
೧೪-೧-೫೭

ತಮ್ಮ ಸೇವಕ
**ಬುರ್ಲಿ ಬಿಂದುಮಾಧವ**
ಸಂಪಾದಕ

# ಮುನ್ನುಡಿ

ನನ್ನ ಆಪ್ತಮಿತ್ರರಾದ ಶ್ರೀ ಬುರ್ಲಿಯವರು, ತಾವು ಪ್ರಸಿದ್ಧಿಸುತ್ತಿರುವ ಲೋಕಮಾನ್ಯ ಟಿಳಕರವರ ಜೀವನದ ಚರಿತ್ರೆಗೆ ಮುನ್ನುಡಿಯೆಂದು ನಾಲ್ಕು ವಾಕ್ಯಗಳನ್ನು ಬರೆಯಲು ಹೇಳಿದಾಗ, ನಾನು ಕೂಡಲೇ ಒಪ್ಪಿಕೊಂಡೆ. ಇದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ. ಕನ್ನಡ ಸಾಹಿತ್ಯದಲ್ಲಿ ವಿಚಾರ ಸಾಹಿತ್ಯವನ್ನು ಅಭಿವೃದ್ಧಿಗೊಳಿಸಬೇಕೆಂಬ ಮಹೋದ್ದೇಶದಿಂದ ಅವಿರತ ವಾಗಿ ಶ್ರಮಪಡುತ್ತಿರುವ ಕೆಲವೇ ಪ್ರಕಟನೆಗಾರರಲ್ಲಿ ಶ್ರೀ ಬುರ್ಲಿಯವರು ಅಗ್ರಗಣ್ಯರಾಗಿದ್ದಾರೆ. ಅವರ ಪ್ರಸ್ತುತ ಪ್ರಕಟನೆಯು ಪ್ರಗತಿಪಥದಲ್ಲಿ ಇನ್ನೊಂದು ಮಹತ್ವದ ಮೈಲುಗಲ್ಲು ಎಂದು ಹೇಳಬಹುದು. ಏಕೆಂದರೆ ಕನ್ನಡದಲ್ಲಿ, ನಾನು ತಿಳಿದ ಮಟ್ಟಿಗೆ, ಲೋಕಮಾನ್ಯ ಟಿಳಕರ ವಿವರವಾದ ಜೀವನ ಚರಿತ್ರೆಯು ಲಭ್ಯವಿಲ್ಲ. ಆದ್ದರಿಂದ ದೇಶದಾದ್ಯಂತ ಲೋಕಮಾನ್ಯರ ಶತಜನ್ಮದಿನೋತ್ಸವವನ್ನು ಆಚರಿಸುತ್ತಿರುವ ಸುಪ್ರಸಂಗದಲ್ಲಿ, ಈ ಪುಸ್ತಕ ವನ್ನು ಪ್ರಕಟಿಸಿದುದಕ್ಕೆ ನಾವೆಲ್ಲ ಅವರಿಗೆ ಋಣಿಯಾಗಿದ್ದೇವೆ. ಎರಡನೆಯ ಕಾರಣವೆಂದರೆ, ನನ್ನ ರಾಜಕೀಯ ಜೀವನದಲ್ಲಿ, ಲೋಕಮಾನ್ಯರೊಂದಿಗೆ ನೇರವಾಗಿ ಸಂಬಂಧ ಬರುವ ಅನೇಕ ಸಂದರ್ಭಗಳೊದಗಿದ್ದವು. ಪುಣೆಗೆ ಕಾಲೇಜು ವ್ಯಾಸಂಗಕ್ಕೆಂದು ಹೋದಾಗ, ಲೋಕಮಾನ್ಯರನ್ನು ಮೊದಲ ಸಲ ನಾನು ಕಂಡದ್ದು. ಆಗ ನನ್ನ ಶಿಕ್ಷಣಕ್ಕೆ ಅವಶ್ಯವಿದ್ದ ಧನಸಹಾಯದ ಆಶ್ವಾಸನ ಅವರಿಂದ ದೊರಕಿತು. ಹೀಗೆ ವಿದ್ಯಾರ್ಥಿ ದೆಸೆಯಿಂದಲೇ ನನ್ನ ಅವರ ಸಂಬಂಧವು ಆರಂಭವಾಯಿತು.

ಆ ನಂತರದ ನಮ್ಮ ಸಂಬಂಧವನ್ನು ವಿವರಿಸುವದಕ್ಕಿಂತ ಲೋಕ ಮಾನ್ಯರ ಹಾಗೂ ಕರ್ನಾಟಕದ ಸಂಬಂಧವನ್ನು ವಿವೇಚಿಸುವದೇ ಹೆಚ್ಚು ಯೋಗ್ಯವಾದೀತು. ಸ್ವಾತಂತ್ರ್ಯ ಸಂಗ್ರಾಮದ ಕಿಡಿಗಳನ್ನು ಕರ್ನಾಟಕದಲ್ಲಿ ಎಬ್ಬಿಸಿದ ಶ್ರೇಯಸ್ಸು ಟಿಳಕರಿಗೇ ಸಲ್ಲಬೇಕು. ಸುಮಾರು ೧೮೯೬ ರಿಂದ ೧೯೨೦ ರ ಕಾಲದಲ್ಲಿ ಕರ್ನಾಟಕದ ಎಲ್ಲೆಡೆಯಲ್ಲಿಯೂ ಟಿಳಕರವರ ಶಿಷ್ಯ ವೃಂದವನ್ನು ನಾವು ಕಾಣಬಹುದಿತ್ತು. ಲೋಕಮಾನ್ಯರ ಯಾವದೊಂದು ಘೋಷಣೆಯು ಕರ್ನಾಟಕದ ರಾಜಕಾರಣದಲ್ಲಿ ತೀವ್ರವೇ ಕಾರ್ಯ ರೂಪದಲ್ಲಿ ಬರುತ್ತಿತ್ತು. ಆದುದರಿಂದಲೇ ಮಹಾರಾಷ್ಟ್ರ ಹಾಗೂ ಸೆಂಟ್ರಲ್ ಪ್ರಾವಿನ್ಸ (C.P.) ಗಳನ್ನು ಬಿಟ್ಟರೆ, ಸ್ವಾತಂತ್ರ್ಯದ ಚಳವಳಿಯಲ್ಲಿ

ಕರ್ನಾಟಕವೇ ಅಗ್ರೇಸರವಾಗಿತ್ತೆಂದು ಹೇಳಬಹುದು. ಟಿಳಕರು ಹಾಕಿಕೊಟ್ಟ ಆಂದೋಲನವು ಮೂರು ಮುಖವುಳ್ಳದ್ದಾಗಿತ್ತು— ರಾಷ್ಟ್ರೀಯ ಶಿಕ್ಷಣ, ಪರದೇಶೀ ಸರಕುಗಳ ಪ್ರತಿಬಂಧ, ಹಾಗೂ ಸ್ವದೇಶಿ ಚಳುವಳಿ ಈ ತ್ರಿವಿಧ ಕಾರ್ಯಕ್ರಮಗಳಲ್ಲಿ ಕರ್ನಾಟಕವು ಬಹಳೇ ಪ್ರಗತಿಯನ್ನು ಸಾಧಿಸಿತು. ಪರದೇಶಿ ಸರಕುಗಳ 'ಹೋಳಿ'ಯು ಎಷ್ಟು ದೊಡ್ಡ ಪ್ರಮಾಣದಲ್ಲಿ ನಡೆಯಿತೆಂಬುದರ ಚಿತ್ರವು, ಅದನ್ನು ಕಣ್ಣಾರೆ ಕಂಡ ನನ್ನ ಎದುರು ಇಂದಿಗೂ ಇದೆ. ಎಷ್ಟೋ ಜನರು ಕಲ್ಲೆಣ್ಣೆಯು ಪರದೇಶಿಯ ವಸ್ತುವೆಂದು, ಬರಿ ಶೇಂಗಾದ ಎಣ್ಣೆಯಿಂದ ದೀಪ ಉರಿಸುತ್ತಿದ್ದುದರ ನೆನಪು ನನಗಿನ್ನೂ ಇದೆ. ಚಳುವಳಿಯ ತೀಕ್ಷ್ಣತೆಯು ಎಷ್ಟಿತ್ತೆಂಬುದನ್ನು ಉದಹರಿಸಲು ಮಾತ್ರ ಈ ಒಂದೆರಡು ಮಾತುಗಳನ್ನು ಹೇಳುತ್ತಿದ್ದೇನೆ. ರಚನಾತ್ಮಕ ಕಾರ್ಯಕ್ರಮಗಳಲ್ಲಿಯೂ ಕರ್ನಾಟಕವು ಹಿಂದುಳಿಯಲಿಲ್ಲ. ರಾಷ್ಟ್ರೀಯ ಶಿಕ್ಷಣವನ್ನು ಕೊಡುವ ಅನೇಕ ಶೈಕ್ಷಣಿಕ ಸಂಸ್ಥೆಗಳು ಈ ಕಾಲದಲ್ಲಿಯೇ ತಲೆದೋರಿದವು. ನಮ್ಮ ಗದುಗಿನ ಅರಿವೆಯ ಗಿರಣಿಯು ಟಿಳಕರ ಪ್ರಯತ್ನದ ಫಲವಾಗಿಯೇ ಆಗ ಅಸ್ತಿತ್ವದಲ್ಲಿ ಬಂದಿತು. ಸ್ವದೇಶೀ ವಸ್ತುಗಳನ್ನು ಮಾರಾಟ ಮಾಡುವ ಅನೇಕ ಅಂಗಡಿಗಳು ತಲೆದೋರಿದವು.

ಹೀಗೆ ಲೋಕಮಾನ್ಯರ ಸಂದೇಶನಕ್ಕೆ 'ಓ'ಗೊಟ್ಟು ಕರ್ನಾಟಕವೂ ಸ್ವಾತಂತ್ರ್ಯಸಂಗ್ರಾಮದಲ್ಲಿ ಅಗ್ರಗಣ್ಯವೆಂದೆನಿಸಿತು. ಆ ಕಾಲದ ಕರ್ನಾಟಕದ ಮುಖಂಡರೆಲ್ಲ ಬಹುಶಃ ಲೋಕಮಾನ್ಯರ ಶಿಷ್ಯರೇ ಆಗಿದ್ದರು. ಶ್ರೀಯುತರುಗಳಾದ ಗಂಗಾಧರರಾವ ದೇಶಪಾಂಡೆ, ಆಲೂರ ವೆಂಕಟರಾವ, ದತ್ತೋಪಂತ ಬೆಳವಿ, ಶ್ರೀನಿವಾಸರಾವ ಕೌಜಲಗಿ, ಸುಬ್ರಾವ ಹಳದೀಪುರ ಹಾಗೂ ಗದಿಗೆಯ್ಯ ಹೊನ್ನಾಪುರಮಠ ಇವರೆಲ್ಲ ಆ ಚಳುವಳಿಯ ಕಾರ್ಯಕರ್ತರಾಗಿದ್ದರು.

ಲೋಕಮಾನ್ಯರು ಇಂಗ್ಲಂಡಕ್ಕೆಹೋಗಬೇಕಾದಾಗ,ಅವರ ಪ್ರವಾಸದ ವೆಚ್ಚಕ್ಕಾಗಿ ಹಣ ಸಂಗ್ರಹಿಸುವ ಕಾರ್ಯ, ಕರ್ನಾಟಕದಲ್ಲೂ ನಡೆಯಿತು. ಆದರೆ ಮುಂದೆ 'ಕೇಸರೀ' ಪತ್ರಿಕೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿದಾಗ, ಟಿಳಕರವರು ಕರ್ನಾಟಕದಿಂದ ಬಂದ ಹಣವನ್ನು ಒಂದು ವಿಶ್ವಸ್ಥ ನಿಧಿಯನ್ನಾಗಿ ಮಾಡಿ ಕರ್ನಾಟಕಕ್ಕೇ ಮರುಳಿಕೊಟ್ಟರು.

ಈ ರೀತಿ ಟಿಳಕ-ಕರ್ನಾಟಕ ಸಂಬಂಧವು ತೀರಾ ನಿಕಟವಾಗಿತ್ತು. ಅಂತೆಯೇ ಕನ್ನಡಿಗರಾದ ನಾವು ಅವರ ಚರಿತ್ರೆಯನ್ನು ಓದಿ, ಅವರ ತತ್ವ ಪ್ರಣಾಲಿಯನ್ನು ಅರಿತುಕೊಳ್ಳುವ ಅವಶ್ಯಕತೆಯಿದೆ. ತತ್ಕಾಲೀನ ಜನರಿಗಿಂತ ಈಗ ಅವರ ಪೂರ್ಣ ಜೀವನವನ್ನು ಅಭ್ಯಸಿಸುವದಕ್ಕೆ ಹೆಚ್ಚು ಅನುಕೂಲ ವಿದೆ. ಏಕೆಂದರೆ ಈಗ ಅವರಿಗೆ ಸಂಬಂಧಪಟ್ಟ ಎಲ್ಲ ಕಾಗದಪತ್ರಗಳೂ ನಮಗೆ ಲಭ್ಯವಾಗಿವೆ. ಯಾವ ಸಾಮ್ರಾಜ್ಯದ ನೊಗವನ್ನೇ ಕಿತ್ತೊಗೆಯಲು ಅವರು ಹೋರಾಡಿದರೋ ಆ ಬ್ರಿಟಿಶರೇ ಲೋಕಮಾನ್ಯರ ವ್ಯಕ್ತಿತ್ವದ ಮಹೋನ್ನತೆಯನ್ನು ಒಪ್ಪಿ, ತಲೆಬಾಗಿಸಿದ್ದನ್ನು ನಾವು ಕಾಣುತ್ತೇವೆ.

ಟಿಳಕರವರ ಲೋಕಪ್ರಿಯತೆಗೆ ಅವರು ಜನತೆಯ ಬಗ್ಗೆ ತೋರುತ್ತಿದ್ದ ವಾತ್ಸಲ್ಯವೇ ಕಾರಣವು. ಜನರೊಂದಿಗೆ ಬೆರೆತು ಅವರ ಸುಖದುಃಖಗಳಲ್ಲಿ ಸಮಭಾಗಿಗಳಾಗುತ್ತಿದ್ದರು. ೧೮೯೭ರಲ್ಲಿ ಪುಣೆಯಲ್ಲಿ ಪ್ಲೇಗದ ಹಾವಳಿ ಯಾದಾಗ ಬಹಳಷ್ಟು ಜನರು ಊರನ್ನೇ ಬಿಟ್ಟು ಬೇರೆಡೆಗೆ ತೆರಳಿದರು. ಆದರೆ ಟಿಳಕರವರು ಅಲ್ಲಿಯೇ ನಿಂತು, ತಮ್ಮ ಜೀವದಪರಿವೆಯಿಲ್ಲದೆ, ಪ್ಲೇಗದಿಂದ ಬಳಲುತ್ತಿರುವವರ ಶುಶ್ರೂಷೆಗಾಗಿ ಹಗಲಿರುಳು ದುಡಿದರು. ಈ ರೀತಿ ಜನರಿಗಾಗಿ ಅವರು ಯಾವ ತ್ಯಾಗವನ್ನು ಮಾಡಲೂ ಸಿದ್ಧರಿದ್ದರು. ಅಂದಮೇಲೆ ಅವರ ಅನುಯಾಯಿಗಳ ಸಂಖ್ಯೆಯು ಬೆಳೆಯುತ್ತ ಹೋದುದ ರಲ್ಲಿ ಏನಾಶ್ಚರ್ಯವಿದೆ?

ಸ್ವಾತಂತ್ರ್ಯ ಸಂಗ್ರಾಮದ ಕಾರ್ಯಕ್ರಮಗಳೆಲ್ಲದರ ಆರಂಭವನ್ನು ಲೋಕಮಾನ್ಯರ ಚಳುವಳಿಯಲ್ಲಿಯೇ ನಾವು ಕಾಣಬಹುದಾಗಿದೆ. ಸಾಮಾಜಿಕ ಶಿಕ್ಷಣ, ಸ್ತ್ರೀ ಶಿಕ್ಷಣ, ಹರಿಜನೋದ್ಧಾರ ಮುಂತಾದ ಸರ್ವವಿಧ ಕಾರ್ಯಕ್ರಮಗಳಿಗೂ ಇವರು ಉತ್ತೇಜನವೀಯು ತ್ತಿದ್ದರು. ಆದರೆ ಇವರ ತತ್ವಪ್ರಣಾಲಿಯ ಒಂದು ವೈಶಿಷ್ಟ್ಯವೆಂದರೆ— ಸ್ವಾತಂತ್ರ್ಯ ಸಂಪಾದನೆಯು ನಮ್ಮ ಪ್ರಥಮ ಧ್ಯೇಯವಾಗಬೇಕು ಹಾಗೂ ಆ ದಿಶೆಯಲ್ಲಿಯೇ ನಮ್ಮ ಸರ್ವಶಕ್ತಿಯನ್ನು ಕೇಂದ್ರೀಕರಿಸಬೇಕು. ಒಮ್ಮೆ ಸ್ವಾತಂತ್ರ್ಯವನ್ನು ದೊರಕಿಸಿದೆವೆಂದರೆ, ಉಳಿದೆಲ್ಲ ಸುಧಾರಣೆಗಳನ್ನು ಕಾರ್ಯರೂಪದಲ್ಲಿ ತರುವದು ಸುಲಭಸಾಧ್ಯ. ಈ ಮಾತು ಆ ಕಾಲದ ಕೆಲ ಜನರಿಗೆ ಅಷ್ಟೊಂದು ರುಚಿಸಲಿಲ್ಲ. ಆದರೆ ಸ್ವಾತಂತ್ರ್ಯಾನಂತರದ

ಹತ್ತೀ ವರ್ಷಗಳಲ್ಲಿ ನಾವು ಕೈಕೊಂಡ ಸಮಾಜ ಸುಧಾರಣೆಯ ಕಾರ್ಯ ಕ್ಷೇತ್ರವನ್ನು ನೋಡಿದರೆ, ಅಂದು ಅವರು ಹೇಳುತ್ತಿದ್ದ ಮಾತಿನ ಸತ್ಯತೆಯು ಸುಸ್ಪಷ್ಟವಾಗುವದು.

ಸ್ವರಾಜ್ಯಪರಂಪರೆಯ ಬೀಜವನ್ನು ಬಿತ್ತಿದ ಶ್ರೇಯಸ್ಸು ಈ ರೀತಿ ಟಿಳಕರಿಗೇ ಸಲ್ಲುವದು. ಅವರ ಉಗ್ರ ಲೇಖನಗಳು ಜನರಲ್ಲಿ ಜಾಗ್ರತಿ ಯನ್ನುಂಟು ಮಾಡಿದವು. ಈ ದೃಷ್ಟಿಯಿಂದ ಗಾಂಧೀಜಿಯವರ ಕಾರ್ಯ ಕ್ರಮಗಳಿಗೆ ಅಸ್ತಿವಾರವನ್ನು ಹಾಕಿದವರು ಟಿಳಕರೇ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇಂಥ ಮಹಾಪುರುಷರ ಚರಿತ್ರೆಯಿಂದ ನಾವೆಲ್ಲ, ವಿಶೇಷವಾಗಿ ಇಂದಿನ ಯುವಕರು ಕಲಿಯಬೇಕಾದ ಅನೇಕ ಪಾಠಗಳಿವೆ. ದೇಶಭಕ್ತಿ ತ್ಯಾಗ, ಧೈರ್ಯ, ಧ್ಯೇಯನಿಷ್ಠತೆ ಇವೆಲ್ಲ ಗುಣಗಳನ್ನು ಅಳವಡಿಸಿಕೊಂಡು ರಾಷ್ಟ್ರೀಯ ಜೀವನದಲ್ಲಿ ಕಾರ್ಯಮಾಡಬೇಕಾಗಿದೆ. ಬುದ್ಧಿಯಷ್ಟೇ ಚಾರಿತ್ರ್ಯವೂ ಮಹತ್ವದ್ದು ಎಂದು ಅವರು ಧೃಡವಾಗಿ ನಂಬಿದ್ದರು; ಮತ್ತು ಅವರ ಜೀವನವೇ ಆ ತತ್ವದ ಉತ್ತಮ ದೃಷ್ಟಾಂತವಾಗಿದೆ. ಸಾರ್ವಜನಿಕ ಜೀವನದಲ್ಲಂತೂ ನುಡಿಯಂತೆ ನಡೆಯೂ ಇರಬೇಕಾದುದು ಅತ್ಯಾವಶ್ಯಕ ವಾಗಿದೆ. ಲೋಕಮಾನ್ಯರ ಜೀವನದಾದ್ಯಂತ ಹೋರಾಟವೆಲ್ಲ ಗೀತೆಯ "ಕರ್ಮಣ್ಯೇ ವಾಽಧಿಕಾರಸ್ತೇ ಮಾ ಫಲೇಷು ಕದಾಚನ" ತತ್ವದ ಮೇಲೆ ನಿಂತುದು ಸುಸ್ಪಷ್ಟವಾಗಿದೆ. ಅಂತೆಯೇ ಯಾವ ಫಲಾಪೇಕ್ಷೆಯಿಲ್ಲದೆ ಧ್ಯೇಯಸಾಧನೆಗೆ ಅವಿಶ್ರಾಂತವಾಗಿ ಟಿಳಕರು ದುಡಿದರು. ಕಾಯಕದಲ್ಲಿಯೇ ಕೈಲಾಸವನ್ನು ಕಾಣುವ ಮಹಾಪುರುಷರಲ್ಲಿ ಟಿಳಕರವರು ಅಗ್ರಗಣ್ಯ ರಾಗಿದ್ದಾರೆ. ಇಂಥ ಮಹನೀಯರ ಜೀವನ ಚರಿತ್ರೆಯು ಬೀರುವ ಬೆಳಕು, ಕರ್ನಾಟಕದ ಯುವಕರಿಗೆಲ್ಲ ಮಾರ್ಗದರ್ಶಕವಾಗಲೆಂದು ನಾನು ಹಾರೈಸುವೆ.

ಮಲಬಾರ ಹಿಲ್
ಮುಂಬಯಿ
೧ನೆಯ ನವ್ಹಂಬರ ೫೬

**ರಾ. ಶ್ರೀ. ಹುಕ್ಕೇರಿಕರ**

# ಲೇಖಕನ ಬಿನ್ನಹ

ಶ್ರೀ ಬುರ್ಲಿಯವರು ಲೋಕಮಾನ್ಯರ ಚರಿತ್ರೆಯನ್ನು ನೀವು ಬರೆಯ ಬೇಕೆಂದು ಆಜ್ಞಾಪಿಸಿ, ಅವರ ಚರಿತ್ರ ಗ್ರಂಥಗಳ ರಾಶಿಯನ್ನು ಎದುರಿಗೆ ಇರಿಸಿದಾಗ ಎದೆ ನಡುಗಿತು. ಲೋಕಮಾನ್ಯರಂಥ ಅಲೌಕಿಕ ಪುರುಷರ ಚರಿತ್ರೆಯನ್ನು ಬರೆಯಲು ನಾನು ಸಮರ್ಥನೇ? ಎಂದು ಮನಸ್ಸು ಪ್ರಶ್ನಿಸಿತು. ಇಷ್ಟು ಗ್ರಂಥಗಳನ್ನು ಈ ಅವಧಿಯಲ್ಲಿ ಓದುವದು ಸಾಧ್ಯವೇ? ಎನಿಸಿತು. ಅವರ ಒತ್ತಾಯ, ನನ್ನ ಅಶಕ್ತತೆಗಳಿಂದ ದಿಕ್ಕುಕಾಣದಾದೆ. ಆದರೆ ಅವರು ತಲೆಗೆ ಕಟ್ಟಿಯೇ ಬಿಟ್ಟರು. ತೀರ ಸರಳ, ಸುಲಭ, ರೈತರಿಗೆ ಕೂಡ ತಿಳಿಯುವ ಭಾಷೆಯಲ್ಲಿ ಬರೆಯಬೇಕೆಂದು ಕಟ್ಟಪ್ಪಣೆ ಮಾಡಿದರು.

ಈ ಸಮುದ್ರದಲ್ಲಿ ಈಜುವದು ನನ್ನ ಶಕ್ತಿಯಲ್ಲವೆಂದೆನಿಸಿತು. ಶ್ರೀ ನ. ಚಿ. ಕೇಳಕರರಿಗೆ ಮೊರೆಹೊಕ್ಕೆ. ಅವರ ಬೆಳಕಿನಲ್ಲಿ ಮುಂದರಿದೆ. ಓದ ಓದುತ್ತ ಹೋದಂತೆ ಎಲ್ಲ ಲೇಖಕರಿಗೆ ಅವರೇ ಮೂಲಾಧಾರರೆಂದು ಕಂಡು ಬಂದಿತು. ನಾನೂ ಅವರನ್ನೇ ಆಶ್ರಯಿಸಿ ಬಹಳಷ್ಟು ಸಂಗತಿಗಳನ್ನು ಅವರ ಗ್ರಂಥದಿಂದ ಸಂಗ್ರಹಿಸಿದೆ. ಕರಮರಕರ ಹಾಗೂ ತಾಮ್ಹಣಕರರ ಗ್ರಂಥ ಗಳಿಂದಲೂ ಆಯ್ದುಕೊಂಡೆ. ನಾನು ಬಳಸಿದ ಗ್ರಂಥಗಳನ್ನು ಬೇರೆಡೆಗೆ ಕೊಡಲಾಗಿದೆ. ಲೋಕೋತ್ತರ ಪುರುಷರಾದ ಲೋಕಮಾನ್ಯರ ಚರಿತ್ರೆಯು ಅದ್ಭುತ ರಮ್ಯವೂ ರೋಮಾಂಚಕಾರಿಯೂ ಸ್ಫೂರ್ತಿದಾಯಕವೂ ಭಾರತೀಯ ಹೋರಾಟದ ಅರ್ಧ ಶತಮಾನದ ವೀರ ಕಥೆಯೂ ಆಗಿದ್ದು, ಅದನ್ನು ಚಿತ್ರಿಸುವ ಶಕ್ತಿಯು ನನ್ನಲ್ಲಿಲ್ಲವೆಂದೂ ಅನಿಸಹತ್ತಿತು. ರಾಷ್ಟ್ರ ನಿರ್ಮಾಣಕರಾದ ಲೋಕಮಾನ್ಯರ ಬಗೆಗೆ ಬರೆಯುವ ಯೋಗವು ತಾನಾ ಗಿಯೇ ಬಂದಿರಲು ಅದನ್ನು ಬಿಡುವದು ಸರಿಯಲ್ಲವೆಂದು ಇನ್ನೊಂದು ಮನಸ್ಸು ಹೇಳುತ್ತಿದ್ದಿತು. ದೇವರ ಮೇಲೆ ವಿಶ್ವಾಸವಿಟ್ಟು ಈ ಕಾರ್ಯಕ್ಕೆ ಕೈ ಹಾಕಿದೆ.

ಈ ಗ್ರಂಥದಲ್ಲಿ ಲೋಕಮಾನ್ಯರ ಸಾಮಾಜಿಕ ದೃಷ್ಟಿ, ರಾಷ್ಟ್ರ ನಿರ್ಮಾ ಣದ ಕಲ್ಪನೆ, ಸುಧಾರಣೆಯ ಮಾರ್ಗ ಈ ವಿಚಾರಗಳನ್ನು ಹೆಚ್ಚು ವಿಸ್ತೃತ

ವಾಗಿ ಕೊಡಲಾಗಿದೆ. ಇದಲ್ಲದೆ ಲೋಕಮಾನ್ಯರ ಕಾಲದಲ್ಲಿ ಅವರ ಪ್ರೇರಣೆ ಯಿಂದ ಕರ್ನಾಟಕದಲ್ಲಿ ನಡೆದ ಚಟುವಟಿಕೆಗಳನ್ನು ಸಂಗ್ರಹಿಸಿಕೊಡಲಾಗಿದೆ.

ಇದನ್ನು ಬರೆಯುವಾಗ ನನಗೆ ನೆರವಾದ ಪೂಜ್ಯ ಪಂ. ಗುರುರಾಜಾ ಚಾರ್ಯ ಪಾಂಡುರಂಗಿ, ದೇಸಾಯಿ ಗೋವಿಂದಮೂರ್ತಿ ಹಾಗೂ ಸುರೇಂದ್ರ ದಾನಿ ಮತ್ತು ಆರ್. ವ್ಹಿ. ಕುಲಕರ್ಣಿಯವರಿಗೆ ನನ್ನ ಕೃತಜ್ಞತೆಗಳನ್ನರ್ಪಿಸ ದಿರಲಾರೆ. ಅದರಂತೆಯೇ ಟಿಳಕ ಹಾಗೂ ಉತ್ತರಾದಿ ಮಠದ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರ ಚರ್ಚೆಯ ಪ್ರಕಟನೆಗಳನ್ನು ಒದಗಿಸಿಕೊಟ್ಟ, ಪೂಜ್ಯ ಗಲಗಲಿ ರಾಮಾಚಾರ್ಯರಿಗೂ ಅದರಂತೆಯೇ ಗ್ರಂಥಗಳನ್ನು ಒದಗಿಸಿ ಕೊಟ್ಟ ಜೋಗ ಶ್ರೀನಿವಾಸರಾಯರಿಗೂ, ಮಹಾರಾಷ್ಟ್ರ ಮಂಡಳಕ್ಕೂ ಜನತಾ ಕಾಲೇಜಿಗೂ ಕರ್ನಾಟಕ ಹೈಸ್ಕೂಲಿಗೂ ನಾನು ಋಣಿಯಾಗಿದ್ದೇನೆ.

ಲೋ. ಚರಿತ್ರೆಯು ಮಹತ್ವದ್ದಾದರೂ ಬರೆಯಲು ಯತ್ನಿಸಿದ ನಾನು ಅಸಮರ್ಥನು. ಸುರಿತ ಲೇಖಕನೂ ಅಲ್ಲ. ಆದರೆ ಬರೆಯಬೇಕೆಂಬ ಹಂಬಲ. ಮೇಲೆ ಸಂಪಾದಕರ ಒತ್ತಾಯ. ಇವುಗಳಿಂದ ನನ್ನ ಹರಕು ಮುರುಕು ಭಾಷೆಯಲ್ಲಿ ಬರೆಯಲು ಯತ್ನಿಸಿದ್ದೇನೆ. ಅನೇಕ ದೋಷಗಳಿರಬಹುದು. ಅವೆಲ್ಲವೂ ನನ್ನವೇ. ಇದರಲ್ಲಿಯ ಒಳ್ಳೇಯ ಭಾಗವೆಲ್ಲವೂ ನಾನು ಸಂಗ್ರಹಿಸಿದ ಲೇಖಕರದು.

ನನ್ನಲ್ಲಿ ನಿಂತು, ಈ ಕೃತಿಯನ್ನು ರಚಿಸಲು ಹಚ್ಚಿದ ಆತನಿಗೇ ಇದು ಸಮರ್ಪಣೆ

ತಮ್ಮ ಬಂಧು

**ಸ್ವಾತಂತ್ರ್ಯಪ್ರಿಯ**



# ಸಮರ್ಪಣೆ

ಲೋಕಮಾನ್ಯ ಟಿಳಕರ ಅಂತರ್ಯಾಮಿಯಾಗಿ ಭಾರತ ರಾಷ್ಟ್ರಕ್ಕೆ
ಸ್ವಾತಂತ್ರ್ಯಸಂದೇಶವನ್ನಿತ್ತ
ಸರ್ವತಂತ್ರ ಸ್ವತಂತ್ರನೂ ಸರ್ವಾಂತರ್ಯಾಮಿಯೂ ಆದ
**ಶ್ರೀಹರಿಯ ಚರಣಕಮಲಗಳಿಗೆ—**

# ಆಧಾರ ಗ್ರಂಥಗಳು


**ಕನ್ನಡ** — **ಲೇಖಕರು**

೧) ಕರ್ನಾಟಕ ದರ್ಶನ .... ಮಿಂಚಿನಬಳ್ಳಿ
೨) ರಾಷ್ಟ್ರಪತಿಗಳು .... ಸ್ವಾತಂತ್ರ್ಯಪ್ರಿಯ
೩) ಸ್ವಾತಂತ್ರ್ಯದ ಹೆಜ್ಜೆಗಳು .... ,,
೪) ನನ್ನ ಜೀವನ ಸ್ಮೃತಿಗಳು .... ಆಲೂರ ವೆಂಕಟರಾಯರು
೫) ಟಿಳಕರ ಗೀತಾರಹಸ್ಯ .... ಅನು: ಆಲೂರ ವೆಂಕಟರಾಯರು
೬) ಕಾಂಗ್ರೆಸ್ಸಿನ ಕಥೆ .... ದ. ಪ. ಕರಮರಕರ

**ಮರಾಠಿ**

೧) ಲೋ. ಟಿಳಕ ಯಾಂಚೆ ಚರಿತ್ರ ಭಾಗ ೧, ೨, ೩ .... ನ. ಚಿ. ಕೇಳಕರ
೨) ಲೋ. ಟಿಳಕ ಯಾಂಚ್ಯಾ ಆಠವಣಿ ವ ಆಖ್ಯಾಯಿಕಾ ಭಾಗ ೧–೨. .... ಸ. ವಿ. ಬಾಪಟ
೩) ಲೋ. ಟಿಳಕಾಚೆ ಕೇಸರಿತೀಲ ಲೇಖ ಭಾಗ ೧–೨. .... ಕೇಸರಿ ಮರಾಠಾ ಸಂಸ್ಥಾ ಪುಣೆ.
೪) ಕೇಸರಿ ಪ್ರಬೋಧ .... ಕೇಸರಿಮಹೋತ್ಸವ ಮಂಡಳ.
೫) ಲೋ. ಟಿಳಕ ಯಾಂಚೆ ಗೇಲಿ ಆಠವಣೆ .... ಅಪ್ಪಾಜಿ ವಿಷ್ಣು ಕುಲಕರ್ಣಿ
೬) ಲೋ. ಟಿಳಕ .... ದ. ವಿ. ತಾಮ್ಹಣಕರ
೭) ಉತ್ತರಾದಿ ಮಠದ ಪ್ರಕಟನೆಗಳು .... ಪಂಡಿತ ಗಲಗಲಿ ರಾಮಾಚಾರ್ಯರು
೮) ಕೇಸರಿ ವಿಶೇಷಾಂಕ .... ಕೇಸರಿ ಆಫೀಸ ಪುಣೆ

**ಇಂಗ್ಲೀಷ**

1) Bal Gangadhar Tilak .... By D. P. Karmarkar
2) History of the Congress.. Dr.Pattabhi Shita Ramayya

# ಅನುಕ್ರಮಣಿಕೆ

ಹರಿಃ ಓಂ

# ಲೋಕಮಾನ್ಯ ಬಾಳ ಗಂಗಾಧರ ಟಿಳಕ

"We know of no other Indian who has made greater Personal Sacrifices for his country than Mr. Tilak"

**ಶಾಮಜಿ ಕೃಷ್ಣವರ್ಮ, ಅಮೇರಿಕ**

"ದೇಶದ ಹಿತಕ್ಕಾಗಿ, ಲೋಕಮಾನ್ಯರಿಗಿಂತಲೂ ಹೆಚ್ಚಿಗೆ ಸ್ವಾರ್ಥತ್ಯಾಗವನ್ನು ಮಾಡಿದ ಯಾವ ಭಾರತೀಯನನ್ನೂ ನಾನರಿಯೆ"

## ಮೊದಲನೆಯ ಘಟ್ಟ

## ಹಿನ್ನೆಲೆ

ದೇಶವು ಒಮ್ಮೆ ಪರತಂತ್ರವಾಯಿತೆಂದರೆ, ಅದು ಮೇಲಕ್ಕೇಳುವದು ಬಹು ಕಠಿಣ. ಅದರಲ್ಲಿಯೂ ಇಂಗ್ಲಿಷರಂಥ ಧೂರ್ತ, ಭೇದನೀತಿ ನಿಪುಣ ಜನಾಂಗದ ಕೈಯಲ್ಲಿ ಸಿಕ್ಕಮೇಲಂತೂ ಕೇಳುವದೇನು? ಜಾಡಬುಡ್ಡನ ಜಾಲದಲ್ಲಿ ಸಿಕ್ಕ ನೊಣದಂತೆ; ಭಾರತದ ಗತಿಯಾಗಿದ್ದಿತು. ಬ್ರಿಟಿಶರು ಭಾರತದ ಭೂಮಿಯನ್ನಷ್ಟೇ ಗೆಲ್ಲಲಿಲ್ಲ, ಭಾರತೀಯರ ಮನವನ್ನೂ ಗೆದ್ದರು. ಭಾರತದ ಜೀವಾಳವು ಅದರ ವೈದಿಕ ಸಂಸ್ಕೃತಿಯಲ್ಲಿ. ಅದರ ಬೇರುಗಳಿಗೆ ಕೊಡಲಿ ಇಕ್ಕದ ಹೊರತು ಭಾರತವು ಚಿರಕಾಲ ತಮ್ಮ ಆಳಿಕೆಯಲ್ಲಿ ಉಳಿಯಲಾರದೆಂದು ದೂರಾಲೋಚನೆಯನ್ನು ಮಾಡಿ ಸ್ವಸಂಸ್ಕೃತಿ, ಸ್ವ ಜನಾಂಗದ ಬಗ್ಗೆ, ತಿರಸ್ಕಾರ ಹುಟ್ಟುವಂತೆಯೂ ಬ್ರಿಟಿಶರ ಬಗೆಗೆ ಆದರವು ಉತ್ಪನ್ನವಾಗುವಂತೆಯೂ ಶಿಕ್ಷಣ ಕ್ರಮವನ್ನು ಬ್ರಿಟಿಷರು ಏರ್ಪಡಿಸಿದರು. ತಮಗೆ ಬೇಕಾಗುವಂಥ ನೌಕರರನ್ನು ಸಿದ್ಧಪಡಿಸುವದೇ ಈ ಶಿಕ್ಷಣದ ಮುಖ್ಯ ಗುರಿಯಾಗಿದ್ದಿತು.

ಈ ಶಿಕ್ಷಣದ ಪರಿಣಾಮವೇನಾಯಿತೆಂಬುದನ್ನು ದೇ. ಭ. ಲಾಲಾ ಲಜಪತರಾಯರು ಒಳ್ಳೇ ಮನೋವೇಧಕವಾಗಿ ವರ್ಣಿಸಿರುವರು. "ಇಂಗ್ಲಿಷು ಕಲಿತ ಹಿಂದೀ ಜನರು ಸರಕಾರದ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳನ್ನು ಆಕ್ರಮಿಸಿ, ಆನಂದದಿಂದ ನಲಿಯಹತ್ತಿದರು. ಇಂಗ್ಲಿಷಿನಲ್ಲಿ ಪ್ರಾವೀಣ್ಯವನ್ನು ಪಡೆಯುವದೇ ಪರಮಭಾಗ್ಯವೆಂದು ತಿಳಿಯಹತ್ತಿದರು. ಸರಕಾರದಿಂದ ದೊರೆತ ಮಾನ ಮರ್ಯಾದೆಯಿಂದ ಅವರಲ್ಲಿ ಒಳ್ಳೆ ಪೂಜ್ಯಬುದ್ಧಿಯುಳ್ಳವರಾದರು. ಯುರೋಪಿಯನ್ನರನ್ನು ತಾಯಿತಂದೆಗಳಂತೆ ಪೂಜಿಸಹತ್ತಿದರು. ಮಾತು ಮಾತಿನಲ್ಲಿಯೂ ಅವರ ಅನುಕರಣವು ಪ್ರಾರಂಭವಾಯಿತು. ತಮ್ಮ ಧರ್ಮವನ್ನು ಕೀಳುಗಳೆಯಹತ್ತಿದರು. ತಮ್ಮ ಸಂಸ್ಕೃತಿಯ ಬಗ್ಗೆ ಮೂಗು ಮುರಿಯಹತ್ತಿದರು. ಹಿಂದೀ ಸಮಾಜವನ್ನು ತುಚ್ಛೀಕರಿಸಿದರು. ತಮ್ಮ ಆಚಾರ ವಿಚಾರಗಳನ್ನು ತೆಗಳಿ, ಅವರ ಉಡುಪು ತೊಡುಪುಗಳನ್ನು ಧರಿಸಿ, ಸಾಹೇಬರಾದರು. ಕೆಲವರು ಕ್ರಿಶ್ಚಿಯನ್ ಧರ್ಮವನ್ನು ಸ್ವೀಕರಿಸಿದರು. ಇಂಗ್ಲಿಷರಂತೆ ತಾವೂ ಕ್ಲಬ್ಬುಗಳನ್ನು ಏರ್ಪಡಿಸಿಕೊಂಡರು. ಭಾರತೀಯರ ಯಾವ ಮಾತೂ ಈ ಸುಶಿಕ್ಷಿತರಿಗೆ ಬೇಡಾದವು. ಹಿಂದೀ ಜನರೆಂದರೆ ಕಾಡು ಜನರು. ಅವರ ಧರ್ಮವೆಂದರೆ, ಅಂಧ ಶ್ರದ್ಧೆಯ ಮೊಟ್ಟೆ, ಅದರಲ್ಲೇನೂ ಹುರುಳಿಲ್ಲ. ಭಾರತೀಯರೆಂದರೆ, ಸಂಕುಚಿತ ದೃಷ್ಟಿಯ ಧರ್ಮಗೇಡಿಗಳು, ಎಂದು ಈ ಬಿಳಿ ಛಾಯೆಯವರ ಕಲ್ಪನೆಯಾಯಿತು." ಇದನ್ನು ಕಂಡು ತಮ್ಮ ಶಿಕ್ಷಣವು ಯಶಸ್ವಿಯಾಯಿತೆಂದು ಬ್ರಿಟಿಶರು ಹರ್ಷಗೊಂಡರೆ ಆಶ್ಚರ್ಯವಲ್ಲ ! ಈ ಶಿಕ್ಷಣದ ಪಿಡುಗಿನಿಂದ ಆರ್ಯ ಸಂಸ್ಕೃತಿಯ ಅಳಿಗಾಲವೇ ಸಮೀಪಿಸಿತೆಂದು ಭಾರತೀಯರು ಭಯಭೀತರಾದರು. ತಮ್ಮ ಸಂಸ್ಕೃತಿಯ ಬಗ್ಗೆ ಅಭಿಮಾನವಿದ್ದರೂ ಅದನ್ನು ಹೇಗೆ ಉಳಿಸಿಕೊಳ್ಳಬೇಕೆಂಬುದು ಹೊಳೆಯದಾಯಿತು.

ಭಾರತದಲ್ಲಿಯ ಸಂಸ್ಥಾನಗಳೆಲ್ಲ ಡಾಲಹೌಸಿಯ ಮಹಾಯಜ್ಞದಲ್ಲಿ ಆಹುತಿಯಾಗಿ ಭಾರತದ ಸ್ವಾತಂತ್ರ್ಯ ರವಿಯು ಅಸ್ತಂಗತನಾದನು. ಭಾರತದಲ್ಲೆಲ್ಲ ಪಾರತಂತ್ರ್ಯದ ಕಗ್ಗತ್ತಲೆಯು ಮುಸುಕಿತು. ರಾಜ್ಯವನ್ನು ಕಳೆದುಕೊಂಡ ಸಂಸ್ಥಾನಿಕರೆಲ್ಲರು ತಮ್ಮ ದುರ್ದೆಸೆಯನ್ನು ಅರಿತುಕೊಂಡು, ಸ್ವಾತಂತ್ರ್ಯಕ್ಕಾಗಿ ಪುನಃ ಹೋರಾಡದೆ ಗತ್ಯಂತರ ವಿಲ್ಲೆಂದು ಬಗೆದು,

ಭಾರತದಲ್ಲಿ ಕ್ರಾಂತಿಯನ್ನು ಹೂಡುವ ಪ್ರಯತ್ನಗಳನ್ನು ನಡೆಯಿಸಿದ್ದರು. ಇಡೀ ಭಾರತವೇ ಮದ್ದಿನ ಮನೆಯಾಗಿದ್ದಿತು. ಬ್ರಿಟಿಶರ ಜನಾಂಗ, ಬ್ರಿಟಿಷರ ದೇಶ ಇವುಗಳ ಬಗ್ಗೆ ತೀವ್ರ ಅಸಂತೋಷವು ಹಬ್ಬಿತ್ತು. ಪೇಶ್ವೆಯರ ಮುಖಂಡರಾದ ನಾನಾಸಾಹೇಬನೂ ರಂಗೋ ಬಾಪೂಜಿಯೂ, ಔಂಧದ ನವಾಬ ಮೊಲಾದವರು ಬ್ರಿಟಿಶರನ್ನು ಭಾರತದಿಂದೋಡಿಸಲು ಜಾತಿ, ಮತ, ಭೇದಗಳನ್ನು ಮರೆತು ಕ್ರಾಂತಿಯನ್ನು ಹೂಡುವ ಸಮಯವನ್ನು ಕಾಯಹತ್ತಿದ್ದರು. ಅದರ ಸಿದ್ಧತೆಯಲ್ಲಿ ತೊಡಗಿದ್ದರು. ಇದೇ ಸಮಯವೆಂದು ಕೆಲವು ಕ್ರಿಸ್ತಿ ಪಾದ್ರಿಗಳು ತಮ್ಮ ಧರ್ಮ ಪ್ರಸಾರವನ್ನು ಕೈಕೊಂಡು ಭಾರತೀಯರನ್ನು ಛಲಿಸಹತ್ತಿದರು. ಕಂಪನಿಯ ಸರಕಾರದ ವ್ಯಾಪಾರೀ ಧೋರಣದಿಂದ ಭಾರತದ ಉದ್ಯೋಗ, ಕೈಗಾರಿಕೆಗಳೆಲ್ಲ ಹಾಳಾಗಿ ಬಡತನವು ಭರದಿಂದ ಹಬ್ಬತೊಡಗಿತ್ತು. ರಾಮ ಮೋಹನರಾಯರಂಥ ಸಜ್ಜನರು, ಭಾರತದ ಈ ಸ್ಥಿತಿಯನ್ನು ಕಂಡು ಮರ ಮರನೆ ಮರುಗಹತ್ತಿದರು. ಸ್ವಧರ್ಮ, ಸ್ವಸಂಸ್ಕೃತಿಗಳ ರಕ್ಷಣೆಗಾಗಿ ಪ್ರಯತ್ನಿಸಹತ್ತಿದರು. ಆದರೆ ಅವರ ಕಸುವು ಸಾಲಲಿಲ್ಲ. ಭಾರತ ಜನಾಂಗವೆಲ್ಲ ಕಂಗೆಟ್ಟು ದಿಕ್ಕುಗಾಣದಾಯಿತು. ಇಂತಹ ಕಠಿಣ ಸಮಯದಲ್ಲಿ ಲೋಕಮಾನ್ಯರು ಅವತರಿಸಿದರು. ಇಂಗ್ಲಿಷ ಶಿಕ್ಷಣವನ್ನು ಪಡೆದರೂ ಭಾರತೀಯ ಸಂಸ್ಕೃತಿಯೇ ಮಿಗಿಲಾದುದೆಂದೂ ಪಾಶ್ಚಾತ್ಯ ಸಂಸ್ಕೃತಿಯು ಆರ್ಯ ಸಂಸ್ಕೃತಿಯನ್ನು ಸರಿಗಟ್ಟಲಾರದೆಂದೂ ಸಾರಿ, ಅದರ ರಕ್ಷಣೆಗಾಗಿ ಟೊಂಕಕಟ್ಟಿ ಭಾರತೀಯರನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಣಿಮಾಡಿದವರೆಂದರೆ ಲೋಕಮಾನ್ಯ ಟಿಳಕರೇ!

ಅರಣ್ಯದಲ್ಲಿ ಸಾವಿರಾರು ಕಂಟಿಗಳೊಡನೆ ಬೆಳೆದ ಗುಲಾಬಿಯ ಕಂಟಿಯು ಹೂಬಿಟ್ಟು ಅರಳಿ, ತನ್ನ ಪರಿಮಳವನ್ನು ಬೀರಿದಾಗಲೇ ಜನತೆಯ ಲಕ್ಷವು ಆ ಕಡೆಗೆ ತಿರಗುತ್ತದೆಯಲ್ಲವೆ? ಅದರಂತೆ ಟಿಳಕರು ಜನತಾರೂಪಿ ಜನಾರ್ದನನ ಸೇವೆಗೈದು, ತೇಜಸ್ವಿಗಳಾಗಿ ಲೋಕಮಾನರ್ಯೆಂಬ ವರವನ್ನು ಪಡೆದಾಗ ಜನ ಈ ಅಲೌಕಿಕ ಮಹಾಪುರುಷರು ಯಾರು? ಎಲ್ಲಿಯವರು? ಜನ್ಮಸ್ಥಳವಾವುದು? ಯಾವ ವಂಶಜರು? ಎಂದು ಕುತೂಹಲದಿಂದ ತಿಳಿಯಲಪೇಕ್ಷಿಸುವದು ಸ್ವಾಭಾವಿಕ. ಮಹಾಪುರುಷರ ಚರಿತ್ರೆಗಳೆಲ್ಲವೂ ಹೀಗೆಯೇ ಬರೆಯಲ್ಪಟ್ಟಿವೆ.

# ಟಿಳಕ ಮನೆತನದ ಪೂರ್ವೇತಿಹಾಸ

ಟಿಳಕ ಮನೆತನದ ಮೂಲ ಗ್ರಾಮವು ರತ್ನಾಗಿರಿ ಜಿಲ್ಹೆಯ ದಾಪೋಲಿ ತಾಲೂಕಿನ **ಚಿಖಲ**ಗಾಂವ ಎಂಬ ಹಳ್ಳಿಯು. ಸಮುದ್ರ ದಂಡೆಯು ಅರ್ಥಾತ್ ಕೊಂಕಣ ಪ್ರದೇಶವು. ಸ್ವಾಭಾವಿಕವಾಗಿಯೇ ಸೃಷ್ಟಿ ಸೌಂದರ್ಯದ ತವರೂರು. ಸೃಷ್ಟಿ ಸೌಂದರ್ಯಕ್ಕೆ ಕೊಂಕಣವು ಪ್ರಸಿದ್ಧವಿದ್ದಂತೆ, ಅದು ಬುದ್ಧಿವಂತರ ಆಗರವೆಂದೂ ಪ್ರಸಿದ್ಧವಿದೆ. ಈ ಜನಾಂಗಕ್ಕೆ ಚಿತ್ಪಾವನರೆಂದೂ ಕರೆಯುವ ವಾಡಿಕೆಯುಂಟು. ಪ್ರತಿಯೊಂದು ಜಾತಿಯಲ್ಲಿಯೂ ಕೆಲವೊಂದು ವೈಶಿಷ್ಟ್ಯಗಳು ಇದ್ದೇ ಇರುತ್ತವೆ. ದೇಶಸ್ಥರು ಔದಾರ್ಯದಲ್ಲಿ ಪ್ರಸಿದ್ಧರಿದ್ದರೆ, ಕರ್ಹಾಡರು ಒಳ್ಳೇ ವ್ಯವಸ್ಥಿತರೂ ವ್ಯವಹಾರ ಚತುರರೂ ಎಂದು ಖ್ಯಾತಿ ಪಡೆದಿದ್ದಾರೆ. ಕೊಂಕಣಸ್ಥರು ಮಿತವ್ಯಯಿಗಳೂ ಉದ್ಯೋಗ ಶೀಲರೂ ಮುತ್ಸದ್ಧಿಗಳೂ ಎಂದು ಹೆಸರು ಪಡೆದಿದ್ದಾರೆ. ದೇಶಸ್ಥರಂತೆ ಕೊಂಕಣಸ್ಥರೂ ರಾಷ್ಟ್ರೀಯ ಇತಿಹಾಸದಲ್ಲಿ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿದ್ದಾರೆ. ದೇಶಸ್ಥರಲ್ಲಿ ಸಾಧು ಸತ್ಪುರುಷರು ಉದಯರಾದಂತೆ, ಕೊಂಕಣಸ್ಥರಲ್ಲಿ ವೀರರೂ ಮುತ್ಸದ್ಧಿಗಳೂ ಹುಟ್ಟಿದ್ದಾರೆ. ಬ್ರಿಟಿಷರ ರೋಷಕ್ಕೆ ವಿಶೇಷವಾಗಿ ಗುರಿಯಾದವರೆಂದರೆ ಕೊಂಕಣಸ್ಥರೇ. ಚಿರೋಲ ಸಾಹೇಬನು ರಾಜದ್ರೋಹ ಕಮಿಟಿಯ ವರದಿಯಲ್ಲಿ ಮೇಲಿಂದ ಮೇಲೆ "ಚಿತ್ಪಾವನರ" ಉಲ್ಲೇಖನವನ್ನು ಮಾಡಿದ್ದಾನೆ.

ಯಹೂದಿ ಜನಾಂಗದಂತೆಯೇ ಚಿತ್ಪಾವನ ಜನಾಂಗವೂ ಗಂಡಾಂತರಕ್ಕೆ ಈಡಾಗಿದೆ. ಈ ಗಂಡಾಂತರಗಳೇ ಅವರನ್ನು ವೀರರನ್ನಾಗಿ ಮಾಡಿರುವ ಸಂಭವವೂ ಇದೆ. ಪಶ್ಚಿಮ ಕರಾವಳಿ ಪ್ರದೇಶಕ್ಕೆಲ್ಲ ಪರಶುರಾಮ ಕ್ಷೇತ್ರವೆಂಬ ಹೆಸರು. ಶ್ರೀ ಪರಶುರಾಮನೇ ಅದನ್ನು ನಿರ್ಮಿಸಿದವನೆಂದು ಪುರಾಣ ಕಥೆ. ಕೊಂಕಣಸ್ಥರ ದೇವತೆಯೇ ಪರಶುರಾಮ. ಶ್ರೀ ಪರಶುರಾಮನು ಕೇವಲ ದುಷ್ಟರ ಛಲಕ್ಕಾಗಿಯೇ ಶಸ್ತ್ರವನ್ನು ಧರಿಸಿ, ನಿಶ್ಶಸ್ತ್ರ ಪೃಥ್ವಿಯನ್ನು ಮಾಡಲಿಲ್ಲವೇ ! ಇತಿಹಾಸ ಕಾಲದಲ್ಲಿ ಕೊಂಕಣದ ಭಟ್ಟ ಮನೆತನದ ಮೇಲೆ ಭಯಂಕರ ಅತ್ಯಾಚಾರ ನಡೆಯಲು, ಅವರು ದೇಶಬಿಟ್ಟು, ಪುಣೆಗೆಬಂದು ಪೇಶವೇ ಪದವಿಯನ್ನು ದೊರಕಿಸಿದರು. ಇರಲಿ. ರತ್ನಾ

ಗಿರಿಯು ಕೊಂಕಣದ ಕೇಂದ್ರವಿದ್ದಂತೆ ಬುದ್ಧಿವಂತರ ಕೇಂದ್ರವೂ ಅಹುದು. ಟಿಳಕ ಮನೆತನದ ಕುಲದೀಪಕರಾದ ಬಾಳ ಗಂಗಾಧರ ಟಿಳಕರ ಜನ್ಮವೂ ಕೂಡ ರತ್ನಾಗಿರಿಯಲ್ಲಿಯೇ ಆಯಿತು.

ಚಿಖಲಗಾಂವ ಗ್ರಾಮವು ಟಿಳಕ ಮನೆತನದ ಪ್ರಾಚೀನ ಊರು. ಅವರ ಕುಲದೈವತವಾದ 'ಲಕ್ಷ್ಮೀಕೇಶವ' ದೇವಸ್ಥಾನವು ಇಲ್ಲಿಯೇ ಇದೆ. ಈ ಊರಿನ ಖೋತಕಿ ಹಕ್ಕು ಈ ಮನೆತನಕ್ಕೆ ಇದೆ. ಆ ಕಾಲದಲ್ಲಿ ಅನೇಕ ಬ್ರಾಹ್ಮಣರು ಸ್ವಪ್ರಯತ್ನದಿಂದ ಈ * ಖೋತಕಿ ಹಕ್ಕನ್ನು ಪಡೆದರು. ಕೇವಲ ಇದರಿಂದಲೇ ಅವರ ಹೊಟ್ಟೆ ತುಂಬುತ್ತಿರಲಿಲ್ಲ. ಆದಕ್ಕಾಗಿ ಅವರು ಬೇರೆ ಬೇರೆ ಉದ್ಯೋಗಗಳನ್ನು ಕೈಕೊಳ್ಳಬೇಕಾಗುತ್ತಿದ್ದಿತು.

ಚತುರರೂ ಕರ್ತೃತ್ವಶಾಲಿಗಳೂ ಬುದ್ಧಿವಂತರೂ ಆದ ಚಿತ್ಪಾವನ ತರುಣರು ಹೊಟ್ಟೆಗಿಲ್ಲದೆ ಸುಮ್ಮನೆ ಕೂಡುವದೆಂತು? ಪೇಶ್ವೆಯರ ಕಾಲದಲ್ಲಿ ಇವರು ಮಹತ್ವಾಕಾಂಕ್ಷಿಗಳಾಗಿ ಹೊರಬಿದ್ದರು. ಟಿಳಕರ ಮುತ್ತಜ್ಜರಾದ ಕೇಶವರಾಯರು ಒಳ್ಳೇ ಸಾಹಸಿಗಳು. ಅವರಿಗೆ ಓದು ಬರೆಯಲು ಚನ್ನಾಗಿ ಬರುತ್ತಿತ್ತಲ್ಲದೆ, ಕುದುರೆ ಹತ್ತುವದರಲ್ಲಿಯೂ ಗುರಿಹೊಡೆಯುವದರಲ್ಲಿಯೂ ಒಳ್ಳೇ ನಿಷ್ಣಾತರಿದ್ದರು. ಈಜುವದರಲ್ಲಿ ಒಳ್ಳೇ ಪ್ರವೀಣರು. ಒಳ್ಳೇ ಅಡಿಗೆ ಮಾಡಬಲ್ಲರೆಂದು ಇವರ ವರ್ಣನೆಯಿದೆ. ಕೇಶವರಾಯರು ಒಡ ತನಕ್ಕೆ ಬೇಸತ್ತು ದೇಶಕ್ಕೆ ಹೋಗಿ ಸ್ವಪ್ರಯತ್ನದಿಂದ 'ಅಂಜನವೇಲ'ದ ಮಾಮಲತಿಯನ್ನು ಪೇಶ್ವೆಯವರಿಂದ ದೊರಕಿಸಿದರು. ಕೆಲಕಾಲ ಮಾಮಲತಿಯನ್ನು ಅನುಭವಿಸುವಾಗ ಗಲಗಲರಲ್ಲಿ ಪೇಶ್ವೆಯವರ ಆಳಿಕೆಯೇ ಕೊನೆಗೊಂಡಿತು. ಸ್ವಾಭಿಮಾನಿಗಳಾದ ಕೇಶವರಾಯರು ಪರಕೀಯರ ಸೇವೆ ಬೇಡವೆಂದು ಮಾಮಲತಿಗೆ ಶರಣು ಹೊಡೆದು, ತಮ್ಮೂರಿಗೆ ಬಂದು ರಾಮ ರಾಮ ಎನ್ನುತ್ತ ಸ್ನಾನ, ಸಂಧ್ಯಾದಿಗಳನ್ನು ಮಾಡುತ್ತ, ಮನೆಯಲ್ಲಿಯೇ ನಿಂತರು. ಖೋತಿಯಿಂದ ಬರುವ ಉತ್ಪನ್ನದಿಂದಲೇ ಹಾಗೂ ಹೀಗೂ ಸಂಸಾರವನ್ನು ಸಾಗಿಸಿದರು.

---

* ಈ ಖೋತಿ ಎಂದರೆ ನಮ್ಮಲ್ಲಿಯ ವತನದಾರ ಕುಲಕರ್ಣಿಯವರ ಹಕ್ಕಿದ್ದಂತೆ. ಕಾಡು ಕಡಿದು ಇಲ್ಲವೇ ಬೀಳು ಭೂಮಿಗಳನ್ನು ಸಾಗು ಮಾಡಿಸಿದ್ದಕ್ಕಾಗಿ ಪಡೆದ ಹಕ್ಕು. ಇವರೇ ತಗಾಯಿಯನ್ನು ವಸೂಲ ಮಾಡಬೇಕು.

ಕೇಶವರಾಯರಿಗೆ ರಾಮಚಂದ್ರ ಹಾಗೂ ಕಾಶೀನಾಥರೆಂಬ ಇಬ್ಬರು ಮಕ್ಕಳು. ಹಿರಿಯರಾದ ರಾಮಚಂದ್ರ ಪಂತರೇ ಟಿಳಕರ ಅಜ್ಜಂದಿರು. ಇವರ ಜನ್ಮವು ೧೮೦೨ರಲ್ಲಿ. ರಾಮಚಂದ್ರ ಪಂತರಿಗೆ ವಿದ್ಯೆಯು ಅಷ್ಟಕ್ಕಷ್ಟೆ! ಅವರ ಲಗ್ನವು ತೀರ ಚಿಕ್ಕ ವಯಸ್ಸಿನಲ್ಲಿಯೇ ಆಯಿತು. ಅವರ ೧೮ನೇ ವರ್ಷಕ್ಕೆ ಗಂಗಾಧರ ಪಂತರು ಹುಟ್ಟಿದರು.(೧೮೨೦) ಇವರೇ ಲೋಕ ಮಾನ್ಯರ ತಂದೆ. ಬಡತನದ ಮೂಲಕ ರಾಮಚಂದ್ರ ಪಂತರು ಮೋಜಣೀ ಖಾತೆಯಲ್ಲಿ ನೌಕರಿ ಹಿಡಿದರು. ಇವರು ಯಾವಾಗಲೂ ಸಂಚಾರದಲ್ಲಿರುತ್ತಿದ್ದ ಮೂಲಕ ಗಂಗಾಧರ ಪಂತರಿಗೆ ಅಜ್ಜನ ಅಭ್ಯಾಸವು ಬಹಳವಾಯಿತು. ಅವರೇ ಗಂಗಾಧರ ಪಂತರಿಗೆ ಮೂಲಾಕ್ಷರ ಮೊದಲಾದವುಗಳನ್ನು ಕಲಿಸಿ ದರು. ಇದೇ ಸುಮಾರಿಗೆ ದಾಭೋಳದಲ್ಲಿ ಮರಾಠಿ ಶಾಲೆಯು ಪ್ರಾರಂಭ ವಾಯಿತು. ಗಂಗಾಧರ ಪಂತರನ್ನು ವಿದ್ಯಾಭ್ಯಾಸಕ್ಕಾಗಿ ದಾಭೋಳದಲ್ಲಿ ಟ್ಟರು. ಆ ಶಾಲೆಯಲ್ಲಿಯ ಅಭ್ಯಾಸವು ಮುಗಿದನಂತರ ದೇಶಕ್ಕೆ ಹೋಗಿ ಹೆಚ್ಚಿನ ಅಭ್ಯಾಸಮಾಡಬೇಕೆಂದು ತರುಣನ ಅಪೇಕ್ಷೆ. ಆದರೆ ಅಜ್ಜ ಹಾಗೂ ತಂದೆಯವರಿಂದ ಧನಸಹಾಯ ದೊರೆಯುವಂತಿರಲಿಲ್ಲ. ಆದರೂ ತನ್ನ ಕಾಲಮೇಲೆಯೇ ತಾನು ನಿಲ್ಲಬೇಕೆಂದು ಗಂಗಾಧರ ಪಂತರು ಪುಣೆಗೆ ಬಂದು ಆಗ ಪ್ರಸಿದ್ಧವಿದ್ದ ಕೇಶವರಾವ ಭವಾಳಕರರ ಇಂಗ್ಲಿಷ ಶಾಲೆಯಲ್ಲಿ ಹೆಸರು ಹಚ್ಚಿದರು. ಅಭ್ಯಾಸವನ್ನು ಪ್ರಾರಂಭಿಸಿದರು ಆದರೆ ತಾನೊಂದು ಬಗೆದರೆ ದೈವವು ಮತ್ತೊಂದು ಬಗೆಯಿತಂತೆ. ಗಂಗಾಧರ ಪಂತರು ಹುರುಪಿ ನಿಂದ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದಾಗ ಅವರ ತಾಯಿಯು ಮರಣ ಹೊಂದಿದಳು. ಹೆಂಡತಿ ಸತ್ತದ್ದನ್ನು ಕಂಡು ರಾಮಚಂದ್ರ ಪಂತರು ಮಕ್ಕಳುಮರಿಗಳನ್ನು ಬಿಟ್ಟು, ಚಿತ್ರಕೂಟಕ್ಕೆ ಹೊರಟು ಹೋದರು. ಪಾಪ ಚಿಕ್ಕವಿದ್ಯಾರ್ಥಿಯಾದ ಗಂಗಾಧರ ಪಂತರು, ತಮ್ಮ ಹಾಗು ತಂಗಿಯನ್ನು ರಕ್ಷಿಸುವ ಭಾರವನ್ನು ಹೊರಬೇಕಾಯಿತು. ನಿರುಪಾಯರಾಗಿ ಇಂಗ್ಲಿಷ ಶಾಲೆಯನ್ನು ಬಿಟ್ಟು, ಶಾಳಾ ಖಾತೆಯಲ್ಲಿ ನೌಕರಿಯನ್ನು ಹಿಡಿದು ಪ್ರಾಥ ಮಿಕ ಶಾಲೆಯ ಶಿಕ್ಷಕರಾದರು. ಆಗ ಅವರಿಗೆ ಸಿಗುತ್ತಿದ್ದ ಪಗಾರ ಕೇವಲ ಐದುರೂಪಾಯಿಗಳು ಮಾತ್ರ. ನೌಕರಿಯಾದ ಸ್ವಲ್ಪ ದಿನಗಳಲ್ಲಿಯೇ ಇವರ ಲಗ್ನವಾಯಿತು. ಇವರ ಮಕ್ಕಳೇ ನಮ್ಮ ಕಥಾನಾಯಕರಾದ ಲೋಕಮಾನ್ಯ ಬಾಳ ಗಂಗಾಧರ ಟಿಳಕರು.

ಗಂಗಾಧರ ಪಂತರಿಗೆ ಸ್ವತಃ ವಿದ್ಯಾಭಿರುಚಿ ಇದ್ದ ಮೂಲಕ ಇವರು ಅನೇಕ ಬುದ್ಧಿವಂತ ವಿದ್ಯಾರ್ಥಿಗಳಿಗೆ ಆಶ್ರಯವನ್ನೀಯುತ್ತಿದ್ದರು. ಆಗ ಸುಕಾಲವಿದ್ದ ಮೂಲಕ ಅಲ್ಪವೇತನವಿದ್ದರೂ ಜಡವೆನಿಸುತ್ತಿದ್ದಿಲ್ಲ. ಬಂದ ವಿದ್ಯಾರ್ಥಿಗಳಿಗೆ ವಾರ, ಫಲಹಾರಗಳನ್ನು ಕೊಡುತ್ತ ಪ್ರೋಷಿಸುತ್ತಿದ್ದರು. ಮುಂದೆ ಅವರಿಗೆ ಚಿಪಳೂಣಕ್ಕೆ ವರ್ಗವಾಯಿತು. ಆಗ ಅವರಿಗೆ ೧೫ ರೂಪಾಯಿ ಪಗಾರವಾಯಿತು. ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಿತು. ತಂದೆಯು ಅಪೇಕ್ಷೆಯಂತೆ ಮನೆಗೆ ಊಟಕ್ಕೆ ಬಂದವರಿಗೆ ದಕ್ಷಣೆಕೊಡಹತ್ತಿದರು. ಒಂದು ಒಂದೂವರೆ ವರ್ಷದಲ್ಲಿ ಇವರ ಮನೆಯಲ್ಲಿ ೧೦೦೦ ಸಾವಿರ ಜನರು ಉಂಡು ಹೋದ ಲೆಖ್ಖವು ದೊರೆಯುತ್ತದೆ. ಅನಾಯಾಸವಾಗಿ ಸಹಸ್ರ ಬ್ರಾಹ್ಮಣರ ಭೋಜನ ಮಾಡಿಸಿದ ಪುಣ್ಯದೊರೆಯಿತೆಂದು ಸಂತೋಷಬಟ್ಟರು.

ಗಂಗಾಧರ ಪಂತರ ಜೀವನವು ತೀರ ಸಾದಾ. ಆದರೆ ಉಚ್ಚ ವಿಚಾರ, ಶುದ್ಧ ಆಚಾರಗಳುಳ್ಳದ್ದಿತ್ತು. ಅವರಿಗೆ ಮುಂದೆ ರತ್ನಾಗಿರಿಗೆ ವರ್ಗವಾಗಿ ೨೫ ರೂಪಾಯಿ ಪಗಾರವಾಯಿತು. ಆಗಿನಕಾಲದಲ್ಲಿ ಈಗಿನಂತೆ ಶಿಕ್ಷಕರನ್ನು ಸಿದ್ಧಪಡಿಸುವ ಟ್ರೇನಿಂಗ ಕಾಲೇಜ ಇರಲಿಲ್ಲ. ಸರ್ಟಿಫಿಕೇಟ ಇರಲಿಲ್ಲ. ಪಗಾರದ ಸ್ಕೇಲೂ ಇರಲಿಲ್ಲ. ಆದರೆ ಈಗಿನಕಿಂತ ಪಗಾರವು ಕಡಿಮೆಯಿದ್ದರೂ ಅವರ ವಿದ್ಯೆಯು ಮಾತ್ರ ಉಚ್ಚತರಗತಿಯದಿತ್ತೆಂಬುದರಲ್ಲಿ ಸಂಶಯವಿಲ್ಲ. ಬುದ್ಧಿವಂತ ಶಿಕ್ಷಕರು, ಮರಾಠಿ ಹಾಗೂ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಸಂಪಾದಿಸುತ್ತಿದ್ದರು. ಗಂಗಾಧರ ಪಂತರು ಸಂಸ್ಕೃತದಲ್ಲಿಯೂ ಗಣಿತದಲ್ಲಿಯೂ ಪ್ರವೀಣತೆಯನ್ನು ಪಡೆದಿದ್ದರು. ಗಣಿತದ ಅವರ ಅಭ್ಯಾಸವು ಶೂನ್ಯಲಬ್ಧಿಯವರೆಗೆ ಮುಟ್ಟಿತ್ತು. ಸಂಸ್ಕೃತ ಅಧ್ಯಯನವು ಇವರನ್ನು ಗಂಗಾಧರ ಶಾಸ್ತ್ರಿಗಳನ್ನಾಗಿ ಮಾಡಿತ್ತು. ಡಾ. ರಾಮಕೃಷ್ಣ ಭಾಂಡಾರಕರರ ಸ್ನೇಹಕ್ಕೆ ಸಂಸ್ಕೃತ ಅಧ್ಯಯನ ಪ್ರೇಮವೇ ಕಾರಣವಾಗಿದ್ದಿತು. ಚುರುಕು ಬುದ್ಧಿಯವರಿದ್ದು ಇಂಗ್ಲಿಷ ಶಿಕ್ಷಣದ ಅಭಾವದ ಮೂಲಕ ಹಿಂದೆ ಬಿದ್ದ ಜನರಲ್ಲಿ, ಈ ಗಂಗಾಧರ ಪಂತರೂ ಒಬ್ಬರೆಂದು ಹೇಳಬಹುದು. ಗಂಗಾಧರ ಪಂತರಿಗೆ ಇಂಗ್ಲಿಷ ಶಾಲೆಯ ಕಟ್ಟೆ ಹತ್ತುವ ಪ್ರಸಂಗಬಂದರೂ ಪದವೀಧರರಾಗುವ ಯೋಗವಿರಲಿಲ್ಲವೆಂಬ ಸಂಗತಿಯನ್ನು ಹಿಂದೆ ಉಲ್ಲೇಖಿಸಿದ್ದೇವೆ. ಪಾಪ, ಗಂಗಾಧರ ಪಂತರು ಬಡ ಪ್ರಾಥಮಿಕ

ಶಿಕ್ಷಕರಾಗಿಯೂ ಕೊನೆ ಕೊನೆಗೆ ಅಸಿಸ್ಟಂಟ ಡೆಪ್ಯೂಟಿ ಇನ್ಸ್ಪೆಕ್ಟರ ರಾಗಿಯೂ ಕಾಲಕಳೆಯಬೇಕಾಯಿತು. ಗಂಗಾಧರ ಪಂತರು ಇಂಗ್ಲಂಡದ ಇತಿಹಾಸ, ಅಂಕಗಣಿತ, ಲಘುವ್ಯಾಕರಣ, ಮೊದಲಾದ ಶಾಲೋಪಯೋಗಿ ಗ್ರಂಥಗಳನ್ನು ಬರೆದರು. ಅವುಗಳಲ್ಲಿ ಕೆಲವನ್ನು ವಿದ್ಯಾಖಾತೆಯವರು ತಾವೇ ಸ್ವತಃ ಕೊಂಡುಕೊಂಡರು.

ಗಂಗಾಧರ ಪಂತರ ಜೀವನವು ತೀರ ಬಡತನದಿಂದ ಪ್ರಾರಂಭ ವಾಯಿತು. ಉದ್ಯೋಗಶೀಲರಾದ ಅವರು ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಂಡರು. ಹೊಟ್ಟೆ ಬಟ್ಟೆಗೆ ಕೊರತೆಯಿರಲಿಲ್ಲ. ಧನಾಭಾವದ ಮೂಲಕ ತಮ್ಮ ಶಿಕ್ಷಣವು ನಿಂತಂತೆ ತಮ್ಮ ಮಕ್ಕಳಿಗೂ ಆಗಬಾರದೆಂದು ಗಂಗಾಧರ ಪಂತರು ಯಾವಾಗಲೂ ಎಚ್ಚರಾಗಿದ್ದರು.

ಕೊಂಕಣದಲ್ಲಿ ಖೋತರೆಂದರೆ, ಅವರು ಪ್ರತಿಷ್ಠಿತರೂ ಶ್ರೀಮಂತರೂ ಎಂದು ಎಷ್ಟೋಜನರ ಕಲ್ಪನೆ. ಲೋಕಮಾನ್ಯರಿಗೆ ಅವರ ಸ್ನೇಹಿತರು ಈ ಭ್ರಮೆಯಿಂದಲೇ 'ನೀವೇನು ಮನೆತನದಿಂದ ಶ್ರೀಮಂತರು, ಕೊಂಕಣದ ಖೋತಿದಾರರು' ಎಂದು ಚೇಷ್ಟೆ ಮಾಡುತ್ತಿದ್ದರು. ೧೮೯೪ ರಲ್ಲಿ ದಾಪೋಲಿ ಕೋರ್ಟಿನ ಮುಖಾಂತರ ಆದ ಮನೆತನದ ಪಾಲಿನಲ್ಲಿ ಟಿಳಕರಿಗೆ ಬಂದದ್ದು ಎಷ್ಟು? ಒಂದು ರೂಪಾಯಿ ಎಂಟಾಣೆ ಹತ್ತುಪೈ ಹಪ್ತೆಯ ಭೂಮಿ, ಮತ್ತು ಎಂಟು ರೂಪಾಯಿ ಹನ್ನೊಂದಾಣೆ ಒಂಭತ್ತುಪೈ ಹಪ್ತೆಯ ಖೋತಿ ಭೂಮಿ. ಈ ಭೂಮಿಗಳಲ್ಲಿರುವ ಗಿಡಗಂಟೆ, ಹೊಳೆ, ಹಳ್ಳ, ಕಲ್ಲು, ಖಣಿ, ಇವೇ ಟಿಳಕರ ಪಿತ್ರಾರ್ಜಿತ ಆಸ್ತಿ. ಇದೆಲ್ಲದರ ಬೆಲೆ ಎಷ್ಟೆಂಬುದನ್ನು ವಾಚಕರೇ ತರ್ಕಿಸಬಹುದು.

ಗಂಗಾಧರ ಪಂತರ ಮೃತ್ಯುಪತ್ರವು ಅವರ ಸಂಪತ್ತಿನ ಸರಿಯಾದ ಚಿತ್ರವನ್ನು ಚಿತ್ರಿಸುತ್ತದೆ. ಅವರು ಮೃತ್ಯುಪತ್ರದಲ್ಲಿ ಮನೆಯಲ್ಲಿರುವ ಎಲ್ಲ ವಸ್ತುಗಳ ಯಾದಿಯನ್ನು ಮಾಡಿರುವರಲ್ಲದೆ ಅವುಗಳ ಬೆಲೆಯನ್ನೂ ಹಾಕಿದ್ದಾರೆ. ಹೊಲ ಮನೆಗಳ ಹೊರ್ತಾಗಿ ರೋಖ ಹಣವೇನೂ ಇರಲಿಲ್ಲ ವೆಂದು ಇದರಲ್ಲಿ ವ್ಯಕ್ತವಾಗುವದು. ಕೊನೆಯ ಶಿಲ್ಕು ಜನರಿಂದ ಬರುವ ಹಣ ಸಹಿತ ೮೫೭೭ ರೂಪಾಯಿಗಳು ಎಂದು ತೋರಿಸಿದ್ದಾರೆ. ಇದು

ಅವರ ಸ್ವಕಷ್ಟಾರ್ಜಿತ ಇದರಲ್ಲಿ ೧/೩ ಹಣವನ್ನು ತನ್ನ ತಮ್ಮನಾದ ಗೋವಿಂದ ರಾಯನಿಗೂ ೩/೩ ಹಣ ಅಂದರೆ ಸುಮಾರು ಐದು ಸಾವಿರ ರೂಪಾಯಿಗಳನ್ನು ತಮ್ಮ ಮಗನಿಗೆ ಎಂದು ಬರೆದಿದ್ದಾರೆ. ಗಂಗಾಧರ ಪಂತರು ತಮ್ಮ ಜೀವ ಮಾನದಲ್ಲೆಲ್ಲ ತೋರಿದ ಕಟ್ಟುನಿಟ್ಟಿನ, ಶಿಸ್ತಿನ ರೀತಿಯೇ ಅವರ ಈ ಮೃತ್ಯುಪತ್ರದಲ್ಲಿಯೂ ಕಾಣುತ್ತದೆ. ಸಮಾಧಿಸ್ಥರಾದ ತಮ್ಮ ಹಿರಿಯರ ಪುಣ್ಯತಿಥಿಗೂ, ಅಜ್ಜಿಯ ಉತ್ತರ ಕಾರ್ಯಕ್ಕೂ ಏನು, ಎಷ್ಟು ಖರ್ಚು ಮಾಡಬೇಕೆಂಬುದನ್ನು ಕೂಡ ವಿವರವಾಗಿ ಬರೆದಿಟ್ಟಿದ್ದಾರೆ.

ತಮ್ಮ ಪಶ್ಚಾತ್ ತಮ್ಮ ಆಸ್ತಿಯನ್ನೆಲ್ಲ ತಮ್ಮನು ತನ್ನ ವಶಕ್ಕೆ ತೆಗೆದುಕೊಂಡು ರಕ್ಷಿಸಬೇಕು. ತಮ್ಮ ಅಜ್ಞಾನಿಯಾದ ಬಾಲಕನಿಗೆ ಬಿ. ಎ.ದ ವರೆಗೆ ವಿದ್ಯಾಭ್ಯಾಸವನ್ನು ಮಾಡಿಸಬೇಕು. ಹುಡುಗನು ಸಜ್ಞಾನಿಯಾದ ಮೇಲೆಯೂ ಮಗ ಹಾಗೂ ತಮ್ಮನು ಶಕ್ಯವಿದ್ದಷ್ಟು ದಿವಸ ಕೂಡಿಯೇ ಇರಬೇಕು. ಒಂದು ವೇಳೆ ಕೂಡಿ ನಡೆಯದಿದ್ದರೆ, ಕೊಂಕಣದಲ್ಲಿಯ ಹೊಲಮನೆಗಳನ್ನು ಅರ್ಧಅರ್ಧ ಹಂಚಿಕೊಳ್ಳಬೇಕು. ಮತ್ತು ರೋಖ ಹಣವನ್ನು ಮೇಲೆ ಹೇಳಿದಂತೆ ತೆಗೆದುಕೊಳ್ಳಬೇಕು ಎಂದು ಮೃತ್ಯುಪತ್ರ ದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾರೆ. ಅದರಲ್ಲಿ "ನನ್ನ ಮಗನಾದ ಬಾಳ ಗಂಗಾಧರ ಟಿಳಕನು ಬಿ. ಎ. ಆಗುವವರೆಗೆ, ಏನಾದರೂ ಸಹಾಯವು ಬೇಕಾದರೆ, ಮೇಲೆ ಬರೆದ ಹಣದಲ್ಲಿ ಖರ್ಚುಮಾಡಬೇಕು" ಎಂಬ ವಾಕ್ಯ ವಿದೆ. 'ಏನಾದರೂ ಸಹಾಯವು ಬೇಕಾದರೆ' ಎಂಬ ಶಬ್ದಗಳು ತಮ್ಮ ಮಗನು ಬುದ್ಧಿವಂತನಿದ್ದು ವಿದ್ಯಾರ್ಥಿವೇತನವನ್ನು ದೊರಕಿಸಿ, ವೆಚ್ಚವಿಲ್ಲದೆ ಬಿ. ಎ. ಪಾಸಾಗಬಹುದೆಂದು ಗಂಗಾಧರ ಪಂತರ ಎಣಿಕೆ ಇರಬಹುದೆಂದು ತೋರುತ್ತದೆ.

ಮೇಲಿನ ವರ್ಣನೆಗಳನ್ನೆಲ್ಲ ನೋಡಿದರೆ, ಗಂಗಾಧರ ಪಂತರು ಮಿತ ವ್ಯಯಿಗಳೂ ನಿಶ್ಚಯಿಗಳೂ ಸ್ವಚ್ಛ ಮನಸ್ಸಿನವರೂ ಉದ್ಯೋಗಿಗಳೂ ಕರ್ತೃತ್ವಶಾಲಿಗಳೂ ಇದ್ದರೆಂದು ಅನಿಸುತ್ತದೆ. ಅವರ ಮನಸ್ಸಿನಂತೆ ಚಿಕ್ಕಂದಿನಲ್ಲಿ ವಿದ್ಯಾಭ್ಯಾಸ ಮಾಡಲು ಅನುಕೂಲತೆ ದೊರೆತಿದ್ದರೆ, ಅವರೂ ಬಿ. ಎ. ಪದ ವೀಧರರಾಗಿ ಪ್ರಾಧ್ಯಾಪಕರಾಗಬಹುದಿತ್ತು. ಹೀಗಿದ್ದೂ ಅವರು ಬುದ್ಧಿ ವಂತರೂ ವಿದ್ಯಾಸಂಪನ್ನರೂ ಕರ್ತೃತ್ವಶಾಲಿಗಳೂ ಎಂದು ಹೆಸರನ್ನು ಪಡೆ

ದಿದ್ದರು. ಸ್ವಾಭಿಮಾನದ ಬಗ್ಗೆಯೂ ಇವರ ಪ್ರಸಿದ್ಧಿ ಇದೆ. ಕೊಲ್ಹಾಪೂರ ಪ್ರಕರಣದಲ್ಲಿ ಪ್ರಸಿದ್ಧಿಗೆ ಬಂದ ದಿವಾಣ ಮಾಧವರಾವ ಬರ್ವೆಯವರು ಚಿಕ್ಕಂದಿನಲ್ಲಿ ಡೆಪ್ಯೂಟಿ ಎಜ್ಯುಕೇಶನಲ್ ಇನ್‍ಸ್ಪೆಕ್ಟರರಾಗಿದ್ದರು. ಆ ಕಾಲದಲ್ಲಿ ಗಂಗಾಧರ ಪಂತರು ಅವರ ಆಸಿಸ್ಟಂಟರಾಗಿದ್ದರು. ಇಬ್ಬರ ಸ್ವಭಾವವೂ ಶೀಡಕವಾದುದರಿಂದ ಮೇಲಿಂದ ಮೇಲೆ ಚಕಮಕಿಗಳಾಗುತ್ತಿದ್ದವು. ಇದರಿಂದ ಅಸಿಸ್ಟೆಂಟ ಡೆಪ್ಯೂಟಿ ಸ್ಥಳವು ಇವರಿಗೆ ಸಿಗದೆ ಕೆಲವು ದಿನ ಹಾನಿಯೂ ಆಯಿತು. ಬರ್ವೆಯವರು ಮೇಲಧಿಕಾರಿಗಳಿದ್ದರೂ ಕೂಡ ಜನತೆಯು ಗಂಗಾಧರ ಪಂತರನ್ನೆ ಹೆಚ್ಚಾಗಿ ಪ್ರೀತಿಸುತ್ತಿದ್ದಿತು ಲೋಕಪ್ರಿಯತೆಗೆ ವಿಶಿಷ್ಟ ಗುಣಗಳೇ ಬೇಕು. ಪಂತರು ಜಡಧನವನ್ನಲಕ್ಷಿಸಿ, ಮಾನಧನವನ್ನು ಪಡೆದರು.

ಗಂಗಾಧರ ಪಂತರು ರತ್ನಾಗಿರಿಯಿಂದ ವರ್ಗವಾಗಿ ಪುಣೆಗೆ ಬಂದರು. ಆ ಸಮಯದಲ್ಲಿ ಡಾ. ಭಾಂಡಾರಕರರು ರತ್ನಾಗಿರಿಯ ಹೈಸ್ಕೂಲಿನಲ್ಲಿ ಶಿಕ್ಷಕರಾಗಿದ್ದರು. ಗಂಗಾಧರ ಪಂತರಿಗೆ ಆದ ಸನ್ಮಾನ ಸಮಾರಂಭದಲ್ಲಿ 'ಗಂಗಾಧರ ಪಂತರ ವಿದ್ವತ್ತೆ, ಸದಯತೆ, ಕಲ್ಪಕತೆ, ನಿಸ್ಪೃಹತೆ, ನಿರಾಲಸ್ಯ ಜೀವನಗಳು ಅನುಕರಣೀಯವಾಗಿವೆ. ನಮ್ಮ ಕೈಯಲ್ಲಿಯ ನಿಧಿ, ವ್ಯಾಕರಣ ಭಾಂಡಾರ, ಮರಾಠಿ ಭಾಷೆಯ ಕೋಶಾಗಾರ, ಗುರುಶಿಷ್ಯ ಭಕ್ತಿಭಾಂಡಾರವನ್ನು ಇಂದು ನಾವು ಕಳೆದುಕೊಳ್ಳುತ್ತಿದ್ದೇವೆ ಎಂದೆನಿಸುತ್ತಿದೆ' ಎಂದು ಉದ್ಗಾರಗಳನ್ನು ತೆಗೆದರು. ಗಂಗಾಧರ ಪಂತರು ಮೊದಲಿನಿಂದಲೂ ಪುಣೆಯಲ್ಲಿಯೇ ವಾಸವಾಗಿದ್ದರೆ, ಕೃಷ್ಣಶಾಸ್ತ್ರಿ ಚಿಪಳೂಣಕರರಂತೆ ಪ್ರಸಿದ್ಧರಾಗುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ.

## ಎರಡನೆಯ ಘಟ್ಟ

## ಬಾಲ್ಯ-ಶಿಕ್ಷಣ

ಲೊ. ಟಿಳಕರ ಜನ್ಮವು ೧೮೫೬ ಜುಲೈ ೨೩ನೇ ತಾರೀಖಿಗೆ ರತ್ನಾಗಿರಿಯಲ್ಲಿ ಆಯಿತು. ನಮ್ಮ ಪಂಚಾಂಗದಂತೆ ನೋಡಿದರೆ, ಶಕೆ ೧೭೭೮ ಆಷಾಢ ಕೃಷ್ಣ ೬ ಸೋಮವಾರ ಸೂರ್ಯೋದಯದ ನಂತರ ೨ ಘಳಿಗೆಯ ಲಗ್ನಕುಂಡಲಿಯನ್ನು ನೋಡಿದರೆ, ಜೋತಿಷಿಗಳ ಮತದಂತೆ, ಹೇಳಿಕೊಳ್ಳುವಂಥ ಅಲೌಕಿಕ ಯೋಗಗಳೇನೂ ಇರಲಿಲ್ಲ. ಒಂದೆರಡು ಯೋಗಗಳು ಮಾತ್ರ. ಎಲ್ಲರಂತೆ ಸಾಮಾನ್ಯ ಕುಂಡಲಿ ಎಂದು ಅವರ ಅಭಿಪ್ರಾಯ. ಆದರೆ ಸ್ತ್ರಿಯಶ್ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ ಎಂಬುದು ಲೋಕಮಾನ್ಯರಿಗೆ ಯಥಾರ್ಥವಾಗಿ ಅನ್ವಯಿಸುವದು.

ಟಿಳಕರ ಮೊದಲು ಗಂಗಾಧರಪಂತರಿಗೆ ಮೂರು ಹೆಣ್ಣುಮಕ್ಕಳೇ ಹುಟ್ಟಿದ್ದರು. ಸ್ತ್ರೀ ಸ್ವಭಾವದಂತೆ ಇವರ ತಾಯಿಯು ತಾನು ಸುಪುತ್ರವತಿಯಾಗಲಿಲ್ಲವಲ್ಲವೆಂದು ಚಿಂತೆಗೊಳಗಾಗಿ ಸೂರ್ಯೋಪಾಸನೆಯನ್ನು ಮಾಡಿದರು. ಒಳ್ಳೇ ವೃತಸ್ಥರಾಗಿ ಆರಾಧನೆಯನ್ನು ಮಾಡಿದರು. ಅದರ ಫಲವಾಗಿಯೇ ಗಂಡುಮಗುವು ಜನಿಸಿತು. ಅವರೇ ಲೋಕಮಾನ್ಯರು (೧೮೫೬). ದೇಹದಂಡನೆಯಿಂದ ಅವರ ದೇಹವು ಕೃಶವಾಗಿದ್ದಿತು. ಮಗು ಜನಿಸಿದ ಸಂತೋಷದಿಂದ ಅವರ ತೂಕವು ಹೆಚ್ಚಾಗಿರಬೇಕು.

ಟಿಳಕರ ಹೆಸರು ಬಳವಂತರಾಯರೆಂದು ವಾಡಿಕೆಯಿದ್ದರೂ ತಮ್ಮ ಕುಲದೈವತವಾದ 'ಕೇಶವ' ಎಂಬ ಹೆಸರನ್ನೇ ಅವರಿಗೆ ಇಟ್ಟಿದ್ದರು. ಆದರೆ ಅಚ್ಚೆಯಿಂದ 'ಬಾಳ' ಎಂದು ಕರೆಯಹತ್ತಿದರು. ಅದೇ ಮುಂದೆ ವ್ಯವಹಾರದಲ್ಲಿ ಬಂದಿತು. ಜನತೆಯ ಪ್ರೀತಿಯ ಹೆಸರೂ ಅದೇ ಆಯಿತು.

ಟಿಳಕರು ದೊಡ್ಡವರಾಗುತ್ತ ನಡೆದಂತೆ, ಅವರ ಗುಣಗಳು ಪ್ರಕಟವಾಗಹತ್ತಿದವು. ಅವರ ಬುದ್ಧಿಯು ಬಹು ಚುರುಕು. ದೃಷ್ಟಿಯೂ ಬಹು ಸೂಕ್ಷ್ಮ. ಸಂಸ್ಕೃತವಂತೂ ಮನೆತನದ ಆಸ್ತಿ. ಇವರ ಸ್ಮರಣ ಶಕ್ತಿಯೂ

ಅದ್ಭುತವಾದುದು. ಅದರಲ್ಲಿಯೂ ವಿದ್ವಾಂಸರೂ, ದಿವ್ಯಚರಿತರೂ, ನುರಿತ ಶಿಕ್ಷಕರೂ ಆದ ಗಂಗಾಧರಪಂತರು ತಮ್ಮ ಮಗನು ಬುದ್ಧಿವಂತನೂ, ನೀತಿವಂತನೂ, ಕರ್ತೃತ್ವಶಾಲಿಯೂ ಆಗಬೇಕೆಂಬ ಬಯಕೆಯುಳ್ಳವರಾಗಿದ್ದರು. ಅಂದಮೇಲೆ ಕೇಳುವದೇನು? ಗಂಗಾಧರಪಂತರು ಮಗುವನ್ನು ಕೂಡಿಸಿಕೊಂಡು ಸಂಸ್ಕೃತ ಸುಭಾಷಿತಗಳನ್ನು ಹೇಳಹತ್ತಿದರು. ಹೇಳಿದ್ದನ್ನೆಲ್ಲ ಕೂಡಲೇ ತಿರುಗಿ ಒಪ್ಪಿಸುವ ಮಗುವಿನ ಸ್ಮರಣಶಕ್ತಿಯನ್ನು ಕಂಡು ಎಲ್ಲರಿಗೂ ಸಾನಂದಾಶ್ಚರ್ಯವಾಗುತ್ತಿದ್ದಿತು. ಅದರಲ್ಲಿಯೂ ಒಂದು ಶ್ಲೋಕವನ್ನು ಪಾಠ ಮಾಡಿದರೆ ಒಂದು ಪೈ ಕೊಡುವೆನೆಂದು ಗಂಗಾಧರಪಂತರು ಆಮಿಷವನ್ನು ತೋರಿಸಿದ್ದರು. ಬಾಲ ಬಾಳನು ಈ ರೀತಿಯಾಗಿ ಗಳಿಸಿದ ಹಣವು ೨-೩ ರೂಪಾಯಿಗಳಿಗಿಂತಲೂ ಹೆಚ್ಚಾಗಿದ್ದಿರಬಹುದು.

೧೮೬೧ರನೇ ಇಸ್ವಿಯ ದಸರೆಯ ಸುಮೂರ್ತದಲ್ಲಿ ಟಿಳಕರನ್ನು ಶಾಲೆಗೆ ಹಾಕಲಾಯಿತು. ಅವರ ಮೊದಲನೆಯ ಗುರುಗಳು ಭಿಕಾಜಿ ಕೃಷ್ಣ ಪಟವರ್ಧನರೆಂಬುವವರು. ಈ ಗುರೂಜಿಯ ಮನೆತನದ ಹಾಗೂ ಟಿಳಕರ ಋಣಾನುಬಂಧವು ಮುಂದಿನ ತಲೆಮಾರಿನವರೆಗೂ ಬಾಳಿತು. ಒಬ್ಬನೇ ಮಗ, ತಂದೆಯು ಸ್ವತಃ ಶಿಕ್ಷಕರು, ಇದರಿಂದ ಟಿಳಕರ ಶಿಕ್ಷಣವು ಶಾಲೆಗಿಂತಲೂ ಮನೆಯಲ್ಲಿಯೇ ಹೆಚ್ಚಾಗಿ ಆಗಿದ್ದರೆ ಆಶ್ಚರ್ಯವಲ್ಲ.

ಮನೆತನದ ಕಟ್ಟುನಿಟ್ಟುಗಳ ಮೂಲಕ ಟಿಳಕರಿಗೆ ಮನೆಯಲ್ಲಾಗಲೀ ಹೊರಗೆ ಆಗಲೀ ಈಗಿನ ಹುಡುಗರಂತೆ ಸಿಕ್ಕಸಿಕ್ಕದ್ದನ್ನು ತಿನ್ನುವ ಚಟವಿರಲಿಲ್ಲ. ಒಮ್ಮೆ ಶಾಲೆಯಲ್ಲಿ ಶಿಕ್ಷಕರು ಶೇಂಗಾ ತಿಂದ ಸುಳ್ಳು ಆರೋಪವನ್ನು ಟಿಳಕರ ಮೇಲೆ ಹಾಕಿದರಂತೆ. ಆಗ ಬಾಲ ಬಾಳನು ಅದನ್ನು ನಿಷೇಧಿಸುವದಕ್ಕಾಗಿ ಪಾಟಿ-ಗಂಟು ಬಗಲಲ್ಲಿ ಇಟ್ಟುಕೊಂಡು ಮನೆಯ ದಾರಿಯನ್ನು ಹಿಡಿದನಂತೆ. ಬಾಳನ ಸ್ವಾಭಿಮಾನವನ್ನು ಕಂಡು ತಂದೆ-ತಾಯಿಗಳಿಗೆ ಆಶ್ಚರ್ಯವಾಯಿತಂತೆ!

ಮುಂಜಿವೆಯಾಗುವದಕ್ಕಿಂತ ಮೊದಲೇ ಟಿಳಕರಿಗೆ ಪೂರ್ಣಾಂಕ, ಅಪೂರ್ಣಾಂಕದವರೆಗೆ ಗಣಿತ, ಶಬ್ದರೂಪಾವಲಿ, ಧಾತು ರೂಪಾವಲಿ, ಸಮಾಸಚಕ್ರ, ಅರ್ಧ ಅಮರಕೋಶ ಮತ್ತು ಬ್ರಹ್ಮಕರ್ಮದ ಬಹುಭಾಗವು ಕಂಠಪಾಠವಾಗಿದ್ದಿತು. ೧೮೬೬ರಲ್ಲಿ ಅವರ ಮುಂಜಿವೆಯಾಯಿತು. ಬಾಲಕ

ನಾದ ಬಳವಂತನು ಇಷ್ಟೆಲ್ಲ ಕಲಿತದ್ದನ್ನು ಕಂಡು ಉಪಾಧ್ಯಾಯರೂ, ವೈದಿಕ ಮಂಡಳಿಯವರೂ ಆಶ್ಚರ್ಯಚಕಿತರಾದರು.

ಮುಂದೆ ಎರಡು ವರ್ಷದ ನಂತರ ಗಂಗಾಧರಪಂತರು ೧೦ ವರ್ಷದ ಎಳೆಯ ಬಾಲಕನನ್ನು ಕರೆದುಕೊಂಡು ಅ. ಡೆ. ಎಜ್ಯುಕೇಶನಲ್ ಇನ್‌ಸ್ಪೆಕ್ಟರರಾಗಿ ಪುಣೆಗೆ ಬಂದರು (೧೮೬೬). ಪುಣೆಯು ಅಂದು ವಿದ್ಯೆಯ ತವರುಮನೆಯಾಗಿದ್ದಿತು. ಮಗನ ವಿದ್ಯಾಭ್ಯಾಸಕ್ಕಾಗಿ ಹಾತೊರೆಯುತ್ತಿದ್ದ ಗಂಗಾಧರಪಂತರಿಗೆ ಆನಂದವಾಯಿತು. ತಮಗೆ ದೊರೆಯದಿದ್ದ ಅನುಕೂಲತೆಗಳನ್ನೆಲ್ಲ ದೇವರು ತಮ್ಮ ಮಗನಿಗಾದರೂ ಒದಗಿಸಿಕೊಟ್ಟನಲ್ಲವೆಂದು ತಮ್ಮ ಕುಲಸ್ವಾಮಿಯನ್ನು ಕೊಂಡಾಡಿದರು. ಮನೆಯಲ್ಲಿ ಆಸ್ಥೆಯಿಂದಲೂ ಹೌಸಿನಿಂದಲೂ ಕಲಿಸುವ ತಂದೆ, ಅವಶ್ಯವಿರುವ ಪುಸ್ತಕ ಮೊದಲಾದ ಸಲಕರಣೆ, ಅವುಗಳನ್ನು ದೊರಕಿಸುವಷ್ಟು ಸಾಂಪತ್ತಿಕ ಸ್ಥಿತಿ, ಇದೊಂದು ಬಳವಂತರಾಯರ ಭಾಗ್ಯವೆಂದೇ ಹೇಳಬಹುದು. ಆದರೆ ಈ ಅನುಕೂಲವಾದ ಯೋಗವು ಬಹುದಿನ ಉಳಿಯಲಿಲ್ಲ. ಇಂಗ್ಲಿಷ ಶಾಲೆಗೆ ಹೋಗಬೇಕೆನ್ನುವ ಸಮಯದಲ್ಲಿಯೇ ಅವರು ತಾಯಿಯನ್ನು ಕಳೆದುಕೊಂಡು ಪರದೇಶಿಗಳಾಗಿ ಕಕ್ಕಿಯ ಮಡಿಲಲ್ಲಿ ಬೆಳೆಯಬೇಕಾಯಿತು.

ಗಂಗಾಧರಪಂತರು, ಬಳವಂತರಾಯರ ಚಿಕ್ಕ ವಯಸ್ಸಿನಲ್ಲಿಯೇ ಅವರ ಶಿಕ್ಷಣದ ಅಡಿಗಲ್ಲನ್ನು ಗಟ್ಟಿಮುಟ್ಟಾಗಿ ಹಾಕಿದ್ದರು. ಶಾಲೆಯ ವ್ಯತಿರಿಕ್ತವಾಗಿ ಮನೆಯಲ್ಲಿ ಕಲಿಸಲು ಶಕ್ಯವಿದ್ದುದನ್ನೆಲ್ಲ ಕಲಿಸಿದ್ದರು. ಟಿಳಕರು ಇಂಗ್ಲಿಷ ಶಾಲೆಯ ಕಟ್ಟೆಯನ್ನು ಹತ್ತುವ ಮೊದಲೇ ಬಹುತರವಾಗಿ ಎಲ್ಲ ಅಂಕಗಣಿತ, ಸಮೀಕರಣದವರೆಗೆ ಬೀಜಗಣಿತ, ಯುಕ್ಲೀಡನ ಎರಡು ಪುಸ್ತಕ ಇಷ್ಟು ವಿಷಯಗಳು ಟಿಳಕರಿಗೆ ಅವಗತವಾಗಿದ್ದವು. ಸಂಸ್ಕೃತದಲ್ಲಿಯಂತೂ ಯಾವುದೇ ಸಾಮಾನ್ಯ ಶ್ಲೋಕದ ಅರ್ಥವನ್ನು ಸ್ವತಂತ್ರವಾಗಿ ಹಚ್ಚುತ್ತಿದ್ದರು.

ಟಿಳಕರ ಇಂಗ್ಲಿಷ ವಿದ್ಯಾಭ್ಯಾಸವು ಪುಣೆಯ ಸಿಟಿ ಹೈಸ್ಕೂಲಿನಲ್ಲಿ ಪ್ರಾರಂಭವಾಯಿತು. ಅವರು ಎರಡು ವರ್ಷಗಳಲ್ಲಿ ಮೂರು ಇಯತ್ತೆಗಳನ್ನು ಮುಗಿಸಿದರು. ಶಿಕ್ಷಕರಿಗೂ ಇವರಿಗೂ ಸರಿಹೋಗುತ್ತಿರಲಿಲ್ಲ. ಬುದ್ಧಿವಂತ ಹಟಮಾರಿ ಹುಡುಗರಿದ್ದರೆ, ಈ ಬಗೆಯ ತಿಕ್ಕಾಟ ಉತ್ಪನ್ನವಾಗುವದು ಸಹಜ

ವಾದುದು. ಈ ವಿಷಯದಲ್ಲಿ ಕೃ. ಆ. ಗುರೂಜಿ ಎಂಬುವವರು ಈ ರೀತಿ ಯಾಗಿ ಉಲ್ಲೇಖಿಸಿದ್ದಾರೆ. "ಶಿಕ್ಷಕರು ಗಣಿತವನ್ನು ಹೇಳಿದರೆ, ಟಿಳಕರು ಅದನ್ನು ಬಾಯಿಂದಲೇ ಬಿಡಿಸಬೇಕು. ಪಾಟಿಯ ಮೇಲೆ ಮಾಡು ಎಂದೊಡನೆ, ಪಾಟಿ ಏತಕ್ಕೆಬೇಕು ? ಎಂದು ಇವನ ಪ್ರಶ್ನೆ. ನೆನಪಿನವಹಿ ತರಬೇಕು ಎಂದು ಶಿಕ್ಷಕರು ಹೇಳಿದರೆ, ಅದು ಏತಕ್ಕೆಬೇಕು? ಎಂದು ಇವನ ಪ್ರಶ್ನೆಯು. ಫಳದ ಮೇಲೆ ಉದಾಹರಣೆಯನ್ನು ಬಿಡಿಸು, ಎಂದೊಡನೆಯೆ ಖಡುವಿನಿಂದ ಕೈ ಹೊಲಸು ಏಕೆಮಾಡಿಕೊಳ್ಳಬೇಕೆಂದು ಉತ್ತರಿಸಿ, ಬಾಯಿಯಿಂದಲೇ ಬಿಡಿಸುತ್ತಿದ್ದನು ಹೀಗೆ ಒಂದಿಲ್ಲ ಒಂದು ರೀತಿಯಿಂದ ಇವನ ಪ್ರಶ್ನೆ ಇದ್ದದ್ದೆ. ಒಮ್ಮೆ ಶುದ್ಧಬರಹವನ್ನು ಹೇಳುವಾಗ ಸಂತ ಎಂಬ ಶಬ್ದವು ಮೂರು ಸಲ ಬಂದಿತು. ಆಗ ಬಾಳನು ಮೂರೂಕಡೆಗೂ ಒಂದೇ ರೀತಿಯಾಗಿ ಬರೆಯದೆ, ಒಂದು ಸ್ಥಳದಲ್ಲಿ ಸಂತ, ಎಂದೂ, ಎರಡನೆಯ ಸ್ಥಳದಲ್ಲಿ ಸನ್ತ, ಎಂದೂ ಮೂರನೆಯ ಕಡೆಯಲ್ಲಿ ಸನ್‌ತ, ಎಂದೂ ಬರೆದಿದ್ದನು. ಶಿಕ್ಷಕನು ಮೊದಲನೆಯದನ್ನು ಸ್ಥಿರ ಹಿಡಿದು, ಉಳಿದೆರಡನ್ನು ತಪ್ಪೆಂದು ಹೊಡೆದು ಹಾಕಿದನು. ಆಗ ಟಿಳಕನು ತನ್ನದು ಸರಿಯೆಂದು ಜಗಳ ಹೂಡಿದನು. ಅದು ವಿಕೋಪಕ್ಕೆ ಹೋಗಿ, ಹೆಡ್ಮಾಸ್ತರಕಡೆಗೆ ತೀರ್ಮಾನಕ್ಕೆ ಹೋಯಿತು. ತನ್ನ ಮನಸ್ಸಿನಂತೆ ನಿರ್ಣಯ ದೊರೆತಾಗ ಟಿಳಕರು ಸುಮ್ಮನಾದರು." ಮೇಲಿನವರೊಡನೆ ಯಾವಾಗಲೂ ಈ ಬಗೆಯ ತುಂಟತನವನ್ನು ಮಾಡುತ್ತಿದ್ದ ಮೂಲಕ ಹುಡುಗನು ಬುದ್ಧಿವಂತನು ಆದರೆ ಜಗಳಗಂಟನು. ಚುರುಕು ಬುದ್ಧಿಯವ ಆದರೆ ತುಂಟ ಎಂದು ತುಂಟರ ತಂಡದಲ್ಲಿ ಇವನ ಗಣನೆಯಾಗ ಹತ್ತಿತು.

೧೮೭೯ ರಲ್ಲಿ ಟಿಳಕರು ಹೈಸ್ಕೂಲಿನಲ್ಲಿ ಐದನೇ ಈಯತ್ತೆಯಲ್ಲಿದ್ದರು. ಗಂಗಾಧರ ಪಂತರಿಗೆ ಪುಣೆಯಿಂದ ವರ್ಗವಾಯಿತು. ಆಗ ಹೈಸ್ಕೂಲಿಗೆ ಜೇಕಬನೆಂಬ ಸಾಹೇಬನು ಮುಖ್ಯಾಧ್ಯಾಪಕನಾಗಿದ್ದನು. ಅವನ ಆಳಿಕೆಯಲ್ಲಿ ಬುದ್ಧಿಗಿಂತಲೂ ಶಿಸ್ತಿಗೇ ಹೆಚ್ಚು ಮಹತ್ವ ಕೊಡಲಾಗುತ್ತಿತ್ತು. ಒಂದು ಪುಸ್ತಕದ ವಿಷಯದಲ್ಲಿ ಟಿಳಕ ಹಾಗೂ ಸಂಸ್ಕೃತ ಶಾಸ್ತ್ರಿಗಳ ನಡುವೆ ಜಗಳವಾಯಿತು. ಜೇಕಬನು ಸ್ವಾಭಾವಿಕವಾಗಿ ಶಾಸ್ತ್ರಿಗಳ ಪಕ್ಷವನ್ನು ಹಿಡಿದನು. ಟಿಳಕನು ಕೂಡಲೇ ಸರಕಾರಿ ಶಾಲೆಯನ್ನು ಬಿಟ್ಟು, ಬಾಬಾ ಗೋಖಲೆ

ಯುವರ ಶಾಲೆಗೆ ಹೋಗಹತ್ತಿದನು. ಜೇಕಬ ಸಾಹೇಬನು ಹೋಗಿ, ಕುಂಠೆ ಯುವರು ಹೆಡ್ಮಾಸ್ಟರರಾದೊಡನೆಯೇ ಅವನು ಮತ್ತೆ ಅದೇ ಶಾಲೆಗೆ ಬಂದನು.

ಟಿಳಕರ ವಿದ್ಯಾಭ್ಯಾಸದ ರೀತಿಯೇ ಬೇರೆ. ಸ್ವಚ್ಛಂದ ವೃತ್ತಿ ಎನ್ನುವದಕ್ಕಿಂತ ಸ್ವತಂತ್ರ ವೃತ್ತಿಯೆಂದರೆ ಹೆಚ್ಚು ಒಪ್ಪುವದು. ವರ್ಗದಲ್ಲಿ ಮೊದಲನೇ ಸ್ಥಾನವನ್ನು ಯಾವಾಗಲೂ ದೊರಕಿಸಿಯೇ ತೀರಬೇಕೆನ್ನುವ ಹಟವನ್ನೂ ಹಿಡಿದಿರಲಿಕ್ಕೂ ಇಲ್ಲ. ಸಾಧಿಸಿರಲಿಕ್ಕೂ ಇಲ್ಲ. ಆದರೆ ಎಲ್ಲ ಹುಡುಗರಗಿಂತಲೂ ತಮ್ಮಲ್ಲಿ ವಿಶೇಷ ವೈಶಿಷ್ಟ್ಯ ಅಥವಾ ಎರಡನೇಯವರಿಗೆ ಯಾವದು ಹೊಳೆಯುವದಿಲ್ಲವೋ ಅಂಥದನ್ನು ತಿಳಿಸುವ ಯೋಗ್ಯತೆ, ಬೇರೆಯವರಿಗೆ ಯಾವುದು ಸಾಧಿಸುವದಿಲ್ಲವೋ ಅದನ್ನು ಸಾಧಿಸುವ ಶಕ್ತಿಯು ತಮ್ಮಲ್ಲಿದೆ ಎಂಬುದನ್ನು ಮಾತ್ರ ಮನಗಾಣಿಸಿ ಕೊಟ್ಟಿದ್ದರು. ಮೇಲೆ ವಿವರಿಸಿದ 'ಸಂತ' ಶಬ್ದದ ಬರವಣಿಗೆಯು ಇದಕ್ಕೆ ಒಳ್ಳೇ ಉದಾಹರಣೆಯಾಗಿದೆ. ಟಿಳಕರಿಗಿಂತ ಹೆಚ್ಚು ಗುಣಗಳನ್ನು ಪಡೆಯುವ ವಿದ್ಯಾರ್ಥಿಗಳು ವರ್ಗದಲ್ಲಿರಬಹುದು; ಆದರೆ ವ್ಯಾಕರಣದಲ್ಲಿಯೂ ಸುಭಾಷಿತ ರೀತಿಯಲ್ಲಿ ಬರೆದ ಸಂಸ್ಕೃತಲ್ಲಿಯೂ ಇವರನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ಆ ಕಾಲದಲ್ಲಿ ಇವರು ರಚಿಸಿದ ಸಂಸ್ಕೃತ ಶ್ಲೋಕಗಳನ್ನು ನೋಡಿದರೆ, ಮೇಲಿನ ಮಾತಿನ ಸತ್ಯತೆಯು ಯಾರಿಗೂ ಹೊಳೆಯುವದು. ಪರೀಕ್ಷೆಯ ಪೇಪರಿನಲ್ಲಿಯ ಅತ್ಯಂತ ಕಠಿಣ ಪ್ರಶ್ನೆಯನ್ನು ಬಿಡಿಸಿ, ಈ ಹುಡುಗನು ಉಳಿದ ಸುಲಭ ಪ್ರಶ್ನೆಗಳನ್ನು ಲೀಲಾ ಜಾಲವಾಗಿ ಬಿಡಿಸಬಲ್ಲನೆಂಬ ವಿಶ್ವಾಸವನ್ನು ಪರೀಕ್ಷಕರಲ್ಲಿ ಹುಟ್ಟಿಸುವ ಪದ್ಧತಿಯನ್ನು ಇವರು ಸ್ವೀಕರಿಸಿದ್ದರು.

ಟಿಳಕರು ಹೈಸ್ಕೂಲಿನಲ್ಲಿರುವಾಗಲೇ ೧೮೭೧ ರ ವೈಶಾಖ ಮಾಸದಲ್ಲಿ ಇವರ ಮದುವೆಯಾಯಿತು. ಇವರ ಹೆಂಡತಿಯೂ ಕೊಂಕಣದವರೇ ಇದ್ದು, ಚಿಖಲಗಾಂವದಲ್ಲಿಯೇ ಇವರ ಲಗ್ನವಾಯಿತು. ಅವರ ಹೆಂಡತಿಯ ತವರ ಮನೆಯ ಹೆಸರು ತಾಪೀಬಾಯಿ. ಅತ್ತೆಯ ಮನೆಯ ಹೆಸರು ಸತ್ಯಭಾಮಾ. ಈ ಹುಡುಗೆಯ ಮನೆತನವೂ ದಾನ ಧರ್ಮದಲ್ಲಿ ಒಳ್ಳೇ ಹೆಸರಾದುದು. ಇವರ ಮನೆತನದ ಹೆಸರು ಬಾಳ ಎಂದೂ ಟಾಡಫರ (ದಾಪೋಲಿತಾಲೂಕ) ಎಂಬುದೇ ಇವರ ಊರು. ಆಗಿನಕಾಲದಲ್ಲಿ ಕಳ್ಳಕಾಕರ ಭಯವು ವಿಶೇಷ

ವಾಗಿದ್ದ ಮೂಲಕ, ಇದ್ದ ಬಿದ್ದ ಆಭರಣಗಳನ್ನು ಕಾಳಿನಲ್ಲಿ ಮುಚ್ಚಿಡುತ್ತಿದ್ದರು. ಒಂದು ದಿನ ಒಬ್ಬ ಭಿಕ್ಷುಕನು ಬರಲು, ಭಿಕ್ಷೆಯನ್ನು ಹಾಕಲು ಬೊಗಸಿ ತುಂಬ ಅಕ್ಕಿಯನ್ನು ತಂದಾಗ ಅದರಲ್ಲಿ ಭಂಗಾರದ ಒಡವೆಯೂ ಬಂದಿತಂತೆ. ಆಗ ಮನೆಯ ಯಜಮಾನ, ಬಾಳನು ಭಿಕ್ಷೆನೀಡಲು ತಂದದ್ದರಲ್ಲಿ ಒಡವೆ ಬಂದುದರಿಂದ ಅದನ್ನೂ ಅವನಿಗೆ ಹಾಕಿಯೇ ಬಿಡು ಎಂದು ಭಿಕ್ಷೆ ಹಾಕಿಸಿದಗಂತೆ. ಅಳಿಯನಾದ ಬಳವಂತರಾಯನೂ ಮಗಳಾದ ತಾಪೀಬಾಯಿಯೂ ಮಾತ್ರವಿಹೀನರೇ! ಇದೇ ಒಂದು ಕೊರತೆ. ಟಿಳಕರು ಲಗ್ನದಲ್ಲಿ ಸೆಟಗೊಂಡ ಸಂಗತಿಯನ್ನು ಯಾರೂ ಹೇಳುವದಿಲ್ಲ. ಸ್ವತಃ ಬಳವಂತರಾಯರು ಆಷಾಢ ಪಾಡ್ಯ ಕೊಡುವ ಹುಚ್ಚುಚ್ಚಾದ ಸಾಮಾನುಗಳ ಬದಲು ಅದೇ ಬೆಲೆಯಲ್ಲಿ ಉಪಯುಕ್ತ ಪುಸ್ತಕಗಳನ್ನು ನನಗೆ ಕೊಡಿರಿ ಎಂದು ಹಟ ಹಿಡಿದ ಸಂಗತಿಯನ್ನು ಚರಿತ್ರಕಾರರು ಬರೆಯುತ್ತಾರೆ.

ಟಿಳಕರ ಲಗ್ನದ ಮುಂಚೆಯೇ ಅವರ ಅಜ್ಜಂದಿರು ಕಾಶಿಯಲ್ಲಿ ಸಮಾಧಿಸ್ಥರಾಗಿದ್ದರು. ಲಗ್ನದ ನಂತರ ಸ್ವಲ್ಪ ದಿನಗಳಲ್ಲಿಯೇ ಅವರ ಹಿರಿಯರು ೧೮೭೨ ಅಗಸ್ಟ ೩೧ಕ್ಕೆ ಸ್ವರ್ಗಸ್ಥರಾದರು. ಟಿಳಕರ ಅಭ್ಯಾಸವು ನಡದೇ ಇದ್ದಿತು. ಅವರ ಕಕ್ಕಂದಿರ ಮೇಲ್ವಿಚಾರಣೆಯಿದ್ದಿತು. ಅದೇ ವರ್ಷದ ಡಿಸೆಂಬರ ತಿಂಗಳಲ್ಲಿ ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತರು. ಹಾಗೂ ತೇರ್ಗಡೆಯನ್ನು ಹೊಂದಿದರು. ಪರೀಕ್ಷೆಯಲ್ಲಿ ಗಣಿತ ಪೇಪರಿನಲ್ಲಿಯು ಕಠಿಣ ಪ್ರಶ್ನೆಗಳನ್ನಷ್ಟೇ ಬಿಡಿಸುವ ತಮ್ಮ ಧೋರಣವನ್ನೇ ಅನುಸರಿಸಿದರು. ಉಳಿದ ಪ್ರಶ್ನೆಗಳನ್ನು ಬಿಡಿಸದೆ ಪಾಸಾಗುವಷ್ಟು ಮಾತ್ರ ಮಾಡಿ ಎದ್ದು ಬಂದರು. ವಿದ್ಯಾರ್ಥಿ ವೇತನವು ದೊರೆಯದಿದ್ದರೂ ಮನೆಯಲ್ಲಿರುವ ಧನದಿಂದ ಕಾಲೇಜಕ್ಕೆ ಹೋಗಬಹುದೆಂಬ ಧೈರ್ಯವು ಅವರಿಗಿದ್ದಿತು.

## ಬಂಡಾಯದ ನಂತರದ ಭಾರತ

### (೧೮೫೭ರಿಂದ ೧೮೮೦)

ಟಿಳಕರ ಕಾಲೇಜ ಶಿಕ್ಷಣದ ಕಾಲವು ಅತ್ಯಂತ ಮಹತ್ವವಾದುದು. ಮನುಷ್ಯನಿಗೆ ಈ ಕಾಲದಲ್ಲಿ ತಿಳುವಳಿಕೆಯು ಮೂಡುತ್ತದೆ; ಜ್ಞಾನವು ಸ್ಫುರಣವಾಗುತ್ತದೆ; ವಿಚಾರ ಶಕ್ತಿಯು ಕುದುರುತ್ತದೆ. ಈ ಸಮಯ ದಲ್ಲಿಯೇ ನಿಜವಾದ ವಿದ್ಯಾರ್ಥಿ ಜೀವನವು ಪ್ರಾರಂಭವಾಗುತ್ತದೆ. ಮಾನ ವನ ಜೀವನದಲ್ಲಿಯೇ ಈ ಕಾಲವು ಒಳ್ಳೇ ಮಹತ್ವದ್ದು. ಈ ದಿನಗಳಲ್ಲಿ ಸಂಗ್ರಹಿಸಿದುದನ್ನೇ ಅವನು ಇಡೀ ಮುಂದಿನ ಜೀವನದಲ್ಲಿ ಸವಿಯುವನು. ಇಡೀ ಆಯುಷ್ಯದ ಬುತ್ತಿಗಂಟು ಕಟ್ಟುವ ಕಾಲವು ಇದೇ.

ವಿದ್ಯಾರ್ಥಿಯು ಪ್ರೌಢನಾಗಿರುತ್ತಾನೆ. ಸಾರಾಸಾರ ವಿಚಾರ ಮಾಡುವ, ತನಗೆ ಬೇಕಾದುದನ್ನು ಗ್ರಹಿಸುವ, ಶಕ್ತಿಯುಳ್ಳವನಾಗಿರುತ್ತಾನೆ. ಅವನು ಭರದಿಂದ ಬೆಳೆಯುವ ದಿನಗಳಿವು. ಮಾನವನ ಶಕ್ತಿಗಳಿಗೆ ಚಾಲನೆ ಕೊಟ್ಟು ಬೆಳೆಯಲು ಅನುಕೂಲತೆಗಳನ್ನು ಒದಗಿಸಿಕೊಡುವದೇ ಕಾಲೇಜಿನ ಕೆಲಸ. ಕೇವಲ ಕಾಲೇಜಿನ ಶಿಕ್ಷಣವೇ ಮಾನವನ ಜೀವನವನ್ನು ರೂಪಿ ಸುವದೆಂದು ಹೇಳಲಿಕ್ಕಾಗದು. ಸುತ್ತುಮುತ್ತಲಿನ ವಾತಾವರಣ, ಆ ಕಾಲದ ವಿಚಾರ ಧಾರೆಗಳು, ರಾಷ್ಟ್ರದ ಪರಿಸ್ಥಿತಿ, ಆನುವಂಶಿಕ ಸಂಸ್ಕಾರ ಇವೆಲ್ಲವು ಗಳೂ ಜೀವನವನ್ನು ರೂಪಿಸುವದರಲ್ಲಿ ಸಾಧನಗಳಾಗುತ್ತವೆ. ಇವೆಲ್ಲವುಗಳ ಸತ್ವವನ್ನು ಹೀರಿಕೊಂಡೇ ಮಾನವನು ಬೆಳೆಯುತ್ತಾನೆ.

ಈ ದೃಷ್ಟಿಯಿಂದ ಲೋಕಮಾನ್ಯರ ಜೀವನವನ್ನು ನೋಡಬೇಕು. ಅವರು ಕಾಲೇಜ ಶಿಕ್ಷಣವನ್ನು ಮುಗಿಸಿಕೊಂಡು ಹೊರಬೀಳುವಾಗ ಅವರು ನಿಶ್ಚಯಿಸಿದ ಧ್ಯೇಯ ಧೋರಣಗಳಿಗೆ ಕಾರಣಗಳೇನೆಂಬುದನ್ನು ಅರಿಯಲು ಆ ಕಾಲದ ಭಾರತದ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸ ಬೇಕಾಗುವದು.

**ಭಾರತದ ರಾಜಕೀಯ ರಂಗ:**— ಲೋಕಮಾನ್ಯರು ಪ್ರೌಢರಾಗು ತ್ತಿರುವ ಸಮಯವು ಭಾರತದಲ್ಲಿ ಸಂಧಿಕಾಲವಾಗಿದ್ದಿತು. ಬಂಡಾಯದ ನಂತರ ಹೊರಟ ರಾಣಿಯ ಜಾಹೀರನಾಮೆಯಿಂದ ದೇವಲೋಕದ

ರಾಜ್ಯವೇ ಬಂದಿಳಿಯುವದೆಂದು ನಂಬಿ, ನಲಿದಾಡಿದ ಜನರ ಭ್ರಮೆ ನಿರಸನ ವಾಗಹತ್ತಿತು. ಇಂಗ್ಲಂಡ, ಫ್ರಾನ್ಸ, ಅಮೇರಿಕಾ ದೇಶದ ಇತಿಹಾಸದ ಅಭ್ಯಾಸದಿಂದ ಅವರಲ್ಲಿಯ ಸ್ವಾತಂತ್ರ್ಯ ಪ್ರೇಮ, ರಾಷ್ಟ್ರಕ್ಕಾಗಿ ಮಾಡುವ ಬಲಿದಾನ, ನಮ್ಮ ದೇಶ, ನಮ್ಮ ರಾಷ್ಟ್ರಗಳೆಂಬ ಭಾವನೆಗಳು ಭಾರತೀಯ ತರುಣರಲ್ಲಿ ಮೂಡಿ ಸ್ವಾತಂತ್ರ್ಯದ ಸ್ವಪ್ನಗಳನ್ನು ಕಾಣಹತ್ತಿದ್ದರು.

ಬ್ರಿಟಿಶರ ಆಳಿಕೆಯು ಮುಂದೆ ಸಾಗಿದಂತೆ ಅದರ ಮೂಲ ಸ್ವರೂಪವು ಪ್ರಕಟವಾಗಹತ್ತಿತು. ಬ್ರಿಟಿಶರು ತಮ್ಮ ರಾಜ್ಯವು ಭದ್ರವಾಗುವಂತೆ ಆಡಳಿತೆಯ ಸೂತ್ರಗಳನ್ನು ಬಿಗಿ ಮಾಡಹತ್ತಿದರು. ಬಂಡಾಯದನಂತರ ಮರಾಠಾ, ಗುರ್ಖಾ ಮೊದಲಾದ ಸೈನಿಕ ಜಾತಿಗಳಿಂದಲೇ ಸೈನಿಕರು ಸೇರಿಸಲ್ಪಡಹತ್ತಿದ್ದರಿಂದ ಸೈನ್ಯದಲ್ಲಿಯ ದೊಡ್ಡ ದೊಡ್ಡ ಸ್ಥಳಗಳಿಗೆಲ್ಲ ಹಿಂದೀಯರು ಎರವಾದರು. ಗವ್ಹರ್ನರ, ಲೆ. ಗವ್ಹರ್ನರ, ಹೈಕೋರ್ಟ ಜಜ್ಜ ಮುಂತಾದ ಸ್ಥಳಗಳಂತೂ ಇರಲಿ, ಕಲೆಕ್ಟರ, ಡಿ. ಜಜ್ಜ, ಪ್ರೋ. ಸುಪರಿಂಟೆಂಡೆಂಟ ಮೊದಲಾದ ಸ್ಥಳಗಳೂ ಬ್ರಿಟಿಶರಿಂದಲೇ ವ್ಯಾಪಿಸಲ್ಪಟ್ಟವು. ೧೮೫೫ರಲ್ಲಿಯ ಕಾಯದೆಯಂತೆ ಲಂಡನ್ನದಲ್ಲಿಯ ಆಯ್. ಸಿ. ಎಸ್. ಪರೀಕ್ಷೆಯಾದವರಿಗೆ ಕಲೆಕ್ಟರ ಮೊದಲಾದ ಸ್ಥಳಗಳು ಕೊಡಲ್ಪಡಬೇಕೆಂದಿದ್ದರೂ ೨೧ ವರ್ಷದ ಚಿಕ್ಕವಯಸ್ಸಿನಲ್ಲಿ ಲಂಡನ್ನಿಗೆ ಹೋಗಿ ಬರುವದು ಹೇಗೆ ?

೧೮೬೧ ರಲ್ಲಿ ಆಗ್ರಾ, ರಜಪುತಾನ, ಕಚ್ಛ ಮೊದಲಾದ ಪ್ರದೇಶಗಳಲ್ಲಿ ದೊಡ್ಡ ಬರಬಿದ್ದಿತು. ಆದರೆ ಕೇಳುವವರಾರು ? ೧೮೬೫ ರಲ್ಲಿ ಓಡಿಸಾ ಛೋಟಾನಾಗಪುರಗಳಲ್ಲಿ ಭೀಕರವಾದ ಬರಬಿದ್ದು, ಸರಕಾರವು ತಕ್ಕ ಉಪಾಯಗಳನ್ನು ಕೈಕೊಳ್ಳದ್ದರಿಂದ ಓಡಿಸಾ ಪ್ರಾಂತ ಒಂದರಲ್ಲಿಯೇ ೧೦ ಲಕ್ಷ ಜನರು ಮರಣಕ್ಕೆ ತುತ್ತಾದರು. ೧೮೭೩ ರಲ್ಲಿ ಬಿಹಾರದಲ್ಲಿ ಬರಗಾಲವು ತಾಂಡವ ನೃತ್ಯವನ್ನು ನಡೆಯಿಸಿತು.

ಇದೇ ಸಮಯದಲ್ಲಿ ಬಡೋದೆ ಮಹಾರಾಜನು ರೆಸಿಡೆಂಟನಾದ ಕರ್ನಲ್ ಫೇಅರ್‌ರವರಿಗೆ ವಿಷಹಾಕಿದರೆಂಬ ಆರೋಪವನ್ನು ಹೊರಿಸಿ ಬ್ರಿಟಿಶರು ಅವನನ್ನು ಪಟ್ಟದಿಂದ ತಳ್ಳಿದರು. ಇದರಿಂದ ಮಹಾರಾಷ್ಟ್ರದಲ್ಲೆಲ್ಲ ಕೋಲಾಹಲವೆದ್ದಿತು.

೧೮೭೩ ರಲ್ಲಿ ದೇ. ಭ. ದಾದಾಭಾಯಿ ನವರೋಜಿಯವರು ಭಾರತದ

ಆರ್ಥಿಕ ಪ್ರಶ್ನೆಯ ವಿಷಯವಾಗಿ, ಪಾರ್ಲಿಮೆಂಟಿನ ಕಮಿಟಿಯಮುಂದೆ "ಇಲ್ಲಿಯ ಕರಗಳು ವಿಪರೀತವಾಗಿದ್ದು, ಆಡಳಿತೆಯ ವೆಚ್ಚ ಅವಾಢವ್ಯವಿದ್ದು ಬಡಭಾರತಕ್ಕೆ ಬಿಳಿ ಆನೆಯನ್ನು ಕಟ್ಟಿದಂತಾಗಿದೆ, ಎಂದೂ ಇದರಿಂದ ಭಾರತವು ಬಡತನದಲ್ಲಿ ಬಳಲುತ್ತಿದೆ, ಎಂದೂ ಪ್ರತಿಯೊಬ್ಬ ಭಾರತೀಯನ ಉತ್ಪನ್ನವು ೨೦ ರೂಪಾಯಿ ಮಿಕ್ಕುವದಿಲ್ಲ" ಎಂದೂ ಸಿದ್ಧಮಾಡಿಕೊಟ್ಟರು. ಸುಶಿಕ್ಷಿತರ ಕಣ್ಣುಗಳು ತೆರೆದವು. ಭಾರತದಲ್ಲಿ ಮಿಂಚು ಹೊಡೆದಂತಾ ಯಿತು. ಆದರೂ ಬ್ರಿಟಿಶರ ಸಮತೆ, ಸ್ವಾತಂತ್ರ್ಯ, ನ್ಯಾಯಗಳ ಮೋಹವು ಇನ್ನೂ ತೊಲಗಿರಲಿಲ್ಲ. ಅದಕ್ಕೇನು ಬಹುಕಾಲ ಬೇಕಾಗಲಿಲ್ಲ.

ಲಾರ್ಡ ಲಿಟನ್ನನ ಆಳಿಕೆಯು ಪ್ರಾರಂಭವಾಯಿತು. ತರುಣರ ಕೂಗಾಟವನ್ನು ಕಂಡು ಲಿಟನ್ನನು "ಹಿಂದೀಜನರ ಈ ವಿಷಯದಲ್ಲಿಯ ಆಶೆ ಗಳನ್ನು ಪೂರೈಸುವದು ಸಾಧ್ಯವಿದ್ದಿಲ್ಲವೆಂಬುದು ನಮ್ಮೆಲ್ಲರಿಗೂ ಗೊತ್ತಿದ್ದಿತು. ಅವರಿಗೆ ಇಲ್ಲವೆಂದಾದರೂ ಹೇಳಬೇಕಿತ್ತು, ಇಲ್ಲವೇ ಮೋಸಗೊಳಿಸ ಬೇಕಿತ್ತು. ಇವೆರಡರಲ್ಲಿ ವಾಮಮಾರ್ಗವನ್ನೇ ನಾವು ಹಿಡಿದೆವು'' ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು. ರಾಣೀ ಜಾಹೀರನಾಮೆಯು ಗಾಳಿಪಟ ವಾಯಿತು.

ಇದೇ ಸುಮಾರಿಗೆ ಭಾರತದ ಸಾರ್ವಜನಿಕ ಕ್ಷೇತ್ರದಲ್ಲಿ ತೇಜಸ್ವಿ ಯಾದ ಇನ್ನೊಂದು ಗ್ರಹ ಉದಯವಾಯಿತು. ಮ್ಯಾಝಿನಿಯ ರಾಷ್ಟ್ರೀಯ ಐಕ್ಯದ ತತ್ವ, ಅತುಲ ದೇಶಭಕ್ತಿ, ಕ್ರಾಂತಿಯ ತತ್ವಜ್ಞಾನಗಳಿಂದ ಮೋಹಿತ ರಾದ ಸುರೇಂದ್ರನಾಥ ಬ್ಯಾನರ್ಜಿಯವರು ಭಾರತದ ರಾಜಕೀಯರಂಗ ಕ್ಕಿಳಿದರು. ಇಂಡಿಯನ್ ಆಸೋಸಿಯೇಶನ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ (೧೮೭೬) ಕೊಂಡು ಜನತೆಯನ್ನು ಸಂಘಟಿಸಹತ್ತಿದರು. ಮ್ಯಾಝಿನಿಯ ತತ್ವಗಳನ್ನು ಉಪದೇಶಿಸಹತ್ತಿದರು. ರಾಷ್ಟ್ರೀಯ ಐಕ್ಯವೇ ಇವರ ಗುರಿ ಯಾಗಿದ್ದಿತು.

ಲಿಟನ್ನರ ಕಾಲಗುಣವೋ ಏನೋ ಅವರ ಆಳಿಕೆಯ ಪ್ರಾರಂಭಕ್ಕೆಯೇ ಮೈಸೂರ, ಮಹಾರಾಷ್ಟ್ರ, ಕರ್ನಾಟಕ, ಮದ್ರಾಸಗಳಲ್ಲಿಯೂ (೧೮೭೬-೭೮) ಮಧ್ಯಪ್ರಾಂತ, ಮತ್ತು ಸಂಯುಕ್ತ ಪ್ರಾಂತಗಳಲ್ಲಿಯೂ ಬಹು ದೊಡ್ಡ ಬರ ಗಾಲವು ಬಿದ್ದಿತು. ಬೀದಿ ಬೀದಿಗೆ ಹೆಣಗಳು ಬೀಳಹತ್ತಿದವು. ಸರಕಾರ

ದಿಂದ ಯೋಗ್ಯ ವ್ಯವಸ್ಥೆಯಾಗಲಿಲ್ಲ. ೫೦ ಲಕ್ಷ ಜನರು ಮರಣಕ್ಕೆ ತುತ್ತಾದರು. ದೇಶದಲ್ಲೆಲ್ಲ ಹಾಹಾಕಾರ ಉಂಟಾಯಿತು. ಹಸಿವೆಯಿಂದ ಕಂಗೆಟ್ಟ ರೈತರು ವಾಸುದೇವ ಬಳವಂತ ಫಡಕೆಯವರ ನೇತೃತ್ವದಲ್ಲಿ ಬಂಡಾಯವನ್ನು ಹೂಡಿದರು. (ಬಂಡು ಚಿಕ್ಕದಾದರೂ ಬ್ರಿಟಿಶರನ್ನು ನಡುಗಿಸಿತು.)

ಲಾರ್ಡಲಿಟನ್ನನೂ ದಿನಕ್ಕೊಂದು ಹೊಸಶಸ್ತ್ರವನ್ನು ಹಿರಿಯುತ್ತಿದ್ದನು. ೧೮೭೭ ರಲ್ಲಿ ಆಯ್. ಸಿ. ಎಸ್. ಪರೀಕ್ಷೆಯ ವಯೋಮರ್ಯಾದೆ ೨೧ ರಿಂದ ೧೯ಕ್ಕೆ ಇಳಿಸಲ್ಪಟ್ಟಿತು. ಸುರೇಂದ್ರನಾಥರು ಇದರ ವಿರುದ್ಧವಾಗಿ ಆಂದೋಲನ ಹೂಡಿದರು. ಆಗ್ರಾ, ದಿಲ್ಲಿ, ಲಾಹೋರ, ಕಾನಪುರ ಮೊದಲಾದ ಸ್ಥಳಗಳಿಗೆ ಹೋಗಿ ಸಭೆ ಜರುಗಿಸಿ, ವಯೋ ಮರ್ಯಾದೆಯನ್ನು ಹೆಚ್ಚಿಸಬೇಕೆಂಬ ಗೊತ್ತುವಳಿಗಳನ್ನು ಮಾಡಿದರು. ಲಾಹೋರ, ಕಾನಪುರ ಗಳಲ್ಲಿ ಆಂದೋಲನಕ್ಕಾಗಿ ಸಂಘಗಳನ್ನು ಸ್ಥಾಪಿಸಿದರು. ಮುಂದೆ ಮುಂಬಯಿ, ಅಹಮ್ಮದಾಬಾದ, ಪುಣೆ ಮತ್ತು ಮದ್ರಾಸಗಳಲ್ಲಿ ಸಭೆಗಳನ್ನು ಜರುಗಿಸಿದರು. ಸುರೇಂದ್ರನಾಥರು ಇಲ್ಲಿಗೇ ನಿಲ್ಲಲಿಲ್ಲ ಇಂಗ್ಲಂಡದಲ್ಲಿ ಚಳವಳಿ ಹೂಡಲು ಲಾಲ ಮೋಹನ ಘೋಷರನ್ನು ಕಳಿಸಿಕೊಟ್ಟರು. ಅವರು ಜಾನ ಬ್ರಾಯಬರರ ಅಧ್ಯಕ್ಷತೆಯಲ್ಲಿ ಸಭೆ ಜರುಗಿಸಿದ ೨೪ ತಾಸುಗಳಲ್ಲಿಯೇ ಆಯ್. ಸಿ. ಎಸ್. ಪರೀಕ್ಷೆಯ ನಿಯಮಗಳು ಪ್ರಸಿದ್ಧಿಸಲ್ಪಟ್ಟವು.

ರಶಿಯಾ, ಇಂಗ್ಲಂಡಗಳ ಸ್ನೇಹಕ್ಕೆ ಧಕ್ಕೆ ಬಂದುದರಿಂದ ದೇಶೀ ವೃತ್ತಪತ್ರಗಳು ರಶಿಯಾವನ್ನು ಎತ್ತಿಹಿಡಿದು, ಇಂಗ್ಲಂಡವನ್ನು ಕೀಳ್ಗಳೆದು ಬ್ರಿಟಿಶ ಅಧಿಕಾರಿಗಳ ಕೊಲೆಗಳನ್ನೂ ಬ್ರಿಟಿಶ ರಾಜ್ಯವನ್ನು ಕಿತ್ತುಹಾಕಲು ಪ್ರೋತ್ಸಾಹವನ್ನೂ ಕೊಡುತ್ತವೆ. ಆದ್ದರಿಂದ ಇಂತಹ ಬರಹಗಳನ್ನು ತಡೆಯುವದಕ್ಕಾಗಿ ಅವಶ್ಯವೆನಿಸಿದಾಗ ದೇಶೀವೃತ್ತಪತ್ರಗಳಿಂದ ಜಾಮೀನು ತೆಗೆದುಕೊಳ್ಳಬಹುದೆಂಬ ಕಾಯಿದೆಯನ್ನು ಕೌನ್ಸಿಲ್ಲಿನಿಂದ ಪಾಸು ಮಾಡಿಕೊಂಡನು. ಮುದ್ರಣ ಸ್ವಾತಂತ್ರ್ಯವು ಹರಣ ಮಾಡಲ್ಪಟ್ಟಿತು. ಸುರೇಂದ್ರನಾಥ ಬ್ಯಾನರ್ಜಿಯವರು ಕಲಕತ್ತೆಯಲ್ಲಿ ಸಭೆ ಮಾಡಿ ಇದನ್ನು ನಿಷೇಧಿಸಿದರು. ಮದ್ರಾಸ ಸರಕಾರವೂ ಇದನ್ನು ವಿರೋಧಿಸಿತು. ಗ್ಲಾಡಸ್ಟನ್ನರೂ ತಮ್ಮ ಮಿಡ್ಲೋಥಿಯನದ ಭಾಷಣದಲ್ಲಿ ಶಸ್ತ್ರಪ್ರತಿಬಂಧಕ ಕಾಯಿದೆಯನ್ನೂ

ದೇಶೀವೃತ್ತಪತ್ರಗಳ ಕಾಯದೆಯನ್ನೂ ನಿಷೇಧಿಸಿದರು. ಇದೆಲ್ಲದರ ಪರಿಣಾಮವಾಗಿ ಲಾರ್ಡ ಲಿಟನ್ನರು ವೃತ್ತಪತ್ರಕಾಯದೆಯನ್ನು ರದ್ದುಪಡಿಸಿದರು. ಯಾವುದೇ ಹಿಂದೀಮನುಷ್ಯನು ಅಪ್ಪಣೆಯಿಲ್ಲದೆ ಕತ್ತಿ, ಬಂದೂಕು ಮೊದಲಾದ ಶಸ್ತ್ರಾಸ್ತ್ರಗಳನ್ನು ಇಟ್ಟುಕೊಳ್ಳಕೂಡದೆಂದು ಕಟ್ಟಳೆಯನ್ನು ಮಾಡಿ ಹಿಂದೀಯರ ಕ್ಷಾತ್ರವೃತ್ತಿಗೇ ಕೊಡಲಿಯನ್ನಿಕ್ಕಿದ್ದನು. ಜನರ ಕೈಯ್ಯಲ್ಲಿಯ ಶಸ್ತ್ರಾಸ್ತ್ರಗಳನ್ನು ಹರಣ ಮಾಡಿದನು. ಬರಗಾಲದಿಂದ ಜನರು ಸಾಯುತ್ತಿದ್ದರೂ ದುಂದುಗಾರಿಕೆಯ ದಿಲ್ಲೀ ದರಬಾರವನ್ನು ನಡೆಯಿಸಿದನು. ಇನಾಮು ಕಮಿಶನ್, ಅರಣ್ಯ ಖಾತೆಯ ಬೆಳವಣಿಗೆ, ಮದ್ಯದ ಪ್ರಸಾರ, ಇವೇ ಮೊದಲಾದವುಗಳಿಂದ ಜನ ಜರ್ಜರಿತವಾಯಿತು. ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಸಂಘಟಿತ ಚಟುವಟಿಕೆಗಳು ಅವಶ್ಯವೆಂದು ಸುಶಿಕ್ಷಿತರಿಗೆ ಅನಿಸಹತ್ತಿತು.

ಲಾಲಮೋಹನ ಘೋಷರು ಲಂಡನ್ನಿನಲ್ಲಿ ಮಾತನಾಡುವಾಗ ಲಾರ್ಡ ಲಿಟನ್ನರ ಆಳಿಕೆಯ ಅನೇಕ ಅನ್ಯಾಯಗಳನ್ನು ವಿವರಿಸಿ, ಅವರ ಧೋರಣವನ್ನು ನಿಷೇಧಿಸಿದರು. 'ನಾನು ಇದುವರೆಗೆ ವಿವೇಚಿಸಿರುವ ಎಲ್ಲ ಕುಂದು ಕೊರತೆಗಳಿಗೆ ಮೂಲಾಧಾರದಂತಿರುವ ಮಾತೆಂದರೆ, ಹಿಂದುಸ್ತಾನದ ಆಡಳಿತೆಯಲ್ಲಿ ಪ್ರಜೆಗಳಿಗೆ ಏನೂ ಪ್ರಾತಿನಿಧ್ಯವಿಲ್ಲ. ಯಾವುದೊಂದು ಬಗೆಯ ಪ್ರಜಾಪದ್ಧತಿಯ ಆಡಳಿತೆ ಬೇಕೆಂಬುದೇ ಸುಶಿಕ್ಷಿತರ ಕೂಗು.' ಎಂದು ಸ್ಪಷ್ಟವಾಗಿಯೇ ಹೇಳಿಬಿಟ್ಟರು. (೧೮೭೪) ದಾದಾಭಾಯಿ ನವರೋಜಿಯವರು ಸರಕಾರಕ್ಕೆ ಸುದೀರ್ಘವಾದ ಒಂದು ಪತ್ರಬರೆದು 'ಬ್ರಿಟಿಶರ ವಚನಗಳು ಗಾಳೀಪಾಲಾದವು. ಈ ಎಲ್ಲ ಅಪಕೃತ್ಯಗಳ ಫಲವನ್ನು ಬ್ರಿಟಿಶರು ಅನುಭವಿಸಬೇಕಾಗುವದು ಸುಶಿಕ್ಷಿತರ ಕೂಗಾಟ ನಡೆದಿದೆ. ಅವರ ವಿಚಾರಗಳು ಇನ್ನೂ ಸ್ಥಿರವಾಗಿಲ್ಲ. ಹೀಗೆಯೇ ದುರ್ಲಕ್ಷಿಸಿದರೆ ಕ್ಷೋಭ ಉಂಟಾಗಿ, ಭಾರತವು ದಬ್ಬಾಳಿಕೆಯಿಂದ ನಾಶವಾಗಬಹುದು. ಇಲ್ಲವೆ ದಬ್ಬಾಳಿಕೆಯನ್ನು ಮಾಡುವ ಆಳರಸರ ಅಧಿಕಾರವನ್ನು ನಾಶಮಾಡಬಹುದು.' ಎಂದು ಎಚ್ಚರಿಸಿದರು.

ಅತ್ತ ಇಂಗ್ಲಂಡದಲ್ಲಿ ಹೆನ್ರಿ ಫಾಸೆಟ್ಟರು ರಾಜ್ಯದಾಡಳಿತೆಯಲ್ಲಿ ಹಿಂದೀಯರಿಗೆ ಯೋಗ್ಯಸ್ಥಾನ ದೊರೆಯಬೇಕೆಂದು ಪ್ರತಿಪಾದಿಸುತ್ತಿದ್ದರು.

೧೮೭೫ರಲ್ಲಿ ಭಾರತದ ಖರ್ಚಿನಿಂದ ತುರ್ಕಸ್ತಾನದ ಸುಲ್ತಾನನಿಗಾಗಿ ಏರ್ಪಡಿಸಿದ ನಾಚನ್ನು ಕಟುವಾಗಿ ಟೀಕಿಸಿದರು. ಅಬಿಸೀನಿಯಾದ ಯುದ್ಧದ ಖರ್ಚನ್ನು ಭಾರತದ ಮೇಲೆ ಹೇರುವದು ಅನ್ಯಾಯವೆಂದು ಪ್ರತಿಪಾದಿಸಿದರು. ಅವರ ಪ್ರಯತ್ನದಿಂದಲೇ ಅರ್ಧ ವೆಚ್ಚವನ್ನು ಇಂಗ್ಲಂಡವು ವಹಿಸಿತು. ೧೮೭೫ರಲ್ಲಿ ಎಡ್ವರ್ಡನು ಹಿಂದುಸ್ತಾನಕ್ಕೆ ಬಂದ ವೆಚ್ಚವನ್ನೆಲ್ಲ ಭಾರತದ ಮೇಲೆ ಹೇರಿದ್ದನ್ನು ನಿಷೇಧಿಸಿದರು. ದಿಲ್ಲಿ ದರ್ಬಾರ ದುಂದುಗಾರಿಕೆಯನ್ನು ಕಟುನುಡಿಗಳಿಂದ ಅಲ್ಲಗಳೆದರು.

ಹೀಗೆ ಎಲ್ಲಕಡೆಗೆ ಬ್ರಿಟಿಶರ ಆಡಳಿತೆಯ ಬಗ್ಗೆ ಅಸಂತೋಷ ವ್ಯಕ್ತವಾಗತೊಡಗಿತು. ಈ ಎಲ್ಲ ವಿವರಣೆಯು ಭಾರತೀಯರ ಆಗಿನ ಕಾಲದ ಹೃದಯವನ್ನು ಚಿತ್ರಿಸುತ್ತದೆ. ಈ ಎಲ್ಲ ಭಾವನೆಗಳಿಗೆ ಮೂರ್ತಸ್ವರೂಪ ಕೊಟ್ಟು, ಏಕಮುಖವಾದ ಆಂದೋಲನವನ್ನು ಹೂಡಬೇಕೆಂಬುದೇ ಆಗಿನ ಪ್ರಶ್ನೆಯಾಗಿದ್ದಿತು. ಇದು ಆಗಿನ ರಾಜಕೀಯ ರಂಗ.

## ಆರ್ಥಿಕ ಅವನತಿ

ಬಂಡಾಯದ ನಂತರ ರಾಜರು, ಮಹಾಜರು ಮಾಯವಾದ ಮೂಲಕ ಅವರ ಸರಂಜಾಮುವನ್ನು ಕೇಳುವವರಾರು? ಸರದಾರ, ಜಹಗೀರದಾರ, ದೇಸಾಯಿ, ದೇಶಪಾಂಡೆ ಮೊದಲಾದ ಜನಾಂಗವೆಲ್ಲ ಅಧಿಕಾರವನ್ನು, ಕಳೆದುಕೊಂಡು, ಹಲ್ಲುಮುರಿದ ಹಾವಿನಂತಾಯಿತು. ಇದ್ದುದರಲ್ಲಿಯೇ ಮರ್ಯಾದೆಯಿಂದ ಜೀವಿಸುವ ಪ್ರಸಂಗ ಒದಗಿತು. ಕಟ್ಟಿದ ಬುತ್ತಿ ಕಲಿಸಿದ ಮಾತು ಎಷ್ಟು ದಿನ ನಡೆಯುವವು? ಕ್ರಮೇಣ ಸಂಪತ್ತು ಕರಗಿ ಮಧ್ಯಮ ವರ್ಗದವರಾಗಹತ್ತಿದರು ಇವರ ಗತಿಯೇ ಹೀಗಾದ ಮೇಲೆ ಸಾಮಾನ್ಯರದಂತೂ ಹೇಳಲಿಕ್ಕೇ ಬೇಡ. ಅದರಲ್ಲಿಯೂ ಮೇಲಿಂದ ಮೇಲೆ ಕ್ಷಾಮ, ಹೊತ್ತಿಗೆ ಮಳೆಯಿಲ್ಲ, ಬಡಭೂಮಿ, ಬಂದ ಬೆಳೆಯಿಂದ ಹೊಟ್ಟೆಬಟ್ಟೆಗೂ ಕೊರತೆ. ಹೊಟ್ಟೆಗಾಗಿ ಸಾವುಕಾರರ ಕಡೆಗೆ ಹೋಗಬೇಕು. ಒಮ್ಮೆ ಸಾವುಕಾರರ ಕೈಗೆ ಸಿಕ್ಕರೆ ತೀರಿತು, ಕಟುಕರ ಕೈಗೆ ಸಿಕ್ಕಂತೆಯೇ. ಬಡ್ಡಿಗೆ ಬಡ್ಡಿ ಬೆಳೆದು, ಹೊಲಮನೆಗಳನ್ನು ಕಳೆದುಕೊಂಡಾಗ ಅವನಿಗೆ ಸಾವುಕಾರರ ಕಪಟ ನಾಟಕ ತಿಳಿಯುವದು. ಸಾವುಕಾರರ ಈ ಹಾವಳಿ

ಯಿಂದ ಹಳ್ಳಿಗಳಲ್ಲಿ ಹಾಹಾಕಾರ ಉಂಟಾಯಿತು. ಸೇಡು ತೀರಿಸಿಕೊಳ್ಳುವ ಬುದ್ಧಿಯು ಹುಟ್ಟಿ, ಸಾವುಕಾರರ ಮೂಗು ಕೊಯ್ಯುವದು, ಕೊಲೆ ಮಾಡುವದು, ಅವರ ಮನೆತನಕ್ಕೆ ಬಹಿಷ್ಕಾರ ಹಾಕುವದು, ದರೋಡೆ ಮಾಡುವದು ಇವೇ ಮೊದಲಾದ ಸಂಗತಿಗಳು ಜರುಗಹತ್ತಿದವು. ಮಹಾರಾಷ್ಟ್ರದಲ್ಲಿಯೂ, ಗುಜರಾಥದಲ್ಲಿಯೂ ಈ ಚಳುವಳಿಯು ಉಗ್ರರೂಪವನ್ನು ತಾಳಿತು. ಕೊನೆಗೆ ಸರಕಾರವು ಋಣವಿಮೋಚನ ಕಾಯದೆಯನ್ನು ಮಾಡಿತು. ೧೮೭೬ರ ಬರಗಾಲದಲ್ಲಿ ರಾನಡೆಯವರ ಪ್ರೇರಣೆಯಿಂದ ಸಾರ್ವಜನಿಕ ಸಭೆಯು ಕೈಕೊಂಡ ಸೇವೆಯ ಪರಿಣಾಮವು ಟಿಳಕರ ಮೇಲೆ ಬಹಳವಾಯಿತು.

**ರೈತರ ಬಂಡು:—** ಪೇಶ್ವೆಯವರ ರಾಜ್ಯವು ಮುಳುಗಿ ಸ್ವಾತಂತ್ರ್ಯವು ನಷ್ಟವಾಗಿದ್ದರೂ ಆ ಸ್ವಾತಂತ್ರ್ಯ ಕಿಚ್ಚು ಮಹಾರಾಷ್ಟ್ರದಲ್ಲಿ ಇನ್ನೂ ಆರಿದ್ದಿಲ್ಲ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಆತ್ಮಬಲಿದಾನ ಮಾಡುವ ಫಡಕೆಯಂಥವರ ಪರಂಪರೆಯು ನಡೆದು ಬಂದಿದೆ. ವಾಮನ ಬಳವಂತ ಫಡಕೆಯವರ ಸ್ವಾತಂತ್ರ್ಯಪ್ರೇಮವು ಅದ್ವಿತೀಯವಾದುದು. ರಾಜ್ಯಕ್ರಾಂತಿಗಾಗಿ ಅವರು ಹಾತೊರೆಯುತ್ತಿದ್ದರು. ಕ್ರಾಂತಿಗೆ ಬೇಕಾಗುವ ಧನ ಬಲವು ರಾಜಮಾರ್ಗದಿಂದ ದೊರೆಯದಿದ್ದರೆ, ಅಡ್ಡದಾರಿಯಿಂದಲಾದರೂ ಅದನ್ನು ದೊರಕಿಸಬೇಕೆಂಬ ವಿಚಾರದವರಿದ್ದರು. ರಾಜ್ಯದಲ್ಲಿ ಉಂಟಾದ ಈ ಅಸಂತೋಷದ ಲಾಭ ಪಡೆದು, ಕ್ರಾಂತಿಯನ್ನು ಹೂಡಬೇಕೆಂದು ೧೮೭೬-೭೭ ರ ಬರಗಾಲದಲ್ಲಿ ದರೋಡೆಖೋರರನ್ನು ಕೈಯಲ್ಲಿ ಹಿಡಿದರು. ರೈಲುಗಳನ್ನು ಉರುಳಿಸುವದು, ತಂತಿ ಕಡಿಯುವದು, ಹಳ್ಳಿಯಲ್ಲಿಯ ಸರಕಾರವನ್ನು ಕೈಯಲ್ಲಿ ತೆಗೆದುಕೊಳ್ಳುವದು ಇವೇ ಅವರ ಕಾರ್ಯಕ್ರಮಗಳಾದವು. ದರೋಡೆಖೋರರು ಫಡಕೆಯವರ ಉದಾತ್ತ ಧ್ಯೇಯವನ್ನು ಅರಿಯುವದೆಂತು? ಕ್ರಾಂತಿಯ ಹೆಸರಿನಲ್ಲಿ ಅವರು ತಮ್ಮ ಕಾಯಕವನ್ನು ಮುಂದುವರಿಸಿದರು. ಅವರ ಬಲೆಯಿಂದ ಫಡಕೆಯವರು ಹೊರಬರಲು ಅಸಾಧ್ಯವಾಗಿ, ಜನಬಲವು ತಪ್ಪಿತು. ಕೊನೆಗೆ ಬಂಡುಗಾರರೆಂದು ಕ್ರಾಂತಿಯ ಸಂದೇಶವನ್ನು ತರುಣರಿಗಿತ್ತು, ನಗುನಗುತ್ತ ಗಲ್ಲಿಗೇರಿದರು. ಅವರ ಹೆಸರು ತೆಗೆದುಕೊಂಡ ಬ್ರಿಟಿಶರು ಗಾಬರಿಯಾಗಿ ಗದಗದ ನಡುಗುತ್ತಿದ್ದರು. ಈ ಬಂಡಿನ ಪರಿ

ಣಾಮವು ಆ ಕಾಲದ ತರುಣರ ಮೇಲೆ ಆಗದೆ ಹೇಗೆ ಬಿಟ್ಟೀತು? ಟಿಳಕರ ಆಪ್ತನೊಬ್ಬನು ಈ ಕ್ರಾಂತಿಯಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಿದ್ದನಂತೆ. ಅವನಿಂದ ಟಿಳಕರ ಗುಂಪು ಎಷ್ಟೋ ಕತೆಗಳನ್ನು ಕೇಳಿರಬಹುದು. ಇಂದಿಗೂ ಫಡಕೆಯವರ ಅದ್ಭುತರಮ್ಯ ಕತೆಗಳು ಕೇಳಬರುತ್ತವೆ.

## ಧಾರ್ಮಿಕ ಹಾಗೂ ಸಾಮಾಜಿಕ ಪರಿವರ್ತನೆ

ಇಂಗ್ಲಿಷ ಶಿಕ್ಷಣ ಪಡೆದ ಮೊದಲನೆಯ ಗುಂಪು, ಅಧಿಕಾರ ಮದದಿಂದ ಮತ್ತರಾಗಿ, ಸ್ವಧರ್ಮ, ಸ್ವಸಂಸ್ಕೃತಿಗಳನ್ನು ಧಿಕ್ಕರಿಸಿ, ಹಿಂದೂ ಧರ್ಮವನ್ನು ತೆಗಳುತ್ತ ಕ್ರಿಶ್ಚಿಯನ್ ಪಾದ್ರಿಗಳ ಬಲೆಯಲ್ಲಿ ಹೇಗೆ ಬೀಳುತ್ತ ನಡೆಯಿತೆಂಬುದನ್ನು ಹಿಂದೆ ಹೇಳಿದ್ದೇವೆ. ಎರಡನೆಯ ಗುಂಪು ಅದಕ್ಕಿಂತಲೂ ಬೇರೆ. ಪೂರ್ವ ಪರಂಪರೆ ಹರಿದುಕೊಂಡು ಹೋಗಬೇಕೆಂದು ಬಯಸಲಿಲ್ಲ. ಆದರೆ ಸಮಾಜದಲ್ಲಿ ಸುಧಾರಣೆಯಾಗಲೇ ಬೇಕು. ಸಂಕುಚಿತ ಭಾವನೆಗಳೆಲ್ಲ ಹೋಗಬೇಕು. ಧರ್ಮಪರಿವರ್ತನವನ್ನು ತಡೆಗಟ್ಟಲೇಬೇಕೆಂಬ ಭಾವನೆಯಿಂದ ಬ್ರಹ್ಮೋಸಮಾಜ, ಆರ್ಯಸಮಾಜ, ಪ್ರಾರ್ಥನಾಸಮಾಜಗಳಂಥ ಧರ್ಮಪಂಥಗಳನ್ನು ಸ್ಥಾಪಿಸಿ, ಸಮಾಜವನ್ನು ಕ್ರಿಸ್ತೀಧರ್ಮದ ದವಡೆಯೊಳಗಿಂದ ಉಳಿಸಲು ಯತ್ನಿಸಿದರು. ಈ ಗುಂಪಿನಲ್ಲಿಯೇ ದಾದಾಭಾಯಿ ನವರೋಜಿ, ಮಹಾದೇವ ಗೋವಿಂದ ರಾನಡೆ ಮೊದಲಾದವರು ಬರುವರು. ಇವರು ಅತ್ಯಂತ ದೇಶಪ್ರೇಮಿಗಳು, ರಾಷ್ಟ್ರ ನಿರ್ಮಾಪಕರು ಆದರೆ ಸುಧಾರಕರು. ವಿಧವಾ ವಿವಾಹ, ಮೊದಲಾದ ಸುಧಾರಣೆಗೆ ಪ್ರಾರಂಭ ಮಾಡಿದರು. ಆದರೆ ಇವರಿಂದಲೂ ಕ್ರಿಸ್ತೀ ಧರ್ಮಪ್ರಸಾರವನ್ನು ತಡೆಯುವದಾಗಲಿಲ್ಲ. ಇವರ ಆಚಾರ ವಿಚಾರಗಳು ಜನರ ಕಣ್ಣಿಗೆ ಬಿದ್ದು, ಜನರು ಮೂಗುಮುರಿಯಹತ್ತಿದರು. ಆದರೆ ಈ ಸುಧಾರಕರ ಕಣ್ಣುಗಳೂ ಬೇಗನೆ ತೆರೆದವು. ಈ ಉಪಕ್ರಮವು ಅಲ್ಲಿಗೇ ನಿಂತಿತು. ಧರ್ಮಾಂತರದಲ್ಲಿ ಪ್ರಾರ್ಥನಾ ಸಮಾಜದವರು ಎಲ್ಲಕ್ಕೂ ಮುಂದು. ಹಿಂದೂ ಧರ್ಮದ ವೈಶಿಷ್ಟ್ಯವನ್ನು ಧಿಕ್ಕರಿಸಿ, ಜಗತ್ತಿನ ಸರ್ವಧರ್ಮಗಳಲ್ಲಿಯ ಉತ್ತಮೋತ್ತಮ ತತ್ವಗಳನ್ನು ಒಂದೆಡೆಗೆ ತಂದು ಹೊಸಧರ್ಮವನ್ನು ಸ್ಥಾಪಿಸುವುದೇ ಇವರ ಉದ್ದೇಶ. ಈ ಬಗೆಯಾಗಿ ಸ್ವಧರ್ಮದಿಂದ ಕಾಲುಕಿತ್ತಿದವರು ಎರಡನೆಯ

ಧರ್ಮದಲ್ಲಿ ಕಾಲಿಡುವದು ಅಷ್ಟೇನು ಆಶ್ಚರ್ಯವಲ್ಲ. ಪ್ರಾರ್ಥನಾ ಸಮಾಜ ವಾದಿಗಳಂತೂ, ಗೀತೆಯಷ್ಟೇ ಬೆಲೆಯನ್ನು ಬಾಯಬಲ್ಲಿಗೆ ಕೊಡುತ್ತಿದ್ದರು. ಹೀಗಿದ್ದರೂ "ಹಿಂದೂಧರ್ಮದಲ್ಲಿ ಕೆಲವು ಕೊರತೆಗಳಿದ್ದರೂ ಕ್ರಿಸ್ತೀ ಧರ್ಮವನ್ನು ಸ್ವೀಕರಿಸಿದರೆ ಕೂಡ ಎಲ್ಲ ಶಂಕೆಗಳಿಗೆ ಉತ್ತರ ಸಿಗುವದೆಂದು ಹೇಳಲು ಬರುವದಿಲ್ಲ" ಎಂಬ ಅನುಭವ ಅವರಿಗೆ ಬಹು ಸ್ವಲ್ಪ ದಿನಗಳ ಲ್ಲಿಯೇ ಬಂದಿತು. ೧೮೭೮ ರಲ್ಲಿ ರಾನಡೆಯವರು ಸಾರ್ವಜನಿಕ ಸಭೆಯ ತ್ರೈಮಾಸಿಕದಲ್ಲಿ ಮುಂಬೈಯ ಪ್ರಾರ್ಥನಾ ಸಮಾಜದ ಮುಖಂಡರಾದ ದಾದೋಜಿ ಪಾಂಡುರಂಗ ಅವರ ಉದಾಹರಣೆಕೊಟ್ಟು ಮೇಲಿನ ಮಾತನ್ನು ಸಿದ್ಧಮಾಡಿದ್ದಾರೆ.

" It is a great relief to us to find that as the result of 50 year's study Dadoba, though he reveres The Holy Bible and has made Cristianity the favourite study of his life, has faild to accept the current doctrines of the Cristian religion. There is not a single point among the cardinal doctrines of the Cristian Churches to which Dadoba has been able to subscribe his unqualified adhesion, may more, he has expressed his dissent from the philosophy and rationale of these doctrines with unmistakable freedom. "

ಧರ್ಮಸಹಿಷ್ಣುತೆಯ ಚರಮಸೀಮೆಯನ್ನು ಮುಟ್ಟಿದ ಸುಶಿಕ್ಷಿತರ ಪರಿಸ್ಥಿತಿಯೇ ಹೀಗಿದ್ದಮೇಲೆ, ಸಾಮಾನ್ಯ ಸ್ಥಿತಿಯ ಜನರ ಮೇಲಂತೂ ಬಾಯಬಲ್ಲಿನ ಪರಿಣಾಮವೇನಾಗಬೇಕು ?

ಇಂಗ್ಲಿಷ ಶಿಕ್ಷಣದ ಪ್ರಸಾರದೊಂದಿಗೆ, ಜನರನ್ನು ಕ್ರಿಶ್ಚಿಯನ್ನರನ್ನಾಗಿ ಮಾಡುವ ಮಹತ್ವಾಕಾಂಕ್ಷೆಯೂ ಪಾದ್ರಿಗಳಲ್ಲಿ ಕಂಡುಬಂದಿತು. ಅವರು ಮೋಸದಿಂದಲೂ ಜುಲುಮೆಯಿಂದಲೂ ಕುಲಗೆಡಿಸುವ ಕಾರ್ಯವನ್ನು ಕೈ ಕೊಂಡರು. ಅಲ್ಲಲ್ಲಿ ದಂಗೆಗಳೂ ಆದವು. ಪಾದ್ರಿಗಳು ಎಷ್ಟೋ ಕಡೆಗೆ ಪೆಟ್ಟುಗಳನ್ನು ತಿನ್ನಬೇಕಾಯಿತು. ಶಿಕ್ಷಣ ಸಂಸ್ಥೆಗಳು ತಮ್ಮ ಕೈಯಲ್ಲಿಯೇ

ಉಳಿಯಬೇಕೆಂಬ ಉದ್ದೇಶದಿಂದ ಸರಕಾರವು ಶಿಕ್ಷಣಖಾತೆ ಅಥವಾ ಯಾವುದೇ ಬಗೆಯ ಶಿಕ್ಷಣದ ಕಾರ್ಯದಲ್ಲಿ ಚಳವಳಿಯನ್ನು ಪಾದ್ರಿಗಳು ಹೂಡಿದರು. ಮುದ್ರಣಾಲಯಗಳನ್ನು ಪ್ರಾರಂಭಿಸುವದು, ಚಿಕ್ಕ ಚಿಕ್ಕ ಪುಸ್ತಕಗಳನ್ನು ಪ್ರಕಟಿಸುವದು, ಸಂತೆಯಲ್ಲಿ ನಿಂತು ಉಪದೇಶಿಸುವದು, ಭಾವಿ ಕೆರೆಗಳನ್ನು ಮುಟ್ಟಿ, ಸಾಧಿಸಿದರೆ ಜನರನ್ನು ಕುಲಗೆಡಿಸುವದು, ಸಾಧಿಸದಿದ್ದರೆ ಇಂಗ್ಲಿಷ ರಾಜ್ಯದಿಂದ ದೊರೆಯುವ ದೊಡ್ಡ ದೊಡ್ಡ ಅಧಿಕಾರ ಸ್ಥಳಗಳನ್ನು ಭೋಗಿಸುವದು, ಈ ಬಗೆಯ ದ್ವಿಮುಖ ಧೋರಣದಿಂದ ಪಾದ್ರಿಗಳು ಸಾಗಹತ್ತಿದರು. ಇಂತಹ ಕಾರ್ಯಕ್ರಮದಿಂದ ಹಿಂದೂ ಧರ್ಮವು ಎಂದೂ ನಾಮಶೇಷವಾಗಲಾರದು. ಬಹಳವಾದರೆ ಕ್ರಿಸ್ತದೇವನ ಗುಡಿಯೊಂದು ಹೆಚ್ಚಾಗುವದೆಂದು ಸುಜ್ಞರು ತಿಳಿದಿದ್ದರು.

ಆದರೂ ಕ್ರಿಸ್ತಿ ಪಾದ್ರಿಗಳ ಬಲೆಗೆ ಹೊಟ್ಟೆಗಿಲ್ಲದ ಬಡವರು ಬೀಳುತ್ತಿರುವದನ್ನು ಕಂಡು, ಅಲ್ಲಲ್ಲಿ ವಿರೋಧಕ್ಕೆ ಪ್ರಾರಂಭವಾಯಿತು ಪ್ರಾರ್ಥನಾ ಸಮಾಜದಂಥ ಸುಶಿಕ್ಷಿತ ವರ್ಗಕ್ಕೆ ಮನಬಂದಂತೆ ತಳಬುಡವಿಲ್ಲದ ಮಾತುಗಳನ್ನಾಡುತ್ತಿದ್ದ ಈ ಪಾದ್ರಿಗಳನ್ನು ಎದುರಿಸುವದು ಆಗಲಿಲ್ಲ. ಸೇರಿಗೆ ಸವ್ವಾಸೇರೆಂದು ಗಂಟುಬೀಳುವ ಉಪದೇಶಕರೇ ಇದಕ್ಕೆ ಬೇಕಿದ್ದಿತು. ಮಹಾರಾಷ್ಟ್ರದಲ್ಲಿ ಬ್ರಹ್ಮಚಾರಿ 'ವಿಷ್ಣುಬುವಾ' ಎಂಬುವವರು ಇದಕ್ಕಾಗಿ ಮುಂದೆ ಬಂದರು. ಅವರು ವಿದ್ವಾಂಸರೂ ಧರ್ಮಾಭಿಮಾನಿಗಳೂ ತಪಸ್ವಿಗಳೂ-ಇದ್ದ ಮೂಲಕ ಜನರ ಆದರಾಭಿಮಾನಗಳಿಗೆ ಪಾತ್ರರಾದುದು ಆಶ್ಚರ್ಯವಲ್ಲ. ಅವರು ಮುಂಬಯಿಯ ಚೌಪಾಟಿಯಲ್ಲಿ ಧರ್ಮದಮೇಲೆ ಉಪನ್ಯಾಸಗಳನ್ನು ಪ್ರಾರಂಭಮಾಡಿದರು. ಪಾದ್ರಿಗಳ ಸಮಾಚಾರವನ್ನು ಚನ್ನಾಗಿಯೇ ತೆಗೆದುಕೊಂಡು, ಅವರ ಹೂರಣವನ್ನು ಹೊರಗೆಡವಹತ್ತಿದರು. ಪಾದ್ರಿಗಳನ್ನು ಹಿಡಿದು ಅವರೊಡನೆ ವಾದವಿವಾದಗಳನ್ನು ಮಾಡಿ ಅವರನ್ನು ಹಣ್ಣುಗಾಯಿ ನೀರುಗಾಯಿ ಮಾಡುತ್ತಿದ್ದರು. ಒಮ್ಮೊಮ್ಮೆ ಸುಧಾರಕರನ್ನು ನಿರುತ್ತರರನ್ನಾಗಿ ಮಾಡುತ್ತಿದ್ದರು. ೧೮೭೯ ರಲ್ಲಿ ಈ ಚಳವಳಿಯು ಶಿಖರಕ್ಕೆ ಮುಟ್ಟಿತು. ಮಿಶನರಿ ಪಾದ್ರಿಗಳ ದವಡೆಯೊಳಗಿಂದ ಅಜ್ಞ ಜನರನ್ನು ಮುಕ್ತಮಾಡಿದ ಶ್ರೇಯಸ್ಸಿನ ಬಹು ಭಾಗವು ಮಹಾರಾಷ್ಟ್ರದಲ್ಲಿ ಇವರಿಗೆ ಸಲ್ಲುತ್ತದೆ.

ಬಂಡಾಯದ ನಂತರ ಸರಕಾರವು ಮೆಲ್ಲನೆ ಶಿಕ್ಷಣವನ್ನು ತನ್ನ ಕೈಯಲ್ಲಿ ತೆಗೆದುಕೊಂಡಿತು. ನೌಕರಿ, ರಾಜದರ್ಬಾರದಲ್ಲಿ ಮರ್ಯಾದೆ, ಕೈತುಂಬ ಪಗಾರ ಇವುಗಳಿಂದ ಜನರ ಪ್ರವೃತ್ತಿಯು ಈ ಕಡೆಗೆ ತಿರುಗುವದು ಸ್ವಾಭಾವಿಕ: ಈ ಶಿಕ್ಷಣದ ಉದ್ದೇಶವು ಮೂರು ತೆರನಾಗಿದ್ದಿತೆಂದು ತಿಳಿದು ಬರುತ್ತದೆ. ೧) ಸರಕಾರಕ್ಕೆ ರಾಜ್ಯ ಕಾರಭಾರ ನಡೆಯಿಸಲು ಬೇಕಾಗುವ ಜನರನ್ನು ಸಿದ್ಧಪಡಿಸುವದು. ೨) ಹಿಂದೀಜನರಮೇಲೆ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವು ಬಿದ್ದು, ಅವರು ಪಾಶ್ಚಾತ್ಯ ಸಂಸ್ಕೃತಿಯ ಪುರಸ್ಕರ್ತರಾಗಬೇಕು. ಮತ್ತು ತಮ್ಮ ವ್ಯಾಪಾರಿ ಸರಕುಗಳಿಗೆ ಕಾಯಂ ಗಿರಾಕಿಗಳಾಗಬೇಕು. ೩) ಹಿಂದೀಯರು ತಮ್ಮ ಧರ್ಮವನ್ನು ತ್ಯಾಗಮಾಡಿ ಕ್ರಿಶ್ಚಿಯನ್ನರಾಗಬೇಕು.

ಪರಿಣಾಮದಲ್ಲಿ ನೋಡಿದರೆ, ಈ ಮೂರು ಉದ್ದೇಶಗಳು ಬ್ರಿಟಿಶರಲ್ಲಿ ಇರಲಿಕ್ಕಿಲ್ಲವೆಂದು ಹೇಳಲು ಬರುವದಿಲ್ಲ. ರಾಜ್ಯ ಸಂಪಾದನವೇನು ಮೋಕ್ಷಕ್ಕಲ್ಲ. ತಮ್ಮ ಧರ್ಮ, ತಮ್ಮ ಸಂಸ್ಕೃತಿ, ತಮ್ಮ ವ್ಯಾಪಾರಗಳು ಅಭಿವೃದ್ಧಿಹೊಂದಬೇಕೆಂಬುದೇ ಅವರ ಬಯಕೆಯಾಗಿದ್ದಿತು. 'ಭಾರತದಲ್ಲಿಯ ನಮ್ಮ ರಾಜ್ಯವು ಹೋದರೂ ಚಿಂತೆಯಿಲ್ಲ, ವ್ಯಾಪಾರ ಮಾತ್ರ ಕೈಬಿಡಬಾರದು' ಎಂಬ ಮೆಕಾಲೆಯ ಉದ್ಗಾರವು ಪ್ರಸಿದ್ಧವೇ ಇದೆ. ಕ್ರಿಸ್ತಪಾದ್ರಿಗಳು ಶಿಕ್ಷಣವು ಸರಕಾರದ ಕೈಸೇರದೆ ತಮ್ಮಕೈಯಲ್ಲಿ ಬೀಳಬೇಕೆಂದು ಏಕೆ ಬಯಸುತ್ತಿದ್ದರೆಂಬುದಂತೂ ಮೇಲೆಯೇ ಇದೆ. ಭಾರತದಲ್ಲಿ ಸ್ಥಾಪಿತವಾಗಿರುವ ಮಿಶನರಿ ಶಿಕ್ಷಣ ಸಂಸ್ಥೆಗಳ ಜನ್ಮವು ಬಹುತರವಾಗಿ ಈ ಕಾಲದಲ್ಲಿಯೇ-ಸ್ವಲ್ಪ ಹಿಂದೆ, ಮುಂದೆ. ಇರಲಿ.

ಹಿಂದುಸ್ತಾನವು ಬ್ರಿಟಿಶರ ಕೈಸೇರಿದನಂತರ ಮುಂಬಯಿಯಲ್ಲಿಯೂ (೧೮೫೭) ಕಲಕತ್ತೆಯಲ್ಲಿಯೂ (೧೮೫೮) ಮದ್ರಾಸ, ಅಲ್ಹಾಬಾದಗಳಲ್ಲಿಯೂ (೧೮೮೨) ಲಾಹೋರಿನಲ್ಲಿಯೂ (೧೮೮೨) ವಿಶ್ವವಿದ್ಯಾಲಯಗಳು ಸ್ಥಾಪಿಸಲ್ಪಟ್ಟು, ಉಚ್ಚತರಗತಿಯ ಶಿಕ್ಷಣವು ಕೊಡಲ್ಪಡಹತ್ತಿತು. ಬ್ರಿಟಿಶರ ಉದ್ದೇಶಗಳು ಬಹುಮಟ್ಟಿಗೆ ಸಫಲವಾಗಿದ್ದರೂ ಪೂರ್ಣಯಶಸ್ವಿಯಾಗಲಿಲ್ಲ. ಜಗತ್ತಿನಲ್ಲಿ ಕ್ರಿಯೆಗೆ ಪ್ರತಿಕ್ರಿಯೆ ಇದ್ದೇ ಇರುತ್ತದೆ. ಇಂಗ್ಲಿಷ ಶಿಕ್ಷಣದಿಂದ ಅವರ ಸಭ್ಯತೆಗೆ ಸ್ವಾಗತವಾದರೂ ಪಾಶ್ಚಾತ್ಯ ರಾಜ್ಯ ಶಾಸನಗಳ ಅಭ್ಯಾಸಕ್ಕೆ

ಮೊದಲಾಯಿತು. ಇಂಗ್ಲಂಡ-ಫ್ರಾನ್ಸ, ಇಟಲಿ, ಅಮೇರಿಕಾ ದೇಶಗಳ ಇತಿಹಾಸದಲ್ಲಿ ಅಡಕವಾಗಿರುವ ಸ್ವಾತಂತ್ರ್ಯಪ್ರೇಮ, ಸ್ವಾತಂತ್ರ್ಯದ ಹೋರಾಟ, ದೇಶಕ್ಕಾಗಿ ಮಾಡಿದ ಅವರ ಬಲಿದಾನ, ನಮ್ಮ ರಾಷ್ಟ್ರ, ನಮ್ಮ ದೇಶ, ನಮ್ಮ ಶಾಸನ ಇವೇ ಮೊದಲಾದ ರಾಷ್ಟ್ರೀಯ ಭಾವನೆಗಳು ಭಾರತೀಯರ ಹೃದಯದಲ್ಲಿ ಮೂಡಿದವು. ಅವರೂ ಸ್ವಾತಂತ್ರ್ಯದ ಹೊಂಗನಸುಗಳನ್ನು ಕಾಣಹತ್ತಿದರು. ಇಂಡಿಯನ್ ಅಸೋಶಿಯೇಶನ್, ಸಾರ್ವಜನಿಕ ಸಭೆ, ಮಹಾಜನ ಸಭೆ, ಮುಂತಾದ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು, ಜನ ರಾಜಕಾರಣದಲ್ಲಿ ಮುಂದುವರಿಯಿತು. ಈಶ-ಸಂಕಲ್ಪ ಹೇಗಿದೆ ನೋಡಿ.

ಲೋಕಮಾನ್ಯ ಟಿಳಕರು ಬಿ. ಎ. ಪಾಸಾದಾಗ ಪದವೀಧರರ ಸಂಖ್ಯೆ ಮುಂಬಯಿ ಇಲಾಖೆಯಲ್ಲಿ ೧೭೯ ಮಾತ್ರ. ಇವರು ಎಲ್‌ಎಲ್. ಬಿ. ಪಾಸಾದಾಗ ೭೩ ಜನ ಎಲ್‌ಎಲ್. ಬಿ. ಯಲ್ಲಿ. ಮುಂದೆ ಸಂಖ್ಯೆಯು ಭರದಿಂದ ಬೆಳೆದ ಸಂಗತಿಯು ಕಾಣುತ್ತದೆ.

ಬಂಗಾಲದಂತೆ ದಕ್ಷಿಣದಲ್ಲಿಯೂ ಮಹಾರಾಷ್ಟ್ರದಲ್ಲಿಯೂ ಜಾಗೃತಿ ಹೆಚ್ಚಾಗಿದ್ದಿತು. ಪುಣೆಯು ರಾಜಕೀಯ ಚಳವಳಿಯ ಆಗರವಾಗಿದ್ದಿತು. ಟಿಳಕರು ಪ್ರೌಢರಾಗುವ ಕಾಲದಲ್ಲಿ, ಕೈ. ವಾ. ಮಹಾದೇವ ಗೋವಿಂದ ರಾನಡೆಯವರು ರಾಜಕೀಯ ಮುಖಂಡರಾಗಿದ್ದರು. ಮಹಾರಾಷ್ಟ್ರದ ರಾಜಕೀಯ ಜೀವನದ ಮುಖ್ಯ ಜನಕರು ಅವರೆಂದರೆ ಅತಿಶಯೋಕ್ತಿಯಾಗ ಲಾರದು. ಇಡೀ ದೇಶವೇ ಇವರನ್ನು ಮನ್ನಿಸುತ್ತಿತ್ತು. ಕಾಂಗ್ರೆಸ್ಸಿನ ಜನಕರಲ್ಲಿ ಇವರೊಬ್ಬರೆಂಬುದನ್ನು ಮರೆಯಕೂಡದು. ವಕ್ತೃತ್ವ ಸಮಾ ರಂಭ, ವಸಂತ ವ್ಯಾಖ್ಯಾನ ಮಾಲೆ, ಔದ್ಯೋಗಿಕ ಪರಿಷತ್ ಹಾಗೂ ಪ್ರದರ್ಶನ, ಫಿಮೇಲ ಹೈಸ್ಕೂಲ, ಪ್ರಾರ್ಥನಾ ಸಮಾಜ, ಲಾಯಬ್ರರಿ, ಸಾರ್ವಜನಿಕ ಸಭೆ ಮೊದಲಾದ ಸಂಸ್ಥೆಗಳನ್ನು ಪೋಷಿಸಿ, ಬೆಳೆಯಿಸಿದ್ದರು. ರಾನಡೆಯವರ ಕೈವಾಡವಿಲ್ಲದ ಒಂದೂ ಸಂಸ್ಥೆಯು ಪುಣೆಯಲ್ಲಿ ಇದ್ದಿಲ್ಲ ವೆಂದು ಹೇಳಬಹುದು. ಈ ಎಲ್ಲ ಸಂಸ್ಥೆಗಳ ಮುಖಾಂತರ ಜ್ಞಾನ ಪ್ರಕಾಶ ವಾಗಿ ಜನತೆಯಲ್ಲಿ ಜಾಗೃತಿಯು ಉತ್ಪನ್ನವಾಗಹತ್ತಿತು.

ದಾದಾಭಾಯಿ ನವರೋಜಿ, ಫಿರೋಜಶಹಾ ಮೆಥಾ, ಸುರೇಂದ್ರ

ನಾಥ ಬ್ಯಾನರ್ಜಿ, ಲಾಲಮೋಹನ ಘೋಷ, ರಾನಡೆ, ವಿಷ್ಣುಶಾಸ್ತ್ರಿ ಚಿಪ ಳೂಣಕರ, ಮೊದಲಾದವರು ಸಾರ್ವಜನಿಕ ಜೀವನಕ್ಕೆ ರೂಪಕೊಡುವ ರಾಷ್ಟ್ರ ನಿರ್ಮಾಣದ ಕಾರ್ಯದ ಸೂತ್ರ ಚಾಲಕರಾಗಿದ್ದರು.

ಒಟ್ಟಿನಲ್ಲಿ ಆ ಕಾಲದ ಪರಿಸ್ಥಿಯ ಚಿತ್ರವನ್ನು ಟಿಳಕರೇ ಚಿತ್ರಿಸಿದ್ದಾರೆ ಅದನ್ನು ಕೊಟ್ಟು, ಬೆಳೆಯುತ್ತ ನಡೆದ ಈ ಪ್ರಕರಣವನ್ನು ಮುಗಿಸುತ್ತೇವೆ.

"ಸಮಾಜದ ಮುಖಂಡತ್ವವು ಕೇವಲ ವಿದ್ಯೆಯಿಂದ ಲಭಿಸುವದಿಲ್ಲ. ಪೇಶ್ವೆಯವರ ನಂತರ ಕೆಲವು ದಿವಸ ಸರದಾರ, ಜಾಹಗೀರದಾರರ ಕಡೆಗೆ ಮುಖಂಡತ್ವವು ಪ್ರಾಪ್ತವಾಯಿತು. ಜನತೆ, ಸರಕಾರ ಇಬ್ಬರೂ ಇವರನ್ನು ಮನ್ನಿಸುತ್ತಿದ್ದರು. ಆದರೆ ಇದು ಬಹುಕಾಲ ಉಳಿಯಲಿಲ್ಲ.

ಇಂಗ್ಲಿಷ ಶಿಕ್ಷಣ ಪ್ರಾರಂಭವಾಯಿತು. ಇಂಗ್ಲಿಷ ಕಲಿತಂಥವರನ್ನು ರಾಜ್ಯಕಾರಭಾರದ ದೃಷ್ಟಿಯಿಂದ ಕೈಯಲ್ಲಿ ಹಿಡಿಯುವದು ಯೋಗ್ಯವೇ ಇದ್ದಿತು. ಆದರೆ ಇವರಿಗೆ ಶಾಲೆಯಲ್ಲಿ ಧರ್ಮ ಹಾಗೂ ನೀತಿಯ ಶಿಕ್ಷಣವು ದೊರೆಯದ ಮೂಲಕ, ಇವರ ಮನಸ್ಥಿತಿಯು ಭಯಂಕರ ಹಾಗೂ ಶೋಚ ನೀಯವಾಯಿತು. ತಮ್ಮ ಸಂಸ್ಕೃತಿಯ ಬಗ್ಗೆ ಅವರಲ್ಲಿ ಅನಾದರ ಉಂಟಾಯಿತು. ಸದೋಷ ಹಾಗು ಅಲ್ಪ ಶಿಕ್ಷಣವಿದ್ದರೂ ಕೈತುಂಬ ಪಗಾರ, ಸರ್ಕಾರದ ಮನ್ನಣೆ ಇದ್ದ ಮೂಲಕ ಅಧಿಕಾರದ ಮದವುಳ್ಳವರೂ ತಮ್ಮ ಸಮಾಜ ಸಂಸ್ಕೃತಿಗಳನ್ನು ಕೀಳು ಬಗೆಯುವ ಬುದ್ಧಿಯುಳ್ಳವರೂ ಆದರು. ೧೮೩೭ ರಿಂದ ೭೪ ರ ವರೆಗೆ ಮೂರು ತಲೆಗಳಾಗಿವೆ. ಮೊದಲಿನವರ ಸ್ಥಿತಿ ಯನ್ನು ಮೇಲೆ ಹೇಳಿದ್ದೇವೆ. ಎರಡನೇ ತಲೆಮಾರಿನವರೆಂದರೆ ರಾನಡೆ ಮೊದಲಾದ ಪ್ರಭೃತಿಗಳು. ಇವರಿಗೆ ಮೊದಲಿನವರಿಗಿಂತಲೂ ಸ್ವಸಂಸ್ಕೃತಿಯ ಬಗ್ಗೆ ತಿರಸ್ಕಾರವು ಕಡಿಮೆ. ಆದರೆ ವಿದ್ಯೆ, ನೀತಿಮತ್ತೆ, ಧರ್ಮನಿಷ್ಠೆ, ಶುದ್ಧ ಆಚಾರ, ಹಾಗೂ ಮನೆತನಗಳ ಯೋಗ್ಯ ಸಂಬಂಧವಿಲ್ಲದಂಥ ವಿದ್ವಾಂಸನು ಕೂಡ ಮುಖಂಡನಾಗಿ ರಾಷ್ಟ್ರದ ಉತ್ಕರ್ಷವನ್ನು ಮಾಡ ಲಾರನು. ಆದರೆ ಇಂಗ್ಲಿಷ ಶಿಕ್ಷಣವು ಈ ಪವಿತ್ರ ಸಂಬಂಧವನ್ನೇ ಕಡಿದು ಬಿಟ್ಟಿತು. ಸಮಾಜದಲ್ಲಿಯ ದೋಷಗಳೇ ಅವರ ದೃಷ್ಟಿಗೆ ಬೀಳಹತ್ತಿ ದವು. ಕೇವಲ ತರ್ಕಪ್ರಧಾನವಾದವು ಸಮಾಜ ಸಂರಕ್ಷಣೆಗೆ ಹೇಗೆ ಉಪ ಯೋಗ ಬೀಳಬೇಕು! ಸಮಾಜ ಸುಧಾರಕರಲ್ಲಿಯೂ ಮಿಶನರಿಗಳ ವಾದ

ವನ್ನು ಹೊಡೆದು ಹಾಕುವ ಬುದ್ಧಿ ಇದ್ದಿಲ್ಲವೆಂದಲ್ಲ. ಬ್ರಹ್ಮೋಸಮಾಜ, ಪ್ರಾರ್ಥನಾ ಸಮಾಜಗಳಂತಹ ನವಧರ್ಮ ಪಂಥಗಳನ್ನು ತೆಗೆದು ಸಮಾಜ ವನ್ನು ಸಂರಕ್ಷಿಸುವೆನೆಂಬ ತಮ್ಮ ಕಲ್ಪನೆಯು ಹಾಸ್ಯಾಸ್ಪದವಿದೆ ಹಾಗೂ ತಪ್ಪಿದೆ ಎಂಬುದು ಅವರ ಲಕ್ಷ್ಯಕ್ಕೆಬರಲಿಲ್ಲ. ಕೇವಲ ಸರಕಾರದ ಮಾನ್ಯತೆ ಯಾಗಲಿ, ಅಲ್ಪ ಸ್ವಲ್ಪ ಇಂಗ್ಲಿಷ ಜ್ಞಾನವಾಗಲಿ ಹೊಸಧರ್ಮ ಪಂಥವನ್ನು ಸ್ಥಾಪಿಸಲು ಅಸಮರ್ಥವಿವೆ ಎಂಬ ಸಂಗತಿಯು ಅವರಿಗೆ ಹೊಳೆಯಲಿಲ್ಲ. ಹೊಸಧರ್ಮ ಪಂಥವನ್ನು ಸ್ಥಾಪಿಸುವ ಭರದಲ್ಲಿ ಕ್ರಿಸ್ತೀಧರ್ಮ ಪ್ರಸಾರದ ಬಗ್ಗೆ ವಿಶೇಷ ಪ್ರತಿಕ್ರಿಯೆಯನ್ನು ನಡೆಯಿಸಲಿಲ್ಲ ಇದರ ವಿರುದ್ಧವಾಗಿ ತಾವೇ ಸಮಾಜದಿಂದ ಬಹಿಷ್ಕೃತರಾದಂತಾದರು. ಈ ಹೊಸ ಜನರ ವ್ಯಸಸ್ಥಿತ ಆಚಾರ, ವಿಚಾರ, ಆಕಾರ ಮೊ ಲಾದವುಗಳು ಜನರ ಕಣ್ಣಿಗೆ ಬೀಳಹತ್ತಿದ್ದರಿಂದ ಅವರು ಹೆಸರು ಇಡಹತ್ತಿದರು. ಸಾವಿರಾರು ವರ್ಷ ಗಳಿಂದ ನಡೆದು ಬಂದು ಸಮಾಜ ವ್ಯವಸ್ಥೆಯನ್ನು ಕಣ್ಣು ಮುಚ್ಚಿತೆಗೆಯು ವುದರ ಒಳಗಾಗಿ, ಹಾರಿಸಿ ಬಿಡುವೆವೆಂದು ತಿಳಿದು ಹಳಬರಿಗೆ ಮನಬಂದಂತೆ ಹೆಸರಿಡುವ ಈ ಜನ ನಗೆಗೇಡಿಗಳಾದರೆ ಜನತೆಯದೇನು ತಪ್ಪು? ಆದರೆ ೧೮೭೫ ರ ನಂತರ ಕೇವಲ ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆ ಗಳಿಂದ ರಾಷ್ಟ್ರದ ಹೆಜ್ಜೆಯು ಮುಂದೆ ಬೀಳಲಾರದೆಂದು ತರುಣರಿಗೆ ಅನಿಸ ಹತ್ತಿತು. ಸರಕಾರಿ ನವಕರಿಯ ಹೊರತಾಗಿ ಉಳಿದ ಅನೇಕ ಬಗೆಗಳಿಂದ ಶಿಕ್ಷಣದ ಉಪಯೋಗವನ್ನು ಮಾಡಿ ಕೊಡಲು ಸಾಧ್ಯವಿದೆ, ಮತ್ತು ಸಂಘ ಶಕ್ತಿಯಿಂದ ಕಾರ್ಯ ಮಾಡುವ ತಳಹದಿಯನ್ನು ಹಾಕಿದರೆ ಅದರ ಉಪ ಯೋಗವು ಬಹಳವಾಗುವದು ಎಂಬ ಕಲ್ಪನೆಗಳು ಉದಯುವಾದೊಡನೆ ಮುಖಂಡತ್ವವೂ ಅತ್ತ ಒಲಿಯಿತು. ವಿವೇಕಯುಕ್ತ ವಿಚಾರ, ಸತತ ಅಭ್ಯಾಸ, ಸದಾಚರಣೆ, ನೀತಿ, ಧೈರ್ಯ, ಸ್ವಾರ್ಥತ್ಯಾಗ ಈ ಗುಣಗಳ ಅಭಾವವು ಹಿಂದಿನ ಜನರಲ್ಲಿ ಇದ್ದಿತಲ್ಲದೆ ಅವರ ಆಚಾರ ವಿಚಾರಗಳಲ್ಲಿ ಶಿಥಿಲತೆಯೂ ಕಂಡುಬರುತ್ತಿತ್ತು. ವೈಯುಕ್ತಿಕವಾಗಿ ತಮ್ಮ ಪ್ರಭಾವ ವನ್ನು ತರುಣರಮೇಲೆ ಬೀರಲು ಅವರು ಸಮರ್ಥರಾಗಲಿಲ್ಲ."

ಟಿಳಕರ ಈ ವಿವೇಚನವು ಆ ಕಾಲದ ಸ್ಥಿತಿಯನ್ನು ಚನ್ನಾಗಿ ಚಿತ್ರಿಸಿದೆ. ಇಂತಹ ಸನ್ನಿವೇಶದಲ್ಲಿ ಟಿಳಕರ ಪ್ರೌಢ ಶಿಕ್ಷಣವು ನಡೆದಿದೆ. ಇನ್ನು ಆ ಕಡೆಗೆ ಹೊರಳೋಣ.

# ಪ್ರೌಢ ವಿದ್ಯಾಭ್ಯಾಸ

ಲೋಕಮಾನ್ಯರು ೧೮೭೩ರಲ್ಲಿ ಡೆಕ್ಕನ್ ಕಾಲೇಜದಲ್ಲಿ ಪ್ರವೇಶಿಸಿದರು. ಇಲ್ಲಿಯೂ ಅವರ ವೈಶಿಷ್ಟ್ಯ ಎದ್ದು ಕಾಣುತ್ತಿತ್ತು. ಸ್ವತಂತ್ರ ರೀತಿಯಿಂದ ಮನಸ್ಸಿಗೆ ಬಂದ ವಿಷಯವನ್ನು ಅವಶ್ಯವಿದ್ದಷ್ಟು ಉತ್ತಮ ರೀತಿಯಿಂದ ಓದುವದೇ ಇವರ ಧೋರಣ. ಅನುತ್ತೀರ್ಣರಾಗದಿದ್ದರೆ ಮುಗಿಯಿತು ಎಂಬುದೇ ಇವರ ವಾದ. ರಾತ್ರಿಯೆಲ್ಲ ನಿದ್ದೆಗೆಟ್ಟು ಗಿಳಿಪಾಠ ಮಾಡುವದಾಗಲಿ, ಇಲ್ಲವೆ ಟೀಕೆ ಟಿಪ್ಪಣಿಗಳ ಹೊರೆಯನ್ನು ಅವಿಶ್ರಾಂತ ತಿರಿವಿ ಹಾಕುವದಾಗಲಿ, ಇವರ ಸ್ವಭಾವದಲ್ಲಿಯೇ ಇರಲಿಲ್ಲ. ಆದರೆ ಅಭ್ಯಾಸವನ್ನೇ ಮಾಡುತ್ತಿದ್ದಿಲ್ಲವೆಂದು ತಿಳಿಯಕೂಡದು. ಪರೀಕ್ಷೆಗೆ ಇದ್ದ ವಿಷಯಗಳನ್ನು ದುರ್ಲಕ್ಷಿಸುತ್ತಿದ್ದಿಲ್ಲ. ಕಠಿಣ ವಿಷಯಗಳನ್ನು ಸ್ವಲ್ಪ ಸಮಯದಲ್ಲಿ ಚೆನ್ನಾಗಿ ಮನದಟ್ಟು ಮಾಡಿಕೊಳ್ಳುವದೇ ಇವರ ರೀತಿಯಾಗಿದ್ದಿತು. ಓದುವ ಸಮಯದಲ್ಲಿ ನಗಾರಿ ಹೊಡೆದರೂ ಇವರಿಗೆ ಗೊತ್ತಾಗುತ್ತಿದ್ದಿಲ್ಲ. ವಿಷಯದಲ್ಲಿ ಅಷ್ಟು ಮಗ್ನರಾಗಿರುತ್ತಿದರು. ಓದು ಒಕ್ಕಾಲು ಬುದ್ಧಿ ಮುಕ್ಕಾಲು ಎಂಬ ನುಡಿಯು ಇವರಿಂದಲೇ ಬಂದಂತೆ ಕಾಣುತ್ತದೆ. **ಶರೀರ ಮಾದ್ಯಂ ಖುಲು ಧರ್ಮಸಾಧನಂ** ಎಂಬ ಉಕ್ತಿಯಂತೆ ಇವರು ಬಹು ವೇಳೆಯನ್ನು ಆಟವಾಡುವದರಲ್ಲಿಯೂ ನಗುವದರಲ್ಲಿಯೂ ಸಂಗಡಿಗರೊಡನೆ ಅನೇಕ ವಿಷಯಗಳನ್ನು ಚರ್ಚಿಸುವದರಲ್ಲಿಯೂ ಕಳೆಯುತ್ತಿದ್ದರು. ಮೊದಲನೇ ವರ್ಷವು ದೇವರಿಗೆ ಮೀಸಲು ಎಂದು ತೆಗೆದಿಟ್ಟಿದ್ದರು. ಇಡೀ ವರ್ಷವೆಲ್ಲ ಇದೇ ಉದ್ಯೋಗ. ತೋರಿಕೆಗೆ ಈ ಹುಡುಗನು ಉಡಾಳನೆಂದು ತೋರಿದರೂ ಇದರ ಹಿಂದೆ ಒಂದು ಘನವಾದ ಉದ್ದೇಶವಿದ್ದಿತು. ಅವರು ಚಿಕ್ಕಂದಿನಲ್ಲಿ ಕೈಕಾಲು ಸಣ್ಣ, ಹೊಟ್ಟೆಡುಮ್ಮಣ್ಣನಾಗಿದ್ದರು. ಇಂತಹ ಶರೀರವು ಬಹುದಿನ ತಾಳಲಾರದು, ಯಾವ ಕಾರ್ಯವನ್ನೂ ಮಾಡಲಾರದು ಎಂಬುವದು ಅವರಿಗೆ ಮನವರಿಕೆಯಾಗಿದ್ದಿತು. ಶರೀರಮಾದ್ಯಂ ಖಲು ಧರ್ಮಸಾಧನಂ ಎಂಬ ನೀತಿಯ ಮರ್ಮವು ಅವರಿಗೆ ಹೊಳೆದಿದ್ದಿತು. ಆದುದರಿಂದಲೇ ಅವರ ಕಾರ್ಯಕ್ರಮದಲ್ಲಿ ಅಭ್ಯಾಸಕ್ಕೆ ೩ ನೇ ಸ್ಥಾನವಿದ್ದಿತು. ನಿಯಮಿತ ಕಾಲದಲ್ಲಿ ನಿಯಮಿತ ಅಭ್ಯಾಸ ಮಾತ್ರ. ದಿವಸ

ವೆಲ್ಲಾ ಆಟ ನೋಟ, ವ್ಯಾಯಾಮಗಳಲ್ಲಿ ಕಳೆಯುತ್ತಿದ್ದಿತು. ಕಾಲೇಜದಲ್ಲಿ ಹಾಜರಿ ಬಿದ್ದ ಕೂಡಲೇ ಇವರಿಗೆ ಸೂಟಿ ಆಗಿಬಿಡುತ್ತಿತ್ತು. ಎಂದಾದರೊಂದಿನ ಮಹತ್ವವಾದ ವಿಷಯದ ಮೇಲೆ ಪ್ರಾಧ್ಯಾಪಕರ ಉಪನ್ಯಾಸವಿದ್ದರೆ, ಅಂದು ತಪ್ಪದೆ ಕುಳಿತು ಕೇಳುತ್ತಿದ್ದರು. ಹಾಜರಿಯಾದೊಡನೆಯೆ ಹೊರಬೀಳುವ ದನ್ನು ಪ್ರಿನ್ಸಿಪಾಲರು ಕಂಡು 'ಹೀಗೇಕೆ' ಎಂದು ಕೇಳಿದರು. 'ಈ ವರ್ಷ ನಾನು ಪರೀಕ್ಷೆಗೆ ಕೂಡುವದಿಲ್ಲ. ಹೆಸರಿಗೆ ಟರ್ಮ ತುಂಬಹತ್ತಿದ್ದೇನೆ' ಎಂದು ಸರಳವಾಗಿ ಹೇಳಿಬಿಟ್ಟರು. ತಮ್ಮ ನಿಶ್ಚಯದಂತೆ ಅನುತ್ತೀರ್ಣರೂ ಆದರು. ಆದರೆ, ತಾವು ಆರಿಸಿದ ವ್ಯಾಯಾಮದಲ್ಲಿ ಮಾತ್ರ ಖಂಡಿತ ಪಾಸಾದರು.

ಮೊದಲನೇ ವರ್ಷವನ್ನೆಲ್ಲ ವ್ಯಾಯಾಮದಲ್ಲಿಯೇ ಕಳೆದರು. ಅದ ರಲ್ಲಿ ಅವರು ಪ್ರಾವೀಣ್ಯವನ್ನು ಸಂಪಾದಿಸಿದರು. ದಿನಾಲು ಎರಡೆರಡು ಮೂರು ಮೂರು ತಾಸುಗಳನ್ನು ವ್ಯಾಯಾಮದಲ್ಲಿ ಕಳೆಯಹತ್ತಿದರು. ಸಾಮು, ಕೂತೇಳುವದು, ಸೂರ್ಯನಮಸ್ಕಾರ ಹಾಕುವದು, ದಿನಾಲು ಅವುಗಳನ್ನು ಕ್ರಮೇಣ ಹೆಚ್ಚಿಸುವದು, ಕುಸ್ತಿ ಆಡುವದು, ಹುಟ್ಟು ಕಡಿಯುವದು, ಹಾಲುಕುಡಿಯುವದು, ಇದೇ ಇವರ ನಿತ್ಯಕ್ರಮವಾಗಿದ್ದಿತು. ಮೊದಲೇ ತರುಣ ವಯಸ್ಸು, ಬೆಳೆಯುವ ದಿನ, ಅದಕ್ಕೆ ತಕ್ಕ ಅನುಕೂಲತೆ ಒದಗಿದರೆ ಕೇಳುವದೇನು ? ಒಂದು ವರ್ಷದಲ್ಲಿ ಶರೀರವು ಪಲ್ಲಟವಾ ಯಿತು. ಮೈಕಟ್ಟು ಮೋಹಕವಾಯಿತು. ಚಿತ್ರದಲ್ಲಿ ತೋರಿಸಿರುವ ಬರ ಗಾಲದ ಹೆಣದಂತೆ ಇದ್ದ ಇವರ ಶರೀರವು ತೇಜಸ್ವಿಯೂ ಪುಷ್ಟವೂ ಆಯಿತು. ಜಗಜಟ್ಟಿಯಂತೆ ಕಾಣಹತ್ತಿದರು. ಹೊಟ್ಟೆಡುಮ್ಮಣ್ಣನು ಹುಲಿ ರಾಯನಂತೆ ಕಾಣಹತ್ತಿದನು. ಮೊದಲು ನೋಡಿದ ಜನರು ಇವರು ಟಿಳಕರೇ ಎಂದು ಕೇಳಹತ್ತಿದರು.

ದಾಜಿ ಆಬಾಜಿ ಖರೆ ಹಾಗೂ ಟಿಳಕ ಇವರಿಬ್ಬರದು ಒಂದು ಜೋಡಿ. ಖರೆಯವರು ಮೊದಲಿನಿಂದಲೂ ಒಳ್ಳೇ ಮೈಕಟ್ಟು ಉಳ್ಳವರು, ವ್ಯಾಯಾಮ ಪ್ರೇಮಿಗಳು; ಟಿಳಕರು ಸ್ವಲ್ಪ ಸಮಯದಲ್ಲಿಯೇ ಅವರನ್ನು ಸರಿಗಟ್ಟಿದರು ಸಾಮು ತೆಗೆಯುವದರಲ್ಲಿ ನಾನು ಹೆಚ್ಚೋ ನೀನು ಹೆಚ್ಚೋ ಎಂದು ಇಬ್ಬರಲ್ಲಿಯೂ ಸ್ಪರ್ಧೆ ನಡೆಯುತ್ತಿದ್ದಿತು. ಈ ಇಬ್ಬರ ವ್ಯಾಯಾ

ಮದ ಪರಿಣಾಮಗಳು ಎಲ್ಲ ಕಡೆಗೆ ಕಾಣಹತ್ತಿದವು. ಹೋಗಹೋಗುತ್ತ ಎರಡನೆಯವರಿಗೆ ಹಾಯುವದು, ಕ್ಲಬ್ಬಿನ ಗೋಡೆಗಳಿಗೂ ಕಂಬಗಳಿಗೂ ಧಕ್ಕೆ ಹೊಡೆಯುವದು ನಡೆಯಿತು. ಗೋಡೆ ಕಂಬಗಳು ಎಲ್ಲಿ ಅದುರಿ ಬೀಳುವವೋ ಎಂಬ ಭೀತಿ ಪುಕ್ಕರಿಗೆ. ಊಟಕ್ಕೆ ಬಂದೊಡನೆ, ನಮ್ಮ ಚಪಾತಿಗಳ ಮೇಲೆ ದಾಳಿಬಂತೆಂದು ಅಡಿಗೆಯವನು ಗಾಬರಿಯಾಗುತ್ತಿದ್ದನು. ಈ ಪ್ರಸಂಗಗಳು ಮೇಲಿಂದ ಮೇಲೆ ಬರಹತ್ತಿದಾಗ ಉಳಿದ ವಿದ್ಯಾರ್ಥಿಗಳು 'ಮಹಾರಾಯರೇ ನಾವು ಮೊದಲು ಉಂಡುಹೋಗುತ್ತೇವೆ. ನೀವು ಹಿಂದುಗಡೆ ಕೂಡಿರಿ,' ಎಂದು ಪ್ರೇಮದಿಂದ ಚೇಷ್ಟೆಮಾಡುತ್ತಿದ್ದರಂತೆ. ಸಾಧಾರಣವಾಗಿ ಕಾಲೇಜಿನಲ್ಲಿಯ ದಿನಗಳೆಂದರೆ ವಿದ್ಯಾರ್ಥಿಗಳ ಶರೀರ ಬೆಳೆಯುವ ವಯಸ್ಸು. ಅದರಲ್ಲಿಯೂ ಶರೀರಕ್ಕೆ ತಕ್ಕ ವ್ಯಾಯಾಮ; ಹಾಲು, ತುಪ್ಪ ಮೊದಲಾದ ಶರೀರಪೋಷಕ ದ್ರವ್ಯಗಳು ಬಿದ್ದರೆ ಕೇಳುವದೇನು ? ತೇಜಸ್ವಿಯಾಗಿ ಸಹಜವಾಗಿಯೇ ಬೆಳೆಯುವರು. ಕಾಲೇಜಿನಲ್ಲಿ ವಿದ್ಯೆಯನ್ನು ಗಳಿಸಿಕೊಳ್ಳಲು ಅನುಕೂಲವಿದ್ದಂತೆ, ಶರೀರಸಂಪತ್ತನ್ನು ಬೆಳೆಯಿಸಲೂ ಒಳ್ಳೇ ಅನುಕೂಲತೆಗಳಿರುತ್ತವೆ. ಟಿಳಕರು ಮಾತ್ರ ಖಂಡಿತವಾಗಿ ಇದರ ಉಪಯೋಗವನ್ನು ತೆಗೆದುಕೊಂಡರೆಂದು ಹೇಳಬಹುದು. ಕಾಲೇಜಿನಲ್ಲಿ ಸಂಪಾದಿಸಿದ ಪುಸ್ತಕೀಯ ವಿದ್ಯೆಗಿಂತಲೂ ಅವರು ದೊರಕಿಸಿದ ಶರೀರಸಂಪತ್ತು ಇಡೀ ಆಯುಷ್ಯದಲ್ಲಿ ಹೆಚ್ಚು ಉಪಯೋಗವಾಯಿತು. ತಾರುಣ್ಯದಲ್ಲಿ ಸಂಪಾದಿಸಿದ ಈ ಸಂಪತ್ತೇ ಅವರಿಗೆ ಮುಂದಿನ ಆಯುಷ್ಯದಲ್ಲಿ ಒದಗಿದ ಮಾನಸಿಕ, ಶಾರೀರಿಕ ಕ್ಲೇಶಗಳನ್ನು ಸಹಿಸಲು ಸಾಮರ್ಥ್ಯವನ್ನು ಕೊಟ್ಟಿತು.

ಟಿಳಕರು ಟೇನಿಸನ್ನಾಗಲಿ, ಕ್ರಿಕೇಟನ್ನಾಗಲಿ ಆಡಿದ್ದು ಎಲ್ಲಿಯೂ ಕೇಳಬರುವದಿಲ್ಲ. ಆದರೆ ನಾವಿನಲ್ಲಿ ಕುಳಿತು ತೇಲಾಡುತ್ತ ಅದನ್ನು ಬಹುದೂರ ಒಯ್ದು ತಿರುಗಿ ತರುವದರಲ್ಲಿ ಅವರಿಗೆ ಉತ್ಸಾಹ. ನೀರಲ್ಲಿ ಬಹು ಸಮಯ ಮುಳುಗುವದರಲ್ಲಿಯೂ ಈಜುವದರಲ್ಲಿಯೂ ಅವರಿಗೆ ಬಹು ಸಂತೋಷ—ನೀರು ಕಂಡರೆ ತೀರಿತು. ವಯಸ್ಸಾದಮೇಲೆ ಒಮ್ಮೆ ಕಾಶಿಗೆ ಹೋದಾಗ ತುಂಬಿದ ಗಂಗಾನದಿಯನ್ನು ಈಸಿ ಪಾರಾಗಿ ಹೋದರಂತೆ. ನೀರಿನಲ್ಲಿ ಬಿದ್ದರೆಂದರೆ ಎರಡೆರಡು ತಾಸು ನೀರಿನಲ್ಲಿಯೇ ತೇಲು

ತ್ತಿದ್ದರಂತೆ. ಈಜುತ್ತ ದಶಮಿಯನ್ನು ತಿನ್ನುತ್ತಿದ್ದರೆಂದು ಅವರ ಚರಿತ್ರಕಾರರು ಬರೆಯುತ್ತಾರೆ.

ಟಿಳಕರು ಕಾಲೇಜಿನಲ್ಲಿ ಉಡಾಳರಂತೆ ತಿರುಗುತ್ತಿದ್ದರೆಂದು ಹೇಳಿದರೆ ಆ ಮಾತನ್ನು ಯಾರೂ ನಂಬಲಾರರು. ಅವರು ಕಾಲೇಜಿನ ಆವಾರದಲ್ಲಿ ಸ್ವಚ್ಛಂದದಿಂದ ತಿರುಗುತ್ತಿದ್ದರು. ಒಂದೊಂದು ದಿನ ರಾತ್ರಿ ಹತ್ತು ಹೊಡೆದರೂ ಕೋಣೆಗೆ ಮರಳುತ್ತಿರಲಿಲ್ಲ. ಅವರಿಗೆ ಬೇಗ ಮಲಗಿ ಬೇಗ ಏಳುವದೆಂದರೆ ತಲೆಶೂಲೆ. ನಿದ್ದೆ ಕಟ್ಟುವದರಲ್ಲಿ ಅವರಿಗೆ ಆನಂದವಿದ್ದಿತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ನಿದ್ದೆಗಟ್ಟುವದರಲ್ಲಿಯ ಈ ಸಂತೋಷವು ತಿರುಗಾಡುವದರಲ್ಲಿಯೂ ಎಷ್ಟೋ ಸಲ ಜನರನ್ನು ಗೇಲಿ ಮಾಡುವದರಲ್ಲಿಯೂ ಕೂಡ ಇರುತ್ತಿತ್ತು. ಆದರೆ ಚೇಷ್ಟೆಯು ಅಸ್ಥಾನದಲ್ಲಿಯಲ್ಲ, ಸ್ನೇಹಿತರಲ್ಲಿ. ಅದರಲ್ಲಿಯೂ ತಪ್ಪು ತಿಳಕೊಳ್ಳದ ಸಲಿಗೆಯ ಗೆಳೆಯರಲ್ಲಿ. ವಿದ್ಯಾರ್ಥಿಗಳ ಆ ವಯಸ್ಸೇ ಹುಡುಗಾಟಿಕೆಯದು. ಕೆಲವರಲ್ಲಿ ಹೆಚ್ಚು, ಕೆಲವರಲ್ಲಿ ಕಡಿಮೆ, ಇಷ್ಟೆ! ಟಿಳಕರ ಚೇಷ್ಟೆಯಲ್ಲಿಯೂ ಒಂದು ದೃಷ್ಟಿಯಿರುತ್ತಿತ್ತು. ಗೆಳೆಯರು ಸುದೃಢರೂ ತೇಜಸ್ವಿಗಳೂ ಆಗಬೇಕೆಂಬುದೇ ಅವರ ಆಂತರ್ಯ. ಯಾರಾದರೂ ದೃಢಕಾಯರಾಗಲು ಪೇಟೆಂಟ ಔಷಧವನ್ನು ತೆಗೆದುಕೊಳ್ಳುತ್ತಿದ್ದುದನ್ನು ಕಂಡರೆ ಅವರ ಔಷಧದ ಬಾಟಲಿಯನ್ನು ಹೊರಗೊಗೆದು 'ನಡೆ ನನ್ನೊಡನೆ ವ್ಯಾಯಾಮಕ್ಕೆ, ನಿನ್ನ ಪ್ರಕೃತಿಯನ್ನು ಸುಧಾರಿಸಿಕೊಡುವೆನು' ಎಂದು ಕಾಡುತ್ತಿದ್ದರು. ಯಾರಾದರೂ ತಮ್ಮ ಶರೀರವನ್ನು ಸೂಕ್ಷ್ಮ ರೀತಿಯಿಂದ ಜಪ್ಪಿಸುತ್ತಿದ್ದರೆ ತೀರಿತು, ಅವರು ಅದನ್ನು ಬಿಡುವವರೆಗೆ ಛಲಿಸುತ್ತಿದ್ದರಂತೆ. ಇವರೊಬ್ಬ ರಸಿಕ ಗೆಳೆಯನಿಗೆ ಹೂಗಳ ಮೇಲೆ ಬಹಳ ಮಮತೆ; ಅವನು ವಿಶ್ವಪ್ರಯತ್ನ ಮಾಡಿ ಹೂಗಳನ್ನು ದೊರಕಿಸಿ, ಬೇಸಿಗೆಯಲ್ಲಿ ಹಾಸಿಗೆಯಮೇಲೆ ಹರಡಿ ಪುಷ್ಪಶಯ್ಯೆ ಸಿದ್ಧಪಡಿಸುತ್ತಿದ್ದನಂತೆ; 'ಮಗನೆ, ನೀನೇನು ಹೆಂಗಸೇ' ಎಂದು ಟಿಳಕರು ದಿನಾಲು ಹೋಗಿ ಅದನ್ನು ಕೆಡಿಸುತ್ತಿದ್ದರಂತೆ. ಬಾಗಿಲ ಚಿಲಕ ಮುರಿಯುವದು, ಕಿಡಕಿಯಿಂದ ಒಳಗೆ ತೂರಿ ಓದುವ ಪುಸ್ತಕಗಳನ್ನು ತೆಗೆದೊಗೆಯುವದು; ಈ ಬಗೆಯಾಗಿ ಕಿಡಿಗೇಡಿತನವನ್ನು ಮಾಡುತ್ತ ರಾತ್ರಿ ಹತ್ತು ಏನು ಹನ್ನೊಂದೇನು, ತಿರುಗುವದೇ ತಿರುಗುವದು. ಇದನ್ನು ಕಂಡು ಅವನ ಗೆಳೆಯರು 'ಡೆವ್ಹಿಲ್, ಡೆವ್ಹ'

ಎಂದು ಟಿಳಕರಿಗೆ ಬಿರುದು ಕೊಟ್ಟಿದ್ದರಂತೆ. ಆದರಂತೆಯೇ ಮೊದಲಿನಿಂದಲೂ ಅವರು ಸ್ಪಷ್ಟ ಮಾತಾಡುವವರು; ಮರ್ಮಭೇದಕವಾದ ನುಡಿಗಳನ್ನು ನುಡಿಯುವವರು ಇದರಿಂದ ಆ ಕಾಲದಲ್ಲಿ ಕಾಲೇಜಿನ ಪಠ್ಯ ಪುಸ್ತಕವಾಗಿದ್ದ 'ಕೇನಿಲ್‌ವರ್ಥ' ಕಾದಂಬರಿಯಲ್ಲಿಯ 'ಬ್ಲಂಟ್' ಎಂಬ ಪಾತ್ರದ ಹೆಸರನ್ನು ಇವರಿಗೆ ಕೊಡಲಾಗಿದ್ದಿತು.

ವಿದ್ಯಾರ್ಥಿಗಳು ಕಾಲೇಜಿನ ಕಟ್ಟೆಯನ್ನು ಹತ್ತಿದೊಡನೆ ಅವರ ಆಚಾರ ವಿಚಾರಗಳಲ್ಲಿ ಸ್ವಲ್ಪ ಶಿಥಿಲತೆಯು ತೋರುವದು ಸ್ವಾಭಾವಿಕ. ಟಿಳಕರು ಡೆಕ್ಕನ್ ಕಾಲೇಜಿನಲ್ಲಿ ಪ್ರವೇಶಿಸುವಾಗ ಮಡಿಮೈಲಿಗೆಯ ಪೂರ್ಣ ಉಚ್ಚಾಟನೆಯಾಗಿರಲಿಲ್ಲ. ಮಡಿಯನ್ನು ಉಟ್ಟುಕೊಂಡು ಊಟಕ್ಕೆ ಕೂಡದ ಒಂದು ಕ್ಲಬ್ಬೂ ಸಿಗುತ್ತಿರಲಿಲ್ಲ. ತದ್ವಿರುದ್ಧವಾಗಿ, ಮಡಿಯನ್ನುಟ್ಟುಕೊಂಡವರಿಗೇ ಪ್ರವೇಶವಿರುವ ಕ್ಲಬ್ಬುಗಳೂ ಇರುತ್ತಿದ್ದವು. ಟಿಳಕರು ಮಡಿಯುಟ್ಟು ಉಣ್ಣುವ ಪರಂಪರೆಯ ಮನೆಯಲ್ಲಿಯೇ ಬೆಳೆದವರು; ಅಲ್ಲದೆ ಸ್ವತಃ ತಾವೇ ಮಡಿಮೈಲಿಗೆಯು ಕಾಲೇಜಿನಲ್ಲಿಯೂ ಅವಶ್ಯವೆಂಬ ಭಾವನೆಯುಳ್ಳವರು. ಅವರು ಮಡಿಯನ್ನು ಉಟ್ಟುಕೊಂಡೇ ಊಟಕ್ಕೆ ಕೂಡುತ್ತಿದ್ದರು. ಇದೊಂದು ಆ ಕಾಲದಲ್ಲಿ ಚರ್ಚಾಸ್ಪದ ವಿಷಯವೇ ಆಗಿದ್ದಿತು. ಎರಡೂ ಪಕ್ಷಗಳ ಅಭಿಮಾನಿಗಳು ಕಾಲೇಜಿನಲ್ಲಿರುತ್ತಿದ್ದರು. ಎರಡೂ ಬಣಗಳಲ್ಲಿ ಮೇಲಿಂದ ಮೇಲೆ ಚಕಮಕಿಗಳು ನಡೆಯುತ್ತಿದ್ದವು. ಟಿಳಕರು ನಿರಾಡಂಬರ ವ್ಯಕ್ತಿ! ಅವರಿಗೆ ದುಂದುಗಾರಿಕೆಯಾಗಲಿ, ವಿಲಾಸವಾಗಲಿ ಸರಿಬರುತ್ತಿರಲಿಲ್ಲ.

ಟಿಳಕರು ಕಾಲೇಜಿನಲ್ಲಿರುವಾಗ ಜಿನಿಸಿವಾಲಾ ಎಂಬವರು ಒಂದು ವರ್ಷ 'ಫೆಲೋ' ಆಗಿದ್ದರು. ಅವರ ಉಪನ್ಯಾಸಗಳು ಸಾರ್ವಜನಿಕ ಉಪನ್ಯಾಸದಂತೆ ಸರ್ವಸಂಗ್ರಹವಾಗಿರುತ್ತಿದ್ದವು. ಪರೀಕ್ಷೆಯ ದೃಷ್ಟಿಯಿಂದ ವಿದ್ಯಾರ್ಥಿಗಳಿಗೆ ಅಷ್ಟೊಂದು ಉಪಯೋಗವಾಗುತ್ತಿರಲಿಲ್ಲ. ಆದರೂ ತಮ್ಮ ಉಪನ್ಯಾಸದ ಟಿಪ್ಪಣಿಗಳನ್ನು ವಿದ್ಯಾರ್ಥಿಗಳು ಬರೆದುಕೊಳ್ಳಲೇಬೇಕೆಂಬುದು ಅವರ ಹಟ. ಟಿಪ್ಪಣಿಗಳನ್ನು ತೆಗೆದುಕೊಂಡರೆ ಅವರಿಗೆ ಸಂತೋಷ. ಆದರೆ ಟಿಳಕರಿಗೆ ಅಂಥ ಪ್ರವೃತ್ತಿ ಸೇರುತ್ತಿರಲಿಲ್ಲ. ಹೀಗಾಗಿ ಟಿಳಕರಿಗೂ ಅವರಿಗೂ ಒಮ್ಮೆ ವಾಗ್ಯುದ್ಧವಾಯಿತು. ಆದರೆ ಒಂದು ಪ್ರಸಂಗದಿಂದ ಈ ಹುಡುಗನು ಅಸಾಮಾನ್ಯನಿರುವನೆಂಬ ಅನುಭವವು

ಜಿನಿಸಿವಾಲರಿಗೆ ಬಂದಿತು. ಒಮ್ಮೆ ಜಿನಿಸಿವಾಲರು 'ಮಾತೃವಿಲಾಪ'ವನ್ನು ಕುರಿತು ಸಂಸ್ಕೃತದಲ್ಲಿ ಕವಿತೆ ರಚಿಸಲು ಹೇಳಿದರು. ಅದರಲ್ಲಿ ಮಹಾದೇವ ಶಿವರಾಮ ಆಪ್ಟೆಯವರಂಥ ಸಂಸ್ಕೃತಜ್ಞ ಪ್ರತಿಸ್ಪರ್ಧಿಯನ್ನೂ ಹಿಂದೆ ಹಾಕಿ ಟಿಳಕರ ಕವಿತೆಗಳೇ ಮೇಲಾದವು. ಜಿನಿಸಿವಾಲರು 'ಕವಿತೆಯು ಅತ್ಯುತ್ತಮವಾಗಿದೆ. ಕೆಲವು ಹಳೆಯ ಕಲ್ಪನೆಗಳಿದ್ದರೂ ಆಯಾ ವಿಷಯಗಳೊಡನೆ ಅವುಗಳ ಹೊಂದಿಕೆಯು ಸೊಗಸಾಗಿದೆ. ಸಂಸ್ಕೃತ ಕವಿತೆಯನ್ನು ರಚಿಸುವ ಕುಶಲತೆಯು ಚೆನ್ನಾಗಿ ಸಾಧಿಸಿದೆ. ಈ ಪ್ರಯತ್ನವನ್ನು ನೀವು ಮುಂದುವರಿಸುವಿರೆಂದು ಆಶಿಸುತ್ತೇನೆ.' ಎಂದು ಪ್ರಶಸ್ತಿ ಬರೆದರು. ಒಮ್ಮೆ ಒಂದು ವಿಷಯವನ್ನು ಕೈಯಲ್ಲಿ ತೆಗೆದುಕೊಂಡರೆ, ಅದನ್ನು ಪರಿಪೂರ್ಣಗೊಳಿಸುವದು ಟಿಳಕರ ಸ್ವಭಾವ. ಮೇರಿ ಎಲಿಝಾ ಬೆತ್‍ಳ ಆಳಿಕೆಯ ಬಗ್ಗೆ ಹೊಸ ಬಗೆಯಿಂದ ಟಿಪ್ಪಣಿಗಳನ್ನು ಮಾಡಬೇಕೆಂದು ಮನಸ್ಸಿನಲ್ಲಿ ಬಂದ ಕೂಡಲೆ ೧೦-೧೨ ಪುಸ್ತಕಗಳನ್ನು ಓದಿ, ಅತ್ಯಂತ ಸಮರ್ಪಕವಾಗಿ ಸಿದ್ಧಪಡಿಸಿದರು. ಅವುಗಳನ್ನು ಎಲ್ಲ ವಿದ್ಯಾರ್ಥಿಗಳು ಬರೆದುಕೊಂಡರು. ಇನ್ನೊಮ್ಮೆ ವ್ಯಾಕರಣದ ಬಗ್ಗೆ ಚರ್ಚೆ ನಡೆದು ವ್ಯಾಕರಣ ನಿಯಮಗಳನ್ನು ಆರಿಸಿ, ಒಂದು ಹೊಸ ಪ್ರಬಂಧವನ್ನೇ ರಚಿಸಿದರು. ಅದೂ ಬಹುಜನರಿಗೆ ರುಚಿಸಿತೆಂದು ಹೇಳುತ್ತಾರೆ.

ಒಟ್ಟಿನಲ್ಲಿ ಅವರು ಅಭ್ಯಾಸ ಮಾಡುವದೇ ಸ್ವಲ್ಪ. ಅದರಲ್ಲಿಯೂ ವಿಶಿಷ್ಟವಾದುದನ್ನೇ! ಯಾವುದೇ ವಿದ್ಯಾರ್ಥಿವೇತನವನ್ನಾಗಲೀ ಪ್ರಶಸ್ತಿಯನ್ನಾಗಲಿ ದೊರಕಿಸಿಯೇ ತೀರಬೇಕೆಂಬ ಮಹತ್ವಾಕಾಂಕ್ಷೆಯು ಟಿಳಕರಲ್ಲಿ ಇಲ್ಲದುದರಿಂದ ಕೀರ್ತಿವಂತ ವಿದ್ಯಾರ್ಥಿಯೆಂದು ಹೆಸರು ಗಳಿಸಲಿಲ್ಲ. ಆದರೆ ಬುದ್ಧಿವಂತಿಕೆಯಲ್ಲಿ, ವಿಶೇಷವಾಗಿ ಸಂಸ್ಕೃತ ಹಾಗೂ ಗಣಿತ ವಿಷಯಗಳಲ್ಲಿ ಸಮಕಾಲೀನ ವಿದ್ಯಾರ್ಥಿಗಳಲ್ಲಿ ಮೊದಲನೆಯ ಬಹುಮಾನವು ಇವರಿಗೇ! ಅಲ್ಲದೆ, ೧೮೭೪-೭೫ ಈ ಎರಡೂ ವರ್ಷಗಳಲ್ಲಿ ಅವರು ಪ್ರತಿ ತಿಂಗಳ ೧೦ ರೂಪಾಯಿಗಳ ವಿದ್ಯಾರ್ಥಿವೇತನವನ್ನು ಪಡೆಯುತ್ತಿದ್ದರೆಂಬ ಸಂಗತಿಯನ್ನು ನಾವು ಮರೆಯಕೂಡದು.

ಟಿಳಕರು ಎರಡನೇ ವರ್ಷ ಎಫ್. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ ಒಂದು ಟರ್ಮು ಮುಂಬಯಿಯ ಎಲ್‍ಫಿನ್‍ಸ್ಟನ್

ಕಾಲೇಜದಲ್ಲಿದ್ದರು. ಆ ಸಮಯದಲ್ಲಿ ಅಲ್ಲಿ ಗಣಿತದ ಪ್ರಾಧ್ಯಾಪಕರಾಗಿದ್ದ ಹಾಥಾರ್ನವೇಟರು ಅಷ್ಟು ಪ್ರವೀಣರಿದ್ದಿದ್ದಿಲ್ಲ. ಅವರ ಗಣಿತಜ್ಞಾನವು ಕೇವಲ ಪುಸ್ತಕೀಯವಾಗಿತ್ತು, ಹಾಗೂ ತಾಂತ್ರಿಕವಾಗಿತ್ತು. ಪರೀಕ್ಷೆಯ ದೃಷ್ಟಿಯಿಂದ ವಿಷಯವನ್ನು ಚನ್ನಾಗಿ ತಿಳಿಸುತ್ತಿದ್ದರು. ಆದರೆ ಅದರಿಂದ ಟಿಳಕರಿಗೆ ತೃಪ್ತಿಯೆನಿಸಿಸಲಿಲ್ಲ. ಆದುದರಿಂದ ಪುಣೆಗೆ ಮರಳಿಬಂದರು. ತಾವೇ ಸ್ವತಃ ಪರಿಶ್ರಮಪೂರ್ವಕವಾಗಿ ಗಣಿತವನ್ನು ಅಭ್ಯಾಸಿಸಿ ೧೮೭೭ ರಲ್ಲಿ ಗಣಿತ ವಿಷಯವನ್ನೇ ತೆಗೆದುಕೊಂಡು ಎಂ. ಎ. ಪರೀಕ್ಷೆಗೆ ಕುಳಿತರು. ಆದರೆ ಅದರಲ್ಲಿ ಅವರು ಉತ್ತೀರ್ಣರಾಗಲಿಲ್ಲ. ಆದ್ದರಿಂದ ಅದನ್ನು ಅಷ್ಟಕ್ಕೇ ನಿಲ್ಲಿಸಿ, ೧೮೭೮-೭೯ ರಲ್ಲಿ ಕಾಯದೆಯ ಅಭ್ಯಾಸಮಾಡಿ ಎಲ್ಎಲ್. ಬಿ. ಪರೀಕ್ಷೆ ಪಾಸಾದರು. ಎಲ್ಎಲ್. ಬಿ. ಯ ಅಭ್ಯಾಸ ಕ್ರಮದಲ್ಲಿ ಹಿಂದೂಧರ್ಮ ಶಾಸ್ತ್ರವು ಅವರ ಅತ್ಯಂತ ಪ್ರೀತಿಯ ವಿಷಯವಾಗಿದ್ದಿತು. ಹಿಂದೂ ಧರ್ಮಶಾಸ್ತ್ರದ ಮುಖ್ಯಗ್ರಂಥಗಳನ್ನೂ ಅದರ ಮೇಲಿನ ಟೀಕೆ ಟಿಪ್ಪಣಿಗಳನ್ನೂ ಅತ್ಯಂತ ಸೂಕ್ಷ್ಮವಾಗಿ ಅವರು ಅಭ್ಯಾಸಮಾಡಿದರು. ಅವರ ಇಡೀ ಆಯುಷ್ಯದಲ್ಲಿ ಘಟಿಸಿದ ಸಾಮಾಜಿಕ, ಧಾರ್ಮಿಕ ವಾದತರ್ಕಗಳ ಪ್ರಸಂಗಗಳಲ್ಲಿ ಅದರ ಉಪಯೋಗವಾಯಿತು.

ಟಿಳಕರ ಕಾಲದ ಪ್ರಾಧ್ಯಾಪಕರಲ್ಲಿ ವಿದ್ಯಾರ್ಥಿಗಳಿಗೆ ಪ್ರಿಯರಾದವರೆಂದರೆ, ಕೇರೋಪಂತ ಛತ್ರೆ ಮತ್ತು ಶೂಟರೆಂಬವರು. ಪ್ರೊ. ಛತ್ರೆಯವರು ಗಣಿತ ಹಾಗೂ ಜ್ಯೋತಿಷ್ಯಗಳಲ್ಲಿ ಪ್ರವೀಣರೆಂದು ಹೆಸರು ಪಡೆದಿದ್ದರು. ಅರ್ಧಮರ್ಧ ಇಂಗ್ಲಿಷ ಕಲಿತ ಇವರು ಡೆಕ್ಕನ್ ಕಾಲೇಜದ ಪ್ರಿನ್ಸಿಪಾಲ ಹುದ್ದೆಯವರೆಗೆ ಏರಿದ್ದನ್ನು ಕಂಡು ಅವರ ಅಸಾಮಾನ್ಯ ಬುದ್ಧಿಯ ಬಗ್ಗೆ ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಛತ್ರೆಯವರು ಗಣಿತ ವಿಷಯದಲ್ಲಿಯ ಪ್ರಾವೀಣ್ಯತೆಯನ್ನು ಗ್ರಂಥಗಳ ಸಹಾಯದಿಂದ ತಾವೇ ಸಂಪಾದಿಸಿದ್ದಂತೆ ದೇಶೀ ವಿದೇಶಿ ಪದ್ಧತಿಯ ಗಣಿತ ಶಾಸ್ತ್ರದ ಜ್ಞಾನವು ಅವರಿಗೆ ಬಹು ಚನ್ನಾಗಿದ್ದಿತು. ಗ್ರಹಗಳ ವೇಧವನ್ನು ಸ್ವತಃ ತೆಗೆದುಕೊಳ್ಳುವ ಆಧುನಿಕ ವಿದ್ವಾಂಸರಲ್ಲಿ ಛತ್ರೆಯವರೇ ಮೊದಲನೆಯ ಭಾರತೀಯರಾಗಿದ್ದರು. ಗಣಿತಪ್ರಿಯರಾದ ಟಿಳಕರ ಮನಸ್ಸು ಇವರ ಕಡೆಗೆ ಸ್ವಾಭಾವಿಕವಾಗಿಯೇ ಹರಿಯಿತು. ಛತ್ರೆಯವರ ವಿದ್ವತ್ತೆಯು ಜನರ ಮನಸ್ಸನ್ನು ಆಕರ್ಷಿಸಿದಂತೆ ಅವರ ಸರಳ

ಪವಿತ್ರ ಜೀವನವು ವಿದ್ಯಾರ್ಥಿಗಳನ್ನೂ ಜನರನ್ನೂ ಮುಗ್ಧಗೊಳಿಸಿದ್ದಿತು. ದೊಡ್ಡವರಿರಲಿ, ಚಿಕ್ಕವರಿರಲಿ ಎಲ್ಲರೊಡನೆಯೂ ಒಂದೇ ರೀತಿಯಾಗಿ, ಸಲಿಗೆ ಸ್ನೆಹಗಳಿಂದ ನಡೆದುಕೊಳ್ಳುವ ಇವರ ಸರಳ ಸ್ವಭಾವವು ಲೋಕ ಪ್ರಿಯತೆಗೆ ಕಾರಣವಾಗಿದ್ದಿತು. ವಿದ್ಯಾರ್ಥಿಗಳು ನಿರ್ಭಯರಾಗಿ ತಮ್ಮ ತಾಯಿ-ತಂದೆಗಳ ಬಳಿಗೆ ಹೋಗುವಂತೆ ಅವರ ಕಡೆಗೆ ಹೋಗಿ, ವಿಷಯ ಗಳನ್ನು ತಿಳಿದುಕೊಳ್ಳುತ್ತಿದ್ದರು. ಇವರ ಮನೆಯು ವಿದ್ಯಾರ್ಥಿಗಳಿಗೆ ಮುಕ್ತದ್ವಾರ. ಎಷ್ಟೋ ಬಡವಿದ್ಯಾರ್ಥಿಗಳು ಅವರಲ್ಲಿಯೇ ಊಟಮಾಡುತ್ತಿ ದ್ದರು. ಅನೇಕ ಬುದ್ಧಿವಂತ ವಿದ್ಯಾರ್ಥಿಗಳ ಕಾಲೇಜ ಫೀಯನ್ನು ಕೂಡ ಕೊಡುತ್ತಿದ್ದರು. ಇಂತಹ ಉದಾತ್ತ ವಿದ್ವಾಂಸರ, ಉದಾರ ಚರಿತರ ಜೀವನವು ಟಿಳಕರ ಮೇಲೆ ಪರಿಣಾಮ ಮಾಡಿದುದು ಆಶ್ಚರ್ಯವಲ್ಲ. ಲೋಕ ಪ್ರಿಯರಾದ ಇನ್ನೊಬ್ಬ ಪ್ರಾಧ್ಯಾಪಕರೆಂದರೆ ಪ್ರೊ. ಶೂಟರು. ಇವರು ಅರ್ಥಶಾಸ್ತ್ರ, ಇತಿಹಾಸ, ನೀತಿಶಾಸ್ತ್ರಗಳನ್ನು ಕಲಿಸುತ್ತಿದ್ದರು. ಇವರ ಕಲಿಸುವ ಪದ್ಧತಿಯು ಸ್ವತಂತ್ರವೂ ಮಾರ್ಮಿಕವೂ ಆಗಿತ್ತು. ಒಮ್ಮೆ ಹೇಳಿ ದರೆ ಸಾಕು, ವಿದ್ಯಾರ್ಥಿಗಳ ಮನಸ್ಸಿನಮೇಲೆ ಮೂಡಿಬಿಡುತ್ತಿತ್ತು. ಇದರಿಂದ ಒಳ್ಳೇ ಶಿಕ್ಷಕರೆಂದು ವಿದ್ಯಾರ್ಥಿಗಳಿಗೆಲ್ಲ ಅವರು ಪ್ರಿಯರಾಗಿದ್ದರು.

ಹುಟ್ಟಿದ ಮಕ್ಕಳೆಲ್ಲ ಬದುಕುವದಿಲ್ಲ; ಬದುಕಿದವರೆಲ್ಲ ಒಳ್ಳೆರೀತಿ ಯಿಂದ ಬಾಳುವದಿಲ್ಲ; ಹಾಗೆ ಬಾಳಿದವರೆಲ್ಲ ಪ್ರಖ್ಯಾತರಾಗುವದಿಲ್ಲ. ಅದಕ್ಕೂ ಒಂದು ಬಗೆಯ ಪುಣ್ಯ ಬೇಕು. ಲೋಕಮಾನ್ಯರೊಡನೆ ಪದವೀ ಧರರಾದವರು ನೂರಾರು ಜನರಿರಬಹುದು; ಅವರಲ್ಲಿ ಜನರಿಗೆ, ರಾಷ್ಟ್ರಕ್ಕೆ ಉಪಯುಕ್ತರಾದವರೆಷ್ಟು ಜನ ! ಟಿಳಕರಿಗಿಂತ ಪರೀಕ್ಷೆಯಲ್ಲಿ ಹೆಚ್ಚುಗುಣ ಗಳನ್ನು ಅನೇಕರು ಪಡೆದಿರಬಹುದು; ವಿದ್ಯಾರ್ಥಿವೇತನ ಗಳಿಸಿರಬಹುದು; ಧನಗಳಿಸಿ ಸಿರಿವಂತರಾಗಿರಬಹುದು. ದೊಡ್ಡ ದೊಡ್ಡ ನವಕರಿಗಳನ್ನು ದೊರಕಿಸಿರಬಹುದು; ಒಳ್ಳೆಯವರೆನಿಸಿರಬಹುದು. ಇದೆಲ್ಲವೂ ಸಾಮಾನ್ಯ ಜೀವನವಲ್ಲದೆ ಅದರ ವೈಶಿಷ್ಟ್ಯವೇನು ? ಕೇವಲ ಬದುಕುವದರಲ್ಲಿ ಮಹತ್ವ ವೇನಿದೆ ? ಲೋಕೋತ್ತರತೆ ಏನಿದೆ ? ಅವರ ಸ್ನೇಹಿತರೇ 'ನಾವೆಲ್ಲ ಪದವೀ ಧರರಾದರೂ ನಾವು ಪಡೆದ ಶಿಕ್ಷಣದ ಸದುಪಯೋಗವನ್ನು ಲೋಕಕ್ಕೆ, ರಾಷ್ಟ್ರಕ್ಕೆ ಮಾಡಿಕೊಡಲಿಲ್ಲ. ಅದನ್ನು ಚೆನ್ನಾಗಿ ಜನರಿಗೆ, ರಾಷ್ಟ್ರಕ್ಕೆ ಮಾಡ

ಕೊಟ್ಟವರೆಂದರೆ ಟಿಳಕರೆ' ಎಂದು ಒಪ್ಪಿಕೊಳ್ಳುತ್ತಾರೆ. ಲೋಕಮಾನ್ಯರಷ್ಟು ಸಾರ್ವಜನಿಕ ಜೀವನದಲ್ಲಿ ಯಶಸ್ಸು ಪಡೆದವರು ಮತ್ತೊಬ್ಬರಿಲ್ಲ.

ಟಿಳಕರ ಗೆಳೆಯರಾದ ರಾ. ಬ. ಸಾರಂಗಪಾಣಿಯವರು ಬರೆದಿರುವ ನೆನಪುಗಳಲ್ಲಿ ವಿದ್ಯಾರ್ಥಿ ಟಿಳಕರ ವೈಶಿಷ್ಟ್ಯವು ಎದ್ದು ಕಾಣುತ್ತಿದೆ.

"೧೮೭೩ ರಲ್ಲಿ ಟಿಳಕರು ಡೆಕ್ಕನ್ ಕಾಲೇಜದಲ್ಲಿ ಪ್ರವೇಶ ಪಡೆಯಲು ಬಂದಾಗ ನಾನು ಅವರನ್ನು ಮೊದಲು ನೋಡಿದೆ. ಆಗ ಅವರು ನಿಸ್ತೇಜರೂ ಕೃಶ ಶರೀರರೂ ದುರ್ಬಲರೂ ಇರುವದನ್ನು ಕಂಡೆ. ಆದರೆ ಎರಡು ವರ್ಷಗಳಲ್ಲಿ ವ್ಯಾಯಾಮದಿಂದ ಅವರು ತಮ್ಮ ಬಣ್ಣವನ್ನೇ ಮಾರ್ಪಡಿಸಿ ಮಲ್ಲರಾದರು.

ಅವರು ನಾಸಿಕಕರ ಹಾಗೂ ಧುಳೇಕರ ಮಿತ್ರಮಂಡಳಿಯ ಅಂದರೆ ಮಡಿ ಉಡುವವರ ಕ್ಲಬ್ಬಿನಲ್ಲಿ ಸೇರಿದರು. ಅವರ ನಡತೆಯಲ್ಲಿ ಧರ್ಮ ನಿಷ್ಠೆಯು ಎದ್ದು ಕಾಣುತ್ತಿದ್ದಿತು. ಅವರ ಉಡುಪು ತೀರ ಸಾದಾ. ಒಮ್ಮೊಮ್ಮೆ ಊಟಮಾಡಿ ಬಕ್ಕನೆತ್ತಿಯಿಂದ ಹೋಗುವಾಗ ವರ್ಗದ ಕಿಡಕಿಯಲ್ಲಿ ಹಣಕಿಹಾಕಿ 'ಹಿಯರ್ ಸರ್' ಎಂದು ಹಾಜರಿ ಹಾಕಿ ಕೋಣೆಗೆ ಹೋಗುತ್ತಿದ್ದರು. ಅಡಿಕೆ ತಿನ್ನುವ ಚಟ ಅವರಿಗೆ ಬಹಳವಾಗಿದ್ದಿತು. ಕೇವಲ ಒಂದು ಹಳೇ ತರದ ಪೈರಣು, ಒಂದು ಟೊಪ್ಪಿಗೆ ಹಾಕಿಕೊಂಡು ವರ್ಗದಲ್ಲಿ ಕೂಡುತ್ತಿದರು.

ಮೊದಲನೇ ವರ್ಷ ಕಾಶೀನಾಥ ಬಳವಂತ ಪೇಂಡಸೆ ಎಂಬವರು ಸಂಸ್ಕೃತವನ್ನು ಕಲಿಸುತ್ತಿದ್ದರು. ಟಿಳಕರ ಸಂಸ್ಕೃತ ಜ್ಞಾನವು ಚೆನ್ನಾಗಿದ್ದುದರಿಂದ ಭಾಷಾಂತರವನ್ನು ಅವರು ಬಹಳವಾಗಿ ಮಾಡುತ್ತಿದ್ದರು. ಅವರು ಎಷ್ಟೋ ಇಂಗ್ಲಿಷ ಕವಿತೆಗಳನ್ನು ಸಂಸ್ಕೃತದಲ್ಲಿ ರಚಿಸಿದ್ದರು. ಗಣಿತ ವಿಷಯದಲ್ಲಿ ಅನೆಲಿಟಿಕಲ್ ಜಾಮೆಟ್ರಿಯು ಟಿಳಕರಿಗೆ ಹೆಚ್ಚು ರುಚಿಸುತ್ತಿತ್ತು. ನಾನು 'ಬಟ್ಲರ್ಸ್ ಸರ್ಮನ್ಸ' ಎಂಬ ವಿಷಯವನ್ನು ತೆಗೆದುಕೊಂಡದ್ದನ್ನು ಕಂಡು 'ಗಣಿತ ಕಲಿಯುವದನ್ನು ಬಿಟ್ಟು ಬಟ್ಲರ್ಸ ಸರ್ಮನ್ಸ ಏನು ಓದುತ್ತ ಕೂಡುತ್ತಿ' ಎಂದು ನುಡಿಯುತ್ತಿದ್ದರು. ಗಣಿತ ವಿಷಯದಲ್ಲಿಯ ಶಂಕೆಗಳನ್ನು ಕೇಳುತ್ತಿರುವ ಟಿಳಕರನ್ನು ಕಂಡು ಛತ್ರೆಯವರು ಹರ್ಷಭರಿತರಾಗಿ ಈ ಹುಡುಗನು ಒಳ್ಳೇ ಗಣಿತಜ್ಞನಿದ್ದಾನೆಂದು ಮನಗಂಡಿದ್ದರು. ಛತ್ರೆಯವರು ದುರ್ಬೀನಿನಲ್ಲಿ ಎಲ್ಲ ಗ್ರಹ, ನಕ್ಷತ್ರ ಮೊದಲಾದವುಗಳನ್ನು ತೋರಿ

ಸುತ್ತಿದ್ದರು. ಆ ವರ್ಗಕ್ಕೆ ತಪ್ಪದೆ ಟಿಳಕರು ಹೋಗುತ್ತಿದ್ದರು. ಕಾಲೇಜಿನಲ್ಲಿ ಅಭ್ಯಾಸಮಾಡುವದರಲ್ಲಿ ಮೂರು ಬಗೆಯ ಜನರಿದ್ದರು. ಕೆಲವರು ಊಟವಾದಕೂಡಲೇ ಮಲಗಿ, ನಡುರಾತ್ರಿಯಲ್ಲಿ ಓದಿ ಮತ್ತೆ ಮಲಗುವವರು. ಇನ್ನು ಕೆಲವರು ಮೊದಲ ರಾತ್ರಿಯಲ್ಲೆಲ್ಲ ಅಭ್ಯಾಸಮಾಡಿ ಮಲಗುವವರು. ಇನ್ನು ಹಲವರು ಮಧ್ಯರಾತ್ರಿಯವರೆಗೆ ಹರಟೆ ಹೊಡೆದು ಎಲ್ಲರೂ ಮಲಗಿದ ನಂತರ ಅಭ್ಯಾಸಮಾಡುವವರು. ಟಿಳಕರು ಮೂರನೇ ವರ್ಗದಲ್ಲಿ ಗಣಿಸಲ್ಪಡುತ್ತಿದ್ದರು. ಟಿಳಕರಿಗೆ ನಿದ್ದೆಗಟ್ಟುವದೆಂದರೆ ಒಳ್ಳೆ ಹುರುಪು. ತಾವು ನಿದ್ದೆಗೆಡುತ್ತಿದ್ದುದಲ್ಲದೆ ಎರಡನೆಯವರನ್ನು ನಿದ್ದೆಗೆಡಿಸುತ್ತಿದ್ದರು. ಅವರು ಮುಗ್ಧರಾಗಿದ್ದಿಲ್ಲ. ಆದರೆ ವಾಚಾಳಿಗಳೂ ಇರಲಿಲ್ಲ. ಗೆಳೆಯರೊಡನೆ ಮನಬಿಚ್ಚಿ ಹರಟೆಹೊಡೆಯುತ್ತಿದ್ದರು. ನಾವೆಲ್ಲರೂ ರಾತ್ರಿ ಊಟವಾದೊಡನೆ ಯಾರ ಕೋಣೆಯಲ್ಲಾದರೂ ದಿನಾಲು ಕೂಡುತ್ತಿದ್ದೆವು, ಚರ್ಚಿಸುತ್ತಿದ್ದೆವು ....... ನಮ್ಮ ಗೆಳೆಯರ ಮೇಲೆಲ್ಲ ಒಂದು ಬಗೆಯ ಟಿಳಕರ ಪ್ರಭಾವವಿದ್ದಿತು. ಟಿಳಕರ ಅಭ್ಯಾಸದ ರೀತಿಯು ವಿವೇಚಕ ಪದ್ಧತಿಯದಿತ್ತು. ಕೇವಲ ಪುಸ್ತಕಗಳಲ್ಲಿಯ ವಿವೇಚನೆಯಿಂದ ಸಂತುಷ್ಟರಾಗದೆ, ತಾವೇ ಸ್ವತಃ ವಿಷಯವನ್ನು ತಮಗೆ ಸರಿಕಂಡತೆ ವಿಭಾಗಿಸಿ ಹೊಸಬಗೆಯಿಂದ ಅದನ್ನು ಮಂಡಿಸುತ್ತಿದ್ದರು. ಎರಡನೆಯವರ ಟಿಪ್ಪಣಿಗಳನ್ನು ತೆಗೆದು ತಮ್ಮವೇ ಆದ ಟಿಪ್ಪಣಿಗಳನ್ನು ಸಿದ್ಧಪಡಿಸುತ್ತಿದ್ದರು. ಎಲ್‍ಎಲ್. ಬಿ. ಓದುವ ಸಮಯದಲ್ಲಿ ನಾವಿಬ್ಬರೂ ಕೂಡಿಯೇ ವ್ಯವಹಾರ ಮಯೂಖಿ, ಮಿತಾಕ್ಷರಿ ಮೊದಲಾದ ಗ್ರಂಥಗಳನ್ನೋದಿದೆವು. ವ್ಯಾಯಾಮದಲ್ಲಿ ಅವರನ್ನು ಸರಿಗಟ್ಟುವವರು ಯಾರೂ ಇದ್ದಿಲ್ಲ. ಈಜುವದೆಂದರೆ ಅವರಿಗೆ ಬಹು ಉಲ್ಲಾಸ. ನೀರಿನಲ್ಲಿ ತಾಸುಗಟ್ಟಲೆ ಇರುತ್ತಿದ್ದರು. ರಾತ್ರಿಯಲ್ಲಿ ನಿದ್ದೆಗಟ್ಟಿ ಬೆಳಿಗ್ಗೆ ನಳದಬಡಕ್ಕೆ ಕುಳಿತರೆಂದರೆ ಅರ್ಧರ್ಧತಾಸು ಏಳುತ್ತಿದ್ದಿಲ್ಲ. ಎಲ್‍ಎಲ್. ಬಿ. ಪಾಸಾದನಂತರ ಅವರ ಕಕ್ಕಂದಿರು ಒಮ್ಮೆ ಬಂದು, ನಮ್ಮ ಬಾಳನಿಗೆ ವಕೀಲಿಯನ್ನಾಗಲೀ ನವಕರಿಯನ್ನಾಗಲೀ ಮಾಡಲು ಹೇಳಬಾರದೇ, ಎಂದರು. ಆದರೆ ಟಿಳಕರು ಈ ಎರಡೂ ಕೆಲಸಗಳನ್ನು ಮಾಡಬಾರದೆಂದು ಎಂದೊ ನಿಶ್ಚಯಿಸಿದ್ದನ್ನು ನಾನು ತಿಳಿದಿದ್ದೆ. ಆದ್ದರಿಂದ 'ಈ ಮಾತನ್ನು ಹೇಳುವದರಿಂದ ಏನೂ ಪ್ರಯೋಜನವಾಗದೆ'ಂದು ಅವರಿಗೆ ತಿಳಿಸಿದೆ."

# ವಿಚಾರ-ಮಂಥನ

ವಾದೇ ವಾದೇ ಜಾಯತೇ ತತ್ವಬೋಧಃ ||

ಲೋಕಮಾನ್ಯರ ಪ್ರೌಢಶಿಕ್ಷಣದ ಸಮಯವೆಂದರೆ ಭಾರತದ ಸಂಧಿಕಾಲ. ಹೊಸ ಹಳೇ ವಿಚಾರಗಳ ಮಂಥನದ ಕಾಲ. ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ನಡೆದ ಈ ಮಂಥನದಿಂದಲೇ ನವಭಾರತದ ನವನೀತವು ಹೊರಬೀಳಲಿದ್ದಿತು. ಟಿಳಕ ಹಾಗೂ ಅವರ ಗೆಳೆಯರಲ್ಲಿ ನಡೆಯುತ್ತಿದ್ದ ವಾದವಿವಾದಗಳಲ್ಲಿ ಇದರ ಪಡಿನೆಳಲು ನಿಚ್ಚಳ ವಾಗಿ ಮೂಡಿದೆ. ಅದನ್ನು ನ. ಚಿ. ಕೇಳಕರರು ಚೆನ್ನಾಗಿ ಚಿತ್ರಿಸಿದ್ದಾರೆ.

**ಮಡಿ-ಮೈಲಿಗೆ**

ಮುಳೆ:— (ಉಪಾಸನಿಯನ್ನು ಕುರಿತು) ಏನು ಭಟ್ಟರೆ, ಊಟಕ್ಕೆ ನಡೆದಿರಾ ?

ಉಪಾಸನಿ:— (ತೀರ ಸರಳ ರೀತಿಯಿಂದ) ಅಹುದು.

ಟಿಳಕ:— ಹೌದು ರಾವಬಹಾದ್ದೂರ !

ಆಗರಕರ:— ಉಪಾಸನೀ ! ನಾವೂ ನಿಮ್ಮ ಕ್ಲಬ್ಬಿಗೆ ಊಟಕ್ಕೆ ಬರೋಣವೇ ?

ಉಪಾಸನಿ:— ಅವಶ್ಯ ಬರಬೇಕು. ನಮಗೆ ಬಹಳ ಆನಂದ ವಾಗುವದು.

ಮುಳೆ:— ಆದರೆ ನಾನು ನಿಮ್ಮ ಆ ಕಮಟಾದ ಮಡಿಯನ್ನು ಎಂದೂ ಉಟ್ಟುಕೊಳ್ಳಲಿಕ್ಕಿಲ್ಲ !

ಉಪಾಸನಿ:— ನಾನು ನಿನಗೆ ಸಾರಂಗಪಾಣಿಯ ಪೀತಾಂಬರ ತಂದುಕೊಡುವೆ.

ಆಗರಕರ;— ಅವರ ಲಗ್ನವಾದಂದಿನಿಂದ ನೀರನ್ನೆ ಕಾಣದ ಪೀತಾಂಬರವನ್ನೊ?

ಉಪಾಸನಿ:— ಹಾಗಾದರೆ ನನ್ನ ಒಗೆದ ಮಡಿಯನ್ನು ಕೊಡುವೆ.

ಆಗರಕರ:— ಹಾಗಿದ್ದರೆ ಈಗಿದ್ದ ನಮ್ಮ ಒಗೆದ ಧೋತರವೇಕಾಗ

ಬಾರದು? ಈ ಒತ್ತಾಯವೇಕೆ? ಇಂಥದನ್ನೇ ಉಡಿರಿ, ಹೀಗೆಯೇ ಮಾಡಿರಿ, ಹೀಗೆಯೇ ನಡೆಯಿರಿ ಎಂದು ಹೇಳುವದರಲ್ಲಿ ತಥ್ಯವೇನಿದೆ? ಇದಕ್ಕೆ ಏನಾದರೂ ಆಧಾರವಿದೆಯೇ? ಇಂತಹ ಮಡಿ-ಮೈಲಿಗೆಯ ವಿಚಾರಗಳಿಂದ ನಮ್ಮ ಸ್ವಾಭಾವಿಕ ಮೃದುಹೃದಯದ ಬೆಳವಣಿಗೆಯನ್ನೇ ಕುಗ್ಗಿಸಿಬಿಟ್ಟಿರುವಿರಿ. ಏನು ಟಿಳಕರೆ, ನಿಮಗೂ ಹೀಗೆ ಅನಿಸುವದಿಲ್ಲವೆ?

ಟಿಳಕ:— ನೀನು ಈ ಪ್ರಶ್ನೆಯನ್ನು ನನಗೇಕೆ ಮೇಲಿಂದ ಮೇಲೆ ಕೇಳುತ್ತಿ? ನನ್ನ ಉತ್ತರಗಳು ನಿನಗೆ ಸೇರುವದಿಲ್ಲ. ನೀನು ಒಳ್ಳೇ ರಭಸದಿಂದ ಏರಿಬಂದಿದ್ದರೂ ನಿನ್ನ ಅಂತಃಕರಣದಲ್ಲಿರುವ ಕಳಕಳಿಯನ್ನು ನಾನು ಅರಿತಿರುವದರಿಂದ ಬೇರೆ ರೀತಿಯಿಂದ ಉತ್ತರಿಸುವೆ ಆದರೆ ಈಗ ಊಟ ಮಾಡದೆ ಚರ್ಚಿಸುತ್ತ ನಿಂತು, ಅಡಿಗೆಯವನಿಗೆ ತೊಂದರೆ ಕೊಡುವದು ಒಳಿತಲ್ಲ. ಅವನು ಸಿಟ್ಟಿಗೆದ್ದರೆ, ಸರಿಯಾದ ಅನ್ನವು ದೊರೆಯಲಿಕ್ಕಿಲ್ಲ. ವೆಚ್ಚವೂ ಹೆಚ್ಚು ಬರಬಹುದು. ನಾನೂ ಮುಳೆ ಇಬ್ಬರೂ ಬಡವರು.

ಅಗರಕರ:— ನಿನ್ನ ಮಾತು ಸರಿಯಾಗಿದೆ. ನೀವು ಬಡವರಾದರೆ, ನಾನು ಹುಟ್ಟುದರಿದ್ರ. ಆದರೆ ನಿಮ್ಮ ಸಿದ್ಧತೆಯಿದ್ದರೆ ನಾನು ಊಟವನ್ನು ಬಿಡಲು ಸಿದ್ಧನಿದ್ದೇನೆ. ನಡೆಯಿರಿ, ಉಪಾಸನಿಯ ಕೋಣೆಯಲ್ಲಿ ಚರ್ಚಿಸುತ್ತ ಕೂಡೋಣ.

ಮುಳೆ:— ಶಕ್ಯವಿಲ್ಲ. ನನಗಂತೂ ಹಸಿವೆ ಬಹಳವಾಗಿದೆ.

ಟಿಳಕ:— ನಾನು ಇವತ್ತು ಬಹಳ ಈಜಾಡಿ ಬಂದದ್ದರಿಂದ ನನಗೂ ಹಸಿವೆಯು ಬಹಳವಾಗಿದೆ. ಅಗರಕರ! ವಾದವಿವಾದದ ಭರದಲ್ಲಿ ಶರೀರದ ಕಡೆಗೆ ದುರ್ಲಕ್ಷಿಸಬೇಡ. ಇದು ಒಳ್ಳೆಯದಲ್ಲ.

ಅಗರಕರ:— ಮೊದಲು ಮನಸ್ಸು, ನಂತರ ಶರೀರ.

ಟಿಳಕ:— ಹಾಗಲ್ಲ. ಮೊದಲು ಧರ್ಮ. ಒಳ್ಳೇ ಶರೀರವಿಲ್ಲದೆ ಒಳ್ಳೇ ಮನಸ್ಸು ಉಳಿಯುವದಿಲ್ಲ. ಈಗ ಅಂತಹ ಅವಸರವೇನು? ನಾವೇನು ಓಡಿಹೋಗುವದಿಲ್ಲ. ಮೊದಲು ಸರಿಯಾಗಿ ಊಟಮಾಡೋಣ. ನಂತರ ಪ್ರಫುಲ್ಲಿತ ಮನಸ್ಸಿನಿಂದ ಚರ್ಚಿಸೋಣ.

(ನಂತರ ಎಲ್ಲರೂ ಊಟ ಮಾಡಿ, ಸ್ವಲ್ಪ ಹೊತ್ತು ಉಳಿದ ಹರಟೆ ಹೊಡೆದರು. ಬಳಿಕ ಆಗರಕರರ ಆಗ್ರಹಕ್ಕಾಗಿ ಟಿಳಕರು ತಮ್ಮ ಪಕ್ಷವನ್ನು ಮಂಡಿಸಿದರು.)

ಟಿಳಕ:— ಆಗರಕರ! ನಾನು ಮೊದಲು ಶಾಸ್ತ್ರವನ್ನು ಹೇಳುವೆ.

ಮುಳೆ:—ಶಾಸ್ತ್ರಿಗಳ ಮಕ್ಕಳಿಗೆ ಎಲ್ಲ ಕಡೆಗೂ ಶಾಸ್ತ್ರವೇ ಕಾಣುತ್ತದೆ.

ಟಿಳಕ:— ಅದು ಸ್ವಾಭಾವಿಕ. ಇಂದು ಯುರೋಪವೆಲ್ಲ ಶಾಸ್ತ್ರಿಗಳ ಮಕ್ಕಳಿಂದಲೇ ತುಂಬಿದೆ. ಅವರ ಬಗ್ಗೆ ಮಾತ್ರ ನಾವು ಕೌತುಕ ಪಡುತ್ತೇವೆ. ಇಲ್ಲಿಯವರೆಗೆ ನಮ್ಮ ಮಕ್ಕಳೆಲ್ಲ ಒಳ್ಳೆಯವರು, ಉಳಿದವರು ದಡ್ಡರು ಎನ್ನುತ್ತಿದ್ದೆವು. ಬ್ರಿಟಿಷರ ಆಳಿಕೆ ಮೊದಲಾದಂದಿನಿಂದ ನಾವು ದಡ್ಡರು, ಉಳಿದವರು ಬುದ್ಧಿವಂತರು ಎಂದು ತಿಳಿಯುತ್ತಿದ್ದೇವೆ. ಇರಲಿ. ಮುಳೆ ನಡುವೆ ಮಾತನಾಡಿದ್ದರಿಂದ ಉತ್ತರಿಸಬೇಕಾಯಿತು. ನಡುವೆ ಯಾರೂ ಮಾತನಾಡಬಾರದೆಂದು ನನಗೆ ಅನಿಸುತ್ತದೆ. ಹತ್ತಿಯಗಿಂತ ರೇಶಿಮೆ ಯಲ್ಲಿ ಉಷ್ಣತೆಯು ಹೆಚ್ಚಿಗಿರುವದರಿಂದ ಅದು ಹೊಲಸನ್ನು ತನ್ನಲ್ಲಿ ಉಳಿಯಗೊಡುವದಿಲ್ಲವೆಂದು ಶಾಸ್ತ್ರಗಳು ಹೇಳುತ್ತವೆ. ಆದರೆ ಅದಕ್ಕೂ ಒಂದು ಮಿತಿ ಇದೆ. ರೇಶಿಮೆಯ ವಸ್ತ್ರವಾದರೂ ಅದನ್ನು ಆಗಾಗ ಒಗೆಯಲೇ ಬೇಕು. ನಿಜ. ಮೇಲಿಂದ ಮೇಲೆ ಒಗೆದರೆ, ಬೇಗನೆ ಹರಿಯುವದೆಂದು ಆ ಬೆಲೆಯುಳ್ಳ ಬಟ್ಟೆಯನ್ನು ಸಾಮಾನ್ಯ ಜನರು ಮೇಲಿಂದ ಮೇಲೆ ಒಗೆಯುವ ದಿಲ್ಲ. ಈ ನನ್ನ ಎಲ್ಲ ಮಾತುಗಳು ಸಾಮಾನ್ಯ ಜನರ ದೃಷ್ಟಿಯಿಂದ ಇರುತ್ತವೆ ಎಂಬುದನ್ನು ಮರೆಯಕೂಡದು. ಹಾಗಿದ್ದರೆ ದಿನಾಲು ಒಗೆದ ಹತ್ತಿಯ ಬಟ್ಟೆಯಿರಲು ರೇಶಿಮೆ ವಸ್ತ್ರವೇಕೆ ? ಆಗರಕರರ ಭಾಷೆಯಲ್ಲಿಯೇ ಹೇಳಬೇಕೆಂದರೆ ಜುಲುಮೆ ಏಕೆ? ಎಂದು ಕೇಳಬಹುದು. ಅದಕ್ಕೆ ಉತ್ತರ ವಿಷ್ಟೆ: ವಸ್ತ್ರಾಂತರವು ಶುದ್ಧತೆಯ ದೃಷ್ಟಿಯಿಂದ ಇಷ್ಟವಾಗಿದೆ. ಸಾಹೇಬರೂ ಕೂಡ ಊಟದ ಸಮಯಕ್ಕೆ ಬಟ್ಟೆ ಬದಲಿಸುವರು. ಶಕ್ಯವಿದ್ದಷ್ಟು ರೇಶಿ ಮೆಯ ಬಟ್ಟೆಯನ್ನು ಉಪಯೋಗಿಸುವರು. ಎರಡನೆಯ ಬಾಜಿರಾಯ ನಂತಹ ಭೋಳೆಜನರನ್ನು ಕಣ್ಣೆದುರಿಗಿಟ್ಟುಕೊಂಡು, ಮಡಿ ಮಾಡುವವ ರನ್ನು ಧಿಕ್ಕರಿಸಬೇಡಿರಿ. ಮಡಿ ಉಟ್ಟುಕೊಳ್ಳುವದು ಒಂದು ಚಿಕ್ಕ ಮಾತು. ಮಹತ್ವದ ಪ್ರಸಂಗಗಳಲ್ಲಿ ಮರೆತರೂ ನಡೆಯುವದು. ಆದರಿಂದ ಭಯಂಕರ

ಪಾಪ ಬರುವದೆಂದೇನೂ ನಾನು ತಿಳಿಯುವದಿಲ್ಲ. ಈಗ ಅಂತಹ ಪ್ರಸಂಗವೇನಿದೆ? ಸುಮ್ಮನೆ ಸಾವಿರಾರು ವರ್ಷಗಳಿಂದ ನಡೆದು ಬಂದ ಶುದ್ಧ ಸಾಂಪ್ರದಾಯದ ಮೇಲೇಕೆ ಶಸ್ತ್ರ?

ಆಗರಕರ:— ಈ ಅಂಧಶ್ರದ್ಧೆಯೇ ನಮ್ಮಲ್ಲಿಯ ಅನರ್ಥಕ್ಕೆ ಮೂಲ. ಟಿಳಕ! ನಮ್ಮ ನಿಮ್ಮಂತೆ ಒಳ್ಳೆಯದು ಕೆಟ್ಟದು ಎಂಬುದನ್ನು ತಿಳಿದವರು ಎಷ್ಟು ಜನ! ಸಾಮಾನ್ಯರು ಎರಡನೇ ಬಾಜಿರಾಯನಂತೆ ಭೋಳೆಜನರಿರುತ್ತಾರೆ. ನನಗೆ ಈ ಭೋಳೆತನ ಸೇರುವದಿಲ್ಲ. ಅದು ಮಡಿ-ಮೈಲಿಗೆಯಲ್ಲಿಯೇ ಇರಲಿ, ರೇಲ್ವೆ ಎಂಜಿನಿನ ಮುಂದೆ ಕಾಯಿ ಒಡೆಯುವದರಲ್ಲಿಯೇ ಇರಲಿ, ಎಲ್ಲಿಯೇ ಇರಲಿ, ಈ ಕಾಳಕೂಟದಂತಿರುವ ಭೋಳೆತನವನ್ನು ನಾನು ಎಂದೂ ಸಹಿಸಲಾರೆ. ನಿಜವಾದ ದೋಷವೆಂದರೆ, ಅಂಧಾನುಕರಣವೇ! ಬಹುದಿನದಿಂದ ನಡೆದುಬಂದ ರೂಢಿ ಎಂಬೊಡನೆಯೇ ನನ್ನ ತಲೆ ತಿರುಗುತ್ತದೆ. ನಿಜವಾಗಿ ವಿಚಾರಮಾಡಿದರೆ ಅನಂತಕಾಲವೆಂದರೇನು? ರೂಢಿಗಳು ಹೇಗೆ ಪ್ರಾಪ್ತವಾದವು? ಅವುಗಳಿಗೆ ನಾವು ಎಷ್ಟರಮಟ್ಟಿಗೆ ಬದ್ಧರು? ಈ ಎಲ್ಲ ಮಾತುಗಳನ್ನು ನಾವು ಆಳವಾಗಿ ವಿಚಾರಮಾಡುವದು ಅತ್ಯಗತ್ಯವಾಗಿದೆ. ಆದರೆ ವಿಚಾರಮಾಡುವವರು ಯಾರು? ಎಲ್ಲರೂ ಹಿರಿಯರ ಪರಂಪರೆಯಲ್ಲಿಯೇ ಮುಂದೆ ಸಾಗುವರು. ತಂದೆ ಒಕ್ಕಲಿಗನಿದ್ದರೆ ಮಗನೂ ಒಕ್ಕಲಿಗ; ನಾವಲಿಗನ ಮಗನೂ ನಾವಲಿಗನೇ! ತಂದೆ ಕುಂಬಾರನಿದ್ದು ಮಗ ಅಗಸನಾದದ್ದು ನಮ್ಮ ದೇಶದಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಪಾಶ್ಚಾತ್ಯರಕಡೆಗೆ ನೋಡಿರಿ,—ಪಾಶ್ಚಾತ್ಯರ ಹೆಸರೆತ್ತಿದ ಕೂಡಲೇ ಟಿಳಕರೇ, ನಿಮ್ಮ ಕಣ್ಣುಗಳೇಕೆ ಕೆಂಪಾಗುವವು?

ಟಿಳಕ:— ನಾನು ಅವರಿಗೆ ಅಂಜುವೆನೆಂದು ತಿಳಿಯಕೂಡದು. ಯಾವುದೇ ಮಾತಿನ ಸಾಧಕ, ಬಾಧಕಗಳ ವಿಚಾರವಾಗಬೇಕೆಂದು ಸುಮ್ಮನಿರುವೆ. ಸಿಟ್ಟು ಬರುತ್ತದೆಂಬುದರಲ್ಲಿ ಸಂಶಯವೇ ಇಲ್ಲ. ನಮಗೆ ಸಂತಾಪವಾಗುವ ಹಾಗೆಯೇ ಈ ಪಾಶ್ಚಾತ್ಯರು ಭಾರತಕ್ಕೆ ಹಾನಿಯನ್ನು ಮಾಡುತ್ತ ಬಂದಿದ್ದಾರೆ. ಅವರಲ್ಲಿ ಕೆಲವು ಸದ್ಗುಣಗಳಿವೆಯೆಂಬುದನ್ನೂ ನಾನು ಬಲ್ಲೆ. ಅದರ ಬಗ್ಗೆ ನನ್ನ ವಿಚಾರಗಳು ಇನ್ನೂ ನಿಶ್ಚಿತವಾಗಿಲ್ಲ; ಆಗಬೇಕಾಗಿದೆ. ಅದರಂತೆ ನೀವು ಹೇಳಿದ ವಿಷಯಗಳೂ ವಿಚಾರಣೀಯವಾದುವೆ. ಆದರೆ ವಿಚಾರವನ್ನು ಯಾರು ಮಾಡುವರು? ಎಂಬ ಪ್ರಶ್ನೆಗೆ ಸಾಮಾನ್ಯ ಜನತೆ

ಎಂಬುದು ಉತ್ತರವಲ್ಲ. ಸಾಮಾನ್ಯ ಜನರು ವಿಚಾರವಂತರಾದರೆ ನಾವು ರಾಜರೇ ಆಗುವೆವು. ಭಾರತೀಯರು, ಬ್ರಿಟಿಶರು ಸರಿಸಮಾನತೆಯಿಂದ ಗೆಳೆಯರಾಗುವೆವು. ಇಂದಿನಂತೆ ಸೇವ್ಯ ಸೇವಕ ಭಾವವು ಉಳಿಯಲಾರದು. ಅಂತಹ ಪರಿಸ್ಥಿತಿಯನ್ನು ಹೇಗೆ ನಿರ್ಮಾಣ ಮಾಡಬೇಕೆಂಬುದೇ ಇಂದಿನ ತರುಣರ ಎದುರಿಗೆ ಇರುವ ಪ್ರಶ್ನೆ. ನಾವೆಲ್ಲ ಗೆಳೆಯರು ವಿಚಾರವನ್ನು ನಡಿಸಿಯೇ ಇದ್ದೇವೆ. ವಿಷಯ ವರ್ಗೀಕರಣವನ್ನು ಮಾಡಿ ಯಾರು ಯಾರಿಗೆ ಯಾವ ಕ್ಷೇತ್ರದಲ್ಲಿ ಸಂಘಶಕ್ತಿಯಿಂದ ಕಾರ್ಯಮಾಡಲು ಶಕ್ಯವಿದೆ ಎಂಬುದನ್ನು ನಿರ್ಣಯಿಸೋಣ. ನಾವು ಯಾವ ಸಾಮಾನ್ಯ ಜನತೆಗೆ ಶಿಕ್ಷಣಕೊಡಬೇಕಾಗಿದೆಯೋ ಅದರಲ್ಲಿ ಬುದ್ಧಿಭೇದವನ್ನುಂಟುಮಾಡುವದು ಬೇಡ. ಮೆಲ್ಲಮೆಲ್ಲನೆ ಶಿಕ್ಷಣವನ್ನು ಕೊಡುತ್ತ ಜನತೆಯನ್ನು ಮುಂದಕ್ಕೆ ಒಯ್ಯಬೇಕೆಂಬುದೇ ನನ್ನ ಉದ್ದೇಶ.

ಆಗರಕರ:— (ಒಮ್ಮೆಲೆ ರೊಚ್ಚಿನಿಂದ) ಇದರ ಬಗ್ಗೆ ನನ್ನ ಮತ ಭೇದವಿದೆ.

ಆಮೇಲೆ ಆಗರಕರರು ಸಾಮಾನ್ಯ ಜನತೆಯ ಮೇಲೆ ಹರಿಹಾಯ್ದರು. ಕೇಳುವ ವರೆಗೆ ಕೇಳಿ, ಟಿಳಕರು ಉಪಾಸನಿಯವರ ಸನ್ನೆಯಮೇರೆಗೆ ನಿದ್ರಿಸಹತ್ತಿದರು.

### ನಮ್ಮ ಶಿಕ್ಷಣವನ್ನು ನಾವೇ ರೂಪಿಸಬೇಕು

ಟಿಳಕ:— ಆಗರಕರ ! ನಿಮಗೆ ಈಗ ಸಮಯವಿರುವದಷ್ಟೆ ! ನಾವು ನಮ್ಮ ಭಾವೀಕಾರ್ಯದ ಬಗ್ಗೆ ಒಂದು ನಿರ್ಧಾರ ಮಾಡೋಣ. ನಮ್ಮ ಧ್ಯೇಯವಾದ ಸಾರ್ವಜನಿಕ ಸೇವೆಯ ವಿಷಯವಾಗಿ ನಮ್ಮಲ್ಲಿ ಮತೈಕ್ಯ ವೆಷ್ಟಿದೆ ? ಯಾವುದನ್ನು ಕೂಡಿ ಮಾಡಬಹುದು ? ಮೊದಲಾದವನ್ನು ಬಿ. ಎ. ದಲ್ಲಿ ಇರುವಾಗಲೇ ನಿಶ್ಚಯಿಸುವವರಿದ್ದೆವು. ಆ ಮಾತಿಗೆ ಮೂರು ವರ್ಷ ಗಳಾದವು. ಹೀಗೆ ವೇಳೆ ಕಳೆಯುವದು ಸರಿಯೆ ?

ಉಪಾಸನಿ:— ಛೇ, ನಾವೆಲ್ಲಿ ಸುಮ್ಮನೆ ವೇಳೆ ಕಳೆಯುತ್ತಿದ್ದೇವೆ ? ಪರೀಕ್ಷೆಯಲ್ಲಿ ಉತ್ತೀರ್ಣರಾಗುವದು ಅದರ ಪೂರ್ವಸಿದ್ಧತೆಯಲ್ಲವೆ ?

ಆಗರಕರ:— ಪರೀಕ್ಷೆಯಲ್ಲಿ ಉತ್ತೀರ್ಣರಾಗುವದರಿಂದ ಸಮಾಜ ದಲ್ಲಿ ಪ್ರತಿಷ್ಠೆ ಬೆಳೆಯುವದು. ಆದರಿಂದ ನಮ್ಮ ಕಾರ್ಯಸಾಧನೆಗೆ

ಸಹಾಯವಾಗುವದು. ಇದಕ್ಕಿಂತ ಹೆಚ್ಚಿನ ಬೆಲೆಯನ್ನು ನಾನು ಪರೀಕ್ಷೆಗೆ ಕೊಡುವದಿಲ್ಲ. ಸಮಯವು ವ್ಯರ್ಥ ಹೋಯಿತೆಂದು ಟಿಳಕರಂತೆ ನನಗೂ ಅನಿಸುತ್ತದೆ. ಇರಲಿ, ಟಿಳಕರೇ, ನಾನು ಎಲ್ಲ ದೃಷ್ಟಿಯಿಂದ ಕೂಲಂಕಷ ವಿಚಾರಮಾಡಿದನಂತರವೂ ರಾಜಕೀಯ ಸುಧಾರಣೆಗಳಿಗಿಂತಲೂ ಸಾಮಾಜಿಕ ಸುಧಾರಣೆಗಳನ್ನು ಮೊದಲು ಕೈಕೊಳ್ಳುವದು ನಮ್ಮ ಕರ್ತವ್ಯವೆಂದು ಅನಿಸುತ್ತದೆ.

ಉಪಾಸನಿ:— ಈ ವಿಷಯದಲ್ಲಿ ಮೂರು ವರ್ಷವಾದರೂ ನಮ್ಮಲ್ಲಿ ಮತ್ತೈಕ್ಯವಾಗಲೊಲ್ಲದು.

ಟಿಳಕ:— ಏನೇ ಇರಲಿ. ವಿವಿಧತೆಯಲ್ಲಿ ಏಕತೆಯನ್ನು ಕಂಡು ಹಿಡಿಯುವದೇನು ಸಾಮಾನ್ಯವಲ್ಲ! ನಮ್ಮ ಧ್ಯೇಯದಲ್ಲಿ ಮತ್ತೈಕ್ಯವೆಷ್ಟಿದೆ ಎಂಬುದನ್ನಷ್ಟೇ ಇಂದು ನಾವು ವಿಚಾರ ಮಾಡೋಣ. ಆಮೇಲೆ ಅದರ ಕಾರ್ಯದ ರೂಪರೇಷೆಗಳನ್ನು ಗೊತ್ತು ಮಾಡೋಣ. ಆಗರಕರ! ಒಟ್ಟಿನಲ್ಲಿ ಮೊದಲು ಸಾಮಾಜಿಕ ಸುಧಾರಣೆ, ನಂತರ ರಾಜಕೀಯ ವಿಚಾರ ಎಂದಲ್ಲವೇ ನಿನ್ನ ಮತ?

ಆಗರಕರ:— ಅಹುದು. ನಾನು ಬಹಳ ವಿಚಾರ ಮಾಡಿದ ನಂತರವೂ ಈ ನಿರ್ಣಯಕ್ಕೆ ಬಂದಿದ್ದೇನೆ. ಮನೆ ಗೆದ್ದು ಮಾರು ಗೆಲೆಯಬೇಕಲ್ಲವೇ? ಮನೆಯಲ್ಲಿಯೇ ಬೆಲೆಯಿಲ್ಲದವರನ್ನು ಹೊರಗೆ ಕೇಳುವವರಾರು? ಟಿಳಕರೆ, ನಮ್ಮನಮ್ಮಲ್ಲಿಯೇ ಎಂತಹ ಅನ್ಯಾಯಗಳು ನಡೆದಿವೆ ನೋಡಿರಿ. ನಮ್ಮ ಹಿಂದೂ ಸಮಾಜದಲ್ಲಿ ಅತ್ಯಾಚಾರವು ನೃತ್ಯಮಾಡುತ್ತಲಿದೆ. ಹೆಣ್ಣುಮಕ್ಕಳ ಮೇಲೆ ಎಷ್ಟು ಜುಲುಮೆ! ಭೂತ-ಪಿಶಾಚಗಳ ಕಲ್ಪನೆ ಏನು! ಉಗಿಬಂಡಿಯ ಮುಂದೆ ಕಾಯಿ ಒಡೆಯುವದು ಎಂತಹ ಮೂಢತನ! ಹಬ್ಬಹುಣ್ಣಿಮೆ, ದೇವರು ದಿಂಡರುಗಳ ಹೆಸರಿನಿಂದ ದುಂದುಮಾಡಿ ಸಾಲಗಾರರಾಗುವ ಧರ್ಮವೆಂತಹದು? ಬಾಲವಿಧವೆಯರಿಗಾಗುವ ಅನ್ಯಾಯವೆಂತಹದು! ಅದರಲ್ಲಿಯೂ ಅವರ ಕೇಶಖಂಡನೆ! ರಾಮ ರಾಮಾ, ಒಂದೇ ಎರಡೇ—ಎಂತಹ ಅನಿಸ್ವಿತ ಕೃತಿಗಳಿವು? ಯಾವ ಮನೆಯಲ್ಲಿ ಮಕ್ಕಳು ಮರಿಗಳ ಮೇಲೂ, ಹೆಂಗಳೆಯರ ಮೇಲೂ ಅನ್ಯಾಯ, ಜುಲುಮೆಗಳು ನಡೆಯುವವೋ ಆ ಅನ್ಯಾಯದಿಂದಲೇ ಅವರ ನಾಶವೂ ನಿಶ್ಚಿತವೆಂದು ಶೆಲ್ಲಿಯು ಹೇಳುವ

ದಿಲ್ಲವೇ ? ಟಿಳಕರೆ! ನೀವು ಏನೇ ಅನ್ನಿರಿ, ನಾನು ಮಾತ್ರ ಸಾಮಾಜಿಕ ಅನ್ಯಾಯಗಳು ಮೊದಲು ನಿರ್ಮೂಲವಾಗಬೇಕೆಂಬ ಪಕ್ಷದವನೇ! ಅದನ್ನು ಡಂಗುರ ಹೊಡೆಯುವವನೇ !

ಟಿಳಕ:— ಅವಶ್ಯ ! ನಾನೆಲ್ಲಿ ವಿರುದ್ಧವಿರುವೆ ? ಮನೆ ಯಾರಿಗೆ ಬೇಡ! ಶೆಲ್ಲಿಯೇಕೆ, ನಮ್ಮ ರಾಮದಾಸರೇ ಹೇಳಿಲ್ಲವೆ? 'ಮೊದಲು ಸಂಸಾರವನ್ನು ಚೆನ್ನಾಗಿ ಮಾಡು' ಎಂದು. ಮನೆ ಸುಧಾರಿಸಿರಿ ಎಂದು ಅವಶ್ಯ ಸಾರಿರಿ! ಆದರೆ ನನ್ನಂಥ ಅಜ್ಞಾನಿಯು ಬಂದು, 'ಆಗರಕರರೇ, ನೀವು ಮನೆಯನ್ನು ಸುಧಾರಿಸಿರಿ ಎನ್ನುವಿರಿ. ಆದರೆ ನನಗೆ ಮನೆಯೇ ಇಲ್ಲನಲ್ಲ! ನಾನೇನು ಮಾಡಲಿ?' ಎಂದರೆ ಅವನಿಗೆ ಮನೆ ಕೊಡಬೇಕಲ್ಲವೇ ? ಉಪಾಸನಿಯಂಥ ಬುದ್ಧಿವಂತನು ಬಂದು 'ಏನು ಸ್ವಾಮಿ, ಮನೆ ಎನ್ನುವಿರಿ, ಮನೆಯೆಂದ ರೇನು ? ಮೊದಲು ಮನೆ, ಮುಂದೆ ಬಾಗಿಲು ಎನ್ನುವಿರಿ; ಆದರೆ ಮೊದಲು ಬಾಗಿಲಲ್ಲಿ ಹೊಕ್ಕೇ ಮನೆಯಲ್ಲಿ ಪ್ರವೇಶಿಸುವದನ್ನು ಪ್ರತ್ಯಕ್ಷವಾಗಿ ನೋಡು ತ್ತೇವಲ್ಲ?' ಎಂದು ವಿಚಾರಿಸಿದರೆ ಅವನನ್ನು ಸಮಾಧಾನಪಡಿಸಬೇಕಾಗು ತ್ತದೆ. ನಮಗೆ ಮನೆಯಂತೂ ಬೇಕೇ ಬೇಕು. ಅದರ ಸಲುವಾಗಿಯೇ ಇಷ್ಟೆಲ್ಲ ಪ್ರಯತ್ನ! ಬ್ರಿಟಿಶರು ಜಗತ್ತಿನಲ್ಲೆಲ್ಲ ಹಬ್ಬಿದ್ದು ಮನೆಯ ಸಲು ವಾಗಿಯೇ. ಆದರೆ ಬಾಹ್ಯ ಜಗತ್ತಿಲ್ಲದೆ, ಬಾಗಿಲು ಇಲ್ಲದೆ, ಜನ ಸಂಪರ್ಕ ವಿಲ್ಲದೆ, ಮನೆಯ ಅಸ್ತಿತ್ವವೇ ಉಳಿಯಲಾರದೆಂಬದನ್ನು ನೀವು ಅರಿಯಿರಾ?

ಆಗರಕರ:—ನಿಶ್ಚಯವಾಗಿ ಅರಿತಿರುವೆ. ಸತ್ಯವನ್ನು ನಾನು ಹೇಗೆ ಅಲ್ಲ ಗಳೆಯಲಿ ? ಈ ಮರ್ತ್ಯಲೋಕದಲ್ಲಿ ಎಲ್ಲಿಯವರೆಗೆ ನಮ್ಮ ಮನೆಯಿದೆಯೋ ಅಲ್ಲಿಯ ವರೆಗೆ ಆ ಮರ್ತ್ಯಲೋಕದ ಆ ವಾತಾವರಣದ ಅವಲಂಬನ ಅವಶ್ಯ ವೆಂಬುದನ್ನು ಒಪ್ಪಲೇಬೇಕು. ಟಿಳಕರೇ, ಮೂಲದಲ್ಲಿಯೇ ನಾನು ಬೇರೆ ವಿಚಾರದವನಿದ್ದೇನೆ. ಮನುಷ್ಯನ ಧ್ಯೇಯವು ಅತ್ಯುಚ್ಚವಾಗಿರಬೇಕೆಂಬುದೇ ನನ್ನ ಮತ. ಅದರಲ್ಲಿ ಕಿಂಚಿತ್ ಲಭಿಸಿದರೂ ಸಾಕು. ನೀವು ಈ ಬಾಹ್ಯ ಜಗತ್ತಿಗೆ, ಈ ಮಾಯಾ ಪ್ರಪಂಚಕ್ಕೆ ಬಹಳ ಮಹತ್ವ ಕೊಡುತ್ತಿರುವಿರಿ! ಎರಡನೆಯ ಸೃಷ್ಟಿಯ ಕಡೆಗೆ ನಿಮ್ಮ ದೃಷ್ಟಿ ಕಡಿಮೆ. ಶೆಲ್ಲಿಯು ವರ್ಣಿಸುವ 'ದಿವ್ಯ ಕೌಟುಂಬಿಕ ಸುಖವಾಗಲೀ, ಇಲ್ಲವೆ ನಮ್ಮ ಕವಿಗಳು ಚಿತ್ರಿಸುವ ಸ್ವರ್ಗಸುಖವಾಗಲೀ ಅಶಕ್ಯಕೋಟಿಯೊಳಗಿನವೆಂದು ನಾನು ಎಣಿಸಿಲ್ಲ.

ನೀವು ಈ ಮಾಯಾಬಜಾರದ ಸುಧಾರಣೆಯನ್ನೇ ಕಣ್ಣುಮುಂದೆ ಇಟ್ಟು ಕೊಂಡರೆ, ಇದನ್ನು ನಿರ್ಮಿಸಿದವರು ಮನೆಯ ಮಕ್ಕಳೇ ಅಲ್ಲವೇ! ನನಗೆ ಮನೆ ಕೊಡಬೇಕೆಂದು ಕೇಳಿದರೆ ಅವನ ಸ್ವಭಾವದ ವಿಚಾರವನ್ನು ನಾನು ಮಾಡಬಹುದು. ಟಿಳಕರೆ, ವಿಷಯಾಂತರವಾದರೂ ಚಿಂತೆಯಿಲ್ಲ, ನಡುವೇ ಒಂದು ವಿಚಾರವನ್ನು ಹೇಳಿಬಿಡುತ್ತೇನೆ. ಗೋಲ್ಡ್ ಸ್ಮಿಥ್ ಎಂದಿರುವಂತೆ ಕುಟುಂಬವನ್ನು ರಕ್ಷಿಸುವ ಯೋಗ್ಯತೆ ಇದ್ದವನೇ ಮದುವೆಯಾಗಬೇಕು. ಯೋಗ್ಯತೆ ಇಲ್ಲದವನು ಆ ಹವ್ಯಾಸಕ್ಕೆ ಬೀಳಬಾರದು.' ಎಂಬುದೇ ನನ್ನ ಮತವಾಗಿದೆ. ಹೊರಗಿನ ವಾತಾವರಣವನ್ನು, ರಾಜಕೀಯ ಪರಿಸ್ಥಿತಿಯನ್ನು ಅವಶ್ಯವಾಗಿ ವಿಚಾರ ಮಾಡಬೇಕು. ಅದು ಕೂಡ ಮನೆಯ ಸಲುವಾಗಿಯೇ ಎಂಬುದನ್ನು ಮರೆಯಕೂಡದು ಎಂದೇ ನನ್ನ ಅಭಿಪ್ರಾಯ. ಇದಕ್ಕೆ ನೀವು ರಾಜಕೀಯವೆನ್ನಿರಿ ಇಲ್ಲವೆ ಸಾಮಾಜಿಕವೆನ್ನಿರಿ— ನಾನು ಮಾತ್ರ ಶಬ್ದದ ರೂಢಾರ್ಥವನ್ನು ಲಕ್ಷಿಸಿ, ಸಾಮಾಜಿಕ ಸುಧಾರಣೆ ಎಂಬ ಅರ್ಥ ವನ್ನು ಕಲ್ಪಿಸಿದ್ದೇನೆ. ನನ್ನ ವಿಚಾರ ಟಿಳಕರಿಗೆ ತಪ್ಪೆನಿಸಲಿಕ್ಕಿಲ್ಲವೆಂದು ಭಾವಿಸಿರುವೆ.

ಟಿಳಕ: — ನಿಮ್ಮ ಮಾತಿನಲ್ಲಿ ಏನೂ ತಪ್ಪಿಲ್ಲ. ಇಂದಿನ ದಿನ ಶುಭ ದಿನವೆಂದು ನಾನು ಬಗೆಯುವೆ. ನೀವು ಇಷ್ಟು ಶಾಂತಚಿತ್ತದಿಂದ ವಿಚಾರ ಮಾಡುತ್ತಿರುವದನ್ನು ನೋಡಿದರೆ, ನಮ್ಮಿಬ್ಬರಿಂದಲೂ ದೇಶಸೇವೆ ಮಾಡಿಸ ಬೇಕೆಂದು ಈಶಸಂಕಲ್ಪವಿದ್ದಂತೆ ಭಾಸವಾಗುತ್ತದೆ. ಆಗರಕರರೇ, ನಿಮ್ಮ ಮೂಲತತ್ವವು ನನಗೆ ಮಾನ್ಯವಿದೆ. ನಿಮ್ಮಂತೆ ನನ್ನ ವಿಚಾರಗಳು ಕಾವ್ಯ ಕಲ್ಪನೆಗಳಾಗದಿದ್ದರೂ ಮನೆಯು ಮೋಕ್ಷದ ಸೋಪಾನವೆಂದು ನನ್ನ ಶಾಸ್ತ್ರೀಯ ಮನಸ್ಸು ಹೇಳುತ್ತಿದೆ. ಸೋಪಾನವು ಭದ್ರವಾಗಿರಬೇಕು. ಧ್ಯೇಯವು ಉಚ್ಚವಾಗಿರಬೇಕೆಂಬುವದರಲ್ಲಿ ಸಂಶಯವೇ ಇಲ್ಲ. ಅದು ಇದ್ದೇ ಇರುತ್ತದೆ. ಮಾನವನಿಗೆ ಅಪೇಕ್ಷಿತವಾದ ಸುಖವು ಪ್ರಾಪ್ತವಾದರೆ, ಅವನಿಗೆ ಅದರ ಮುಂದಿನ ಧ್ಯೇಯದ ದರ್ಶನವಾಗುತ್ತದೆ. ಸಾಮಾನ್ಯ ಜನರಿಗೆ ಸಾಮಾನ್ಯ ಧ್ಯೇಯವೇ ಕಣ್ಣೆದುರಿಗೆ ಇರುವದಲ್ಲವೇ? ನಾವು ಈಗ ಸಾಮಾನ್ಯ ಜನತೆಯ ಕುರಿತೇ ವಿಚಾರ ಮಾಡಬೇಕಾಗಿದೆ. ಆದ್ದರಿಂದ ಭಾರತದ ಸಾಮಾನ್ಯ ವ್ಯಕ್ತಿಯ ಮನೆಯ ಸ್ಥಿತಿ ಏನೆಂಬುದನ್ನೇ ಯೋಚಿಸ

ಬೇಕಾಗಿದೆ. ಆಗರಕರರೇ! ನಮ್ಮ ದೃಷ್ಟಿಯು ಭವಿಷ್ಯತ್ ಕಾಲದ ಬಗೆಗೆ ಎಷ್ಟು ದೂರ ಹರಿಯಬಹುದು? ನಿಮ್ಮ ಸಿದ್ಧತೆಯು ಎಷ್ಟಿದೆ?

ಆಗರಕರ:— ನಿಮಗೆ ಎಷ್ಟು ದೂರಬೇಕೋ ಅಷ್ಟರವರೆಗೆ ಹರಿಸಲು ನನ್ನ ಸಿದ್ಧತೆಯಿದೆ. ಸೂರ್ಯಮಂಡಲವನ್ನು ಭೇದಿಸಬಹುದು; ವಿಶ್ವಾಮಿತ್ರ ಸೃಷ್ಟಿಯ ಆಚೆಗೂ ಹರಿಸಬಹುದು.

ಟಿಳಕ:— (ನಕ್ಕು) ಈಗ ಅಷ್ಟು ದೂರ ನಮಗೆ ಹೋಗಬೇಕಾಗಿಲ್ಲ. ಎಲ್ಲ ಜನರನ್ನು ಇಂದೇ ಕವಿಗಳನ್ನಾಗಿ ಮಾಡಬೇಕಾಗಿಯೂ ಇಲ್ಲ.

ಆಗರಕರ:— ಎಲ್ಲರನ್ನೂ ಮುತ್ಸದ್ದಿಗಳನ್ನಾಗಿ ಮಾತ್ರ ಮಾಡಬೇಡಿರಿ. ಕವಿಗಳಾದರೆ ನಡೆದೀತು. ಮುತ್ಸದ್ದಿಗಳಾದರೆ ಮಾತ್ರ ದಿಲ್ಲಿ, ಆಗ್ರಾ ಗಳಲ್ಲಿ ನಡೆದ ಹಿಂದಿನ ಅನರ್ಥವೇ ಮತ್ತೆ ಪ್ರಾರಂಭವಾದೀತು!

ಟಿಳಕ:— ನಿಮಗೆ ಆ ಭೀತಿ ಬೇಡ. ರಾಜಕಾರಣವು ಕೊಳೆತು ನಾರಲು ನಾಲ್ಕೈದು ತಲೆಗಳಾದರೂ ಬೇಕು. ಇರಲಿ. ಇಂದಿನ ಪರಿಸ್ಥಿತಿ ಯನ್ನು ನೋಡಿದರೆ ನಮ್ಮ ದೃಷ್ಟಿಯು ಭೂತಕಾಲದ ೧೬೬೨ ರಿಂದ ಭವಿಷತ್‌ಕಾಲದ ೧೯೩೦ರ ವರೆಗಾದರೂ ಹರಿಯಬೇಕೆಂದು ನನಗೆ ಅನಿಸು ತ್ತದೆ. ರಾಜಕೀಯ ಪರಿಸ್ಥಿತಿಯು ಮನೆಯ ಸ್ಥಿತಿಯ ಒಂದು ಭಾಗವೆಂಬು ದನ್ನು ಒಪ್ಪುವೆ. ಆದರೆ ರಾಜಕೀಯವು ವಾಮನಾವತಾರದಂತೆ—ಎಲ್ಲ ವನ್ನೂ ವ್ಯಾಪಿಸಿ, ಎಲ್ಲಕ್ಕೂ ಮಿಗಿಲಾಗಿ ನಿಂತಿದೆ. ಆದು ಹೇಗೆಂಬುದನ್ನು ನೋಡೋಣ. ಮನೆಯಲ್ಲಿ ದೇವರ ಸ್ಥಾನವು ಮೊದಲನೆಯದು.

ಆಗರಕರ:— ದೇವರು! ದೇವರದೆಲ್ಲಿಯದು? ಮಕ್ಕಳದು! ಮನೆಯಲ್ಲಿ ಅವನಿಗೆ ಸ್ಥಾನವೇ ಇಲ್ಲ. ಅಂತರಾಳದಿಂದ ಭುವಿಗೆ ಬಂದ ಎಳೆಯ ಮಕ್ಕಳಿಗೆ ಮೊದಲ ಸ್ಥಾನ.

ಟಿಳಕ:— (ಎಷ್ಟು ಪವಿತ್ರ ವಿಚಾರಗಳಿವು. ಇಂತಹ ಸತ್ಪುರುಷ ರಿಂದಲೇ ಜಗತ್ತಿಗೆ ಚಾಲನೆ ದೊರೆಯುತ್ತದೆ. ಎಂದು ಮನಸ್ಸಿನಲ್ಲಿ ಅಂದು ಕೊಂಡು) ಮಕ್ಕಳನ್ನೇ ದೇವರಂತೆ ಕಾಣುವ ನೀವೇ ನನಗೆ ದೇವರಂತೆ ಕಾಣುವಿರಿ. ಇದು ಚೇಷ್ಟೆಯಲ್ಲ ಆಗರಕರರೇ! ಇರಲಿ. ಮನೆಯಲ್ಲಿರುವ ಈ ದೇವತೆಗಳಿಗೆ ಈಗ ಸಿಗುವ ಹಾಲು, ಅನ್ನ, ವಸ್ತ್ರಗಳು ಮುಂದೆಯೂ ದೊರೆಯಬಹುದೇ? ನಮ್ಮ ದನಕರುಗಳು ಅಸಂಖ್ಯಾತವಾಗಿ ಪರದೇಶಗಳಿಗೆ

ಹೋಗುತ್ತವೆ. ತೆರಿಗೆಯು ಪ್ರತಿ ಮೂವತ್ತು ವರ್ಷಕ್ಕೆ ಹೆಚ್ಚತೊಡಗಿದೆ. ನಮಗೆ ಕೊಡಲ್ಪಡುವ ಶಿಕ್ಷಣವು ಎಂತಹದಿದೆ ಎಂಬುದನ್ನಂತೂ ಬಲ್ಲಿರಿ. ಸೈನ್ಯಕ್ಕೆ ವೆಚ್ಚವಾಗುವ ಹಣದಲ್ಲಿ ಎಷ್ಟನೇ ಅಂಶ ಶಿಕ್ಷಣಕ್ಕೆ ವೆಚ್ಚವಾಗುವದು? ನಮ್ಮ ಧಾರ್ಮಿಕ ಕ್ಷೇತ್ರವು ಹುಳಿತಿದೆ; ಅದನ್ನು ಶುದ್ಧಗೊಳಿಸುವ ಕಾರ್ಯದಲ್ಲಿ ಸರಕಾರದ ನೆರವು ಇದೆಯೆ? ನಮಗೆ ಸಹಾಯ ಬೇಕಾಗುವದು ಶಿಕ್ಷಣಕ್ಕೆ. ಅದೂ ದ್ರವ್ಯರೂಪದಿಂದ. ನಮ್ಮ ಮಕ್ಕಳಿಗೆ ನಾವೇ ನಿಜವಾದ ಧಾರ್ಮಿಕ ಶಿಕ್ಷಣ ಕೊಡಬೇಕು. ಕೊಡುವಾ. ಇಂಗ್ಲಿಷರು ನಮ್ಮ ಧರ್ಮದಲ್ಲಿ ಕೈಹಾಕಕೂಡದು. ಏಕೆಂದರೆ ಅವರು ನಮ್ಮ ಧರ್ಮವನ್ನು ಅರಿಯರು. 'A Cow has no soul' ಎಂಬಂತೆ ಅವರ ವಿಚಾರವಿರುತ್ತದೆ. ನಮ್ಮ ಮಕ್ಕಳಿಗೆ ಹೊಟ್ಟೆತುಂಬ ಅನ್ನವಿಲ್ಲ. ಶಿಕ್ಷಣದ ಅನವಸ್ಥೆಯಂತೂ ಹೇಳಲಿಕ್ಕೇ ಬೇಡ. ಅಂದಮೇಲೆ ನಮ್ಮ ದೇವರ ದೇವತ್ವವು ಉಳಿಯಿತೆಲ್ಲಿ? ಸಾಮಾಜಿಕ ಸುಧಾರಣೆ ಮಾಡಿರಿ ಎನ್ನುವಿರಿ! ಸುಮ್ಮನೆ ಬಾಯಿಂದ ಉಚ್ಚರಿಸಿದರೆ ಆಗುವದೇ? ನಾವು ಆ ಉದ್ಯೋಗದಲ್ಲಿ ತೊಡಗಬೇಕು, ಅಂದರೆ ಸಿದ್ಧಿಸುವದು. ನಾವು ಯಾವುದೇ ಕೆಲಸಕ್ಕೆ ಕೈಹಾಕಿದರೂ ಸರಕಾರವು ಅಡ್ಡಬರುವದು ಎಂಬುದು ಆಗ ತಿಳಿಯುವದು. ಆಗ ಪ್ರತಿಯೊಂದು ಕ್ಷೇತ್ರದಲ್ಲಿ ಹೋರಾಡಬೇಕಾಗುವದು.

ಆಗರಕರ:— ನಾವು ನಮ್ಮ ಮನೆಯ ಸಲುವಾಗಿಯೂ ದೇವರ ಸಲುವಾಗಿಯೂ ಹೋರಾಡೋಣ. ಆದರೆ ಟಿಳಕರೆ! ನಾವು ಸರಕಾರದಂತೆಯೇ ನಮ್ಮ ಅಜ್ಞಾನದ ಸಂಗಡಲೂ ಹೋರಾಡಬೇಕಾಗುವದು. ಅದಕ್ಕೆ ನಿಮ್ಮ ಸಿದ್ಧತೆಯೇ?

ಟಿಳಕ:— ಇದು ಹೃದಯಕ್ಕಾದ ಘಾಯವು. ಇಂತಹದರಲ್ಲಿ ನಾನು ಸವಿಮಾತನಾಡಿ ಇಲ್ಲವೆ ಮೂಕಸೇವೆಯಿಂದ ಘಾಯವನ್ನು ಗುಣಪಡಿಸುವೆ. ಸರಕಾರದೊಡನೆ ಹೋರಾಟವು ಹೊರಗಿನದು. ಅಲ್ಲಿ ಬಹು ಹೊಲಸು ತುಂಬಿದೆ. ಅದನ್ನು ತೆಗೆದೊಗೆಯಲು ಹೋರಾಡುವೆ. ಹೊಲಸು ಪದಾರ್ಥಗಳನ್ನು ತೆಗೆದುಕೊಂಡು ತಿಕ್ಕಿದರೇ ಪಾತ್ರೆಗಳು ಹೆಚ್ಚು ಸ್ವಚ್ಛವಾಗುತ್ತವೆ.

ಆಗರಕರ:— ಮತಭೇದವಾಗುವದು ಇಲ್ಲಿಯೇ! ಸಾಮಾಜಿಕ ಘಾಯವು ಹೃದಯಕ್ಕೆಂದು ತಿಳಿದು ನೂರಾರು ವರ್ಷಗಳಾದವು. ಏನೂ

ಉಪಾಯ ಕೈಕೊಂಡಿಲ್ಲ. ಇಂದು ಹೃದಯವು ನಿಲ್ಲುವ ಸ್ಥಿತಿಗೆ ಬಂದಿದೆ. ಈಗ ಮಲಾಮು ಹಚ್ಚುವಿರಾ? ಬೇಗ ಹಚ್ಚಿರಿ! ಬೇಕಾದಷ್ಟು ಹಚ್ಚಿರಿ! ಹೃದಯಕ್ರಿಯೆ ನಿಂತು, ಭಾರತವು ಮೃತವಾದ ಮೇಲೆ ನಿಮ್ಮ ಹೊಲಸು ಮಲಾಮಿನಿಂದ ಪ್ರಯೋಜನವೇನು? ನೀವು ಸಮಾಜಕ್ಕೆ ಹೃದಯದ ಉಪಮೆಯನ್ನು ಕೊಟ್ಟದ್ದು ಒಳ್ಳೇಯದೇ ಆಯಿತು. ಆದರ ಘಾಯವನ್ನು ಮಾಯಿಸಿರಿ. ಹೃದಯದ ರಕ್ಷಣೆಗಾಗಿಯೇ ಹೊರಗಿನ ಸ್ವಚ್ಛತೆ ಇರಲಿ.

ಟಿಳಕ:— ಈ ಘಾಯವು ಶಸ್ತ್ರದಿಂದ ಆದುದಲ್ಲ. ಹಸಿವೆಯಿಂದ ಆಗರಕರರೇ! ಅನ್ನವಿಲ್ಲದ್ದರಿಂದ ಹೃದಯವು ದುರ್ಬಲವಾಗಿದೆ. ಇಲ್ಲಿ ಮಲಾಮಿನ ಉಪಯೋಗವೇನು? ಹೊರಗಿನ ಅನ್ನವು ಹೊಟ್ಟೆಯೊಳಗೆ ಹೋಗಲಿಕ್ಕೆಬೇಕು. ಆದರೆ ಅನ್ನ ನಮ್ಮ ವಶದಲ್ಲಿ ಇಲ್ಲ ಆಗರಕರರೆ! ಇಂದಿನ ಪರಿಸ್ಥಿತಿಯನ್ನು ಸುಧಾರಿಸಲು ಸರ್ವಾಂಗೀಣವಾದ ಶಿಕ್ಷಣವನ್ನು ಕೈಕೊಳ್ಳುವ ಮಧ್ಯಮಾರ್ಗವನ್ನು ನಾನು ಸೂಚಿಸುವೆ. ಇದಕ್ಕೆ ನಿಮ್ಮ ಒಪ್ಪಿಗೆಯಲ್ಲವೆ? ಶಿಕ್ಷಣದಂಥ ಪವಿತ್ರ ಕಾರ್ಯಕ್ಷೇತ್ರವು (Common platform) ನಮ್ಮಿಬ್ಬರಿಗೂ ಸಾಮಾನ್ಯವಾಗಿದೆಯಲ್ಲವೇ?

ಆಗರಕರ:— ಅಹುದು. ಇಬ್ಬರೂ ಕೂಡಿ ಕಾರ್ಯಮಾಡುವ ಕ್ಷೇತ್ರವು (Common platform) ಇದು ಖಂಡಿತ. ಟಿಳಕರೇ! ಒಳ್ಳೇ ಸೂಚನೆ ಮಾಡಿದಿರಿ. ನಮ್ಮ ದೇಶದ ಶಿಕ್ಷಣವನ್ನು ನಾವೇ ರೂಪಿಸಬೇಕು, ನಾವೇ ಕೈಕೊಳ್ಳಬೇಕು ಎಂಬುದು ನಿಶ್ಚಿತವಾದಂತಾಯಿತು. ನಮ್ಮಲ್ಲಿ ಏಕವಾಕ್ಯತೆ ಆಯಿತಲ್ಲವೇ?

ಟಿಳಕ:— ಆಯಿತು. ನಿಶ್ಚಯವಾಗಿ ಆಯಿತು.

ಉಪಾಸನಿ:— ನಮ್ಮಲ್ಲಿ ಮತ್ತೈಕ್ಯವಾದದ್ದಕ್ಕಾಗಿ ನಿಮ್ಮಿಬ್ಬರನ್ನೂ ಅಭಿನಂದಿಸುವೆ.

---

## ಮೂರನೆಯ ಘಟ್ಟ

# ಸಾರ್ವಜನಿಕ ಜೀವನದ ಮೊದಲಿನ ಹತ್ತು ವರ್ಷಗಳು

### ನ್ಯೂ ಇಂಗ್ಲಿಷ ಸ್ಕೂಲಿನ ಸ್ಥಾಪನೆ

ಟಿಳಕರ ಸ್ವಾತಂತ್ರ್ಯಪ್ರೇಮವೂ ಮಾತೃಭೂಮಿಯ ಕರೆಯೂ ಅವರನ್ನು ತಪಶ್ಚರ್ಯಕ್ಕೆ ಸಿದ್ಧಗೊಳಿಸಿದವು. ಎಲ್. ಎಲ್. ಬಿ. ಯಲ್ಲಿ ಇರುವಾಗಲೇ ಟಿಳಕರೂ ಅವರ ಪರಮಮಿತ್ರರಾದ ಆಗರಕರರೂ ಎಂತಹ ಪ್ರಸಂಗ ಬಂದರೂ ಸರಕಾರೀ ನವಕರಿಯನ್ನು ಮಾಡಲಿಕ್ಕಿಲ್ಲವೆಂದೂ ದೇಶಸೇವೆಗಾಗಿಯೇ ತಮ್ಮ ಜೀವನವು ಮುಡುಪಾಗಿದೆಯೆಂದೂ ಪ್ರತಿಜ್ಞೆಗೈದರು. ಇವರ ಈ ಪ್ರತಿಜ್ಞೆಯು ನೂರಾರು ತರುಣರಿಗೆ ದಿವ್ಯಸ್ಫೂರ್ತಿಯಾಗಿ ಪರಿಣಮಿಸಿತು. ಭಾರತದಲ್ಲಿಯೇ ನವಮನ್ವಂತರವನ್ನುಂಟು ಮಾಡಿತು. ಪದವೀಧರರಿಗಾಗಿ ದೊಡ್ಡ ದೊಡ್ಡ ಅಧಿಕಾರದ ಸ್ಥಳಗಳು ಕಾದಿರುವಾಗ, ಬುದ್ಧಿವಂತರೂ ಕರ್ತೃತ್ವಶಾಲಿಗಳೂ ಪ್ರಥಮ ಶ್ರೇಣಿಯ ಪದವೀಧರರೂ ಆದ ಈ ತರುಣರ ತ್ಯಾಗದ ಪ್ರತಿಜ್ಞೆಯು ಆ ಕಾಲದ ಹಿರಿಯರನ್ನು ಚಕಿತಗೊಳಿಸಿದ್ದಲ್ಲಿ ಸೋಜಿಗವಲ್ಲ.

ಟಿಳಕರ ಸಾಮಾಜಿಕ ಹಾಗೂ ರಾಜಕೀಯ ವಿಚಾರಗಳೇನಿದ್ದವೆಂಬುದನ್ನು ಹಿಂದೆ ಹೇಳಿದ್ದೇವೆ. ಸ್ವದೇಶಾಭಿಮಾನದಿಂದ ಉತ್ತೇಜಿತರಾದ ಈ ತರುಣರು ರಾಷ್ಟ್ರದ ಬಂಧವಿಮೋಚನೆಯೇ ತಮ್ಮ ಧ್ಯೇಯವೆಂದೂ ಜನಜಾಗೃತಿಯೇ ತಮ್ಮ ಸಾಧನವೆಂದೂ ನಿರ್ಣಯಿಸಿದ್ದರು. ಸುಶಿಕ್ಷಿತ ತರುಣರು ತಂಡತಂಡವಾಗಿ ಸಮಾಜಸೇವೆಯಲ್ಲಿ ತೊಡಗಬೇಕೆಂದು ಅವರು ಬಯಸುತ್ತಿದ್ದರು. ಇದು ಸಾಧಿಸಬೇಕಿದ್ದರೆ ಶಿಕ್ಷಣ ಸಂಸ್ಥೆಯಿಂದಲೇ ತಮ್ಮ ಕಾರ್ಯಾರಂಭವೆಂದು ಅವರು ಸಂಕಲ್ಪಿಸಿದರು.

ಈ ಸಮಯದಲ್ಲಿ ಸುಪ್ರಸಿದ್ಧ ರಾಷ್ಟ್ರೀಯ ಲೇಖಕರೆಂದು ಹೆಸರಾದ ವಿಷ್ಣುಶಾಸ್ತ್ರಿ ಚಿಪಳೂಣಕರರು ಸ್ವತಂತ್ರ ಶಿಕ್ಷಣ ಸಂಸ್ಥೆಗಳ ಆವಶ್ಯಕತೆಯನ್ನೂ ಸ್ವಾಭಿಮಾನಿ ಶಿಕ್ಷಕರ ಮಹತ್ವವನ್ನೂ ತಮ್ಮ ನಿಬಂಧಮಾಲೆಯಲ್ಲಿ

ಚಿತ್ರಿಸುತ್ತಿದ್ದರು. 'ಶಿಕ್ಷಕರ ಕಾರ್ಯ'ವೆಂಬ ವಿಷಯವನ್ನು ಬರೆಯುತ್ತ "ವಿದ್ಯಾಪ್ರಸಾರವು ಬಹಳವಾಗಿದೆ, ಅಭಿರುಚಿಯೂ ಬೆಳೆದಿದೆ ಎಂದು ಮೇಲೆ ಮೇಲೆ ನೋಡುವವರಿಗೆ ಕಾಣುತ್ತಿದೆ. ಆದರೆ ಇದು ಭ್ರಮವು. ಕೇವಲ ಸರಕಾರಿ ನವಕರಿಯ ಆಶೆಯಿಂದ ನಮ್ಮ ಜನ ಕಲಿಯುತ್ತಾರೆ. ಅವರಿಗೆ ವಿದ್ಯೆಯ ಅಭಿರುಚಿಯೇ ಇರುವದಿಲ್ಲ. ವಿಶ್ವವಿದ್ಯಾಲಯದ ವಸ್ತ್ರವನ್ನು ತೆಗೆದಿಡುವಾಗ ಅದರೊಡನೆಯೇ ಸ್ವದೇಶಾಭಿಮಾನ, ವಿದ್ಯಾಭಿರುಚಿ, ದುರ್ಜನರ ತಿರಸ್ಕಾರಗಳನ್ನೂ ಕಳಚಿ ಒಗೆಯುತ್ತಾರೆ. ಸ್ವತಃ ಶಿಕ್ಷಕರಿಗೇ ತಮ್ಮ ಕಾರ್ಯದ ಮಹತ್ವವು ತಿಳಿದಿರುವದಿಲ್ಲ. ಉಳಿದವರ ಪಾಡೇನು? ಉಪಾಯವಿಲ್ಲದೆ ಉಪಜೀವನಕ್ಕಾಗಿ ಶಿಕ್ಷಕರ ಕೆಲಸವೆಂದು ಇವರ ಕಲ್ಪನೆ. ಪೂರ್ವಕಾಲದಲ್ಲಿ ಗುರುಗಳ ಬಗ್ಗೆ ಎಷ್ಟು ಭಕ್ತಿಯಿದ್ದಿತು? ಈಗ ಅದು ಮಾಯವಾಗಿದೆ. ಗುರು ಶಿಷ್ಯರಲ್ಲಿ ಕೇವಲ ಸ್ವಾರ್ಥದ ಸಂಬಂಧ ಉಂಟಾಗಿದೆ. ಕಲಿಸುವ ವಿಷಯವು ಕೂಡ ನಿರ್ಬಂಧಿಸಲ್ಪಟ್ಟಿದೆ. ಧರ್ಮ, ನೀತಿಗಳ ಗಾಳಿಯು ಕೂಡ ಶಿಕ್ಷಣಕ್ಕೆ ತಗಲದಂತೆ ಸರಕಾರದ ವ್ಯವಸ್ಥೆ ಇದೆ. ಈ ಸ್ಥಿತಿಯು ಬದಲಾಗಿ, ನಿಜವಾದ ಶಿಕ್ಷಣವು ಪ್ರಾರಂಭವಾದರೆ, ಶಿಕ್ಷಕರು ವಿದ್ಯಾರ್ಥಿಗಳ ಮನಸ್ಸಿನಲ್ಲಿ ವಿದ್ಯೆಯ ಮಹತ್ವವನ್ನು ತುಂಬಿ, ಅದರ ಅಭ್ಯಾಸದಿಂದ ಉಂಟಾಗುವ ಅನಿರ್ವಚನೀಯ ಸುಖದ ಸವಿಯನ್ನು ಅವರಿಗೆ ಹಚ್ಚಿ ಉದ್ದೀಪನಗೊಳಿಸಿದರೆ, ಕೇಳುವದೇನು? ಶಿಕ್ಷಣವು ದುರ್ಬಲವಾಗದೆ ಥಳಥಳಿಸುವ ಹದನವಾದ ಉಕ್ಕಿನ ಕತ್ತಿಯ ಮೊನೆಯಂತಾಗಿ, ನೂರಾರು ವರ್ಷಗಳಿಂದ ಮನೆಮಾಡಿ ನಮ್ಮ ದೇಶವನ್ನು ಹಾಳು ಮಾಡಿದ ಅರಿಷ್ಟರೂಪಿ ರಾಕ್ಷಸನನ್ನು ಸಂಹರಿಸಲು ಸಮರ್ಥವಾದೀತು! ಆಗ ಮಾತ್ರ ಸುಶಿಕ್ಷಿತರ ಹಾಗೂ ಅವರನ್ನು ನಿರ್ಮಿಸಿದ ಶಿಕ್ಷಕರ ಕೀರ್ತಿಯು ಜಗತ್ತಿನ ತುಂಬ ಹಬ್ಬೀತು" ಎಂದು ಸಾರಿದರು. ಪೆರಿಕ್ಲೀಸ, ಅಲಕೀಬಾಯಿಡೀಜ, ಶಿಕಂದರ ಮೊದಲಾದವರನ್ನು ದೇಶಕಾರ್ಯಕ್ಷಮರನ್ನಾಗಿ ಮಾಡಿದವರು ಅವರ ಶಿಕ್ಷಕರೇ ಎಂಬುದನ್ನು ಶಾಸ್ತ್ರಿಗಳು ಈ ಲೇಖದಲ್ಲಿ ಬುದ್ಧಿಪೂರ್ವಕವಾಗಿ ಉಲ್ಲೇಖಿಸಿ, ಭಾರತದ ಭಾವೀ ಜನಾಂಗವು ಅವರಂತೆಯೇ ದೇಶಕಾರ್ಯಕ್ಷಮವಾಗಬೇಕಿದ್ದರೆ, ಅಂತಹ ಉತ್ತಮ ಶಿಕ್ಷಕರೂ ಸ್ವತಂತ್ರ ಶಿಕ್ಷಣ ಸಂಸ್ಥೆಗಳೂ ಅವಶ್ಯವೆಂದು ಪ್ರತಿಪಾದಿಸಿದ್ದರು. ಇದರ ಪರಿಣಾಮವು ತರುಣರ ಮೇಲೆ ಆಗದೆ ಇರಲಿಲ್ಲ.

ಚಿಪಳೂಣಕರರು ಸ್ವಾತಂತ್ರ್ಯಪ್ರಿಯರು. ಸ್ವದೇಶ, ಸ್ವಸಂಸ್ಕೃತಿಗಳ ಕಟ್ಟಾಭಿಮಾನಿಗಳು. ತರುಣರು ಅವರನ್ನು ರಾಷ್ಟ್ರೀಯ ಗುರುಗಳೆಂದು ತಿಳಿಯುತ್ತಿದ್ದರು. ಅವರು ಸರಕಾರಿ ನವಕರಿಗೆ ಶರಣು ಹೊಡೆದು, ಸ್ವತಂತ್ರ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸುವರೆಂಬ ಸುದ್ದಿಯು ಹಬ್ಬಿತು. 'ದಿ ನ್ಯೂ ಪೂನಾ ನೇಟಿವ್ಹ ಇನ್ಸ್ಟಿಟ್ಯೂಶನ್' ಸಂಸ್ಥೆಯ ಚಾಲಕರಾದ ಭಾವೆ ಯವರು ತಮ್ಮ ಸಂಸ್ಥೆಯನ್ನು ವಹಿಸಿಕೊಳ್ಳಲೂ ಸೂಚಿಸಿದ್ದರು. ಆದರೆ ಈಶಸಂಕಲ್ಪವು ಬೇರೆಯೇ ಇದ್ದಿತು. ಈ ವರ್ತಮಾನ ತಿಳಿದೊಡನೆ ಟಿಳಕ ಹಾಗೂ ಆಗರಕರರು (೧೮೭೯ ಸಪ್ಟಂಬರ) ಒಂದು ರಾತ್ರಿ ಬಂದು, ಶಾಸ್ತ್ರಿ ಗಳನ್ನು ಅವರ ಮನೆಯಲ್ಲಿ ಕಂಡರು. ನೀವು ಶಾಲೆಯನ್ನು ಪ್ರಾರಂಭಿಸು ತ್ತಿದ್ದರೆ, ನಾವೂ ನಿಮ್ಮ ಸಹಕಾರಿಗಳಾಗಿ ಬರಲು ಸಿದ್ಧರಿದ್ದೇವೆ, ಎಂಬ ತಮ್ಮ ಶುಭಸಂಕಲ್ಪವನ್ನು ತಿಳಿಸಿದರು. ಆಗ ಶಾಸ್ತ್ರಿಗಳಿಗೆ ಅತ್ಯಾನಂದ ವಾಯಿತು. ಹೊಸ ಶಾಲೆ, ಹೊಸ ಶಿಕ್ಷಕರು, ಹೊಸ ಪ್ರಯೋಗವೆಂದು ಹಿಗ್ಗಿದರು. ಹೀಗೆ ಅಕಲ್ಪಿತವಾಗಿ ತಮ್ಮ ಸಂಕಲ್ಪ ಸಿದ್ಧಿಸುವ ಯೋಗ ಬಂದುದನ್ನು ಕಂಡು ಶಾಸ್ತ್ರಿಗಳು ತುಂಬಿದ ಹೃದಯದವರಾಗಿ, ತಮ್ಮ ಅಣ್ಣಂದಿರಿಗೆ ಕೆಳಗಿನಂತೆ ಪತ್ರ ಬರೆದರು.

"ಪಾರತಂತ್ರ್ಯದಿಂದ ಮುಕ್ತನಾಗಿ ಸ್ವಾತಂತ್ರ್ಯದ ಸುಖವನ್ನು ಅನು ಭವಿಸುವ ಸಂಸ್ಮರಣೀಯವಾದ ೧ನೇ ಅಕ್ಟೋಬರ ಸಮೀಪಿಸುತ್ತಿದೆ. ಟಿಳಕ, ಆಗರಕರ, ಭಾಗವತ, ಕರಂದೀಕರರು ತಾವಾಗಿಯೇ ಬಂದು ಸ್ವಸಂತೋಷದಿಂದ ನನ್ನ ಕಾರ್ಯದಲ್ಲಿ ಸಹಕಾರಿಗಳಾಗುತ್ತೇವೆಂದು ಹೇಳಿದ್ದಾರೆ. ೧೮೮೦ನೇ ಜನೆವರಿ ೧ನೇ ತಾರೀಖಿನ ದಿವಸ ನಾವು ನಮ್ಮ ಧ್ವಜವನ್ನು ಏರಿಸುವ ಸಂಕಲ್ಪವನ್ನು ಮಾಡಿದ್ದೇವೆ. ಇಂತಹ ತೋಫುಗಳ ಮುಂದೆ ಸರಕಾರಿ ಹೈಸ್ಕೂಲು ಎಷ್ಟುದಿನ ತಡೆದೀತು?"

ಸಂಕಲ್ಪದಂತೆ ೧೮೮೦ನೇ ೧ನೇ ಜನೆವರಿಯ ದಿವಸ "ನ್ಯೂ ಇಂಗ್ಲಿಷ ಸ್ಕೂಲ" ಎಂಬ ಶಾಲೆಯು ಪ್ರಾರಂಭವಾಯಿತು. ಆಗರಕರರು ಎಂ. ಎ. ಪರೀಕ್ಷೆಯಲ್ಲಿ ನಾಪಾಸಾದುದರಿಂದ ಅವರು ತಮ್ಮ ಅಭ್ಯಾಸವನ್ನು ಅಷ್ಟಕ್ಕೆ ನಿಲ್ಲಿಸದೆ ಪೂರ್ಣಮಾಡಿಕೊಂಡು ಬರಬೇಕೆಂದು ಈ ತ್ರಿಮೂರ್ತಿಗಳು ನಿಶ್ಚ ಯಿಸಿದರು. ಕರಂದೀಕರ– ಭಾಗವತರಿಗೆ ಇಂತಹ ಸಾಹಸಮಾಡಲು ಧೈರ್ಯ

ಸಾಲಲಿಲ್ಲ. ಅವರು ಹಿಂದೆ ಸರಿದರು. ಹೀಗಾಗಿ ಟಿಳಕ ಹಾಗೂ ಶಾಸ್ತ್ರಿಗಳ ಮೇಲೆಯೇ ಸಂಸ್ಥೆಯ ಭಾರ ಬಿದ್ದಿತು. ಇವರ ಸಹಕಾರಿಗಳಾಗಿ ಶಿಕ್ಷಕರೆಂದು ಮಾಧವರಾವ ನಾಮಜೋಸಿ, ವಾಸುದೇವಶಾಸ್ತ್ರಿ ಖರೆ, ನಾಂದರ್ಗಿಕರಶಾಸ್ತ್ರಿ, ಹರಿ ಕೃಷ್ಣ ದಾಮಲೆ, ಕೃಷ್ಣರಾವ ಮಾಂಡೆ ಮತ್ತು ಮುಳೆ ಮೊದಲಾದ ತರುಣರು ಬಂದು ಸೇರಿದರು ಇವರೆಲ್ಲರೂ ಸ್ವದೇಶಾಭಿಮಾನಿಗಳೂ ಒಂದಿಲ್ಲೊಂದು ಸಾರ್ವಜನಿಕ ಕ್ಷೇತ್ರದಲ್ಲಿದ್ದವರೂ ಇದ್ದುದರಿಂದ ಜನರ ದೃಷ್ಟಿಯು ಇವರ ಕಡೆಗೆ ಬೀಳುವದು ಸ್ವಾಭಾವಿಕವಿದ್ದಿತು.

ಶಾಲೆಯ ಪ್ರಾರಂಭದ ದಿವಸ ೧೯ ವಿದ್ಯಾರ್ಥಿಗಳು ಮಾತ್ರ ಉಪಸ್ಥಿತರಿದ್ದರೂ ೧೫೦ ಜನ ವಿದ್ಯಾರ್ಥಿಗಳು ನಾಮುಂದೆ, ನೀ ಮುಂದೆ ಎಂದು ಹೆಸರು ಹಚ್ಚಲು ಧಾವಿಸಿದರು. ಶಾಸ್ತ್ರಿಗಳೂ ಟಿಳಕರೂ ಉಳಿದ ಶಿಕ್ಷಕರೂ ಅತ್ಯಂತ ಉತ್ಸಾಹದಿಂದ ಕಾರ್ಯರಂಗಕ್ಕೆ ಇಳಿದರು. ವಿದ್ಯಾರ್ಥಿಗಳ ಸಂಖ್ಯೆಯು ದಿನದಿನಕ್ಕೆ ಬೆಳೆಯಹತ್ತಿತು. ಮೂರು ತಿಂಗಳ ಒಳಗಾಗಿಯೇ ಅದು ೫೦೦ಕ್ಕೆ ಮುಟ್ಟಿತು. ಸರಕಾರೀ ಶಾಲೆಗೆ ಮುಂದೆ ವಿದ್ಯಾರ್ಥಿಗಳು ದೊರೆಯುವ ಲಕ್ಷಣಗಳು ಕಾಣದಾದವು. ಮೊದಮೊದಲು "ಇಂತಹ ವಿಕ್ಷಿಪ್ತರಾದ ಚೈನಿ ಹುಡುಗರು ಏನು ಪರಾಕ್ರಮ ಮಾಡಬಲ್ಲರು? " ಎಂದು ಚೇಷ್ಟೆಮಾಡುತ್ತಿದ್ದ ಸರಕಾರಿ ಶಾಲೆಯ ಹೆಡ್ಮಾಸ್ತರ್ ಕುಂಠೆಯವರು ಇದರಿಂದ ತತ್ತರಿಸಿದರು. ಅವರ ಗರ್ವವೆಲ್ಲ ಝರ್‍ರನೆ ಇಳಿಯಿತು. ಪ್ರಿ. ವ್ಯಾಕಿಕನರು "ಸರಕಾರದ ಯಾವ ಸಹಾಯವನ್ನೂ ಪಡೆಯದೆ, ಆ ಆಶೆಯನ್ನೂ ಮಾಡದೆ, ಅತ್ಯಂತ ಉತ್ಸಾಹದಿಂದ ಉಚ್ಚ ಶಿಕ್ಷಣದ ಕಾರ್ಯವನ್ನು ಮುಂದುವರಿಸುತ್ತಿರುವ ಪುಣೆಯ ಈ ಸಂಸ್ಥೆಯನ್ನು ನೋಡಿದರೆ, ಪ್ರತಿವರ್ಷ ೧೦-೧೨ ಸಾವಿರ ರೂಪಾಯಿ ವೆಚ್ಚಮಾಡಿ ಸರಕಾರಿ ಶಾಲೆಯನ್ನು ಏಕೆ ನಡೆಯಿಸಬೇಕೆಂಬ ಪ್ರಶ್ನೆಯು ಉದ್ಭವವಾಗದಿರಲಾರದು," ಎಂದು ಉದ್ಗಾರ ತೆಗೆದರು.

ಸರಕಾರಿ ಶಾಲಾಧಿಕಾರಿಗಳಿಂದ ನಡೆದ ವಿರುದ್ಧ ಪ್ರಯತ್ನ, ಜನತೆಯ ಅನಾಸ್ಥೆ, ಹಣದ ಅಭಾವ ಮೊದಲಾದ ತೊಂದರೆಗಳನ್ನೆಲ್ಲ ಎದುರಿಸಿ, ಈ ಸಂಸ್ಥೆಯು ತಲೆಯೆತ್ತಿ ನಿಂತಿತು. ಆದರೆ ಮೊದಮೊದಲು ಊರಲ್ಲಿಯ ಕೆಲ ಸ್ವಯಂಪ್ರತಿಷ್ಠಿತ ಜನರಿಂದ 'ಹುಚ್ಚರು, ತಲೆ ತಿರುಕರು, ಭ್ರಾಂತಿಷ್ಟರು ಶೇಖ ಮುಹಮ್ಮದೀಯರು' ಎಂದು ಶಾಸ್ತ್ರಿಗಳೂ ಅವರ ಸಹಕಾರಿಗಳೂ

ಜೈಗಳನ್ನು ತಿನ್ನಬೇಕಾಯಿತು. ಆಕಾಲದ ವಿಶ್ರಾಮಬಾಗ ಹೈಸ್ಕೂಲಿನ ಹೆಡ್ಮಾಸ್ತರರಾದ ಶ್ರೀ ಮೋಡಕರು 'ಇಲ್ಲಿಯ ಕೆಲವು ಉಡಾಳ ಹುಚ್ಚು ಹುಡುಗರು ಒಂದು ಹೊಸ ಶಾಲೆಯನ್ನು ತೆರೆದುದರಿಂದ ನಮ್ಮ ಶಾಲೆಯಲ್ಲಿ ತಾತ್ಪೂರ್ತಿಕವಾಗಿ ಹುಡುಗರ ಸಂಖ್ಯೆಯು ಕಡಿಮೆಯಾಗಿದೆ. ಇಂತಹ ಸಂಸ್ಥೆಗಳು ನಾಯಿಕೊಡೆಯಂತೆ ಕ್ಷಣಿಕವಿರುವದರಿಂದ ಇದಕ್ಕೆ ಬೆದರುವ ಕಾರಣವಿಲ್ಲವೆಂದು ಸರಕಾರಕ್ಕೆ ಕಳಿಸುವ ವರದಿಯಲ್ಲಿ ಉಲ್ಲೇಖಿಸಿದ್ದರು.

ಮೇತಿಂಗಳ ಬಿಡುವಿನ ಕಾಲದಲ್ಲಿ ಶಾಸ್ತ್ರಿಗಳು ತಮ್ಮ ಶಾಲೆಯ ವರದಿಯನ್ನು ಓದಿದರು. ಅದರಲ್ಲಿ ಅವರು ವಿರೋಧಿಗಳ ಸಮಾಚಾರವನ್ನು ಚನ್ನಾಗಿಯೇ ತೆಗೆದುಕೊಂಡಿದ್ದರು. ಮೃತವಾದ ಇಲ್ಲವೆ ಮೃತಪ್ರಾಯವಾದ ಶಿಕ್ಷಣ ಸಂಸ್ಥೆಗಳು ನಡೆಯಿಸಿದ ಪ್ರಯತ್ನಗಳನ್ನು ಖಂಡಿಸಿದ್ದರು. ಕ್ಷುದ್ರ ಜನರ ಕ್ಷುದ್ರಕಾರಸ್ಥಾನಗಳಿಗೂ ನಿರಾಶಾಗ್ರಸ್ತಮತ್ಸರಿಗಳ ದುಷ್ಟ ಪ್ರಯತ್ನಕ್ಕೂ ಬೆದರಬೇಕಾಗಿಲ್ಲವೆಂದು ಸ್ವಜನರನ್ನು ಎಚ್ಚರಿಸಿದ್ದರು. ತಮ್ಮ ಸಂಸ್ಥೆಯ ಧ್ಯೇಯ, ಧೋರಣೆಗಳನ್ನು ವಿವರಿಸಿದ್ದರು ಆದರ್ಶ ಶಿಕ್ಷಕರನ್ನು ಚಿತ್ರಿಸಿದ್ದರು. ವಿದ್ಯಾರ್ಥಿಗಳ ಕರ್ತವ್ಯವನ್ನು ದಿಗ್ದರ್ಶನಮಾಡಿದ್ದರು. ರಾಷ್ಟ್ರೀಯ ಶಿಕ್ಷಣವೆಂದು ಉಚ್ಚರಿಸದಿದ್ದರೂ ಅದರ ರೂಪ ರೇಷೆಗಳನ್ನೆಲ್ಲ ವಿವರಿಸಿದ್ದರು. ಕೊನೆಗೆ ಸಂಸ್ಥೆಯು ಅಲ್ಪಾವಧಿಯಲ್ಲಿ ಪಡೆದ ಯಶಸ್ಸಿನ ಬಗ್ಗೆ ಹೆಮ್ಮೆಯನ್ನು ವ್ಯಕ್ತಪಡಿಸಿದ್ದರು. ಈ ವರದಿಯು ಮಹಾರಾಷ್ಟ್ರದ ಮುಖಂಡರ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸಿತು.

ಸಂಸ್ಥೆಯು ಬಿದಿಗೆಯ ಚಂದ್ರನಂತೆ ಬೆಳೆಯುತ್ತ ನಡೆಯಿತು. ವಿದ್ಯಾರ್ಥಿಗಳ ಸಂಖ್ಯೆಯು ವರ್ಷವರ್ಷಕ್ಕೆ ಹೆಚ್ಚಾಗಹತ್ತಿತು. ೧೮೮೦ ರಲ್ಲಿ ೧೫೦ರಿಂದ ಪ್ರಾರಂಭವಾದ ವಿದ್ಯಾರ್ಥಿಗಳ ಸಂಖ್ಯೆಯು ೧೮೮೪ ರಲ್ಲಿ ೧೧೦೯ ಕ್ಕೆ ಮುಟ್ಟಿತು. ಇದೇ ಪ್ರಮಾಣದಲ್ಲಿ ಪದವೀಧರರಾದ ಶಿಕ್ಷಕರ ಸಂಖ್ಯೆಯೂ ಏರಿತು. ವಿಶ್ವವಿದ್ಯಾಲಯದ ಪ್ರವೇಶ ಪರೀಕ್ಷೆಯಲ್ಲಿ ಯಶ ಪಡೆಯುವ ವಿದ್ಯಾರ್ಥಿಗಳ ಸಂಖ್ಯೆಯೂ ದೊಡ್ಡದಾಯಿತು. ಮ್ಯಾಟ್ರಿಕ್ ಪರೀಕ್ಷೆಗೆ ಸಂಸ್ಥೆಯಿಂದ ಕಳಿಸಿದ ವಿದ್ಯಾರ್ಥಿಗಳಲ್ಲಿ ನೂರಕ್ಕೆ ೭೦-೭೫ ರಂತೆ ಉತ್ತೀರ್ಣರಾಗಹತ್ತಿದರು; ೧೮೮೪ ರಲ್ಲಿ ಈ ಪ್ರಮಾಣವು ೧೦೦ಕ್ಕೆ ೮೯ಕ್ಕೆ ಏರಿತು. ಈ ಪರಿಣಾಮವನ್ನು ಕಂಡು ಗವ್ಹರ್ನರರ ಆಪ್ತ ಕಾರ್ಯದರ್ಶಿಗಳು ಆನಂದ

ದಿಂದ ಅಭಿನಂದನ ಪತ್ರವನ್ನು ಈ ಸಂಸ್ಥೆಗೆ ಬರೆದರು. ಹೀಗೆ ಶಾಲೆಯ ಕೀರ್ತಿಯು ಪುಣೆಯಲ್ಲಿಯೂ ಹೊರಗೂ ಹಬ್ಬಿತು. ಶ್ರೇಷ್ಠತರಗತಿಯ ಶಿಕ್ಷಣ ದೊರೆಯುವದೆಂದು ಪರಊರುಗಳಿಂದಲೂ ವಿದ್ಯಾರ್ಥಿಗಳು ಬಂದು ಸೇರ ಹತ್ತಿದರು. ಬುದ್ಧಿವಂತರಾದ ಹುಡುಗರು, ವಾಮನರಾವ ಆಪ್ಟೆಯವರಂಥ ಪ್ರಯತ್ನಶೀಲ ಶಿಕ್ಷಕರು ಈ ಮಧುರ ಸಂಯೋಗದ ಫಲವಾಗಿ ವಿಶ್ವವಿದ್ಯಾಲಯದ ಶಂಕರ ಶೇಖ ಸ್ಕಾಲರಸಿಪ್ ಬಹುಮಾನದ ಗುತ್ತಿಗೆಯನ್ನು ಮೊದಲಿನ ಐದುವರ್ಷ ನ್ಯೂ ಇಂಗ್ಲಿಷ ಸ್ಕೂಲೇ ಹಿಡಿದಂತಾಗಿತ್ತು.

ವಿದ್ಯಾರ್ಥಿಗಳ ಸಂಖ್ಯೆಯು ಮಿತಿಮೀರಿ ಬೆಳೆದುದರಿಂದ ಶಾಲೆಗೆ ಸ್ವತಂತ್ರ ಕಟ್ಟಡದ ಆವಶ್ಯಕತೆ ಎನಿಸಹತ್ತಿತು. ಹೋಳಕರ ಸರಕಾರವು ತನ್ನ ಕಟ್ಟಡವನ್ನು ಕೊಡಲು ಮುಂದೆ ಬಂದುದರಿಂದ ಸಂಸ್ಥೆಯು ೧೩೦೦ ವಿದ್ಯಾರ್ಥಿಗಳಿಗೆ ಸ್ಥಳದ ವ್ಯವಸ್ಥೆಮಾಡಲು ಸಮರ್ಥವಾಯಿತು

ಹೀಗೆ ಬೆಳೆಯುತ್ತ ನಡೆದ ಈ ಶಿಕ್ಷಣ ಸಂಸ್ಥೆಯ ಸ್ವಾಭಾವಿಕವಾದ ಎರಡನೆಯ ಹೆಜ್ಜೆಯೆಂದರೆ, ಮಹಾವಿದ್ಯಾಲಯದ ಸ್ಥಾಪನೆ. ಈ ಸಂಸ್ಥೆಯು ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿ ಎಂಬ ಹೆಸರನ್ನು ಧಾರಣ ಮಾಡಿ, ಫರ್ಗ್ಯುಸನ್ ಕಾಲೇಜ ಎಂಬ ಮಹಾವಿದ್ಯಾಲಯುವನ್ನು ೧೮೮೫ ರಲ್ಲಿ ಪ್ರಾರಂಭಿಸಿತು. ಟಿಳಕ, ಚಿಪಳೂಣಕರರು ಕಟ್ಟಿದ ಶಿಕ್ಷಣ ಸಂಸ್ಥೆಯ ಪರಿಣತವಾದ ಫಲವಿದು.

ಈ ಶಿಕ್ಷಣ ಸಂಸ್ಥೆಯ ಉತ್ಕರ್ಷವನ್ನೂ ಹಾಗೂ ಅದಕ್ಕೆ ಒದಗಿದ ಅನುಕೂಲತೆಗಳನ್ನೂ ವಿಚಾರಮಾಡಿದರೆ, ಇದೆಲ್ಲಕ್ಕೂ ಸಂಚಾಲಕರ ಕೀರ್ತಿಯೇ ಕಾರಣವೆಂದು ಹೇಳಬಹುದು. ಇವರೆಲ್ಲರೂ ಅನೇಕ ರೀತಿಯಿಂದ ಹೆಸರಾಗಿದ್ದರು. ಚಿಪಳೂಣಕರ, ಟಿಳಕ, ಆಗರಕರ, ನಾಮಜೋಶಿ ಮೊದಲಾದವರ ಸ್ವಾರ್ಥತ್ಯಾಗವು ಜನರ ಕಣ್ಣನ್ನು ಕುಕ್ಕಿಸಿತ್ತು. ಎರಡನೆಯ ಕಾರಣವೆಂದರೆ, ಇವರಿಗೆ ದೊರೆತ ಮೇಧಾವಿಗಳಾದ ಸಹಕಾರಿ ಶಿಕ್ಷಕರು. ನಾಮಜೋಶಿ, ಮಾಧವರಾವ ಗೋಳೆ, ಕೇಳಕರ, ಧಾರಪ, ರಾನಡೆ, ನಾಂದಗಿರೀಕರ ಮೊದಲಾದವರು ವಿದ್ವಾಂಸರೂ ತಮ್ಮ ತಮ್ಮ ವಿಷಯದಲ್ಲಿ ಪ್ರಾವೀಣ್ಯವನ್ನು ಪಡೆದವರೂ ಎಂದು ಕೀರ್ತಿಗಳಿಸಿದ್ದರು. ತ್ಯಾಗದಲ್ಲಿ ಟಿಳಕ, ಆಗರಕರರನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ಟಿಳಕರಂತೂ

ಹಾಯಕೋರ್ಟಿನ ಅಧಿಕಾರ ಪತ್ರವು ಕೈಯಲ್ಲಿದ್ದರೂಕೂಡ ವಕೀಲಿಯನ್ನು ತ್ಯಜಿಸಿ ಶಿಕ್ಷಕರಾದರು. ಆಗರಕರರು ಪದವೀಧರರಾದೊಡನೆ "ಮಗನು ದೊಡ್ಡ ದೊಡ್ಡ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದಾನೆ; ಅವನಿಗೆ ದೊಡ್ಡ ಸಂಬಳದ ಸ್ಥಳ ದೊರೆತು ನನ್ನ ಬಡತನ ಹಿಂಗುವದು, ಎಂದು ಮನಸ್ಸಿನಲ್ಲಿ ನೀನು ಮಂಡಿಗೆಯನ್ನು ತಿನ್ನುತ್ತಿರಬಹುದು. ಆದರೆ ತಾಯಿಯೇ ! ನಾನು ಸಂಪತ್ತಿನ ಇಲ್ಲವೆ ಸಂಬಳದ ಬೆನ್ನು ಹತ್ತಲಾರೆ; ಕೇವಲ ಹೊಟ್ಟೆಗೆ ಬೇಕಾಗುವಷ್ಟೇ ಹಣವನ್ನು ತೆಗದುಕೊಂಡು ಅದರಿಂದಲೇ ತೃಪ್ತನಾಗಿ ಇಡೀ ಆಯುಷ್ಯವನ್ನು ಪರರ ಹಿತಾರ್ಥವಾಗಿ ಧಾರೆ ಎರೆಯುವೆನು" ಎಂದು ತಮ್ಮ ತಾಯಿಗೆ ಪತ್ರಬರೆದಿದ್ದರು. ಎಂತಹ ಪವಿತ್ರ ಜೀವನಗಳಿವು! ನಿಜವಾದ ತ್ಯಾಗ ವೀರರಿವರು ! ಈ ತ್ಯಾಗವೀರರಾದ ಟಿಳಕ, ಆಗರಕರರ ಮೈಮೇಲೆಬಂದ ಕೊಲ್ಹಾಪೂರ ಪ್ರಕರ್ಣದಿಂದಲೂ ಜನತೆಯಲ್ಲಿ ಶಾಲೆಯ ಕೀರ್ತಿಯು ವ್ಯಾಪಿಸಿತು. ಇವರು ಪ್ರಾರಂಭಿಸಿದ ಕೇಸರಿ, ಮರಾಠಾ ವೃತ್ತ ಪತ್ರಗಳಿಂದ ಶಾಲೆಯ ಹೆಸರು ದೇಶದಲ್ಲೆಲ್ಲ ಹಬ್ಬಿತು. ಹೀಗೆ ಸಂಚಾಲಕರ ಕೀರ್ತಿಯು ಶಾಲೆಯ ಬೆಳವಣಿಗೆಗೆ ಸಹಾಯವಾಯಿತೆಂಬುವ ದರಲ್ಲಿ ಸಂದೇಹವಿಲ್ಲ.

ಉತ್ಸಾಹಿಗಳೂ ರಾಷ್ಟ್ರಪ್ರೇಮಿಗಳೂ ಆದ ಈ ತರುಣರಿಂದ ನಡೆಯಿ ಸಲ್ಪಟ್ಟ ಈ ಸಂಸ್ಥೆಯು ನಿಜವಾಗಿಯೂ ರಾಷ್ಟ್ರದ ಜೀವನದಲ್ಲಿ ಕ್ರಾಂತಿ ಯನ್ನುಂಟುಮಾಡಿತು; ಜನಕ್ಕೆ ಹೊಸ ದೃಷ್ಟಿ, ಹೊಸ ಕಲ್ಪನೆಗಳನ್ನು ಕೊಟ್ಟಿತು. ೧೮೮೩ ರಲ್ಲಿ ಆ ಕಾಲದ ಸುಪ್ರಸಿದ್ಧರಾದ ನಾ. ರಾವಸಾಹೇಬ ಮಂಡಲಿಕರು ಶಾಲೆಯನ್ನು ಬಹುವಾಗಿ ಹೊಗಳಿ, 'ವೈಭವ ಸಂಪನ್ನವಾದ ಈ ಸಂಸ್ಥೆಯ ಚಾಲಕರಿಂದ ದೇಶದಲ್ಲೆಲ್ಲ ಇದರ ಶಾಖೆಗಳು ಹರಡಲಿ, ಜನ ತೆಯ ಬೆಂಬಲದಿಂದ ಇದು ಪ್ರಚಂಡ ಸಂಸ್ಥೆಯಾಗಲಿ' ಎಂದು ತಮ್ಮ ಇಚ್ಛೆ ಯನ್ನು ಪ್ರಕಟಿಸಿದರು. ಪ್ರೊ. ವರ್ಡ್ಸ್‌ವರ್ಥರು ಶಾಲೆಯ ಮೊದಲಿನ ಎರಡು ವರ್ಷಗಳ ಪ್ರಗತಿಯನ್ನು ನೋಡಿ "ಶಾಲೆಯು ಪಡೆದ ಯಶಸ್ಸನ್ನು ಕಂಡು ನನಗೆ ನಿಜವಾಗಿಯೂ ಆಶ್ಚರ್ಯವಾಗಿದೆ. ಇಂಗ್ಲಿಷ ಶಿಕ್ಷಣದಿಂದ ಹಿಂದೀ ಸಮಾ ಜದಲ್ಲಿ ಉಂಟಾದ ನೈತಿಕ ಶಕ್ತಿಯ ಪ್ರತೀಕವೇ ಈ ಸಂಸ್ಥೆಯೆಂದು ನಾನು ಭಾವಿಸುವೆ. ಸುಶಿಕ್ಷಿತ ತರುಣರು ಸರಕಾರಿ ನವಕರಿಯನ್ನು ಅಪೇಕ್ಷಿಸದೆ ಸ್ವಾವ

ಲಂಬಿಗಳಾಗಿ, ಎಲ್ಲ ಉದ್ಯೋಗಗಳಲ್ಲಿ ಮುಂದುವರಿದು, ಸ್ವಸಾಮರ್ಥ್ಯದಿಂದ ಶ್ರೇಷ್ಠ ಸ್ಥಾನವನ್ನೂ ಕೀರ್ತಿಯನ್ನೂ ಪಡೆಯಬೇಕೆಂಬ ಉದಾತ್ತ ಭಾವನೆಗಿಂತ ಶ್ರೇಷ್ಠವಾದುದು ಯಾವುದಿದೆ? ಭಾರತದ ಭಾವೀ ಇತಿಹಾಸದಲ್ಲಿ ಈ ಭಾವನೆಯು ಚಿರಸ್ಮರಣೀಯವಾದ ಪರಿಣಾಮ ಉಂಟಾಗದೆ ಹೋಗದು" ಎಂದು ಉದ್ಗಾರಗಳನ್ನು ತೆಗೆದಿದ್ದಾರೆ. ವಿದ್ಯಾರ್ಥಿಗಳ ಮನಸ್ಸಿನಲ್ಲಿ ಸಂಚಾಲಕರು ಏನನ್ನು ಬಿಂಬಿಸಲು ಯತ್ನಿಸುತ್ತಿದ್ದರೆಂಬ ಸಂಗತಿಯು ಇದರಿಂದ ವ್ಯಕ್ತವಾಗುವದು.

ಎಜ್ಯುಕೇಶನ್ ಕಮಿಶನದ ಅಧ್ಯಕ್ಷರಾದ ವುಯಿಲ್ಯಮ ಹಂಟರರ ಅಭಿಪ್ರಾಯವು ಅತ್ಯಂತ ಮಹತ್ವವಾದುದು. ಈ ಕಮಿಶನಿನ ಎದುರಿಗೆ ನ್ಯೂಇಂಗ್ಲಿಷಸ್ಕೂಲಿನ ಪರವಾಗಿ ಟಿಳಕ, ಆಪ್ಟೆಯವರು ಸಾಕ್ಷಿಯನ್ನಿತ್ತರು. ಶಿಕ್ಷಣವು ಜನರ ಕೈಯಲ್ಲಿ ಮೆಲ್ಲಮೆಲ್ಲನೆ ಬರಬೇಕೆಂದು ಸರಕಾರವು ಅಪೇಕ್ಷಿಸುತ್ತಿದ್ದರೆ, ಸರಕಾರವು ಕೊಡುಗೈಯಿಂದ ಎಲ್ಲ ಖಾಸಗೀ ಸಂಸ್ಥೆಗಳಿಗೆ ಧನ ಸಹಾಯ ಮಾಡಬೇಕು. ಅವರ ಅಂತರ್ವ್ಯವಸ್ಥೆಯಲ್ಲಿ ಕೈಹಾಕಕೂಡದು ಎಂದು ಪ್ರತಿಪಾದಿಸಿದರು. ಅದರ ಪರಿಣಾಮವು ಕಮಿಟಿಯ ಮೇಲೆ ಬಹಳವಾಯಿತು. ಈ ಸಮಿತಿಯವರು ಶಾಲೆಯನ್ನು ಸಂದರ್ಶಿಸಿದಾಗ ಮತ್ತು ಈ ಸಂಸ್ಥೆಯ ಸಂಚಾಲಕರ ಪರಿಚಯವನ್ನು ಮಾಡಿಕೊಳ್ಳುವಾಗ ಅವರ ಮನಸಿನಮೇಲೆ ಆದ ಉತ್ಕೃಷ್ಟ ಪರಿಣಾಮವನ್ನು ಹಂಟರರು ತಮ್ಮ ಅಭಿಪ್ರಾಯದಲ್ಲಿ ವ್ಯಕ್ತಪಡಿಸಿದ್ದಾರೆ.

"ಈ ಶಾಲೆಯ ಪ್ರಗತಿಯನ್ನು ನೋಡಿದರೆ, ಭಾರತದಲ್ಲಿಯೇ ಇದಕ್ಕೆ ಸರಿಸಮಾನವಾದ ಇನ್ನೊಂದು ಶಿಕ್ಷಣಸಂಸ್ಥೆ ಇಲ್ಲವೆಂದು ಧೈರ್ಯವಾಗಿ ಹೇಳಬಲ್ಲೆ. ಸರಕಾರದ ಸಹಾಯವನ್ನು ಏನೂ ಪಡೆಯದೆ, ಸರಕಾರಿ ಹೈಸ್ಕೂಲಿಗೆ ಸರಿಸಮಾನವಾಗಿ ಅದಕ್ಕಿಂತಲೂ ಒಂದು ತೂಕ ಹೆಚ್ಚಾಗಿಯೇ ಈ ಸಂಸ್ಥೆಯು ಮೆರೆಯುತ್ತಿರುವದು. ಇತರ ದೇಶದ ಸಂಸ್ಥೆಗಳೊಡನೆ ಹೋಲಿಸಿ ನೋಡಿದರೂ ಈ ಸಂಸ್ಥೆಯ ಕಡೆಗೇ ನಮ್ಮ ನಿರ್ಣಯವನ್ನು ಕೊಡಬೇಕಾಗುವದು.'' ಈ ಅಭಿಪ್ರಾಯವನ್ನು ಓದಿ ಯಾರಿಗೆ ಆನಂದವಾಗಲಿಕ್ಕಿಲ್ಲ! ಇದಲ್ಲದೆ ಆ ಕಾಲದ ಗವ್ಹರ್ನರರಾದ 'ಸರ್ ಜೇಮ್ಸ ಫರ್ಗ್ಯುಸನ್ ಮತ್ತು ಲಾರ್ಡ ರೇ'ಯವರು ಈ ಸಂಸ್ಥೆಯ ಬಗ್ಗೆ ಅತ್ಯಂತ

ಆದರಭಾವವನ್ನು ತಳೆದಿದ್ದರು. ಲಾರ್ಡ ರೇಯುವರಂತೂ ಟಿಳಕ ಹಾಗೂ ನಾಮಾಜೋಶಿ ಮೊದಲಾದವರ ಗುಂಪಿಗೆ ಮುಗ್ಧರಾಗಿದ್ದರು. "ಶಿಕ್ಷಣ ಸಂಸ್ಥೆಗಳು ಸರಕಾರದ ಆಶ್ರಯದಲ್ಲಿಯೇ ಬೆಳೆಯಬಲ್ಲವೆಂಬ ಮಾತನ್ನು ಅಲ್ಲಗಳೆದು, ಸ್ವತಂತ್ರವಾಗಿಯೂ ತೇಜಸ್ವಿಯಾಗಿಯೂ ಬಾಳಬಲ್ಲವು, ಎಂಬ ಹೊಸ ಪಂಥವನ್ನು ತೋರುವ ಮಹತ್ವದ ಕಾರ್ಯವನ್ನು ಈ ಸಂಸ್ಥೆಯು ಮಾಡಿದೆ'' ಎಂದು ಟಾಯಿಮ್ಸ ಪತ್ರಿಕೆಯು ಮುಕ್ತಕಂಠದಿಂದ ಹೊಗಳಿತು.

ಟಿಳಕ ಹಾಗೂ ವಿಷ್ಣುಶಾಸ್ತ್ರಿ ಚಿಪಳೂಣಕರರಿಂದ ಸ್ಥಾಪಿಸಲ್ಪಟ್ಟ ಈ ಶಾಲೆಯು ರಾಷ್ಟ್ರದಲ್ಲಿ ನವಯುಗವನ್ನು ಪ್ರಾರಂಭ ಮಾಡಿತೆಂಬುದರಲ್ಲಿ ಸಂದೇಹವೇ ಇಲ್ಲ. ಈ ಸಂಸ್ಥೆಯ ತೇಜಸ್ಸಿನ ಮುಂದೆ ನಿಲ್ಲಲಾರದೆ ಸರಕಾರಿ ಹೈಸ್ಕೂಲು ಸ್ಥಳಾಂತರ, ರೂಪಾಂತರಗಳನ್ನು ಹೊಂದುತ್ತ ೧೯೨೨ರ ಕೊನೆಗೆ ಮಾಯವಾಯಿತು.

---

## .ಕೇಸರಿ ಹಾಗೂ ಮರಾಠಾ

ಜನಜಾಗೃತಿಯೇ ತಮ್ಮ ಉದ್ದೇಶವೆಂದು ಬಗೆದ ಈ ದೇಶಾಭಿಮಾನಿಗಳು ನ್ಯೂ ಇಂಗ್ಲಿಷ ಶಾಲೆಯನ್ನು ಪ್ರಾರಂಭಿಸಿ, ಭಾವೀ ಜನಾಂಗದಲ್ಲಿ ಸ್ವದೇಶ, ಸ್ವಸಂಸ್ಕೃತಿಗಳ ಬೀಜಗಳನ್ನು ಬಿತ್ತಲು ಯತ್ನಿಸಿದರು. ಈ ಮಹತ್ವಾಕಾಂಕ್ಷಿಗಳಿಗೆ ಇಷ್ಟರಿಂದಲೇ ಸಮಾಧಾನವಾಗುವದೆಂತು? ನವ ಸಂಕಲ್ಪ, ನವಸ್ಫೂರ್ತಿಗಳಿಂದ ಪ್ರೇರಿತರಾದ ಇವರು ಜನಜಾಗೃತಿಯ ಸಾಧನವಾದ ವೃತ್ತಪತ್ರದ ವ್ಯವಸಾಯಕ್ಕೆ ಕೈಹಾಕಿದರು. ಎಲ್ಲರೂ ಲೇಖಕರು, ಪ್ರತಿಭಾವಂತರು. ತಮ್ಮ ವಿಚಾರಗಳನ್ನು ಜನರಲ್ಲಿ ಹರಡಲು ಆತುರವುಳ್ಳವರು. ಕೇಳುವದೇನು ? ಚಿಪಳೂಣಕರರಂತೂ ನಿಬಂಧ ಮಾಲೆಯಿಂದ ಉತ್ಕೃಷ್ಟ ವಾಙ್ಮಯ ಲೇಖಕರೂ ಮಾರ್ಮಿಕ ಟೀಕಾಕಾರರೂ ಸ್ವಸಂಸ್ಕೃತಿಯ ಪುರಸ್ಕರ್ತರೂ ಎಂದು ಪ್ರಸಿದ್ಧರಾಗಿದ್ದರು. ಉತ್ಸಾಹಿ ಸಂಪಾದಕರೆಂದು ನಾಮಜೋಶಿಯವರ ಕೀರ್ತಿಯಿದ್ದಿತು. ಆಗರಕರರು ಕಾಲೇಜಿನಲ್ಲಿರುವಾಗಲೇ ಒಳ್ಳೆಯ ಲೇಖಕರೆಂದು ಖ್ಯಾತಿಪಡೆದಿದ್ದರು. ಆಪ್ಟೆಯವರಂತೂ ದೊಡ್ಡ ವಿದ್ವಾಂಸರೆಂದು ಹೆಸರಾದವರು. ಕಾಯದೇ ಪಂಡಿತರೆಂದು ಟಿಳಕರ ಪ್ರಖ್ಯಾತಿ. ಇಂತಹರ ತಲೆಯಲ್ಲಿ ವೃತ್ತಪತ್ರದ ವಿಚಾರ ಸುಳಿದರೆ ಆಶ್ಚರ್ಯವಲ್ಲ.

ಒಂದು ದಿನ ಆಪ್ಟೆಯವರ ಮನೆಯಲ್ಲಿ ಎಲ್ಲರೂ ಊಟಕ್ಕೆಂದು ಕೂಡಿದ್ದರು. ಊಟವಾದನಂತರ ಇಡೀ ದಿವಸ ಚರ್ಚೆಯಾಗಿ ಕೇಸರಿ (ಮರಾಠಿ) ಹಾಗೂ ಮರಾಠಾ (ಇಂಗ್ಲಿಷ) ವೃತ್ತಪತ್ರಗಳನ್ನು ೧೮೮೧ ನೇ ಜನವರಿಯಿಂದಲೇ ಪ್ರಾರಂಭಿಸಬೇಕೆಂದು ನಿಶ್ಚಯಿಸಿದರು. ಲಂಗೋಟಿ ಸಂಸಾರ ಪ್ರಾರಂಭವಾಯಿತು. ಈ ಎರಡೂ ವೃತ್ತಪತ್ರಗಳನ್ನು ಕಡೆಯವರೆಗೂ ಎರಡನೆಯವರಲ್ಲಿ ಮುದ್ರಿಸುವದು ಶಕ್ಯವಿಲ್ಲ. ಸ್ವತಂತ್ರ ಮುದ್ರಣಾಲಯ ಅವಶ್ಯವೆಂದು ವಿಚಾರಮಾಡಿ, ಮೊದಲು ಮುದ್ರಣಾಲಯವನ್ನು ಸ್ಥಾಪಿಸುವ ಕಾರ್ಯಕ್ಕೆ ಕೈಹಾಕಿದರು. ಎಲ್ಲರೂ ....ನಾರಾಯಣನ ಒಕ್ಕಲೇ. ಹಣ

ವೆಲ್ಲಿಂದ ಬರಬೇಕು ? ಆಗ ನಾಮಜೋಶಿಯವರು ತಮ್ಮ ಮುದ್ರಣಾಲಯವು ಸಾಠೆ ಎಂಬುವವರಲ್ಲಿ ಅಡವು ಬಿದ್ದಿದೆ ಎಂದೂ ಅದನ್ನು ಪಡೆದು ಕಂತದಿಂದ ಸಾಲ ಮುಟ್ಟಿಸಬಹುದೆಂದೂ ಸೂಚಿಸಿದರು. ಎಲ್ಲರೂ ಸಹಿಮಾಡಿ ಕಾಗದ ಬರೆದುಕೊಟ್ಟು ಮುದ್ರಣಾಲಯವನ್ನು ಪಡೆದರು. ಈ ಸುದ್ದಿಯು ಹಬ್ಬು ವದರೊಳಗಾಗಿ ಯಂತ್ರವು ತಮ್ಮ ವಶದಲ್ಲಿರಬೇಕೆಂದೆನಿಸಿ, ಯಂತ್ರ ಹಾಗೂ ಮೊಳೆಗಳನ್ನು ಹೆಗಲ ಮೇಲೆ ಹೊತ್ತು ರಾತ್ರಿಯಲ್ಲಿಯೇ ತಮ್ಮಲ್ಲಿಗೆ ಸಾಗಿಸಿದೆ ವೆಂದು, ಲೋಕಮಾನ್ಯರು ಅಭಿಮಾನದಿಂದ ಹೇಳುತ್ತಿದ್ದರು. ಹೀಗೆ ಮುದ್ರಣಾಲಯವು ಶಾಲೆಯ ತಮ್ಮನಾಗಿ, ಆದರೆ ಹೆಚ್ಚು ಪ್ರತಾಪಿಯಾಗಿ ಶಾಲೆಯ ಆವಾರದಲ್ಲಿಯೇ ಬಂದಿತು. ಅದಕ್ಕೆ 'ಆರ್ಯಭೂಷಣ'ವೆಂಬ ಹೆಸರು ಇಟ್ಟು, ಗಣೇಶ ಮೋರೇಶ್ವರ ಸೋಹನಿಯವರು ಪ್ರಕಾಶಕರು ಎಂದು ಪ್ರಕಟಿಸಲಾಯಿತು. ಶಾಸ್ತ್ರಿಗಳು ಈ ಮುದ್ರಣಾಲಯಕ್ಕೆ 'ಅಜ್ಞಾನ ಧ್ವಂಸನಾ ವಜ್ರ'ವೆಂಬ ಉಪಮೆಯನ್ನು ಕೊಟ್ಟರು. ಅದು ಸತ್ಯವಾಗಿಯೂ ಪರಿಣಮಿಸಿತು.

ಮುದ್ರಣ ಯಂತ್ರದ ಸಿದ್ಧತೆ, ಬರೆಯಲು ಆತುರರಾದ ಬರಹ ಗಾರರು ಕೂಡಿದಮೇಲೆ ಕೇಳುವದೇನು ? ಶ್ರೀ ಚಿಪಳೂಣಕರ, ಟಿಳಕ, ಆಗರಕರ, ಆಪಟೆ, ನಾಮಜೋಶಿ ಹಾಗೂ ಡಾ. ಗದ್ರೆ. ಇವರ ಅಂಕಿತ ದಿಂದ ವೃತ್ತಪತ್ರಿಕೆಗಳ ಉದ್ದೇಶ ಪತ್ರಿಕೆಯು ಪ್ರಕಟವಾಯಿತು. ಸಂಕಲ್ಪ ದಂತೆ ೧೮೮೧ರ ೪ನೇ ಜನವರಿಯ ದಿನ ಕೇಸರಿಯ ಮೊದಲನೆ ಸಂಚಿಕೆ ಹೊರಬಿದ್ದಿತು. ಅದರಲ್ಲಿ ತಾವೇಕೆ ಕೇಸರಿ ಪತ್ರವನ್ನು ಪ್ರಾರಂಭಿಸಿದೆ ವೆಂಬುದನ್ನು ಚೆನ್ನಾಗಿ ವಿವರಿಸಿದ್ದಾರೆ.

"ಮುಂಬಯಿ ಪ್ರಾಂತದಲ್ಲಿ ಅನೇಕ ವೃತ್ತಪತ್ರಗಳಿದ್ದು, ಪುಣೆ ಯಲ್ಲಿಯೂ ೩,೪ ಪತ್ರಗಳು ಹೊರಡುತ್ತಿದ್ದು, ಈ ಹೊಸ ಪತ್ರದ ಆವಶ್ಯಕತೆ ಏನಿದೆ? ಎಂದು ವಾಚಕರ ಮನಸ್ಸಿನಲ್ಲಿ ಜಿಜ್ಞಾಸೆ ಸುಳಿಯುವದು ಸ್ವಾಭಾ ವಿಕ. ಆದುದರಿಂದ ಈ ಪತ್ರಿಕೆಯ ಉದ್ದೇಶವನ್ನು ಜನತೆಗೆ ಮೊದಲಿಗೇ ತಿಳಿಸುವದು ಅವಶ್ಯವಿದೆ.

ವೃತ್ತ ಪತ್ರಗಳ ಪ್ರಘಾತವು ಪ್ರಾರಂಭವಾಗಿ ೨೦–೨೫ ವರ್ಷಗಳಾದವು. ಈ ದಶಕದಲ್ಲಿ ಅವು ಕೆಲಮಟ್ಟಿಗೆ ಸುಧಾರಿಸಿವೆ. ಆದರೂ ಇನ್ನೂವರೆಗೆ

ವೃತ್ತ ಪತ್ರಕಾರರು ತಮ್ಮ ಹೊಣೆಯನ್ನು ಪೂರ್ಣವಾಗಿ ಅರಿತಿರುವರೆಂದೂ, ತಮ್ಮ ಪರಿಶ್ರಮದಿಂದ ಲೋಕಸುಧಾರಣೆಗೆ ಎಷ್ಟು ಸಹಾಯವಾಗುವದೆಂಬುದನ್ನು, ಸಂಪೂರ್ಣವಾಗಿ ತಿಳಿದುಕೊಂಡಿರುವರೆಂದೂ ನಮಗೆ ಅನಿಸುವದಿಲ್ಲ. ಒಂದೆರಡು ಪತ್ರಗಳನ್ನು ಬಿಟ್ಟರೆ, ಉಳಿದವರು ಸಾಮಾನ್ಯವಾಗಿ ಕೇವಲ ಅಲ್ಲಲ್ಲಿಯ ಸುದ್ದಿಯನ್ನು ಪ್ರಕಟಿಸಿದರೆ ತೀರಿತೆಂಬ ಅಭಿಪ್ರಾಯ ಉಳ್ಳವರಂತೆ ಕಾಣುತ್ತದೆ. ವೃತ್ತ ಪತ್ರಗಳನ್ನು ತೆಗೆಯುವದು, ಮುದ್ರಣಾಲಯವನ್ನು ಹಾಕುವದು ಒಂದು ವ್ಯಾಪಾರವಾಗಿ ಪರಿಣಮಿಸಿ, ಈ ವ್ಯವಸಾಯವು ವಿಶೇಷವಾಗಿ ವಿದ್ಯೆಯ ಸಂಸ್ಕಾರವಿಲ್ಲದವರ ಕೈಸೇರಹತ್ತಿದೆ. ಅದೇ ವಿದ್ವಾಂಸರ ಕೈಗೆ ಈ ಸಾಧನಗಳು ದೊರೆತರೆ, ಲೋಕ ಕಲ್ಯಾಣದ ರಾಜಮಾರ್ಗವೇ ತೆರೆದಂತಾಗುವದು.

ವೃತ್ತ ಪತ್ರದ ಮಹತ್ವವು ಬಹಳ. ಅವು ನಿಷ್ಪಕ್ಷಪಾತದಿಂದಲೂ ನಿರ್ಭಯತೆಯಿಂದಲೂ ಬರೆಯಹತ್ತಿದರೆ, ಸರಕಾರಿ ಅಧಿಕಾರಿಗಳ ಮೇಲೆ ಒಂದುಬಗೆಯ ಪ್ರಭಾವವು ಬೀಳುವದು. ರಾತ್ರಿಯಲ್ಲಿ ದೀಪಗಳನ್ನು ಹಚ್ಚಿದರೆ, ಪೋಲೀಸರು ಗಸ್ತಿ ತಿರುಗಿದರೆ, ಯಾವ ಪರಿಣಾಮವಾಗಬೇಕೋ ಆ ಪರಿಣಾಮವು ಇಂತಹ ವೃತ್ತ ಪತ್ರಗಳಿದ್ದಲ್ಲೆಲ್ಲ ಆಗುವದು. ಅಧಿಕಾರಿಗಳು ಜಾಗೃತವಾಗುವರು. ನಮ್ಮ ದೇಶೀ ಸಂಸ್ಥಾನಗಳಲ್ಲಿ ಲಂಚಗುಳಿತನ ಮೊದಲಾದ ಅನ್ಯಾಯಗಳು ಎಷ್ಟೋ ನಡೆಯುತ್ತವೆ. ಅವೆಲ್ಲ ಇದರಿಂದ ನಿಲ್ಲುವವು. ಲೋಕಕಲ್ಯಾಣವಾಗುವದು

ಇತ್ತೀಚೆಗೆ, ಅಂದರೆ ಸಾಮ್ರಾಜ್ಞಿಯ ಆಳಿಕೆಯು ಪ್ರಾರಂಭವಾದಂದಿನಿಂದ ಮುಖಸ್ತುತಿಮಾಡುವ ಪ್ರವೃತ್ತಿಯು ಮಿತಿಮೀರಿ ಬೆಳೆದಿದೆ. ಅದು ಅತ್ಯಂತ ಘಾತುಕವಿದ್ದು, ದೇಶದ ಹಿತದ ದೃಷ್ಟಿಯಿಂದ ಅಪಾಯುಕರವಾಗಿದೆ.

ಆದುದರಿಂದ ಸರಕಾರೀ ಅಧಿಕಾರಿಗಳು ತಮ್ಮ ತಮ್ಮ ಕಾರ್ಯಗಳನ್ನು ಯಾವ ಯಾವ ರೀತಿಯಿಂದ ನಡೆಯಿಸುವರೆಂಬುವದನ್ನು ನಿಃಪಕ್ಷಪಾತ ಬುದ್ಧಿಯಿಂದಲೂ ಯಾರ ಭಿಡೆ ಮುರವತ್ತುಗಳಿಗೆ ಒಳಗಾಗದೆಯೂ ಬರೆಯುವ ನಿಶ್ಚಯವನ್ನು ನಾವು ಮಾಡಿದ್ದೇವೆ." (೪-೧-೮೧ ಕೇಸರಿ.)

ಹೀಗೆ ಸಮರಾಂಗಣಕ್ಕೆ ಇಳಿದ ಕೇಸರಿಯು ಜನತೆಗೆ ದೇಶಾಭಿಮಾನದ, ಕರ್ತವ್ಯದ ಪಾಠಗಳನ್ನು ಕಲಿಸುತ್ತಿತು. ದೇಶೋನ್ನತಿಯ ಕುರಿತು

ವಿವೇಚಿಸುವಾಗ 'ದೇಶದ ಅತ್ಯಚ್ಚ ಸ್ಥಿತಿಯೆಂದರೆ ದೇಶಾಭಿಮಾನವೇ ಸ್ರೈ' ಎಂದು ಅದರ ಲಕ್ಷಣವನ್ನು ಹೇಳಿ, 'ಭಾರತವು ಇಂದು ಅದಕ್ಕೆ ಎರವಾಗಿದೆ. ಎಂದು ದುಃಖೋದ್ಗಾರಗಳನ್ನು ತೆಗೆದಿದೆ. 'ಯಾರು ಇದನ್ನು ಅತ್ಯಂತ ಪರಿಶ್ರಮದಿಂದ ಪಾದಾಕ್ರಾಂತ ಮಾಡಿದರೋ ಅವರಿಂದಲೇ ಅದರ ಮುಕ್ತತೆಯ ಮಾರ್ಗವನ್ನೂ ನಾವು ಕಲಿಯಬೇಕಾಗಿದೆ. ಅವರ ಇತಿಹಾಸ ಓದಿ, ಅವರ ಸಹವಾಸಮಾಡಿ, ಅವರ ಕಾರಸ್ಥಾನಗಳನ್ನು ನಿರೀಕ್ಷಿಸಿ, ನಾವೂ ಅವರಂತೆ ಸ್ವಾಭಿಮಾನಿಗಳಾಗಬೇಕು. ಅಂದರೆ ಹೀನ, ದುರ್ಬಲವಾದ ನಮ್ಮ ಸಮಾಜವೂ ತೇಜಸ್ವಿಯಾಗುವದು.' ಎಂದು ಮಾರ್ಗದರ್ಶನ ಮಾಡ ಹತ್ತಿತು. 'ವೃತ್ತ ಪತ್ರಕಾರರು ರೈತರ ಕೈವಾರಿಗಳು ಹಾಗೂ ವಕೀಲರು ಆದುದರಿಂದ ಈ ಎರಡೂ ಅಧಿಕಾರಗಳನ್ನು ಶಕ್ಯವಿದ್ದಷ್ಟು ಹೆಚ್ಚು ಉಪ ಯೋಗಿಸುವ ಸಂಕಲ್ಪವನ್ನು ಮಾಡಿದ್ದೇವೆ, ಎಂದುಸಾರಿ ಜನತೆಯ ಬೆನ್ನು ಕಟ್ಟುತ್ತ ಮುನ್ನಡೆಯಿತು.

ಮೊದಲನೆಯ ವರ್ಷದಲ್ಲಿ ಚಿಪಳೂಣಕರ, ಟಿಳಕ, ಆಗರಕರ, ಈ ಮೂವರೂ ಬರೆಯುತ್ತಿದ್ದರು. ವಾಙ್ಮಯದ ಬಗೆಗೆ ಚಿಪಳೂಣಕರರೂ ಇತಿ ಹಾಸ, ಅರ್ಥಶಾಸ್ತ್ರ, ಕೇವಲ ಸಾಮಾಜಿಕ ವಿಷಯಗಳನ್ನು ಆಗರಕರರೂ, ಧರ್ಮಶಾಸ್ತ್ರ ಹಾಗೂ ಕಾಯಿದೆಗಳ ಬಗ್ಗೆ ಟಿಳಕರೂ ಬರೆಯುತ್ತಿದ್ದರು. ನಾಮಜೋಶಿಯವರು 'ಪುಣೆ ಮುನಸಿಪಾಲಿಟಿ, ಜಕಾತಿ ತೊಂದರೆಗಳು' ಇವೇ ಮೊದಲಾದ ಸ್ಥಳಿಕ ರಾಜಕಾರಣವನ್ನು ಜನರೆದುರಿಗೆ ಇಡುತ್ತಿದ್ದರು. ಈ ವರ್ಷದ ಕೊನೆಗೆ ಕೊಲ್ಹಾಪೂರದ ಪ್ರಕರ್ಣದ ಬಗ್ಗೆ ಲೇಖಗಳು ಕೇಸರಿಯಲ್ಲಿ ಬರಹತ್ತಿದವು. ಕೊಲ್ಹಾಪುರದ ದಿವಾಣರಾದ ಬರ್ವೆಯವರು ಕೇಸರಿಯಮೇಲೆ ಮಾನ ಹಾನಿಯ ಖಟ್ಲೆಹಾಕಿದರು. (೧೮೮೨) ಆಗರಕರ ಹಾಗೂ ಟಿಳಕರ ಮೇಲೆ ಖಟ್ಲೆಯಾದ ಮೂಲಕ, ಇಬ್ಬರೂ ಸಂಪಾದಕತ್ವ ದಿಂದ ಹೊರಗುಳಿದರು. ನಿಜವಾಗಿಯೂ ಖಟ್ಲೆಯಾದ ಲೇಖವು ಆಪ್ಟೆಯವ ರಿಂದ ಬರೆಯಲ್ಪಟ್ಟಿದ್ದರೂ, ಪ್ರಕಾಶಕರಾದ ಟಿಳಕರ ಮೇಲೆಯೇ ಅದರ ಹೊಣೆಯಿದ್ದಿತು. ಈ ಖಟ್ಲೆಯು ನಡೆದಿರುವಾಗಲೇ ವಿಷ್ಣುಶಾಸ್ತ್ರಿ ಚಿಪಳೂಣ ಕರರು ಸ್ವರ್ಗವಾಸಿಗಳಾದ ಮೂಲಕ, ನಾಮಜೋಶಿಯವರ ಮೇಲೆ ಬರೆ ಯುವ ಭಾರಬಿದ್ದಿತು.

ಕೇಸರಿಯ ಪ್ರತಿಗಳು ಮೊದಲು ೧೮೦೦ ಖರ್ಚಾಗುತ್ತಿದ್ದವು. ಕೊಲ್ಹಾಪುರದ ಪ್ರಕರಣದ ಮೂಲಕ ಅದರ ಸಂಖ್ಯೆಯು ೩೫೦೦ಕ್ಕೆ ಏರಿತು. ಇದನ್ನು ಕಂಡು ಜಾಹೀರಾತುದಾರರು ಧಾವಿಸಿದರು. ಸುದ್ದಿಗಾರರು ಸುದ್ದಿಯ ಮಳೆಗರೆಯಹತ್ತಿದರು. ಪತ್ರವು ಸಾಲದಾಯಿತು. ಆಕಾರ ವನ್ನು ದೊಡ್ಡದನ್ನಾಗಿ ಮಾಡಲು ಉದಾರಾಶ್ರಯದ ಅವಶ್ಯಕತೆ ಇದ್ದಿತು. ಜನತೆಗೆ ಬಿನ್ನವಿಸಿಕೊಂಡರು. ಸಾಕಷ್ಟು ಸಹಾಯದೊರೆಯಲಿಲ್ಲ. ಇದ್ದುದ ರಲ್ಲಿಯೇ ತೃಪ್ತಿಪಡಬೇಕಾಯಿತು. ೧೮೮೪ರಲ್ಲಿ ಆಕಾರವನ್ನು ದೊಡ್ಡದಾಗಿ ಮಾಡಿದರು. ಆ ಸಮಯದಲ್ಲಿ ಅದರ ಸಂಖ್ಯೆಯು ೪|| ಸಾವಿರಕ್ಕೆ ಮುಟ್ಟಿತ್ತು.

ಈ ಮಾರಾಟದ ಮಾನದಿಂದ ಸ್ವಲ್ಪ ಲಾಭ ಉಳಿಯಬೇಕಿದ್ದಿತು. ಆದರೆ ಮುದ್ರಣಾಲಯದ ಜಮಾ ಖರ್ಚೇ ಬಾಯಿಗೂಡುತ್ತಿದ್ದಿಲ್ಲ. ಲೇಖಕ ರಂತೂ ಏನೂ ಕಾಣುತ್ತಿದ್ದಿಲ್ಲ. ಶಿಕ್ಷಣ ಸಂಸ್ಥೆಯಿಂದ ಮೇಲಿಂದಮೇಲೆ ಹಣತರಬೇಕಾಗುತ್ತಿದ್ದಿತು. 'ಅಜ್ಜಿ ನೂತದ್ದೆಲ್ಲ ಮೊಮ್ಮಗನ ಉಡದಾರಕ್ಕೆ' ಎಂಬಂತೆ ಎಲ್ಲವನ್ನೂ ಮರಾಠಾ ಪತ್ರವು ನುಂಗುತ್ತಿತ್ತು. ಅದರ ಕಾಗದದ ವೆಚ್ಚಕೂಡ ಹೊರಡುವದು ಜಡವಾಗುತ್ತಿತ್ತು. ಕೊಲ್ಹಾಪುರ ಪ್ರಕರ್ಣದ ಮೂಲಕ ಸಾಲವಾಗಿ ಸಾತೆಯುವರ ಕಂತುಗಳು ತಪ್ಪಹತ್ತಿದವು. ಸೋಹನಿ ಯುವರ ಕೈಯೂ ಅಷ್ಟು ಬಿಗುವಿನದಿರಲಿಲ್ಲ. ಹೀಗಾಗಿ ಟಿಳಕ, ಆಗರಕರರು ಡೊಂಗರೆ ಜೇಲಿನಿಂದ ಮರಳಿದಾಗ ಸಾಲದಹೊರೆಯು ಹೊಸ ಸಮಸ್ಯೆಯು ಅವರೆದುರು ನಿಂತಿತು. ಆಪ್ಟೆಯುವರು 'ವೃತ್ತ ಪತ್ರದ ಹೊಣೆಯಿಂದ ತಮ್ಮನ್ನು ಮುಕ್ತಮಾಡಿರಿ. ನಿಮ್ಮದನ್ನು ನೀವು ನೋಡಿಕೊಳ್ಳಿರಿ' ಎಂದು ಹೇಳಿ ಹಿಂದೆ ಸರಿದರು. ತುರಂಗದಿಂದ ಬಂದನಂತರ ಆಗರಕರರೇ ಹೆಚ್ಚಾಗಿ ಬರೆಯಹತ್ತಿದ್ದರಿಂದ ಅವರೇ ಮುಖ್ಯ ಸಂಪಾದಕರಾದರು. ನಾಮಜೋಶಿ ಯುವರು ತಾವಾಗಿಯೇ ಉತ್ಸಾಹದಿಂದ ಮರಾಠಾದಲ್ಲಿ ಬರೆಯಹತ್ತಿದರು. ಈ ವ್ಯವಸ್ಥೆ ೧೮೮೭ರವರೆಗೆ ಸಾಗಿತು.

ಕೇಸರಿಯಕ್ಕಿಂತಲೂ ಎರಡುದಿನ ಮೊದಲು ಮರಾಠಾ ಪತ್ರಿಕೆಯು (೨-೧-೧೮೮೧) ಜನ್ಮ ತಾಳಿದ್ದಿತು. ಇದರ ಉದ್ದೇಶ ಪತ್ರಿಕೆಯಲ್ಲಿ ಗರ್ದೆ, ಆಪಟೆ, ಚಿಪಳೂಣಕರ, ಟಿಳಕ, ಆಗರಕರ, ನಾಮಜೋಶಿ ಇವರ ಹೆಸರು ಗಳಿದ್ದವು.

ಮರಾಠಾ ಪತ್ರವು ಕೇಸರಿಯಷ್ಟು ಲೋಕಪ್ರಿಯವಾಗದಿದ್ದರೂ ಮಹಾರಾಷ್ಟ್ರೀಯರಿಗೆ ಅಂತರ ಪ್ರಾಂತೀಯ, ಅಂತರರಾಷ್ಟ್ರೀಯ ಸ್ಥಾನವನ್ನು ತಂದುಕೊಡಲು ಸಹಾಯವಾಯಿತು. ಅದು ಕೇಸರಿಯಷ್ಟು ಲೋಕ ಪ್ರಿಯತೆಯನ್ನು ಪಡೆಯಲು ಸಾಧ್ಯವಿದ್ದಿಲ್ಲ. ಎಷ್ಟಾದರೂ ಪರಕೀಯ ಭಾಷೆ. ನಾವು ಎಷ್ಟೇ ತಜ್ಞರಿದ್ದರೂ ಮಾತೃಭಾಷೆಯಷ್ಟು ತೇಜಸ್ವಿಯಾಗಿ ಬರೆಯಲು ಸಾಧ್ಯವೇ! ಓಜಸ್ವಿತೆಯ ದೃಷ್ಟಿಯಿಂದ ಇದರಲ್ಲಿ ದೋಷ ವಿದ್ದರೂ ದಾಕ್ಷಿಣ್ಯತೆಯ ದೃಷ್ಟಿಯಿಂದ ಒಂದು ಗುಣವೂ ಇದೆ. ಇಡೀ ಭಾರತದಲ್ಲೆಲ್ಲ ಓದಲ್ಪಡುವ ವೃತ್ತಪತ್ರದ ವಿಷಯ ಹಾಗೂ ವಿಚಾರಗಳು ಒಂದು ವಿಶಿಷ್ಟ ಪ್ರಾಂತದಲ್ಲಿ ಮಾತ್ರ ಓದಲ್ಪಡುವ ವೃತ್ತಪತ್ರಕ್ಕಿಂತ ವ್ಯಾಪಕ ಸ್ವರೂಪದ್ದಿರುವದು ಸ್ವಾಭಾವಿಕನಿದೆ. ಪ್ರಾಂತೀಯ ವಿಷಯವನ್ನು ಸ್ವಭಾಷೆ ಯಲ್ಲಿ ಬರೆಯುವಾಗ ಮನಸ್ಸುಬಂದಂತೆ ಬಾಯಿತಿಂಡಿ ತೀರಿಸಿಕೊಳ್ಳಲು, ಕುಚೇಷ್ಟೆಮಾಡಲು ಅವಕಾಶವಿರುತ್ತದೆ. ಆದರೆ ಪರಭಾಷೆಯು ಇಂತಹ ಅಪರಾಧಗಳನ್ನು ತಡೆಯುವ ಒಂದು ಅಪ್ರತ್ಯಕ್ಷ ಸಾಧನ–ಒಟ್ಟಿನಲ್ಲಿ ಮರಾಠಾ ಬರೆಯುವವರ ಕಣ್ಣಮುಂದೆ ಇಡೀಭಾರತ ಹಾಗೂ ವಿಲಾಯತಿಯಲ್ಲಿಯ ಇಂಗ್ಲಿಷ ವಾಚಕ ವರ್ಗವು ಇರುವ ಮೂಲಕ ಮತ್ತು ಆ ಭಾಷೆಯ ಜ್ಞಾನವು ಮರ್ಯಾದಿತವಿರುವದರಿಂದ ಮರಾಠಾದಲ್ಲಿಯ ಲೇಖಗಳು ಕೇಸರಿಯಕ್ಕಿಂತ ಲೂ ಸಾಮಾನ್ಯವಾಗಿ ಪ್ರೌಢ ಮತ್ತು ದಾಕ್ಷಿಣ್ಯಯುಕ್ತವಾಗಿ ಸಪ್ಪಗೆ ಕಾಣುತ್ತವೆ, ಒಬ್ಬರೇ ಎರಡನ್ನೂ ಬರೆದರೂ ಈ ಅಂತರವು ಸ್ಪಷ್ಟವಾಗಿ ಕಾಣುತ್ತದೆ. ಆದ್ದರಿಂದ ಲೋಕಪ್ರಿಯತೆಯು ಕೇಸರಿಯಕ್ಕಿಂತ ಕಡಿಮೆ ಯಾಗುವದು ಸಹಜವಿದೆ. ಲೋಕಮಾನ್ಯರು ಸಂಪಾದಕರಿದ್ದಾಗ ಕೂಡ ಮರಾಠಾ ತನ್ನ ವೆಚ್ಚವನ್ನು ತಾನು ಭಾಗಿಸಲಿಲ್ಲ. ಹೀಗಿದ್ದರೂ ಇಂತಹ ಬಿಳಿಯ ಆನೆಯನ್ನು ಏಕೆಕಟ್ಟಬೇಕು? ಎಂಬ ಪ್ರಶ್ನೆ ಉದ್ಭವಿಸುವದು.

ತಮ್ಮ ರಾಷ್ಟ್ರೀಯ ವಿಚಾರಗಳು ಬ್ರಿಟಿಶರಿಗೆ ತಿಳಿಯಬೇಕೆಂಬುದೇ ಇದರ ಮುಖ್ಯ ಉದ್ದೇಶ. ರಾಜಕೀಯ ವಿಚಾರಗಳನ್ನು ಸ್ವಕೀಯರಿಗೆ ತಿಳಿಸಲು ಕೇಸರಿಯು ಸಾಧನವಿದ್ದಂತೆ ಪರಪ್ರಾಂತೀಯರಿಗೂ ಯುರೋಪಿ ಯನ್ನರಿಗೂ ತಿಳಿಸಲು ಮರಾಠಾ ಇಂಗ್ಲಿಷ ಪತ್ರಿಕೆ ಸಾಧನವಾಗಿದ್ದಿತು. ಆಳವಾಗಿ ವಿಚಾರಮಾಡಿ ನೋಡಿದರೆ, ಬ್ರಿಟಿಶ ಅಧಿಕಾರಿಗಳ ಮುಂದೆ,

ಹಾಗೂ ತ್ರಯಸ್ಥ ಇಂಗ್ಲಿಷರ ಮುಂದೆ, ಯಾವುದೊಂದು ಅನ್ಯಾಯವನ್ನು ಅಥವಾ ತೊಂದರೆಯನ್ನು ಯುಕ್ತಿಯುಕ್ತವಾಗಿ ಮಂಡಿಸಿದರೆ, ತಮ್ಮ ಕೆಲಸವು ಆಗಿಯೇತೀರುವದೆಂದು ಆಗಿನ ಚಳವಳಿಕಾರರ ವಿಶ್ವಾಸವಿದ್ದುದೇ ಮರಾಠಾ ಪತ್ರಿಕೆಯ ಮೂಲಕಾರಣ. ಮಹಾರಾಷ್ಟ್ರದ ಮನೋಗತವನ್ನು ಮೇಲಿಂದಮೇಲೆ ಸರಿಯಾಗಿ ತಿಳಿಸುವ ದುಭಾಷಿಯನ್ನಿಡಲು ಸರಕಾರವು ಇಚ್ಛಿಸುವದಿಲ್ಲ. ಓರಿಯಂಟಲ್ ಟ್ರಾನ್ಸಲೇಟರರು ಇಡೀ ಲೇಖನವನ್ನೋದಿ ಅದನ್ನು ಸಂಕ್ಷಿಪ್ತವಾಗಿ ಭಾಷಾಂತರಿಸುವರು. ಒಮ್ಮೊಮ್ಮೆ ತಪ್ಪುತಪ್ಪು ಭಾಷಾಂತರಮಾಡುವರು. ಈ ದೋಷವನ್ನು ತಪ್ಪಿಸುದಕ್ಕಾಗಿ ಹೆಚ್ಚು ವೆಚ್ಚವನ್ನು ಸಹಿಸಿಯೂ ಮರಾಠಾ ನಡಿಯಿಸಬೇಕೆಂದು ನಿಶ್ಚಯಿಸಿದ್ದರೆಂದು ಹೇಳಬಹುದು. ಮರಾಠಾ ಪತ್ರಿಕೆಯ ಮೊದಲನೇ ಸಂಚಿಕೆಯಲ್ಲಿಯ ಆತ್ಮನಿವೇದನದಲ್ಲಿ ಕೆಳಗಿನ ಮಾತುಗಳಿವೆ.

"Our true primary duty will be to interpret, petition and instruct, and advocacy may be said to form the second part of our real work''

ನಾವು ಇಟ್ಟುಕೊಂಡ ಹೆಸರು 'ಮರಾಠಾ' ಎಂದು ಇದ್ದರೂ ನಮ್ಮಲ್ಲಿ ಸಂಕುಚಿತ ಪ್ರಾಂತೀಯ ಅಭಿಮಾನವಿಲ್ಲ. ನಮ್ಮ ಐತಿಹಾಸಿಕ ಹೆಸರಿನಿಂದ ಪರಪ್ರಾಂತೀಯರ ಮೇಲೆ ನಾವು ದಾಳೀ ಮಾಡುವೆವೆಂದು ಯಾರೂ ತಿಳಿಯಕೂಡದು. ಇದನ್ನು ನಡೆಯಿಸುವವರು ಬ್ರಾಹ್ಮಣರಿದ್ದರೂ ನಾವು ಯಾವುದೇಜಾತಿಯ ಅಥವಾ ಪಂಗಡದ ಅಭಿಮಾನವನ್ನೆಂದೂ ಹಿಡಿಯುವ ದಿಲ್ಲ ನಮ್ಮ ಪ್ರತಿಜ್ಞೆಯನ್ನು ಅಂತಃಕರಣ ಪೂರ್ವಕವಾಗಿ ನಾವು ಪಾಲಿಸುವೆವು. ಎಂದು ಉಲ್ಲೇಖಿಸಿದ್ದಾರೆ.

ಮರಾಠಾದಲ್ಲಿಯೂ ಕೊಲ್ಹಾಪುರದ ಬಗ್ಗೆ ತೀಕ್ಷ್ಣ ಲೇಖಗಳು ಬಂದವು. ಅದಕ್ಕಾಗಿ ಶಿಕ್ಷೆಯೂ ಆಯಿತು. ಜೇಲಿನಿಂದ ತಿರುಗಿ ಬಂದ ನಂತರ ಟಿಳಕರು ತಾವು ಮರಾಠಾ ಪ್ರಕಾಶಕರೆಂದು ಪ್ರಸಿದ್ಧಿಸಲಿಲ್ಲ. ೧೮೯೧ ರಲ್ಲಿ ಟಿಳಕರ ಕಡೆಗೆ ಎರಡೂ ವೃತ್ತಪತ್ರಗಳು ಬರುವವರೆಗೆ ಕೇಳಕರರ ಕಡೆಗೇ ಇದರ ಸಂಪಾದಕತ್ವದ ಹೊಣೆಯಿದ್ದಿತು.

---

## ಟಿಳಕರ ಮೊದಲನೆಯ ಶಿಕ್ಷೆ ಅಥವಾ
## ಕೊಲ್ಹಾಪುರ ಪ್ರಕರಣ

ನ್ಯೂ ಇಂಗ್ಲಿಷ ಸ್ಕೂಲಿನ ಈ ಗುಂಪು ಕೇಸರಿ ಹಾಗೂ ಮರಾಠಾ ವೃತ್ತಪತ್ರಗಳನ್ನು ಪ್ರಾರಂಭಿಸಿದ ಕೂಡಲೇ ಈ ಜನರು ಕೇವಲ ಶಾಲೆಯ ಶಿಕ್ಷಕರಲ್ಲ, ದೇಶಾಭಿಮಾನಿಗಳೂ ಸಮಾಜದ ಹಿತಚಿಂತಕರೂ ಕರ್ತೃತ್ವಶಾಲಿ ಗಳೂ ಚಳವಳಿಗಾರರೂ ಇರುವರೆಂದು ಜನ ಮಾತಾಡಹತ್ತಿತು. ಅದರಲ್ಲಿ ಸತ್ಯಾಂಶವೂ ಇದ್ದಿತು.

ರಾಷ್ಟ್ರೀಯ ಭಾವನೆಯ ಈ ಸಂಸ್ಥೆಗಳು ಸಾರ್ವಜನಿಕರಲ್ಲಿ ಸ್ವಾತಂತ್ರ್ಯದ ಭಾವನೆಯನ್ನೂ ಸ್ಫೂರ್ತಿಯನ್ನೂ ಕುದುರಿಸಹತ್ತಿದವು. ವಿದ್ವಾಂಸರ ಓಜಸ್ವಿಯಾದ ಬರೆಹಗಳು ಜನರ ಅಂತಃಕರಣವನ್ನು ಕೆಣಕ ಹತ್ತಿದವು. ಅನ್ಯಾಯಗಳನ್ನು ಬಯಲಿಗೆಳೆಯಹತ್ತಿದವು. ಜನರ ದುಃಖ ಗಳನ್ನು ಜಗತ್ತಿನ ಎದುರು ಇಡುವ ಮುಖ್ಯ ಮುಖಗಳಾದವು. ಕೇಸರಿ ಹಾಗೂ ಮರಾಠಾ ವೃತ್ತಪತ್ರಗಳಲ್ಲಿ ಪ್ರಾರಂಭದಿಂದಲೇ ದೇಶೀ ಸಂಸ್ಥಾನ ಹಾಗೂ ಬ್ರಿಟಿಶ ಸರಕಾರದ ಆಡಳಿತೆಯ ಬಗೆಗೆ ಅನೇಕ ಟೀಕಾತ್ಮಕ ಲೇಖಗಳು ಬರಹತ್ತಿದವು. ಅದರಲ್ಲಿಯೂ ವಿಶೇಷವಾಗಿ ಸಂಸ್ಥಾನಗಳಲ್ಲಿ ನಡೆಯುವ ಕೃಷ್ಣಕಾರಸ್ಥಾನಗಳು ಬಯಲಿಗೆಳೆಯಲ್ಪಟ್ಟವು.

ಮೊದಲನೆಯ ವರ್ಷವೇ ಕೊಲ್ಹಾಪುರ ಸಂಸ್ಥಾನದ ಆಡಳಿತೆಯ ಬಗೆಗೆ ಲೇಖಗಳು ಪ್ರಕಟವಾಗಹತ್ತಿದವು. ಎರಡನೇ ವರ್ಷದಲ್ಲಿ ಪರಿ ಸ್ಥಿತಿಯು ವಿಕೋಪಕ್ಕೆ ಹೋಯಿತು. ಕೊಲ್ಹಾಪುರ ಮಹಾರಾಜರ ಕರುಣಕಥೆಯನ್ನು ಹೃದಯದ್ರಾವಕವಾಗಿ ಕೇಸರಿಯು ವರ್ಣಿಸಹತ್ತಿತು.

ಕೊಲ್ಹಾಪುರ ಮಹಾರಾಜನು ಹುಚ್ಚನಾಗಿರುವನೆಂದೂ ಆ ಹುಚ್ಚಿಗೆ ಕಾರಣನು ದಿವಾಣನೇ ಎಂದೂ ಜನರಿಗೆ ಬಲವಾದ ಸಂಶಯ ಬಂದಿತು. ದಟ್ಟವಾಗಿ ಹಬ್ಬಿದ ಈ ಸುದ್ದಿಯಿಂದ ಜನರು ರೊಚ್ಚಿಗೆದ್ದಿದ್ದರು. ಅಪ್ರಬುದ್ಧ ನಾದ ಮಹಾರಾಜನ ಬೊಕ್ಕಸವೆಲ್ಲ ದಿವಾಣನಿಂದ ನಿರರ್ಥಕ ಕಾರ್ಯಗಳಿಗೆ

ಸೂರೆಯಾಗಹತ್ತಿದೆಯೆಂದು ಜನರು ಆಡಿಕೊಳ್ಳಹತ್ತಿದರು. ಕೇಸರಿ ಹಾಗೂ ಮರಾಠಾ ಪತ್ರಗಳ ಸಾಹಸೀವೃತ್ತಿಯು ರಾಜನ ಪಕ್ಷದವರಿಗೆ ಉತ್ತೇಜಕವಾಯಿತು. ಅವರು ಸಂಪಾದಕರ ಕಡೆಗೆ ಕೊಲ್ಲಾಪುರದ ಸಂಗತಿ ಗಳನ್ನು ಬರೆದು ಕಳಿಸಹತ್ತಿದರು. ಹೀಗೆ ಕ್ರಿಯೆ-ಪ್ರತಿಕ್ರಿಯೆಗಳು ನಡೆದವು. ಕೊಲ್ಹಾಪುರ ಪ್ರಕರಣವು ಕೇಸರಿಯ ಮುಖ್ಯ ವಿಷಯವಾಗಿ ಪರಿಣಮಿ ಸಿತು. ಈ ವಿಷಯವನ್ನೋದಲು ಜನತೆ ಚಾತಕಪಕ್ಷಿಯಂತೆ ಕೇಸರಿಯ ಬರುವನ್ನು ನಿರೀಕ್ಷಿಸುತ್ತ ಕೂಡುತ್ತಿದ್ದಿತು. ೧೧ನೇ ಆಕ್ಟೋಬರ (೧೮೮೧)ರ ಸಂಚಿಕೆಯಲ್ಲಿ "ಕೊಲ್ಹಾಪುರ ಮಹಾರಾಜನ ಕರುಣಕತೆಯನ್ನು ಕೇಳಿದರೆ ಎಂತಹ ಪಾಷಾಣಹೃದಯನೂ ರೊಚ್ಚಿಗೇಳಬಹುದು ಮಹಾ ರಾಜನ ಪ್ರಾಣಪಕ್ಷಿಯು ಹಾರಿ ಹೆಣವು ಕಂಡಾಗ ನಮ್ಮ ಲಾರ್ಡ ಸಾಹೇಬರು ಕಣ್ಣುತೆರೆಯುವರೋ ? ಯಾವುದೇ ಕಾರಣದಿಂದ ಛತ್ರ ಪತಿಯ ಜೀವಕ್ಕೆ ಅಪಾಯವಾದರೆ, ಆದರ ಎಲ್ಲ ಕಲಂಕವು ರಾಣೀ ಸರಕಾ ರಕ್ಕೂ ಅವರ ಪ್ರತಿನಿಧಿಗಳಿಗೂ ತಗಲದೇ ಹೋಗುವದಿಲ್ಲ" ಎಂದು ಎಚ್ಚರಿ ಸಿದ್ದರು.

೨೪ನೇ ನವ್ಹಂಬರ ದಿವಸ ಕೊಲ್ಹಾಪುರ ಮಹಾರಾಜರ ವಿಷಯ ವಾಗಿಯೇ ಸಾರ್ವಜನಿಕ ಸಭೆ ಜರುಗಿತು. ವಯೋವೃದ್ಧರಾದ ಗೋಪಾಳ ರಾವ ಹರಿ ದೇಶಮುಖರು ಅಧ್ಯಕ್ಷರಾಗಿದ್ದರು. ಕೊಲ್ಹಾಪುರದ ಮುಖಂಡರೂ ವಕೀಲರೂ ಮಹಾರಾಜರ ಜನನ ತಾಯಿಯವರಾದ ರಾಧಾಬಾಯಿ ಯವರ ವಕೀಲಿ ಪತ್ರವನ್ನು ಹಿಡಿದವರೂ ಆದ ಸದಾಶಿವ ಪಾಂಡುರಂಗ ಉರ್ಫ್ ನಾನಾ ಭಿಡೆಯವರು ವ್ಯಾಖ್ಯಾತರಿದ್ದುದರಿಂದ ಈ ಸಭೆಗೆ ಜನರು ಹೆಚ್ಚಾಗಿ ನೆರೆದಿದ್ದರು. "ಕೊಲ್ಹಾಪುರ ಮಹಾರಾಜರು ನಿಜವಾಗಿ ಹುಚ್ಚ ರಿರದೆ, ದಿವಾಣರೇ ಅವರಮೇಲೆ ವೃಥಾ ಆರೋಪವನ್ನು ಹೊರಿಸಿ, ಹುಚ್ಚ ರನ್ನಾಗಿ ಮಾಡಹತ್ತಿದ್ದಾರೆ. ಇದರಲ್ಲಿ ದತ್ತಕ ಮನೆತನದ ಒಬ್ಬ ಹೆಣ್ಣು ಮಗಳ ಕೈವಾಡವಿದೆ. ನಿರ್ದಯ ತನದಿಂದ ಗಂಡ ಹೆಂಡಿರನ್ನು ಅಗಲಿಸ ಲಾಗಿದೆ. ಸೆರೆಮನೆಯಲ್ಲಿ ಮಹಾರಾಜರನ್ನು ಭಯಂಕರವಾಗಿ ಪೀಡಿಸಲಾ ಗುತ್ತಿದೆ. ಅವರನ್ನು ರಕ್ಷಿಸಲಿಕ್ಕೆಂದು ಇಟ್ಟ ಬಿಳಿ ಡಾಕ್ಟರ ಹಾಗು ಯುರೋಪಿಯನ್ ರಕ್ಷಕರಿಂದಲೇ ಅವರ ಕೊಲೆಯಾಗುವ ಸಂಭವವಿದೆ"

ಎಂದು ಒಳ್ಳೇ ಆವೇಶಯುಕ್ತವಾಗಿ ಉಪ್ಪುಖಾರಹಚ್ಚಿ, ಅದರ ಚಿತ್ರವು ಭಯಾನಕವಾಗುವಂತೆ ವರ್ಣಿಸಿದರು. ಮೊದಲೇ ಶಂಕಿತರಾದ ಜನರ ಭಾವನೆಗಳು ಇದರಿಂದ ಮತ್ತಿಷ್ಟು ಕೆರಳಿದ್ದರಲ್ಲಿ ಆಶ್ಚರ್ಯವಿಲ್ಲ. ಕೇಸರಿಯ ಸಂಪಾದಕರು ಸಭೆಯ ವೃತ್ತಾಂತವನ್ನೆಲ್ಲ ಪ್ರಸಿದ್ಧಿಸಿದರಲ್ಲದೆ ಅಗ್ರಲೇಖವನ್ನೂ ಬರೆದರು.

"ಕೊಲ್ಹಾಪುರದಂಥ ಸಂಸ್ಥಾನದಲ್ಲಿ ಅನೇಕ ದಿನಗಳವರೆಗೆ ಇಂತಹ ವಿಷಮಯ ವಾತಾವರಣವಿರುವದು ಆಶ್ಚರ್ಯವಾಗಿದೆ. ಬೆತ್ತದ ಏಟುಗಳೂ ಬಾರಕೋಲಿನ ಬಡಿತಗಳೂ ಬಿದ್ದರೂ ರಂಗಮಹಲಿನಲ್ಲಿ, ನಾಚಿಕೆಗೇಡಿಯಾದ ಅಧಮಾಧಮ ಕೃತ್ಯಗಳು ನಡೆದರೂ ಅವುಗಳ ಸುಳುವು ಕೂಡ ಇಂಗ್ಲಿಷ ಬಹಾದ್ದೂರರಿಗೆ ಹತ್ತದಿರುವದು, ಇಲ್ಲವೇ ತಿಳಿದೂ ತಿಳಿದೂ ಅವುಗಳನ್ನು ಕಿವಿಯಮೇಲೆ ಹಾಕಿಕೊಳ್ಳದಿರುವ, ಈ ವೃತ್ತಿಯು ನಿಜವಾಗಿಯೂ ನಮ್ಮ ಸರಕಾರದ ರಾಜನೀತಿಗೆ ಮತ್ತು ಆಳಿಕೆಗೆ ಕಲಂಕಪ್ರಾಯವಾಗಿದೆ.'' ಎಂದು ಬರೆದು, ಯಾರದಾದರೂ ಆಸ್ತಿಯನ್ನು ಎತ್ತಿಹಾಕಬೇಕಿದ್ದರೆ, ಅವನನ್ನು ಸುಮ್ಮಸುಮ್ಮನೆ ಹುಚ್ಚನೆಂದು ಆಸ್ಪತ್ರಿಯಲ್ಲಿ ಕೊಳೆಹಾಕಬೇಕೆಂದು ವಿಲಾಯತಿಯ ಕಾದಂಬರಿಗಳಲ್ಲಿ ಓದುತ್ತೇವೆ. ಅದೇ ಹಾದಿಯನ್ನು ಇಲ್ಲಿಯೂ ತುಳಿದಂತೆ ಕಾಣುತ್ತದೆ. ಗ್ರೀನ ಕಾಕ್ಸನಂಥ ರಕ್ಷಕನನ್ನು ನೋಡಿದ ಕೂಡಲೆ ಮಹಾರಾಜರ ತಲೆ ತಿರುಗುತ್ತಿದ್ದರೆ, ಅವರ ಮಮತೆಯ ತಾಯಿಯನ್ನೇಕೆ ಶುಶ್ರೂಷಣೆಗೆ ಇಡಬಾರದು? ಎಂದು ಪ್ರಶ್ನಿಸಿದೆ. ತೀಕ್ಷ್ಣವಾದ ಟೀಕೆ ಇದು ಎಂಬುದರಲ್ಲಿ ಸಂಶಯವಿಲ್ಲ.

ಇತ್ತ ಟಾಯಿಮ್ಸ ಮೊದಲಾದ ಇಂಗ್ಲಿಷ ಪತ್ರಿಕೆಗಳಲ್ಲಿಯೂ ಈ ಚರ್ಚೆಯು ನಡೆದಿತ್ತು. ಮಹಾರಾಜರನ್ನು ಪ್ರಕೃತಿಯ ಸುಧಾರಣೆಗಾಗಿ ವಿಲಾಯತಿಗೆ ಕಳಿಸಬೇಕೆಂದು ಅವು ಸೂಚಿಸಿದವು. ಒಳಸಂಚಿನಿಂದ ಮಹಾರಾಜರ ಕೊಲೆಮಾಡುವರು ಎಂದು ಬಗೆದವರಿಗೆ ಈ ಸೂಚನೆಯಿಂದ ಹೇಗೆ ಸಮಾಧಾನವಾಗಬೇಕು?

ಈ ಮಧ್ಯದಲ್ಲಿ ಯಾವ ಪತ್ರವು ಮುಂದೆ ಖೊಟ್ಟಿಯೆಂದು ನಿರ್ಣಯವಾಯಿತೋ ಯಾವುದರ ಆಧಾರದಿಂದ ಜನ ರೊಚ್ಚಿಗೆದ್ದರೋ ಆ ಪತ್ರವನ್ನು ನಾನಾ ಭಿಡೆಯವರು ಪುಣೆಯಲ್ಲಿ ಅನೇಕ ಸಗೃಹಸ್ಥರಿಗೆ ತೋರಿಸಿ

ದಂತೆ, ಟಿಳಕ, ಆಗರಕರ ಮೊದಲಾದ ಪ್ರಭೃತಿಗಳಿಗೂ ತೋರಿಸಿರಬೇಕು. ಏಕೆಂದರೆ ೬ನೇ ಡಿಸೆಂಬರದ ಕೇಸರಿ ಸಂಚಿಕೆಯಲ್ಲಿ "ಕೊಲ್ಹಾಪುರದ ವಿಷಯದಲ್ಲಿ ಕಣ್ಣಾರೆ ಕಂಡ ಕಾಗದಪತ್ರಗಳಿಂದ ರಾ ಬ. ಬರ್ವೆ ಮಾಧವ ರಾಯರ ಅಂತಃಕರಣವು ಎಂತಹ ರಾಕ್ಷಸೀವೃತ್ತಿಯುದಿದೆ ಎಂಬುದು ನಮಗೆ ಮನವರಿಕೆಯಾಗಿದೆ. ಆ ಕೃಷ್ಣಕಾರಸ್ಥಾನವನ್ನೆಲ್ಲ ಬಯಲಿಗೆಳೆಯಲು ಅವಕಾಶವಿಲ್ಲದ್ದಕ್ಕಾಗಿ ನಿರುಪಾಯರಾಗಿದ್ದೇವೆ. ಆ ಭೀಕರ ಪತ್ರವನ್ನೋದಿದ ಎಂತಹ ಸಜ್ಜನನೂ ರೊಚ್ಚಿಗೇಳದಿರಲಾರನು. ಓದಿದವರೆಲ್ಲ ದಿಙ್ಮೂಢ ರಾಗುವರು." ಎಂದು ಉಲ್ಲೇಖಿಸಿದ್ದಾರೆ.

ಇತ್ತ ಆಂಗ್ಲೋ ಇಂಡಿಯನ್ ಪತ್ರಗಳಲ್ಲಿ ಈ ವಿಷಯದ ಎರಡನೇ ಮುಖವೂ ಅಷ್ಟೇ ರಂಜಿತವಾಗಿ ಚಿತ್ರಿಸಲ್ಪಡುತ್ತಿದ್ದಿತು. 'ಮಹಾರಾಜರಿಗೆ ನಿಶ್ಚಿತವಾಗಿ ಹುಚ್ಚು ಹಿಡಿದಿದೆ. ರಾಧಾಬಾಯಿಯ ಪಕ್ಷದ ಹಾಗೂ ಪುಣೆಯ ಜನರು ಹೊರಗೆ ಹೇಗೊ ಹಾಗೆ ಒಳಗೂ ಅವರ ಅಂತಃಕರಣವು ಕಪ್ಪು ಇದೆ. ಗುಲ್ಲೆಬ್ಬಿಸಿ ಹಣ ಎತ್ತಿಹಾಕುವ ಹೊಂಚಿದು. ದಿವಾಣರಾದ ಮಾಧವರಾವ ಬರ್ವೆಯವರು ನಿಸ್ವಾರ್ಥಿಗಳೂ ನಿರಪರಾಧಿಗಳೂ ಇರುವರು. ಎಂಬ ಸುದ್ದಿಗಾರರ ಟೀಕಾಸ್ತ್ರಗಳು ಪ್ರಕಟವಾಗುತ್ತಿದ್ದವು. ಅಸ್ತ್ರಕ್ಕೆ ಪ್ರತಿ ಅಸ್ತ್ರವೆಂದು ಕೇಸರಿಯು 'ಇಂಗ್ಲಿಷ ಪತ್ರಿಕೆಗಳ ನಿಸ್ಪೃಹತನವನ್ನೂ ನಿರ ಪೇಕ್ಷವೃತ್ತಿಯ ಸೋಗನ್ನೂ ಎಲ್ಲರೂ ಬಲ್ಲರು. ನಮ್ಮವರೇ ಆದ, ದೊಡ್ಡ ಅಧಿಕಾರವನ್ನು ಪಡೆದ ಬರ್ವೆಯವರನ್ನು ವಿನಾಕಾರಣವಾಗಿ ಹಳಿಯುವದ ರಿಂದ ನಮಗೆ ಯಾವ ಲಾಭ? ಅವರು ಮಾಡಿದ ಪಾಪ ಕೃತ್ಯಗಳನ್ನು ಬಾಯಿಂದ ಉಚ್ಚರಿಸಲು ಕೂಡಾ ನಾಚಿಕೆಯಾಗುವದು. ಒಂದುವೇಳೆ ಆ ಪಾಪ ಕೃತ್ಯಗಳು ದೇಹಾಂತ ಪ್ರಾಯಶ್ಚಿತ್ತಕ್ಕೆ ಯೋಗ್ಯವೆನಿಸಬಹುದು ?" ಎಂದು ಬರೆದಿದ್ದಿತು. ಆಪರಾಧಾತ್ಮಕ ಪತ್ರವು ಹಾಗೂ ಉಳಿದ ಕಾಗದ ಪತ್ರಗಳು ಕೇಸರಿಯಲ್ಲಿ ಪ್ರಕಟವಾಗಲೀ ಬಿಡಲಿ, ಈ ಚರ್ಚೆಯಿಂದ ಬರ್ವೆಯವರ ಮಾನವು ಎಂದೋ ಮುಕ್ಕಾಗಿ ಹೋಗಿತ್ತು

ಈ ನಡುವೆ ಜ್ಞಾನ ಪ್ರಕಾಶದಲ್ಲಿ ನಾನಾ ಭಿಡೆಯವರಿಂದ ಬಂದ ಖೊಟ್ಟಿ ಪತ್ರವು ಸಾದ್ಯಂತ ಪ್ರಕಟವಾಯಿತು. ಬರ್ವೆಯವರು ಕೊಲ್ಹಾ ಪುರದಿಂದ ಪುಣೆಗೆ ಬಂದರು ತರ್ಕ ಕುತರ್ಕಕ್ಕೆ ಪ್ರಾರಂಭವಾಯಿತು.

ಜನರ ಕೈ ಬೆಚ್ಚಗೆಮಾಡಿ ಪ್ರಕರಣವನ್ನೇ ಗಾಳಮಾಡಬಹುದು. ಇಲ್ಲವೆ ಬರ್ವೆಯವರು ಕೊಲ್ಹಾಪುರಕ್ಕೆ ಶರಣುಹೊಡೆಯಬಹುದು. ಅಥವಾ ಅವರ ಮೇಲೆ ರಾಜದ್ರೋಹದ ಖಟ್ಲೆಯಾಗಬಹುದು, ಎಂದು ಪುಣೆಯಲ್ಲೆಲ್ಲ ಚರ್ಚೆ. ಕೇಸರಿಯಂತೂ ಎಲ್ಲರನ್ನೂ ಮೀರಿಸಿತು. ಬರ್ವೆಯವರು ಧೈರ್ಯವಿದ್ದರೆ ನಮ್ಮ ಮೇಲೆ ಮಾನಹಾನಿಯ ಖಟ್ಲೆಯನ್ನು ಮಾಡಲಿ ಎಂದು ಮೂದಲಿಸಿ ಕೇಸರಿಯಲ್ಲಿ ೧೭ ನೇ ಜನವರಿ ದಿವಸ ಜ್ಞಾನಪ್ರಕಾಶದಲ್ಲಿಯ ಪತ್ರವನ್ನು ಉದ್ಧೃತಗೊಳಿಸಿತು. ಬರ್ವೆಯವರೂ ಈ ಪ್ರಶ್ನೆಯ ಸೋಕ್ಷ ಮೋಕ್ಷ ವನ್ನು ಒಮ್ಮೆ ಮಾಡಿಯೇ ಬಿಡಬೇಕೆಂದು ಪುಣೆಗೆ ಬಂದಿದ್ದರು. ನ್ಯಾಯ ಹೂಡಲು ಅಪ್ಪಣೆ ಕೊಡಬೇಕೆಂದು ಸರಕಾರಕ್ಕೆ ಬಿನ್ನವಿಸಿಕೊಂಡಿದ್ದರು ಸರಕಾರವೂ ಒಪ್ಪಿಗೆ ಕೊಟ್ಟಿತು. ದಾವೆಯ ಕಾಗದಪತ್ರಗಳು ಮುಂಬಯಿ ಸರಕಾರದ ಕಾಯದೆ ಸಲಹೆಗಾರರಿಗೆ ಒಪ್ಪಿಸಲ್ಪಟ್ಟವು. ಕೇಸರಿಯು ಕೂಡ ೨೪ನೇ ಜನವರಿಯ (೧೮೮೨) ಸಂಚಿಕೆಯಲ್ಲಿ 'ನಾವು ನಮ್ಮ ಸಂಕಲ್ಪದಂತೆ ಆಡಿದುದನ್ನು ಸತ್ಯವೆಂದು ಸಿದ್ಧಮಾಡಲು ಸಿದ್ಧರಿದ್ದೇವೆ. ಈ ಕಾರ್ಯ ದಲ್ಲಿ ಜನತೆಯು ಯೋಗ್ಯ ನೆರವನ್ನು ನೀಡಬೇಕು.' ಎಂದು ಪ್ರಸಿದ್ಧಿಸಿತು. ಮಾನಹಾನಿಯ ಈ ಖಟ್ಲೆಯು ಸರಕಾರದಿಂದ ಸ್ವೀಕರಿಸಲ್ಪಟ್ಟು, ವೆಬ್ ಎಂಬ ನ್ಯಾಯಾಧೀಶರ ಎದುರು ೮ನೇ ಫೇಬ್ರುವರಿಯ (೧೮೮೨) ದಿವಸ ಪ್ರಾರಂಭವಾಯಿತು. ಫಿರ್ಯಾದಿಯ ವತಿಯಿಂದ ಇನ್‌ವ್ಹೇರ್ಯಾರಿಟಿ ಎಂಬುವವರು ಬ್ಯಾರಿಸ್ಟರರಿದ್ದು, ಕ್ಲಿವ್ಹಲಂಡ ಮತ್ತು ಲಿಟಲ ಇವರು ಸಲಹೆಗಾರರಿದ್ದು, ಆರೋಪಿಗಳವತಿಯಿಂದ ಫಿರೋಜಶಹಾ ಮೇಥಾ ಬ್ಯಾರಿಸ್ಟರರಿದ್ದು, ಶಾಪುರಜಿ ಹಾಗು ಠಾಕುರದಾಸರು ಸಹಾಯಕರಿದ್ದರು.

ಕೇಸರಿ ಹಾಗು ಮರಾಠಾ ಪತ್ರಗಳ ಹೊಣೆಯು ೪-೬ ಜನರ ಮೇಲಿದ್ದರೂ ಪ್ರಕಾಶಕರೆಂದು ಟಿಳಕ ಹಾಗೂ ಆಗರಕರ ಇವರಿಬ್ಬರ ಮೇಲೆಯೇ ಕಾಯದೆಯಂತೆ ಖಟ್ಲೆಹಾಕಲ್ಪಟ್ಟಿತು. ಈ ಪತ್ರವನ್ನು ಪ್ರಸಿದ್ಧಿ ಸಬೇಕೋ ಬೇಡವೋ ಎಂಬ ವಿಷಯದಲ್ಲಿ ಚರ್ಚೆಯಾಗಿ ಟಿಳಕರ ಸಲಹೆ ಯಂತೆಯೇ ಪ್ರಸಿದ್ಧಿಸಲ್ಪಟ್ಟಿತ್ತು. ಖಟ್ಲೆಯ ಪೂರ್ವದಲ್ಲಿ ಟಿಳಕ, ಆಗರಕರ ಆಪ್ಟೆಯವರು ಈ ಖೊಟ್ಟಿ ಪತ್ರವನ್ನು ಓದಿ, ಆದರಲ್ಲಿರುವ ವಿಷಯವನ್ನೆಲ್ಲ ಬರೆದು, ಗವ್ಹರ್ನರ ಕಡೆಗೆ ಮೂವರೂ ಸಹಿಮಾಡಿ ಇದರ ವಿಚಾರವಾಗ

ಬೇಕೆಂದು ಅರ್ಜಿಯನ್ನು ಮಾಡಿದ್ದರು. ಹೀಗಿದ್ದರೂ ಬರ್ವೆಯವರಿಗೆ ಕಾಯದೆಯಂತೆ ಆಪ್ಟೆಯವರನ್ನು ಆರೋಪಿಯನ್ನಾಗಿ ಮಾಡಲು ಬರುವಂತಿರಲಿಲ್ಲ. ಅವರು ಸಾಕ್ಷಿಯನ್ನು ನುಡಿಯುವಾಗ "ನಾವು ವೃತ್ತಪತ್ರಕಾರರು, ಮತ್ತು ಅದರಲ್ಲಿ ಬರೆಯುವವರು, ಸಾರ್ವಜನಿಕಮತದ ಅಧಿಕೃತ ವಕೀಲರೆಂದು ನಮಗೆ ಅನಿಸಿತು" ಎಂದು ಪ್ರತಿಪಾದಿಸಿದರು. ಕೇಸರಿ ಹಾಗೂ ಮರಾಠಾ ಪತ್ರಗಳ ಒಡೆಯರಲ್ಲಿ ನೀವೊಬ್ಬರಿರುವಿರಲ್ಲವೇ? ಎಂದು ಮರುಪ್ರಶ್ನೆಯನ್ನು ವಿಚಾರಿಸಿದಾಗ, ಆಪ್ಟೆಯವರು 'ಈ ವೃತ್ತಪತ್ರಗಳ ಪ್ರಾಪ್ತಿಯ ಪಾಲನ್ನು ನಾನು ತೆಗೆದುಕೊಳ್ಳುವದಿಲ್ಲ'ಎಂದು ಹಾರಿಕೆಯ ಉತ್ತರವನ್ನು ಕೊಟ್ಟರು. ಇರಲಿ.

ನ್ಯಾಯಮೂರ್ತಿ ವೆಬ್‌ರ ಮುಂದೆ ಖಟ್ಲೆನಡೆದು ಸೆಶನ್ ಕಮಿಟ್ ಆಯಿತು. ಮತ್ತು ಆರೋಪಿಗಳು ಉಪಸ್ಥಿತರಿರುವ ಬಗ್ಗೆ ೨೦೦೦ ರೂಪಾಯಿಗಳ ಮುಚ್ಚಳಿಕೆ ಬರೆದು ಕೊಡಬೇಕೆಂತಲೂ ಸಾವಿರ, ಸಾವಿರ ರೂಪಾಯಿಗಳ ಎರಡು ಜಾಮೀನುಗಳನ್ನು ಕೊಡಬೇಕೆಂತಲೂ ಆಜ್ಞೆಯಾಯಿತು. ಫಿರೋಜಶಹಾ ಮೇಥಾರವರು, ಫಿರ್ಯಾದಿಯು ತಮ್ಮ ಎಲ್ಲ ಪುರಾವೆಗಳನ್ನು ಉಪಸ್ಥಿತ ಮಾಡಿಲ್ಲವೆಂದೂ ಮರಾಠಾದಲ್ಲಿಯ ಲೇಖವು ಸದ್ಧೇತುವಿನಿಂದ ಬರೆಯಲ್ಪಟ್ಟ ಕಾರಣ, ೪೯ನೇ ಕಲಮಿನ ಅಪವಾದದಲ್ಲಿ ಸೇರುವದೆಂದೂ ಟಿಳಕ, ಹಾಗೂ ಬರ್ವೆ ಇವರಲ್ಲಿ ದ್ವೇಷವಿದ್ದುದು ಸಿದ್ಧವಾಗಿಲ್ಲವೆಂದೂ ಪತ್ರವನ್ನು ಪ್ರಸಿದ್ಧಿಸುವ ಮೊದಲು ಅದು ನಿಜವಾದುದು ಅಹುದೋ ಅಲ್ಲವೋ ಎಂಬ ಬಗ್ಗೆ ಯೋಗ್ಯ ಎಚ್ಚರಿಕೆ ತೆಗೆದುಕೊಂಡಿರುವರೆಂದೂ ಅದಕ್ಕೆ ಗವ್ಹರ್ನರರ ಕಡೆಗೆ ಮಾಡಿದ ಅರ್ಜಿಯೇ ಸಾಕ್ಷಿಯೆಂದೂ ಆ ಅರ್ಜಿಯ ವಿಚಾರಣೆಯಾಗದಿರುವುದೇ ಈ ಪತ್ರ ಪ್ರಕಟಿಸಲು ಕಾರಣವಾಯಿತೆಂದೂ ಯುಕ್ತಿವಾದವನ್ನು ಮಾಡಿದರು.

ಕೇಸರಿ, ಮರಾಠಾ, ಜ್ಞಾನಪ್ರಕಾಶಗಳಂತೆ, ಇನ್ನೂ ಅನೇಕ ವೃತ್ತಪತ್ರಗಳು ಈ ಖೊಟ್ಟಿ ಪತ್ರವನ್ನು ಮುದ್ರಿಸಿದ್ದವು. ಮನಬಂದಂತೆ ಟೀಕಿಸಿದ್ದವು. ಮಹಾರಾಷ್ಟ್ರಮಿತ್ರ, ನೇಟಿವ್ಹ ಓಪಿನಿಯನ್, ಪುಣೆ ವೈಭವ ಮೊದಲಾದ ಪತ್ರಗಳ ಸಂಪಾದಕರು ಕ್ಷಮೆ ಬೇಡಿಕೊಂಡಿದ್ದರಿಂದ ಅವರ ಮೇಲಿನ ಖಟ್ಲೆಗಳು ತಿರುಗಿ ತೆಗೆದುಕೊಳ್ಳಲ್ಪಟ್ಟವು.

ಈ ಖಟ್ಲೆಯಲ್ಲಿ ೧ ನಾನಾಭಿಡೆ ೨ ಕೇಶವ ನಾರಾಯಣ ಬಖಲೆ ೩ ವಾಮನ ಗೋವಿಂದ ರಾನಡೆ ೪ ಬಾಳ ಗಂಗಾಧರ ಟಿಳಕ ೫ ಗೋಪಾಳ ಗಣೇಶ ಆಗರಕರ ಈ ಪಂಚಪಾಂಡವರು ಅಪರಾಧಿಗಳಾಗಿದ್ದರು.

ಬರ್ವೆಯವರ ಮಾನಾಪಮಾನಗಳ ಪ್ರಶ್ನೆಯನ್ನು ಬಿಟ್ಟರೂ ಲೋಕ ಮಾನ್ಯರಂಥ ಕಾಯದೇಪಂಡಿತರೂ ಆಗರಕರರಂಥ ಮೇಧಾವಿಗಳೂ ಆಪ್ಟೆ ಯವರಂಥ ವಿದ್ವಾಂಸರೂ ಇಂತಹ ಖೊಟ್ಟಿ ಪತ್ರವನ್ನು ಹೇಗೆ ನಂಬಿದರು? ತಮ್ಮ ಪತ್ರದಲ್ಲಿ ಹೇಗೆ ಉದ್ಧೃತಮಾಡಿದರು? ಅದರಮೇಲೆ ವಿಶ್ವಾಸವಿಟ್ಟು ಇಷ್ಟು ತೀಕ್ಷ್ಣವಾದ ಟೀಕೆಯನ್ನು ಹೇಗೆ ಬರೆದರು? ಎಂಬುದೇ ಸಮಸ್ಯೆ ಯಾಗಿದ್ದಿತು. ಈ ಪ್ರಶ್ನೆಯು ಬಹು ಮನೋರಂಜಕವಿದೆ. ಅದರ ಉತ್ತ ರವೂ ಕೂಡ ಈ ಎಲ್ಲ ಆರೋಪಿಗಳ ಹಾಗು ಸದ್ಗೃಹಸ್ಥರ ಸಾಕ್ಷಿಗಳಲ್ಲಿಯೇ ಒಡಮೂಡಿದೆ.

ಭಿಡೆ ಹಾಗು ಬಖಲೆಯವರ ಖಟ್ಲೆಯಲ್ಲಿ ಟಿಳಕರು ತಮ್ಮ ಸಾಕ್ಷಿ ಯಲ್ಲಿ ಕೆಳಗಿನಂತೆ ಹೇಳಿದ್ದಾರೆ. ''ನಾನಾ ಭಿಡೆಯವರು ಈ ಪತ್ರವನ್ನು ನನಗೆ ತೋರಿಸಿ, ಇದು ತಮಗೆ ರಾನಡೆಯವರಿಂದ ದೊರೆಯಿತೆಂದು ಹೇಳಿ ದರು. ವಾಮನರಾಯರ ಮತ್ತು ನನ್ನ ಪರಿಚಯವಿದೆ. ಅವರನ್ನು ಪತ್ರದ ಬಗೆಗೆ ವಿಚಾರಿಸಿದಾಗ ಇದು ಖಾಸಗಿಯ ಖಾತೆಯಿಂದ ದೊರೆತಿದೆ ಯೆಂದು ಹೇಳಿದರು. ಕೊಟ್ಟವರು ಯಾರು? ಎಂದು ವಿಚಾರಿಸಲು ನಮಗೆ ವಿಶ್ವಾಸವಿರುವ ಮನುಷ್ಯರಿಂದ ದೊರೆತಿದೆ. ಯೋಗ್ಯ ಸಮಯದಲ್ಲಿ ಅದನ್ನು ಹೇಳುವೆ, ಎಂದು ಇಲ್ಲಿಯವರೆಗೂ ಹೇಳುತ್ತಬಂದಿರುವರು.''

ಟಿಳಕರಮೇಲೆ ಖಟ್ಲೆನಡೆದಾಗ ನಾನಾಭಿಡೆಯವರು ಕೆಳಗಿನಂತೆ ಸಾಕ್ಷಿ ನುಡಿದಿದ್ದಾರೆ 'ಜ್ಞಾನ ಪ್ರಕಾಶದ ಒಡೆಯರಾದ ವಾಮನರಾವ ರಾನಡೆಯ ವರು ಈ ಪತ್ರವನ್ನು ನನಗೆ ಕೊಟ್ಟರು. ನಾನು ಓದಿದನಂತರ, ವಿನಾಯಕ ರಘುನಾಥ ಕಾಳೆ, ಕೊಲ್ಹಾಪುರದ ಅಮೀನ, ಹರಿ ಅನಂತ ಗವಾಲೆ, ಕೊಲ್ಹಾ ಪುರದ ಫೌಜದಾರರು, ರಾ. ಬ. ಗೋಪಾಳ ಗೋವಿಂದ ಪಾಠಕ ಮೊದಲನೇ ವರ್ಗದ ಸಬ್ ಜಜ್ಜ ಇವರಿಗೂ ವಿಷ್ಣುಪಂತ ಭೋಪಟಕರರು ಭೋರದ ಕಾರಭಾರಿಗಳು, ಮಹಾದೇವ ಗೋವಿಂದ ರಾನಡೆ ಮೊದಲಾದವರಿಗೂ ತೋರಿಸಿದೆ. ಇವರೆಲ್ಲರೂ ಸಾಕ್ಷಿಹೇಳುವ ಪ್ರಸಂಗಬಂದರೆ ತಮ್ಮ ಹೆಸರು

ಹೇಳಕೂಡದೆಂದು ತಿಳಿಸಿದರು. ಟಿಳಕರಿಗೂ ತೋರಿಸಿದೆ. ಅವರು ಸರಕಾರಕ್ಕೆ ಅರ್ಜಿಮಾಡಿದಮೇಲೆ ಅದನ್ನು ನನಗೆ ತಿರುಗಿ ಕೊಟ್ಟರು. ಈ ಪತ್ರವನ್ನು ನಿಮಗೆ ಯಾರು ಕೊಟ್ಟರು? ಎಂದು ವಿಚಾರಿಸಿದರು. ವಾಮನರಾವ ರಾನಡೆಯವರು ಕೊಟ್ಟರೆಂದು ಹೇಳಿದೆ. ವಾಮನರಾಯರಿಗೆ ಹೇಗೆ ದೊರೆಯಿತು? ಎಂದು ನನ್ನನ್ನು ಟಿಳಕರು ಕೇಳಲಿಲ್ಲ. ನಾನು ವಾಮನರಾಯರಿಗೆ ಈ ಪತ್ರವು ಎಲ್ಲಿಂದ ಮತ್ತು ಹೇಗೆ ಬಂದಿತು? ಎಂದು ವಿಚಾರಿಸಿದಾಗ ಇಂತಹ ಪತ್ರಗಳು ಯಾರ ಕೈಯಿಂದ ಬರುವ ಸಂಭವವಿರುವವ್ರೋ ಅಂಥವರಿಂದಲೇ ನನ್ನ ಕೈಸೇರಿದೆ. ಅವರು ಖಾಸಗಿ ನೌಕರರಿರುವರು. ನೀವೇನು ಚಿಂತಿಸುವ ಕಾರಣವಿಲ್ಲೆಂದರು.'

ವಾಮನರಾವ ರಾನಡೆಯವರ ಖಟ್ಲೆನಡೆದಾಗ, ರಾಮಚಂದ್ರ ವಿಶ್ವನಾಥ ಶೇಗುಣಿಸೀಕರರು ಸಾಕ್ಷಿನುಡಿದಾಗ ಇದೆಲ್ಲವೂ ಹೊರಬಿದ್ದಿತು. ಶೇಗುಣಿಸೀಕರರು ಕೊಲ್ಹಾಪುರದವರಲ್ಲದಿದ್ದರೂ ಕೆಲಸಕ್ಕಾಗಿ ಮೇಲಿಂದ ಮೇಲೆ ಕೊಲ್ಹಾಪುರಕ್ಕೆ ಬರುತ್ತಿದ್ದರು. ೧೮೮೧ನೇ ನವ್ಹಂಬರ ೨೭ ಅಥವಾ ೨೮ಕ್ಕೆ ತಮ್ಮ ಕೆಲಸದ ಸಲುವಾಗಿ ರಾಮಭಾವು ಐನಾಪುರಕರರ ಮನೆಗೆ ಹೋಗಿದ್ದರು. ಅವರಿಬ್ಬರೂ ಆಪ್ತರು. ರಾಮಭಾವು ಅವರು ಮನೆಯಲ್ಲಿ ರಲಿಲ್ಲ. ಶೇಗುಣಿಸೀಕರರಿಗೆ ಪತ್ರ ಬರೆಯಲು ಬಿಳಿಯ ಕಾಗದ ಬೇಕಿತ್ತು. ರಾಮಭಾವುರವರ ಕಾಗದ ಪತ್ರಗಳ ಗಂಟುಕೊಡಲು ಅವರ ತಂಗಿಯನ್ನು ಕೇಳಿದರು. ಆ ಗಂಟಿನಲ್ಲಿ ಕಾಗದವನ್ನು ಹುಡುಕುವಾಗ ೧೦-೧೫ ಪತ್ರಗಳ ಒಂದು ಪುಡಿಕೆಯು ಕೈಗೆ ಹತ್ತಿತು. ಅವು ಏನೆಂದು ನೋಡುವಾಗ ಬರ್ವೆಯವರು ರಾಮಭಾವು ಐನಾಪುರಕರ, ಆಪ್ಟೆ ಮೊದಲಾದವರಿಗೆ ಬರೆಯಿಸಿದ ಪತ್ರಗಳೂ ಸ್ವತಃ ಬರ್ವೆಯವರ ಅಂಕಿತವಿದ್ದ ಕೆಲವು ಪತ್ರಗಳೂ ಕಂಡುಬಂದವು. ಅವುಗಳಲ್ಲಿ ಕೊಲ್ಹಾಪುರದ ಹಾಗೂ ವಿಶೇಷವಾಗಿ ಮಹಾರಾಜರ ವಿಷಯವೇ ಇದ್ದಿತು. ಶೇಗುಣಸೀಕರರು ಏನೂಗದ್ದಲ ಮಾಡದೇ ಆ ಗಂಟನ್ನು ಕಿಸೆಗೆ ಹಾಕಿಕೊಂಡು ಹೊರಬಿದ್ದರು. ಎರಡನೇ ದಿವಸ ವಾಮನರಾವ ರಾನಡೆಯವರ ಭೆಟ್ಟಿಯಾದಾಗ ಅದರಲ್ಲಿಯ ಕೆಲವು ಪತ್ರಗಳನ್ನು ಅವರಿಗೆ ಕೊಟ್ಟರು. ಇನ್ನೂ ಏನಾದರೂ ಇವೆಯೇ? ಎಂದು ರಾನಡೆಯವರು ವಿಚಾರಿಸಿದಾಗ 'ಇದೆ ಹಿಂದುಗಡೆ ಕೊಡುವೆ' ಎಂದು

ಹೇಳಿದರು. ಮುಂದೆ ನಾಲ್ಕೈದು ದಿನಗಳಲ್ಲಿ ಅವುಗಳನ್ನು ರಜಿಸ್ಟರಮಾಡಿ ರಾನಡೆಯವರಿಗೆ ಕಳಿಸಿದರು. 'ಈ ಪತ್ರಗಳು ಹೇಗೆ ದೊರೆತವು? ಎಂಬುದನ್ನು ಪ್ರಸಂಗ ಬಂದರೆ ತಾವು ಕೋರ್ಟಿನ ಮುಂದೆ ಹೇಳಬಹುದೇ ?' ಎಂದು ರಾನಡೆಯವರು ಕೇಳಿದಾಗ, ಹೇಳುವೆನೆಂದು ಒಪ್ಪಿಕೊಂಡಿದ್ದು, ಅದ ರಂತೆಯೇ ಹೇಳಿದರು. ಪತ್ರವು ಗುಪ್ತಚಾರರಿಂದ ಸಿಕ್ಕಿದ್ದು ನಿಜವೇ ಇದ್ದಿತು. ರಾಮಭಾವು ಐನಾಪುರಕರರು ಬರ್ವೆಯವರ ಖಾಸಗಿ ಖಾತೆ ಯಲ್ಲಿಯ ವಿಶ್ವಾಸಿಕರಾದ ನೌಕರರಿದ್ದರು. ಬರ್ವೆಯವರ ಗುಪ್ತ ಚಾರರೆಂದೇ ಜನ ಐನಾಪುರಕರರ ಕಡೆಗೆ ನೋಡುತ್ತಿದ್ದರು.

ಈ ಎಲ್ಲ ಸಾಕ್ಷಿಗಳು ಖೊಟ್ಟಿ ಪತ್ರದ ಬಗ್ಗೆ ಚನ್ನಾಗಿ ಬೆಳಕು ಕೆಡವು ತ್ತವೆ. ವಾಮನರಾವ ರಾನಡೆಯವರಿಗೆ ಪತ್ರವು ಕೈಸೇರಿದ ಕೂಡಲೇ ಅವರು ಅದನ್ನು ಅನೇಕರಿಗೆ ತೋರಿಸಿದರು. ಅವರಲ್ಲಿ ಭಿಡೆಯವರೂ ಒಬ್ಬರು. ಭಿಡೆಯವರು ಟಿಳಕರಿಗೆ ತೋರಿಸಿದರು. ಜನಜನಿತವಾಗಿದ್ದ ಸುದ್ದಿಗಳಿಂದ ಅದು ನಿಜವಿರಬೇಕೆಂದು ಟಿಳಕರಿಗೆ ಭಾಸವಾಯಿತು. ಆದರೆ ಟಿಳಕರು ಕಾಯದೆ ದೃಷ್ಟಿಯಿಂದ ಎಷ್ಟು ಮನವರಿಕೆ ಮಾಡಿಕೊಳ್ಳಲು ಶಕ್ಯ ವಿದೆಯೋ ಅಷ್ಟೆಲ್ಲ ಪ್ರಯತ್ನಮಾಡಿದರು. ಜನರ ಮಾತುಗಳಿಗೂ ಪತ್ರ ದಲ್ಲಿರುವ ಸಂಗತಿಗಳಿಗೂ ಎಷ್ಟುಹೊಂದುತ್ತದೆ ಎಂಬುದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರು. ಪತ್ರವು ಎಲ್ಲಿಂದ ಹೇಗೆ ಬಂದಿತು ? ಎಂಬುದನ್ನು ಸ್ವತಂತ್ರ ವಾಗಿ ತಿಳಿದುಕೊಂಡಿದ್ದರು. ರಾಮಭಾವು ಐನಾಪುರಕರರಲ್ಲಿ ಸಿಗುವದು ಅಸಂಭವವೇನಲ್ಲವೆಂದು ಅವರಿಗೆ ಅನಿಸಿತು. ವಾಮನರಾವ ರಾನಡೆ ಹಾಗೂ ಭಿಡೆ ಇಬ್ಬರೂ ಸದ್ಗೃಹಸ್ಥರು, ವಕೀಲರು. ಇಂತಹ ಅನುಭವೀ ವಕೀಲರು ಯಾವ ಪತ್ರದ ಮೇಲೆ ವಿಶ್ವಾಸವಿಟ್ಟರೋ ಅವರ ಬಗ್ಗೆ ಟಿಳಕರಿಗೆ ವಿಶ್ವಾಸವುಂಟಾಗುವದು ಸ್ವಾಭಾವಿಕವಿದ್ದಿತು. ಅಲ್ಲದೆ ರಾನಡೆ ಅಥವಾ ಭಿಡೆಯವರಿಗೆ ಟಿಳಕರನ್ನು ಸಂಕಟದಲ್ಲಿ ಕೆಡಹುವದಕ್ಕೆ ಯಾವ ಕಾರಣವೂ ಇರಲಿಲ್ಲ. ಇಷ್ಟೇ ಅಲ್ಲದೆ ರಾನಡೆಯವರು ಅದು ನಿಜವಾದ ಪತ್ರವೆಂದು ಜ್ಞಾನಪ್ರಕಾಶದಲ್ಲಿ ಮುದ್ರಿಸಿ, ಅದರ ಹೊಣೆಯನ್ನು ಸ್ವತಃ ತಲೆಯಮೇಲೆ ಹೊತ್ತಿದ್ದರು. ಕೊಲ್ಹಾಪುರದಲ್ಲಿ ಪತ್ರದಲ್ಲಿಯ ಸಂಗತಿಗಳನ್ನು ಡಾಣಾ ಡಂಗುರವಾಗಿ ಜನ ಮಾತನಾಡುತ್ತಿದ್ದರು. ಬರ್ವೆಯವರು ಅವರಮೇಲೆ

ಯಾವಕ್ರಮವನ್ನು ಕೈಕೊಂಡಿದ್ದಿಲ್ಲ. ಅಲ್ಲದೆ ಲಕ್ಷ್ಮೀದೇಗುಲದಲ್ಲಿ ಸಾರ್ವ ಜನಿಕ ಸಭೆಯಾಗಿ ಈ ವಿಷಯದಮೇಲೆ ಭಾಷಣಗಳಾಗಿದ್ದವು. ಅದರ ಮೇಲೆಯೂ ಕ್ರಮತೆಗೆದುಕೊಳ್ಳಲ್ಪಟ್ಟದ್ದಿಲ್ಲ. ಪತ್ರದಲ್ಲಿಯ ಕೆಲವು ಸಂಗತಿ ಗಳು ನಿಜವೇ ? ಎಂದು ತಿಳಿದುಕೊಳ್ಳಲು ನೇಮಿಸಿದ ಕಮಿಶನ್ನಿನ ಮುಂದೆಯೂ ಮುಂದೆ ಕೋರ್ಟಿನಲ್ಲಿಯೂ ಎಷ್ಟೋ ಸಾಕ್ಷಿಗಳಾಗಿದ್ದವು. ಮಹಾರಾಜರ ಸೋದರಮಾವಂದಿರಾದ ಪ್ರೀತಿರಾವ ಚವ್ಹಾಣರವರು ತಮ್ಮನ್ನು ಹಿಂಸಿಸುತ್ತಿರುವ ಸಂಗತಿಯನ್ನು ಮಹಾರಾಜರೇ ಸ್ವತಃ ಹೇಳಿದ ರೆಂದು ಸಾಕ್ಷಿ ಹೇಳಿದ್ದರು. ಅದರಂತೆಯೇ ಕೊಲ್ಹಾಪುರದಲ್ಲಿ ೩೦ ವರ್ಷ ಅಮೀನರಾಗಿದ್ದ ವಿನಾಯಕರಾವ ಕಾಳೆಯವರು, ಆ ಪತ್ರದಲ್ಲಿಯ ಜಾಂಬಳೀ ಮಸಿಯ ಅಕ್ಷರಗಳು ಮತ್ತು ಅಂಕಿತವು ಬರ್ವೆಯವರವೆಂದು ಪ್ರತಿಜ್ಞಾ ಪೂರ್ವಕವಾಗಿ ಸಾಕ್ಷಿಹೇಳಿದ್ದರು. ಈ ಎಲ್ಲ ಸಂಗತಿಗಳ ಪೂರ್ಣವಿಚಾರ ವನ್ನು ಟಿಳಕರು ಮಾಡಿದ್ದರು. ಇದಲ್ಲದೆ ತಮ್ಮ ಮಿತ್ರರೂ ಹಿತಚಿಂತಕರೂ ಆದ ಗೋಪಾಳರಾವ ಪಾಠಕ ಸಬ್‌ಜಜ್ಜರಿಗೂ ರಾ. ಬ. ರಾನಡೆಯವರಿಗೂ ಟಿಳಕರು ಈ ಪತ್ರವನ್ನು ತೋರಿಸಿದ್ದರು. ಉಭಯತರೂ ಈ ಪತ್ರದಮೇಲೆ ತಮ್ಮ ವಿಶ್ವಾಸವು ಉಂಟಾಗುತ್ತದೆ ಎಂದು ಹೇಳಿದ್ದರು. ಹೀಗೆ ಎಲ್ಲ ದೃಷ್ಟಿ ಕೋನದಿಂದ ಪತ್ರದ ಸತ್ಯಾಸತ್ಯತೆಯನ್ನು ವಿಮರ್ಶಿಸಿದ ಟಿಳಕರ ಮೇಲಾ ಗಲಿ, ಆಗರಕರರ ಮೇಲಾಗಲಿ ಯೋಗ್ಯ ಎಚ್ಚರಿಕೆಯನ್ನು ತೆಗೆದುಕೊಳ್ಳಲಿಲ್ಲ ವೆಂದು ಹೇಳುವದು ಸಮಂಜಸವಾಗಲಾರದು.

ಖಟ್ಲೆಯು ಸೆಶನ್ ಕೋರ್ಟಿಗೆ ಹೋದೊಡನೆ ರಾ. ಬ. ರಾನಡೆಯವರು ಈ ಪತ್ರದ ಬಗೆಗೆ ತಮಗೆ ಗೊತ್ತಿದ್ದ ಸಂಗತಿಗಳನ್ನು ಕೋರ್ಟಿನಲ್ಲಿ ಸಾಕ್ಷಿ ಹೇಳಬೇಕೆಂದು ಟಿಳಕರು ಅಪೇಕ್ಷಿಸುತ್ತಿದ್ದರು. ರಾನಡೆಯವರು ತಮ್ಮ ವಿಶ್ವಾಸವು ಆ ಪತ್ರದ ಮೇಲೆ ಕೂತಿತು ಎಂದು ಹೇಳುವದರಿಂದ ಆ ಪತ್ರವು ಸತ್ಯವಾದುದೆಂದು ನಿರ್ಣಯವಾಗುತ್ತಿರಲಿಲ್ಲ. ಅಥವಾ ಟಿಳಕರ ಹೊಣೆಯೂ ಕಡಿಮೆಯಾಗುತ್ತಿರಲಿಲ್ಲ. ಆದರೆ ಟಿಳಕರು ಈ ಪತ್ರದ ಸತ್ಯಾಸತ್ಯತೆಯ ಬಗ್ಗೆ ಎಷ್ಟು ವಿಚಾರಮಾಡಬೇಕೋ ಅಷ್ಟು ಮಾಡಿರುವರೋ ಇಲ್ಲವೋ ಎಂಬ ವಾದಗ್ರಸ್ತ ವಿಷಯವು ಕೋರ್ಟಿನಮುಂದೆ ಇದ್ದಿತು. ಆ ವಿಷಯ ವನ್ನು ನಿರ್ಣಯಿಸುವಾಗ ಖಂಡಿತವಾಗಿಯೂ ನ್ಯಾಯಾಧೀಶರಾದ ರಾನಡೆ

ಯವರ ಸಾಕ್ಷಿಯು ಉಪಯೋಗವಾಗುತ್ತಿತ್ತು. ಆದರೆ ರಾನಡೆಯುವರು ಇದಕ್ಕೆ ಒಪ್ಪಲಿಲ್ಲ. ಸೆಶನ್ ಕೋರ್ಟಿನಲ್ಲಿ 'ಟೆರಿ' ಎಂಬ ಅಕ್ಷರ ಶಾಸ್ತ್ರಜ್ಞ ನನ್ನು ಸಾಕ್ಷಿಗೆ ಕರೆಯಲಾಗಿತ್ತು. ''ಪತ್ರದಲ್ಲಿಯ ಅಂಕಿತವು ಮತ್ತು ಅಕ್ಷರ ಗಳು ಬರ್ವೆಯವರ ಅಕ್ಷರಗಳ ತದ್ರೂಪವಾಗಿವೆ. ಆದರೆ ಅವುಗಳನ್ನು ಆದರಂತೆ ತೀಡಿಬರೆದಂತೆ ಕಾಣುತ್ತವೆ.'' ಎಂದು ಹೇಳಿದನು.

ಹೀಗೆ ಟಿಳಕರು ಕಟ್ಟಿದ ವಿಶ್ವಾಸದ ಕೊತ್ತಳಗಳೆಲ್ಲ ಕಳಚಿ ಬೀಳ ಹತ್ತಿದವು. ಟಿಳಕರ ಖಟ್ಲೆಯು ಪ್ರಾರಂಭವಾಗುವ ಮೊದಲೇ ಭಿಡೆ, ಬಖಲೆ, ಮತ್ತು ರಾನಡೆಯುವರು ಅಪರಾಧಿಗಳೆಂದು ಜ್ಯೂರಿಗಳೆಲ್ಲ ಒಮ್ಮತದ ನಿರ್ಣಯಕೊಟ್ಟರು. ಇದನ್ನು ಕಂಡು ಟಿಳಕ, ಅಗರಕರರ ಮುಂಬಯಿಯ ಮಿತ್ರರೂ ವಕೀಲರೂ ನೀವು ಬರ್ವೆಯವರ ಕ್ಷಮೆಯನ್ನು ಈಗಲಾದರೂ ಕೇಳಿರಿ, ಬರ್ವೆಯವರು ಖಟ್ಲೆಯನ್ನು ತಿರುಗಿ ತೆಗೆದುಕೊಳ್ಳಬಹುದು. ಎಂದು ಬೆನ್ನುಹತ್ತಿದರು. ಕ್ಷಮೆ ಕೇಳುವದು ಭೂಷಣವಲ್ಲ ಶಿಕ್ಷೆಯಾಗಲಿ. ಆದರೆ ಕೇಸರಿಯು ಒಮ್ಮೆ ಬರೆದ ಶಬ್ದಗಳನ್ನು ತಿರುಗಿ ತೆಗೆದುಕೊಳ್ಳಲಾ ರದು ಎಂಬ ಕೀರ್ತಿಯಾದರೂ ಉಳಿಯುವದು ಎಂದೂ ಕೆಲವರು ಪ್ರತಿ ಪಾದಿಸಹತ್ತಿದರು. ಜುಲೈ ೭ಕ್ಕೆ ಭಿಡೆಯುವರ ತೀರ್ಪು ಹೊರಬಿದ್ದಿತು. ಅಂದು ರಾತ್ರಿ ಟಿಳಕ ಹಾಗೂ ಅಗರಕರರ ಮನೆಯಲ್ಲಿ ಎಲ್ಲ ಮಿತ್ರರು ಕೂಡಿ ದರು. ೪-೫ ತಾಸುಗಳವರೆಗೆ ದೀರ್ಘಚರ್ಚೆಯಾಯಿತು. ಟಿಳಕ ಹಾಗೂ ಆಗರಕರರು ಕ್ಷಮೆಕೇಳುವದು ತಪ್ಪೆಂದು ಪ್ರತಿಪಾದಿಸಿದರು. ಆದರೆ ಮುಂಬಯಿಯ ಮಿತ್ರರ ಮುಂದೆ ಅವರ ಆಟವು ನಡೆಯಲಿಲ್ಲ. ಪತ್ರವು ಸುಳ್ಳಿರಲಿ ನಿಜವಿರಲಿ, ಮಹಾರಾಜರನ್ನು ಪೀಡಿಸುತ್ತಿರುವ ಬಗ್ಗೆ ಅನೇಕ ಆಧಾರಗಳಿದ್ದವು. ಕೊಲ್ಹಾಪುರ ಸಂಸ್ಥಾನದ ಪ್ರಮುಖ ಸರದಾರರ ಪತ್ರವೊಂದು ಟಿಳಕರಿಗೆ ಆಧಾರವಾಗಿದ್ದಿತು. ವಾಮನರಾವ ರಾನಡೆಯ ವರ ಪತ್ರವು ಅಸತ್ಯವಾದುದೆಂದು ನಿರ್ಣಯವಾದೊಡನೆಯೆ ತಮ್ಮಕೈಯಲ್ಲಿ ರುವ ಬೆಲೆಯುಳ್ಳ ಈ ಪತ್ರವುಕೂಡ ತಮಗೆ ದಕ್ಕುವದೇ ಎಂದು ಟಿಳಕರಿಗೆ ಸಂಶಯಬಂದಿತು. ಆ ಸರದಾರರು ತಮ್ಮ ಪತ್ರವು ತಮಗೆ ಮರಳಿ ದೊರೆಯಬೇಕು. ಖಟ್ಲೆಯಲ್ಲಿ ಅದನ್ನು ಉಪಯೋಗಿಸಬಾರದು. ಎಂದು ಹೇಳಿಕಳಿಸಿದರು. ಸರದಾರರಿಗೂ ಟಿಳಕರಿಗೂ ಬೇಕಾದವರಾದ ನಿವೃತ್ತ

ನ್ಯಾಯಾಧೀಶರಾದ ಬಳವಂತರಾವ ಜೋಶಿಯವರು ಪುರಾವೆಯೆಂದು ಆ ಪತ್ರವನ್ನು ಉಪಯೋಗಿಸಕೂಡದೆಂದು ಸರದಾರರ ಆಗ್ರಹವಿದ್ದ ಮೂಲಕ, ಅದನ್ನು ಮರಳಿ ಕೊಡಬೇಕೆಂದು ಆಗ್ರಹ ಹಿಡಿದರು. ರಾತ್ರಿಯೆಲ್ಲ ವಿಚಾರವಾಗಿ ಆ ಪತ್ರವನ್ನು ಉಪಸ್ಥಿತಗೊಳಿಸಬಾರದೆಂದು ನಿರ್ಣಯ ವಾಯಿತು. ಜೋಶಿಯವರ ಕಣ್ಣೆದುರಿಗೇ ಆ ಪತ್ರವನ್ನು ಟಿಳಕರು ಸುಟ್ಟು ಬಿಟ್ಟರು. ತಮ್ಮ ಆಧಾರಗಳೆಲ್ಲ ಕುಸಿದುಬಿದ್ದ ಮೂಲಕ, ಟಿಳಕರು ಕ್ಷಮೆ ಯನ್ನು ಕೇಳಬೇಕೆಂಬ ಸಲಹೆಗೆ ತಮ್ಮ ಸಮ್ಮತಿಯನ್ನು ಕೊಟ್ಟರು. ಇದ್ದು ದನ್ನೆಲ್ಲ ಸರಳವಾಗಿ ಬರೆದುಕಳಿಸಿದರು.

"ನಾವು ವೃತ್ತಪತ್ರದಲ್ಲಿ ವಿಧಾನವನ್ನು ಮಾಡುವಾಗ ಆ ಪತ್ರವು ಸಾಧು ವಾದದ್ದೆಂದೇ ನಮಗೆ ಪ್ರಾಮಾಣಿಕವಾಗಿ ಅನಿಸುತ್ತಿತ್ತು. ಆದುದರಿಂದಲೇ ನಾವು ಪ್ರಕಟಿಸಿದೆವು. ಯಾರು ನಮಗೆ ಈ ಎಲ್ಲ ಸಂಗತಿಗಳನ್ನು ಒದಗಿಸಿ ದರೋ ಆಗ ಅವರಮೇಲೆ ನಮಗೆ ಅವಿಶ್ವಾಸವಿರಲಿಲ್ಲ. ಆದರೆ ಆ ವಿಧಾನ ಗಳು ಮತ್ತು ಪತ್ರ, ಭಿಡೆಯವರ ಖಟ್ಲೆಯಲ್ಲಿ ಅಸತ್ಯವಾದವುಗಳು ಎಂದು ನಿಶ್ಚಿತವಾದ ಮೂಲಕ ನಮ್ಮ ವಿಧಾನಗಳೆಲ್ಲವೂ ನಿರಾಧಾರವಾದವುಗಳು ಎಂದು ಸಿದ್ಧವಾಗುವವು. ನಾವು ಇಂತಹ ಸಂಗತಿಗಳ ಬಗ್ಗೆ ಇಷ್ಟು ವಿಶ್ವಾಸ ವಿಟ್ಟದ್ದಕ್ಕಾಗಿ ನಮಗೆ ಅತ್ಯಂತ ವಿಷಾದವಾಗಿದೆ. ನಾವು ಈ ಪತ್ರವನ್ನು ಬರೆದು ಕೊಟ್ಟನಂತರ ನೀವು ನಿಮ್ಮ ಮನಸ್ಸಿಗೆ ಬಂದಂತೆ (ಅಂದರೆ ಖಟ್ಲೆ ಯನ್ನು ತಿರುಗಿತಕ್ಕೊಳ್ಳುವದು, ಬಿಡುವದು) ಮಾಡಲು ನೀವು ಪೂರ್ಣ ಸ್ವತಂತ್ರರಿರುವಿರಿ. ಆದರೆ ನಾವು ಈ ಪತ್ರದಲ್ಲಿ ಪ್ರದರ್ಶಿಸಿದ ವಿಷಾದವು ಮಾತ್ರ ನಿರಂತರವಾಗಿ ಉಳಿಯುವದು." ಈ ಪತ್ರವು ಬರ್ವೆಯವರ ಕೈಸೇರಿದ ಬಳಿಕ ಖಟ್ಲೆಯಲ್ಲಿ ಹುರುಳೇ ಉಳಿಯಲಿಲ್ಲ.

ಸೆಶನ್ ಕೋರ್ಟಿನಲ್ಲಿ ಖಟ್ಲೆಯು ಪ್ರಾರಂಭವಾದೊಡನೆಯೇ ಕ್ಷಮೆಯು ವ್ಯರ್ಥವಾಯಿತೆಂದು ಕಂಡುಬಂದಿತು. ಬ್ಯಾರಿಸ್ಟರ ಇನ್ವೆ ಯರ್ಾರಿಟಿಯು ಮೊದಲಿಗೆ ಕ್ಷಮಾಪತ್ರದ ಉಲ್ಲೇಖಮಾಡಿ ಈ ಪತ್ರದಲ್ಲಿ ಏನೂ ಹುರುಳಿಲ್ಲವೆಂದೂ ಆರೋಪಿಗೆ ಉರುಲು ಬೀಳುವದು ನಿಶ್ಚಿತ ವಾದಾಗ ಪಾರಾಗಲು ಈ ಕ್ಷಮಾಯಾಚನೆ ಹೊರಟಿದೆ ಎಂದು ಉದ್ಗಾರ ತೆಗೆದು, ಕೇಸರಿ ಹಾಗೂ ಮರಾಠಾ ಪತ್ರಿಗಳಲ್ಲಿ ಪ್ರಕಟವಾದ ಸುದ್ದಿಗಳಿಂದ

ಸಮಾಜದಲ್ಲಿ ವಿಷಬೆರೆತಿದೆ ಟಿಳಕ ಹಾಗೂ ಆಗರಕರರಿಗೆ ಶಿಕ್ಷೆಯಾಗದೆ ಅದು ಹೋಗಲಾರದು. ಇಲ್ಲದಿದ್ದರೆ ಬರ್ವೆಯವರೇ ತಮ್ಮ ಪಕ್ಷವು ದುರ್ಬಲವಾದುದು ಎಂದು ತಿಳಿದು ತಾವೇ ಈ ಕ್ಷಮಾಯಾಚನೆಯ ನಾಟಕ ವನ್ನು ಹೂಡಿ ಪಾರಾಗಬೇಕೆಂದು ಮಾಡಿದ್ದಾರೆಂದು ವಿಪರೀತವಾಗಿ ಜನರ ಗ್ರಹಿಕೆಯಾಗುವದೆಂದು ಪ್ರತಿಪಾದಿಸಿದರು.

ಆ ನಂತರ ಟಿಳಕರ ವಕೀಲರಾದ ತೆಲಂಗರು ೧೮೭೯ರಿಂದ ದೇಶೀವೃತ್ತ ಪತ್ರಗಳಲ್ಲಿ ಬರ್ವೆಯವರ ವಿರುದ್ಧ ಬಂದ ಲೇಖಗಳಿಗಾಗಿ ಅವರ ಮೇಲೆ ಯಾವಕ್ರಮುವನ್ನೂ ಕೈಕೊಂಡಿಲ್ಲ. ಪ್ರತ್ಯಕ್ಷವಾಗಿ ಸಾರ್ವಜನಿಕ ಸಭೆ ಯಲ್ಲಾದ ಭಾಷಣಗಳ ಮೇಲೆಯೂ ಏನೂ ಮಾಡಿಲ್ಲ. ಅಂದಮೇಲೆ ದೂರದಲ್ಲಿ ಪುಣೆಯಲ್ಲಿರುವ ಟಿಳಕರಂಥವರು ಆದರ ಮೇಲೆ ವಿಶ್ವಾಸವಿಡುವದು ಆಶ್ಚರ್ಯವಲ್ಲವೆಂದು ಪ್ರತಿಪಾದಿಸಿದರು.

೧೭ನೇ ಜುಲೈಗೆ ನ್ಯಾ. ಆಥೇಯನರು ಸಮಾರೋಪದ ಭಾಷಣವನ್ನು ಮಾಡಿದನಂತರ ಜ್ಯೂರಿಗಳು ಮೊದಲನೇ ಆರೋಪವು ಸರ್ವಾನುಮತ ದಿಂದಲೂ ಎರಡನೇ, ಮೂರನೇ ಆರೋಪಗಳ ಬಗ್ಗೆ ೭-೨ ಮತಗಳಿಂ ದಲೂ ಟಿಳಕರ ಮೇಲೆ ಆರೋಪವು ಹೊರಿಸಲ್ಪಟ್ಟಿತು. ನಂತರ ಟಿಳಕ ಆಗರಕರ ಇಬ್ಬರಮೇಲೆಯೂ ಇದ್ದ ಖಟ್ಲೆಯು ೧೦ ನಿಮಿಷಗಳಲ್ಲಿ ಮುಗಿದು ಇಬ್ಬರೂ ಅಪರಾಧವನ್ನು ಒಪ್ಪಿಕೊಂಡರು. ಪುರಾವೆಗಳನ್ನು ಕೊಡುವ ದಿಲ್ಲವೆಂದು ಹೇಳಿದರು. ಕೊನೆಗೆ ಟಿಳಕ, ಆಗರಕರ ಮತ್ತು ಬಖಲೆಯುವ ರಿಗೆ ೪ ತಿಂಗಳ ಸಾದಾ ಶಿಕ್ಷೆ, ರಾನಡೆ ಹಾಗು ಭಿಡೆಯುವರಿಗೆ ೨ ವರ್ಷ ಸಾದಾ ಶಿಕ್ಷೆ ಮತ್ತು ಒಂದೊಂದು ಸಾವಿರ ರೂಪಾಯಿ ದಂಡವೆಂದು ಸಾರಲಾಯಿತು.

ವಿಚಾರ ಮಾಡಿನೋಡಿದರೆ, ಈ ಪ್ರಕರಣವು ಇಡೀ ಮಹಾರಾಷ್ಟ್ರದ ಅಂತಃಕರಣವನ್ನು ಕಲಕಿತ್ತು ಎಂಬುದು ವ್ಯಕ್ತವಾಗುತ್ತದೆ. ಮತ್ತು ಆ ಕಾಲದ ಮುಖಂಡರಿಗೆಲ್ಲ ಹೇಗೆ ಸುತ್ತುವರಿದಿತ್ತೆಂಬುದೂ ಟಿಳಕ, ಆಗರಕರರು ಕೇವಲ ಸಾರ್ವಜನಿಕರ ಮುಖವೆಂಬುದೂ ಕಂಡುಬರುವದು. ಏನೇ ಇರಲಿ ಟಿಳಕ-ಆಗರಕರರಿಗೆ ಶಿಕ್ಷೆಯಾಗಿದ್ದರೂ ಕೋರ್ಟು ಅವರನ್ನು ಅಪರಾಧಿ

ಗಳೆಂದು ನಿರ್ಣಯಿಸಿದ್ದರೂ ಬರ್ವೆಯವರೇ ಮಹಾಪರಾಧಿಗಳೆಂದು ಜನತೆ ನಿರ್ಣಯಕೊಟ್ಟಿತು. ಇದಕ್ಕೆ ಟಿಳಕ, ಆಗರಕರರ ಮೇಲೆ ಜನತೆ ತೋರಿದ ಪ್ರೀತ್ಯಾದರಗಳೇ ಸಾಕ್ಷಿ.

ಶಿಕ್ಷೆಯಾದ ದಿನವೇ ಟಿಳಕ ಹಾಗೂ ಆಗರಕರ ಇವರಿಬ್ಬರನ್ನೂ ಡೊಂಗರಿ ಸೆರೆಮನೆಗೆ ಕಳಿಸಲಾಯಿತು ನಾಲ್ಕು ತಿಂಗಳ ಶಿಕ್ಷೆಯಿದ್ದರೂ ಸದ್ವರ್ತನದ ಸಲುವಾಗಿ ೧೯ ದಿನಗಳ ಬಿಡುವು ದೊರೆಯಿತು. ೧೦೧ ದಿನ ಶಿಕ್ಷೆ ಅನುಭವಿಸಿ ಹೊರಬಂದರು. ಈ ನೂರಾವಂದು ದಿನಗಳ ಅನುಭವದ ಒಂದು ಗ್ರಂಥವನ್ನು ಆಗರಕರರು ಬರೆದಿದ್ದಾರೆ. ೨೦ನೇ ಶತಕದ ೩ನೇ ೪ನೇ ದಶಕಗಳಲ್ಲಿ ಜೇಲುಗಳೆಂದರೆ ವಿಶ್ರಾಂತಿ ಸ್ಥಾನಗಳಾಗಿವೆ. ಆಗಿನ ಕಾಲದ ಜೇಲಿನವಾಸವೆಂದರೆ ಪ್ರತ್ಯಕ್ಷ ನರಕವಾಸವೇ ಇದ್ದಿತು. 'ಹಸರಾಣಿ, ಹಸಿಬಿಸಿ ಭಕ್ಕರಿ, ಕೂರಿಯಿಂದ ತುಂಬಿದ ಕಂಬಳಿಗಳು, ತಗಣಿಗಳಿಂದ ಕೆತ್ತಲ್ಪಟ್ಟ ಗೋಡೆಗಳು, ಏನೆಂದು ಹೇಳಲಿ ಆ ಸುಖ, ಆ ಚಂದ' ಎಂದು ಆಗರಕರರು ವರ್ಣಿಸಿದ್ದಾರೆ. ಕಾಲೇಜಿನಲ್ಲಿರುವಾಗ ಯೋಚಿಸಿದ ಮನೋರಥಗಳ ಪುನರಾವೃತ್ತಿಯು ಜೇಲಿನಲ್ಲಿ ಸಮಯ ಸಿಕ್ಕಾಗ ರಾತ್ರಿಯೆಲ್ಲ ನಡೆಯುತ್ತಿತ್ತು. ಒಮ್ಮೊಮ್ಮೆ ಇವರ ಚರ್ಚೆಯು ಒಳ್ಳೇರಭಸಕ್ಕೆ ಮುಟ್ಟಿದಾಗ ಪೋಲೀಸರು 'ರಾಯರೇ, ಸ್ವಲ್ಪ ಮೆಲ್ಲಗೆ ಮಾತನಾಡಿರಿ' ಎಂದು ಎಚ್ಚರಿಸುತ್ತಿದ್ದರು ಪುನಃ ಸೆರೆಮನೆಯನ್ನು ಸೇರುವ ಪ್ರಸಂಗಬಂದರೆ ಯಾವ ಸಿದ್ಧತೆಗಳನ್ನು ಮಾಡಿಕೊಳ್ಳಬೇಕೆಂಬುದನ್ನೂ ಚರ್ಚಿಸಿದ್ದರು. ಆ ಪ್ರಸಂಗವು ಟಿಳಕರಿಗೆ ಮಾತ್ರ ಮೇಲಿಂದಮೇಲೆ ಬಂದಿತು.

ಟಿಳಕ ಹಾಗೂ ಆಗರಕರರಿಗೆ ಶಿಕ್ಷೆಯಾದುದಕ್ಕಾಗಿ ಜನರಿಗೆ ಬಹಳ ದುಃಖವಾಗಿತ್ತು. ಅನೇಕ ಸಭೆಗಳನ್ನುಮಾಡಿದರು. ಪ್ರೊ.ವರ್ಡ್ಸ್‌ವರ್ಥ್, ನಾಮದಾರ ಮಂಡಲೀಕ ಮೊದಲಾದ ಪ್ರತಿಷ್ಠಿತ ಗೃಹಸ್ಥರು ಮುಂದಾಗಿ ಟಿಳಕ, ಆಗರಕರರ ಶಿಕ್ಷೆಯನ್ನು ಪೂರ್ಣಕಡಿಮೆಮಾಡಿರೆಂದು ಸರಜೇಮ್ಸ್ ಫರ್ಗ್ಯೂಸನ್ನರ ಕಡೆಗೆ ಅರ್ಜಿಮಾಡಿದರು ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಆದರೆ ಜನ ಮಾತ್ರ ಸಾರ್ವಜನಿಕವಾಗಿ ಅವರ ಸನ್ಮಾನ ಮಾಡಬೇಕೆಂದು ನಿಶ್ಚಯಿಸಿತು. ಈ ವಿಷಯವಾಗಿ ದೀನಬಂಧು ಪತ್ರವು 'ಈ ಇಬ್ಬರು ತರುಣರಿಗೆ ಅನ್ಯಾಯದಿಂದ ಶಿಕ್ಷೆಯಾಗಿದೆ. ತಿಲಮಾತ್ರವೂ ಈ ಶಿಕ್ಷೆಯು ಕಲ್ಪನೆಯು ಅವರಿಗೆ ಉಂಟಾಗದಂತೆ ಅವರನ್ನು ಬಿಟ್ಟುಕೊಡಲಿ,

ಅವರಿಗೆ ಮಾನಪತ್ರಕೊಡಬೇಕು. ಮತ್ತು ಜೇಲಿನಿಂದ ಹೊರಬರುವಾಗ ರಥದಲ್ಲಿ ಕೂಡಿಸಿ, ಊದುತ್ತ ಬಾರಿಸುತ್ತ, ಅವರ ಮೆರವಣಿಗೆಯನ್ನು ತೆಗೆಯಬೇಕು. ಮತ್ತು ಅವರನ್ನು ಇಚ್ಛಿತ ಸ್ಥಳಕ್ಕೆ ಮುಟ್ಟಿಸಬೇಕು. ಇದನ್ನು ಮಾಡಲು ನಾವು ಬದ್ಧರು' ಎಂದು ಬರೆದಿದ್ದಿತು.

೨೬ನೇ ಅಕ್ಟೋಬರ (೧೮೮೨) ಗುರುವಾರ ದಿವಸ ಬೆಳಗ್ಗೆ ಟಿಳಕ ಹಾಗೂ ಆಗರಕರರು ಡೊಂಗರಿ ಜೇಲಿನಿಂದ ಬಿಡುಗಡೆ ಹೊಂದಿದರು. ಅವರ ಸತ್ಕಾರಾರ್ಥವಾಗಿ ಬಾಗಿಲಲ್ಲಿ ಎರಡು ಸಾವಿರ ಜನರು ನೆರೆದಿದ್ದರು. ದೀನಬಂಧು ಪತ್ರದ ಸಂಪಾದಕರಾದ ರಾ. ಲೋಖಂಡೆ, ದಾಮೋದರ ಸಾವಳಾರಾಮ ಯಂದೆ, ಮೊದಲಾದ ಬ್ರಾಹ್ಮಣೇತರ ಮುಖಂಡರೇ ಮುಂದಾಗಿದ್ದರು. ಇಬ್ಬರನ್ನೂ ರಥದಲ್ಲಿ ಕೂಡಿಸಿ ಊರಲ್ಲಿ ಮೆರವಣಿಗೆಯನ್ನು ತೆಗೆದರು. ದೀನಬಂಧು ಪತ್ರದ ಕಚೇರಿ, ಯೂನಿಯನ್‌ಕ್ಲಬ್, ಮಾಧವದಾಸ ರಘುನಾಥದಾಸರ ಬಂಗಲೆ ಮೊದಲಾದ ಸ್ಥಳಗಳಲ್ಲಿ ಸಾವಿರಾರು ಜನರು ಅವರ ಸತ್ಕಾರಮಾಡಿದರು. ಪರಸ್ಥಳದಿಂದಲೂ ಸಾವಿರಾರು ಜನ ದರ್ಶನಕ್ಕಾಗಿ ಬಂದಿದ್ದರು. ಖಡಕಿ ನಿಲ್ದಾಣದಲ್ಲಿ ಡೆಕ್ಕನ್ ಕಾಲೇಜದ ಮಂಡಳಿಯು ಸತ್ಕಾರವನ್ನು ಏರ್ಪಡಿಸಿತು. ಪುಣೆಯ ಸ್ಟೇಶನ್‌ದಲ್ಲಿಯಂತೂ ಕೇಳುವದೇನು ? ಇಡೀ ಪುಣೆ ಪಟ್ಟಣವೇ ದರ್ಶನಾಕಾಂಕ್ಷಿಯಾಗಿ ನಿಂತಂತಾಗಿದ್ದಿತು. ಅತ್ಯಂತ ಸಂಭ್ರಮದಿಂದ ಊರಲ್ಲಿ ಕರೆದುಕೊಂಡುಹೋದರು. ಬೆಳಗ್ಗೆ ರಾ. ಹರಿರಾವಜಿ ಚಿಪಳೂಣಕರರ ಬಂಗಲೆಯಲ್ಲಿಯೂ ಸಾಯಂಕಾಲ ಮುರೋಬದಾದಾರವರ ವಾಡೆಯಲ್ಲಿಯೂ ಸಾರ್ವಜನಿಕ ಸಭೆಯ ವತಿಯಿಂದ ಸಾರ್ವಜನಿಕವಾಗಿ ಸತ್ಕಾರಮಾಡಲಾಯಿತು.

ಲೋಕ ಸೇವೆಯ ಶಾರೀರಿಕ ದುಃಖ ಮತ್ತು ಜನತೆಯಿಂದಾದ ಸನ್ಮಾನದ ಸುಖ ಇವೆರಡರಿಂದಲೂ ದೊರೆಯುವ ಸಾಕ್ಷಾತ್ಕಾರದ ಆನಂದವನ್ನು ಭೋಗಿಸುವ ಭಾಗ್ಯವು ಲೋಕಮಾನ್ಯರಿಗೆ ಜನ್ಮದಲ್ಲಿ ಅನೇಕಸಲ ದೊರಕಿದ್ದರಲ್ಲಿ ಇದು ಮೊದಲನೆಯ ಅನುಭವವು. ಹೀಗೆ ಆಕಸ್ಮಿಕವಾಗಿ ಬಂದ ಕೊಲ್ಹಾಪುರ ಹಾಗು ಟಿಳಕರ ನಿಕಟ ಸಂಬಂಧವು ಆಯುಷ್ಯವಿರುವವರೆಗೆ ಇರಬೇಕೆಂದು ಈಶಸಂಕಲ್ಪವಿದ್ದಂತೆ ಕಾಣುತ್ತದೆ.

ಕೊಲ್ಹಾಪುರ ಪ್ರಕರಣದಲ್ಲಿ ಉಂಟಾದ ಲೋಕ ಸಹಾನುಭೂತಿ ಹಾಗೂ ಲೋಕಪ್ರಿಯತೆಗಳು ಟಿಳಕರನ್ನು ತಾಯಿಯಂತೆ ಇಡೀ ಆಯುಷ್ಯ

ದಲ್ಲಿ ರಕ್ಷಿಸಿದವು. ಅವರನ್ನು ಅವು ಎಂದೂ ಅಗಲಲಿಲ್ಲ. ಚಿಪಳೂಣಕರರಂತೆ ಸ್ವಾರ್ಥತ್ಯಾಗಮಾಡಿ ಸ್ವತಂತ್ರ ಶಾಲೆಯನ್ನು ಸ್ಥಾಪಿಸಿದ್ದರಿಂದ ಅವರ ಬಗ್ಗೆ ಆದರ ಬುದ್ಧಿಯುಂಟಾಯಿತು. ಕೊಲ್ಹಾಪುರ ಪ್ರಕರಣದಿಂದ ಅದು ದ್ವಿಗುಣಿತವಾಯಿತು. ಟಿಳಕರ ಮಹದೆರ್ಸೆಯೇ ಹಾಗಿದ್ದಿತು. ಅವರ ಕಾರ್ಯದಲ್ಲಿ ಮಿತ್ರರ ಕೊರತೆಯು ಎಂದೂ ಆಗಲಿಲ್ಲ. ಕೊಲ್ಹಾಪುರದ ಪ್ರಕರ್ಣ ಪ್ರಾರಂಭವಾದಾಗ ಟಿಳಕರ ಸಾರ್ವಜನಿಕ ಜೀವನವು ಸುರುವು ಆಗಿ ಒಂದು ಒಂದೂವರೆ ವರ್ಷಮಾತ್ರವಾಗಿದ್ದಿತು. ಅವರಿಗೆ ಅರಿಯದಂತೆಯೇ ಅವರ ಜಾಮೀನಿನ ಸಿದ್ಧತೆಯಾಗಿದ್ದಿತು. ಉರುವಣೆ ಎಂಬುವವರು ದೊಡ್ಡ ಬೆಲ್ಲದ ವ್ಯಾಪಾರಿಗಳು. ಅವರಿಗೂ ಟಿಳಕರಿಗೂ ಮೋರೆಯ ಗುರ್ತುಕೂಡ ಇರಲಿಲ್ಲ. ಅವರು ೫೦೦೦ ರೂಪಾಯಿಗಳ ಹಮ್ಮಿಣಿಯನ್ನು ತೆಗೆದುಕೊಂಡು ಕೋರ್ಟಗೆ ಹೋಗಿ ಕುಳಿತಿದ್ದರೆಂದು ಹೇಳುತ್ತಾರೆ. ಈ ಅನಿಮಿತ್ತ ಬಂಧುಗಳ ಸ್ನೇಹವು ಇಬ್ಬರಲ್ಲಿ ಆಮರಣವಾಗಿ ಉಳಿಯಿತು. ಟಿಳಕರ ಆಯುಷ್ಯದಲ್ಲಿ ಅನೇಕ ಮಿತ್ರರು ನಿರಪೇಕ್ಷ ಬುದ್ಧಿಯಿಂದ ಸಹಾಯ ಮಾಡುವವರು ದೊರೆತಿದ್ದರೂ ಉರುವಣೆಯವರ ನೆನಪುಮಾತ್ರ ಅವರಿಗೆ ಯಾವಾಗಲೂ ಜಾಗೃತವಿರುತ್ತಿದ್ದಿತು. ಅವರು ತಮ್ಮ ಗೆಳೆಯರ ಮುಂದೆ 'ನನ್ನ ಏನೂ ಪರಿಚಯವಿಲ್ಲದೆ ೫೦೦೦ ರೂಪಾಯಿಗಳನ್ನು ಜಾಮೀನವಾಗಿ ಕೊಡಲು ಸಿದ್ಧನಾದ ಉರುವಣೆ ಶೇಡಜಿಯನ್ನು ನೋಡಿ, ನನಗೆ ಬಹಳ ಆಶ್ಚರ್ಯವಾಯಿತು. ಸಾರ್ವಜನಿಕ ಸೇವೆಯ ಫಲವು ಬಹಳ ದೂರವಿರುವದಿಲ್ಲೆಂದು ಸಾರ್ವಜನಿಕ ಜೀವನದ ಮೊದಲನೆಯ ಹೆಜ್ಜೆಯಲ್ಲಿಯೇ ನಾನು ನುನಗಂಡೆನು' ಎಂದು ಹೇಳುತ್ತಿದ್ದರು. ಶೇಡಜಿಯಂತೆಯೇ ಅನೇಕ ವಕೀಲರು ಮುಂದೆಬಂದು ಸಹಾಯ ನೀಡಿದರು. ಸಹಾಯಧನವನ್ನು ಕೂಡಿಸಿದರು. ಮುಂಬಯಿ, ಪುಣೆಗಳಲ್ಲಿಯೂ ಧನಸಂಗ್ರಹಿಸಲಾಯಿತು. ಆದರೂ ಕೆಲಸಕ್ಕೆ ಸಾಲುವಷ್ಟು ಸಿಕ್ಕಲಿಲ್ಲ. ಕೇಸರಿ, ಮರಾಠಾ ಪತ್ರಗಳಿಗೆ ಸಾಲವಾಯಿತು. ಆದರೆ ತಮಗಾದ ಸಾಲವು ಹೇಗೆ ಮುಟ್ಟೀತು ಎಂಬ ಚಿಂತೆಗಿಂತಲೂ ಜನರು ಅಕಲ್ಪಿತವಾಗಿ ತಮಗೆಮಾಡದ ಉಪಕಾರವನ್ನು ಹೇಗೆ ತೀರಿಸಬೇಕೆಂಬ ಚಿಂತೆಯು ಹೆಚ್ಚಾಯಿತು. ಹಾಗೆ ಅನಿಸುವಂತೆಯೇ ಈ ಸಂಕಟದಲ್ಲಿ ಜನತೆ ಬಹು ದೊಡ್ಡ ಪ್ರಮಾಣದಲ್ಲಿ ಸಹಾನುಭೂತಿಯನ್ನು ತೋರಿತು.

---

## ಫರ್ಗ್ಯೂಸನ್ ಕಾಲೇಜಿನ ಸಂಸ್ಥಾಪನೆ

ಲೋಕಮಾನ್ಯರು ವಕೀಲೀಪದವಿಗಾಗಿ ಓದುತ್ತಿರುವಾಗಲೇ, ಶಿಕ್ಷಣ ಪ್ರಸಾರವನ್ನು ತಮ್ಮ ಜೀವನದ ಧ್ಯೇಯವನ್ನಾಗಿರಿಸಿಕೊಂಡು ಅದಕ್ಕಾಗಿ ಒಂದು ಕಾಲೇಜನ್ನು ತೆರೆಯಬೇಕೆಂದು ಸಂಕಲ್ಪಿಸಿದ್ದರು. ಒಂದು ಹಾಯಸ್ಕೂಲನ್ನು ತೆರೆಯಲು ಸಾಕಷ್ಟು ಜನರು ಸಿಗದಾಗ, ಕಾಲೇಜನ್ನು ತೆರೆಯುವ ಬಗೆಯೆಂತು ? ಕಾಲೇಜನ್ನು ತೆರೆಯಬೇಕೆಂಬ ಹಂಬಲವನ್ನು ಹಾಯಸ್ಕೂಲಿನಿಂದಲೇ ಹಿಂಗಿಸಿಕೊಂಡರು. ಆದರೆ ಅವರ ಕಾಲೇಜಿನ ಕನಸು ನನಸಾಗುವ ಕಾಲವು ಸನ್ನಿಹಿತವಾಗುತ್ತಿತ್ತು. ಕೊಲ್ಲಾಪುರ ಪ್ರಕರಣದಿಂದ ಮಾನ್ಯ ಟಿಳಕ ಮತ್ತು ಆಗರಕರರ ಕೀರ್ತಿಯು ದೇಶದತುಂಬಾ ಪಸರಿಸಿತು. ಸಾಮಾನ್ಯ ಜನರು ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಟಿಳಕರಿಗೆ ದೇಶದ ಮಹಾನುಭಾವರ ಪರಿಚಯಬಂದಿತು. ಅಂದಿನ ಸಂಸ್ಥಾನಿಕರ ಮತ್ತು ಸಿರಿವಂತರ ಆಶ್ರಯದೊರೆಯುವ ಲಕ್ಷಣಗಳು ಕಂಡುಬಂದವು. ಶಿಕ್ಷಣ ಸಂಸ್ಥೆಗೆ ಶ್ರೀಯುತರಾದ ಆಗರಕರ, ಆಪ್ಟೆ, ಕೇಳಕರ, ಧಾರಪರಂತಹ ಉತ್ಸಾಹಿ ತರುಣ ವಿದ್ವಾಂಸರು ಸಹಾಯಕ್ಕಾಗಿ ಬಂದುನಿಂತರು. ಇದರಿಂದ ಮಹಾರಾಷ್ಟ್ರದ ಮುಖಂಡರಲ್ಲಿಯೂ, ಶಿಕ್ಷಣತಜ್ಞರಲ್ಲಿಯೂ ಒಂದು ನವ ಚೈತನ್ಯವು ಮೂಡಿತು. ಶಿಕ್ಷಣಕಮೀಟಿಯ ಅಧ್ಯಕ್ಷರಾದ ಹಂಟರಸಾಹೇಬರ ಅಭಿಪ್ರಾಯವನ್ನು ಈ ಮೊದಲೇ ನೀವು ನೋಡಿದ್ದು ವಿದಿತವಿರಬೇಕು. ಸ್ವತಂತ್ರವಾಗಿ ನಡೆದ ಶೈಕ್ಷಣಿಕ ಸಂಸ್ಥೆಗಳಿಗೆ ಉದಾರ–ಮನಸ್ಸಿನಿಂದ ಧನ ಸಹಾಯವನ್ನು ನೀಡಬೇಕೆಂಬುದೇ ಆವರ ವರದಿಯ ಆಶಯವಿತ್ತು. ಅದನ್ನು ಸರಕಾರವೂ ಮನ್ನಿಸಿತು. ಅಲ್ಲದೆ, ನ್ಯೂ ಇಂಗ್ಲಿಷ ಸ್ಕೂಲಿನಲ್ಲಿ ಸೇರಿದ ಯುವಕರು ತಮ್ಮ ಆಯುಷ್ಯವನ್ನೇ ಶಿಕ್ಷಣಕ್ಕೆ ಮುಡಪಿಡಬೇಕೆಂದು ನಿಶ್ಚಯಿಸಿ, ದಕ್ಷಿಣಭಾರತ ವಿದ್ಯಾಪ್ರಸಾರಕ ಮಂಡಲವೆಂಬ ಸಂಸ್ಥೆಯೊಂದನ್ನು (ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿ) ಸ್ಥಾಪಿಸಿ, ಆಜೀವ ಸದಸ್ಯರಾಗುವ ಸಂಕಲ್ಪಮಾಡಿದ್ದರು. ಮುಂದೆ ಸ್ಥಾಪಿಸಲಿದ್ದ ಮಹಾವಿದ್ಯಾಲಯದ ನೆರಳೇ

ಈ ಸಂಸ್ಥೆಯಾಗಿತ್ತು. ಹೀಗಾಗಿ ಕಾಲೇಜನ್ನು ತೆರೆಯುವ ಅವರ ವಿಚಾರಕ್ಕೆ ಚಾಲನೆ ದೊರೆಯಿತು.

ಸಂಸ್ಥೆಯಲ್ಲಿ ಸೇರಿದವರಲ್ಲಿ ಅನೇಕ ಮೇಧಾವಿಗಳು, ಉತ್ಸಾಹಿಕಾರ್ಯಕರ್ತರು, ಪ್ರಥಮಶ್ರೇಣಿಯ ಪದವೀಧರರು, ಮಹತ್ವಾಕಾಂಕ್ಷಿಗಳು ಕೂಡಿದ್ದರು ಕಾಲೇಜೊಂದನ್ನು ಸಂಸ್ಥಾಪಿಸಿ ಬಿ. ಎ. ಎಮ್. ಎ. ಪದವಿಗಳ ಶಿಕ್ಷಣವನ್ನು ತರುಣರಿಗೆ ಕೊಟ್ಟು ಅವರಿಂದ ವಿಶ್ವವಿದ್ಯಾನಿಲಯದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಲು ನಿರ್ಣಯಿಸಿದರು. ಶ್ರೀ ಆಪ್ಟೆಯವರು ತಮ್ಮ ರಾಷ್ಟ್ರೀಯ ಶಿಕ್ಷಣದ ವಿಚಾರಗಳನ್ನು ಶಿಕ್ಷಣಕಮೀಟಿಯೆದುರು ಮಂಡಿಸುವಾಗ, (೧) ಶಿಕ್ಷಣದ ಅನುಕೂಲತೆಗಳನ್ನು ಹೆಚ್ಚಿಸಬೇಕು. (೨) ಶಿಕ್ಷಣದ ವೆಚ್ಚವನ್ನು ತಗ್ಗಿಸಬೇಕು. (೩) ಸರಕಾರದ ಶಿಕ್ಷಣಪದ್ಧತಿಯನ್ನು ಸುಧಾರಿಸಬೇಕು (೪) ಸ್ವತಂತ್ರ ಶಿಕ್ಷಣ ಸಂಸ್ಥೆಗಳ ಧ್ಯೇಯ,ಧೋರಣೆಗೆ ಧಕ್ಕೆ ತಗಲಬಾರದು. (೫) ಅವರಿಗೆ ಸಹಾಯಧನವನ್ನಿತ್ತರೂ ಅವರ ಧೋರಣೆಗೆ ಬಾಧೆ ತರಬಾರದು. (೬) ಶಿಕ್ಷಣವನ್ನು ಆಂಗ್ಲಭಾಷೆಗಿಂತ ಪ್ರಾದೇಶಿಕ ಭಾಷೆಯಲ್ಲಿ ಕಲಿಸಬೇಕು (೭) ಇಂಗ್ಲಂಡದ ಶಿಕ್ಷಣಪದ್ಧತಿಯನ್ನು ಅನುಕರಿಸದೇ ನಮ್ಮ ದೇಶಕ್ಕೆ ಯೋಗ್ಯವಾಗುವಂತೆ ಅದನ್ನು ಇಲ್ಲಿಯೇ ರೂಪಿಸಬೇಕು. (೮) ಪಠ್ಯಪುಸ್ತಕಗಳನ್ನು ಭಾರತದಲ್ಲಿಯೇ ಸಿದ್ಧಪಡಿಸಬೇಕು. (೯) ಉಚ್ಚಶಿಕ್ಷಣದ ಸೂತ್ರಗಳು ಭಾರತೀಯರ ಕಡೆಗೆ ಇರಬೇಕು. ಎಂದು ಮಾರ್ಮಿಕರೀತಿಯಲ್ಲಿ ತಿಳಿಸಿದ್ದರು. ಅವರು ತಮ್ಮ ಯೋಜನೆಗೆ ರಾಷ್ಟ್ರೀಯ ಶಿಕ್ಷಣವೆಂದು ಹೆಸರಿರಿಸಿದ್ದರು. ಪರಕೀಯಸಂಸ್ಕೃತಿಯ ದಾಸರಾಗುವ ಪದವೀಧರರನ್ನು ನಿರ್ಮಿಸದೆ, ದೇಶಾಭಿಮಾನಿ ಮತ್ತು ಧ್ಯೇಯವಾದಿಗಳನ್ನು ಸಿದ್ಧಪಡಿಸುವದೇ ತಮ್ಮ ರಾಷ್ಟ್ರೀಯ ಶಿಕ್ಷಣದ ಗುರಿಯೆಂದು ಘಂಟಾಘೋಷವಾಗಿ ಸಾರಿದರು. ಇಂಥ ಸುಶಿಕ್ಷಿತರಿಂದಲೇ ದೇಶದಸೇವೆಯಾಗಿ ಅವರಿಂದ ರಾಜ್ಯಕ್ರಾಂತಿಯಾದೀತೆಂದು ಅವರ ವಿಚಾರವಿತ್ತು. ೧೮೮೩ರ ವರದಿಯಲ್ಲಿಯೇ ೧೮೮೫ರಲ್ಲಿ ಪ್ರಾರಂಭಿಸಬೇಕಾಗಿರುವ ಕಾಲೇಜಿನ ದೃಷ್ಟಿಯಿಂದ ೧೮೮೪ರಲ್ಲಿ ತಾವು ಏನೇನು ಸಿದ್ಧತೆ ಮಾಡಬೇಕೆಂಬುದನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಈ ಎಲ್ಲ ಕಾರ್ಯಗಳ ಉದ್ದೇಶವನ್ನು ಕೆಳಗಿನ ಶಬ್ದಗಳಲ್ಲಿ ಸಂಗ್ರಹಿಸಿದ್ದಾರೆ.

"We have undertaken this work of popular education with the firmest conviction and belief that of all agents of human civilization Education is the only one that brings about material, moral and religious regeneration of fallen countries and rises then up to the level of most advanced nations by slow and peaceful revolutions."

ಈ ತರುಣರ ಸಾಹಸೀವೃತ್ತಿ, ಉಚ್ಚಧ್ಯೇಯ, ತ್ಯಾಗ, ದೇಶಾಭಿಮಾನ, ಕರ್ತೃತ್ವಶಕ್ತಿಗಳ ಪ್ರಭಾವವು ವಿಶ್ವವಿದ್ಯಾಲಯದ ಮುಂದಾಳುಗಳ ಮೇಲೆಯೂ ಬಿದ್ದಿತ್ತು. ಅವರು ಮುಗ್ಧರಾಗಿದ್ದರು. ಪ್ರಿನ್ಸಿಪಾಲ ವರ್ಡ್ಸ್‌ವರ್ಥ, ಆಕ್ಷೆನ್ ಹ್ಯಾಮ್, ಡಾ. ಮ್ಯಾಕಿಕನ್, ಭಾಂಡಾರಕರ, ರಾನಡೆ, ತೆಲಂಗ ಮೊದಲಾದವರು ಈ ಹುಡುಗರು ಕಾಲೇಜ ಪ್ರಾರಂಭಿಸಲು ಅಪ್ಪಣೆ ಕೇಳಿದರೆ ಆನಂದದಿಂದ ಕೊಡಬೇಕೆಂಬ ಇಚ್ಛೆಯುಳ್ಳವರಾಗಿದ್ದರು. ೧೮೮೪ರ ಅಕ್ಟೋಬರ ೨೪ ನೇ ತಾರೀಖಿನ ದಿವಸ ಸರ್ ವುಯ್ಯಿಲೆಮ ವೆಡರಬರ್ನರ ಅಧ್ಯಕ್ಷತೆಯಲ್ಲಿ ಪುಣೆ ಪಟ್ಟಣದ ಪ್ರಮುಖರ ಸಭೆ ಜರುಗಿತು ಯಥಾವಿಧಿಯಾಗಿ ದಕ್ಷಿಣಭಾರತ ವಿದ್ಯಾಪ್ರಸಾರಕ ಮಂಡಲ (ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯು)ವು ಸ್ಥಾಪಿಸಲ್ಪಟ್ಟಿತು ವೆಡರಬರ್ನರು ನ್ಯೂ ಇಂಗ್ಲಿಷ ಸ್ಕೂಲಿನ ಸಂಚಾಲಕರ ಸಾಹಸವನ್ನು ಹೊಗಳಿದರು. ವಾಮನರಾವ ಆಪ್ಟೆಯವರು ಸೊಸಾಯಿಟಿಯ ಸ್ಥಾಪನೆಯ ಗೊತ್ತುವಳಿಯನ್ನು ಮಂಡಿಸುತ್ತ ಕಾಲೇಜ ಮೊದಲಾದವುಗಳನ್ನು ಉಪಕ್ರಮಿಸಲು ಜನರ ಕೊಡುಗೈಯ್ಯ ಸಹಾಯವಿಲ್ಲದೆ ಶಕ್ಯವಿಲ್ಲೆಂದೂ, ಅದರ ಯೋಗ್ಯ ವಿನಿಯೋಗವಾಗುವದೆಂಬ ವಿಶ್ವಾಸ ಉಂಟಾಗುವಂಥ ಪ್ರತಿಷ್ಠಿತರ ವ್ಯವಸ್ಥಾಪಕ ಮಂಡಲವು ಆವಶ್ಯವೆಂದೂ ಹೇಳಿದರು ಟಿಳಕರು ವರ್ಡ್ಸ್‌ವರ್ಥ, ವೆಡರಬರ್ನ ತೆಲಂಗ, ನಾರಾಯಣಭಾಯಿ ದಾಂಡೇಕರ, ಕೇಳಕರ, ಮೊದಲಾದ ಜನರ ಮಂಡಲವಿರಬೇಕೆಂಬ ಗೊತ್ತುವಳಿಯನ್ನು ಮುಂದಿಟ್ಟರು. ಭಾಂಡಾರಕರರು ಸಭಾಸದರ ಗೊತ್ತುವಳಿಯನ್ನು ಮಂಡಿಸುತ್ತ "ಉದಾರ ಹಾಗೂ ನಿರಪೇಕ್ಷರಾದ ಈ ಏಳುಜನ ಪದವೀಧರರು, ತಮ್ಮ ಧೈರ್ಯದಿಂದ ಸ್ವತಂತ್ರ ಶಾಲೆಯನ್ನು ಸ್ಥಾಪಿಸಿ, ಬೆಳೆಯಿಸಿ, ಅದನ್ನು ಹೆಸರುವಾಸಿಯನ್ನಾಗಿ ಮಾಡಿದ್ದಾರೆ.

ತಮ್ಮ ಕರ್ತೃತ್ವಶಕ್ತಿಯಿಂದ ಜನರ ಉದಾರಾಶ್ರಯಕ್ಕೆ ಅದು ಪಾತ್ರವಾಗು ವಂತೆ ಮಾಡಿದ್ದಾರೆ ಈ ಏಳು ಜನರ ಅಗ್ರಭಾಗದಲ್ಲಿ ಒಬ್ಬ ಪ್ರಥಮ ಶ್ರೇಣಿಯ ಎಲ್. ಎಲ್. ಬಿ. ಗೃಹಸ್ಥರ ಹೆಸರಿದೆ. ಇವರು ಸ್ವತಂತ್ರ ಶಿಕ್ಷಣದ ಹುಚ್ಚಿಗೆ ಬೀಳದೆ, ಸ್ವಹಿತದಕಡೆಗೆ ದೃಷ್ಟಿಯನ್ನಿಟ್ಟು, ಸರಕಾರಿ ನವಕರಿಯನ್ನು ಹಿಡಿದಿದ್ದರೆ, ರಾವಸಾಹೇಬರಾಗಿ ಚಕ್ಕಂದದಿಂದ ಕಾಲ ಕಳೆಯಬಹುದಾಗಿದ್ದಿತು.'' ಎಂದು ಉದ್ಗಾರ ತೆಗೆದರು. ಮಂಡಲೀಕ ಹಾಗೂ ವರ್ಡ್ಸ್‌ವರ್ಥರನ್ನು ಧರ್ಮದರ್ಶಿಗಳೆಂದು (ಟ್ರಸ್ಟೀ) ನಿಯಮಿಸಿ, ಸೊಸಾಯಿಟಿಯ ನಿಯಮಗಳನ್ನು ಸ್ವೀಕರಿಸಿ, ಸಭೆಯು ವಿಸರ್ಜನೆಯಾ ಯಿತು. ಮೊದಲಿನ ಸಭಾಸದರಲ್ಲಿ ಟಿಳಕ–ನಾಮಜೋಶಿ, ಆಪ್ಟೆ, ಆಗರಕರ, ಗೋಳೆ, ಧಾರಪ ಈ ಏಳು ಜನರಿದ್ದರು.

ಸೊಸಾಯಿಟಿಯ ಸ್ಥಾಪನೆಯಂದರೆ ಕಾಲೇಜಿನ ತಳಹದಿಯೇ ಆಗಿ ದ್ದಿತು. ಈ ತರುಣರು ಕಾಲೇಜನ್ನು ನಡೆಯಿಸುವ ತಮ್ಮ ಯೋಗ್ಯತೆಯನ್ನು ಈ ಮೊದಲೇ ತೋರಿಸಿದ್ದರು. ೧೮೮೪ನೇ ಇಸ್ವಿಯು ಕಾಲೇಜಿನ ನಿಧಿ ಸಂಗ್ರಹ ದಲ್ಲಿಯೇ ಕಳೆಯಿತು. ೧೮೮೪ ರ ಡಿಸೆಂಬರ ತಿಂಗಳಲ್ಲಿ ಮುಂಬಯಿ ಯುನಿವ್ಹರ್ಸಿಟಿಯ ಸಿಂಡಿಕೇಟವು ಸೆನೆಟಿಗೆ, ಪುಣೆಯಲ್ಲಿ ಇದೇ ಪ್ರಾರಂಭ ವಾದ ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯು, ಫರ್ಗ್ಯೂಸನ್, ಕಾಲೇಜ ನ್ನು ಪ್ರಾರಂಭಿಸತಕ್ಕದ್ದಿದೆ. ಪರೀಕ್ಷೆಗೆ ವಿದ್ಯಾರ್ಥಿಗಳನ್ನು ಕಳುಹಿಸಲು ಮೂರುವರ್ಷಗಳ ಅಪ್ಪಣೆಯನ್ನು ಕೊಡಬಹುದು. ಈ ಮೂರುವರ್ಷ ಅದು ಚನ್ನಾಗಿ ನಡೆದಿದೆ ಎಂದು ವಿಶ್ವವಿದ್ಯಾಲಯಕ್ಕೆ ಮನವರಿಕೆಯಾದರೆ, ಅದನ್ನು ತಮ್ಮ ಸಂಸ್ಥೆಯನ್ನಾಗಿ ಮಾಡಿಕೊಳ್ಳಬೇಕೆಂದು ತಿಳಿಸಿತು. ಈ ಆನಂದದ ಸುದ್ದಿಯನ್ನು ಆಗರಕರರು ಒಳ್ಳೇ ವಿನೋದದಿಂದ ಕೇಸರಿಯಲ್ಲಿ ಪ್ರಸಿದ್ಧಿಸಿದ್ದಾರೆ. ''ಫರ್ಗ್ಯೂಸನ್ ಕಾಲೇಜಿನ ಈ ಗೌಡಬಂಗಾಲಿ ಏನಿದೆ ಎಂಬುದನ್ನು ಬೇಗನೆ ವಾಚಕರಮುಂದೆ ಮಂಡಿಸುವ ವಿಚಾರವಿದೆ. ಆ ಸಮಯದಲ್ಲಿ ಎಲ್ಲರೂ ಎಚ್ಚರದಿಂದ ಇರಬೇಕು. ಏಕೆಂದರೆ, ಆ ಸುದ್ದಿ ಯನ್ನು ಓದಿದ ಕೂಡಲೇ ಕಿಸೆಯಲ್ಲಿಯ ರೂಪಾಯಿಗಳೆಲ್ಲ ಜಿಗಿಜಿಗಿಯುತ್ತ ದಕ್ಷಿಣಭಾರತ ವಿದ್ಯಾಪ್ರಸಾರಕ ಮಂಡಳದ ಕಡೆಗೆ ಬರಹತ್ತಿದರೆ, ಅದಕ್ಕೆ ನಾವು ಹೊಣೆಗಾರರಲ್ಲ.'' ೧೮೮೫ನೇ ಜನವರಿ ೨ನೆ ತಾರೀಖಿಗೆ ಫರ್ಗ್ಯೂ

ಸನ್ ಕಾಲೇಜದ ಪ್ರಾರಂಭೋತ್ಸವವು ಜರುಗಿತು. ಲೋಕಮಾನ್ಯರ ಕಾಲೇಜದ ಕನಸು ನನಸಾಗಿ ಪರಿಣಮಿಸಿತು.

ಟಿಳಕ ಹಾಗು ಆಪ್ಟೆಯವರು ಸಂಸ್ಕೃತ ಹಾಗು ಗಣಿತದಲ್ಲಿ ನಿಷ್ಣಾತರು. ಆಗರಕರರು ಇತಿಹಾಸ ಮತ್ತು ಅರ್ಥಶಾಸ್ತ್ರದಲ್ಲಿ ಪ್ರವೀಣರು. ಗೋಳೆಯವರು ಪದಾರ್ಥವಿಜ್ಞಾನಶಾಸ್ತ್ರದಲ್ಲಿ ಎಂ. ಎ. ಆದವರು. ಕೇಳಕರರು ಪ್ರಸಿದ್ಧ ಇಂಗ್ಲಿಷ ಶಿಕ್ಷಕರು. ಹೀಗಾಗಿ ವಿಶ್ವವಿದ್ಯಾಲಯಕ್ಕೆ ಶಿಕ್ಷಕರ ಬಗ್ಗೆ ಕುರುಕುರು ಮಾಡಲವಕಾಶವೇ ಇರಲಿಲ್ಲ. ಎರಡನೇ ಪ್ರಶ್ನೆಯೆಂದರೆ ಸ್ಥಳ. ಏಳನೇ ಈಯತ್ತೆಯ ೪-೪ ವರ್ಗಗಳನ್ನು ನಡೆಯಿಸುವ ಈ ಸಂಸ್ಥೆಗೆ F. Y. ಒಂದು ವರ್ಗವನ್ನು ನಡೆಸಲು ಸ್ಥಳದೊರೆಯಲಾರದೆ ? ಯಾವುದೇ ಸಂಸ್ಥೆಗೆ ಒಮ್ಮೆಲೆ ದೊಡ್ಡ ಕಟ್ಟಡವನ್ನು ಕಟ್ಟಿಸುವದು ಸಾಧ್ಯವಿಲ್ಲವೆಂಬುದನ್ನು ವಿಶ್ವವಿದ್ಯಾಲಯವು ಅರಿತಿದ್ದಮೂಲಕ ನ್ಯೂ ಇಂಗ್ಲಿಷ ಸ್ಕೂಲಿನ ಸ್ಥಳದಲ್ಲಿಯೇ ಕಾಲೇಜ ಪ್ರಾರಂಭಿಸಲು ಅಪ್ಪಣೆಯನ್ನು ಇತ್ತಿತು. ಗದ್ರೇವಾಡೆಯ ದಿವಾಣಖಾನೆಯಲ್ಲಿ ಈ ವರ್ಗವು ಪ್ರಾರಂಭವಾಯಿತು. ಕಾಲೇಜಿನ ಆಡಳಿತೆಯನ್ನು ಪರಿಶೀಲಿಸಲು ಒಂದು ಮಂಡಳವಿರಬೇಕೆಂಬ ನಿರ್ಬಂಧವೂ ಇದ್ದಿತು. ಭಾಂಡಾರಕರ ಮತ್ತು ಆಕ್ಷ್ಟಿನ್‌ಹ್ಯಾಮ್‌ರಂಥವರು ಬೋರ್ಡಿನ ಸದಸ್ಯರಾದಮೂಲಕ ಈ ಪ್ರಶ್ನೆಯೂ ಉದ್ಭವಿಸಲಿಲ್ಲ. ಹೀಗೆ ಸರ್ವ ಸಂದೇಹಗಳೂ ನಿವಾರಣೆಯಾಗಿ ಕಾಲೇಜವು ತಲೆಯೆತ್ತಿ ತನ್ನ ಜೀವನ ಕ್ರಮವನ್ನು ಪ್ರಾರಂಭಿಸಿತು.

ಆಟಕ್ಕೆ ತಕ್ಕ ವೇಷವನ್ನು ಹಾಕಬೇಕಲ್ಲವೇ ! ಹೈಸ್ಕೂಲಿನಲ್ಲಿಯೇ ಕಾಲೇಜ ನಡೆಯಿಸುವದು ಶಕ್ಯವಿರಲಿಲ್ಲ. ಕಾಲೇಜಕ್ಕಾಗಿ ಶನಿವಾರ ವಾಡೆಯನ್ನು ತಮಗೆ ಕೊಡಬೇಕೆಂದು ಬಿನ್ನವಿಸಿಕೊಂಡರು. "ನಾವು ಸ್ಥಳ ಕೊಡುವೆವು, ಕಟ್ಟಡವನ್ನು ನೀವೇ ಕಟ್ಟಿಕೊಳ್ಳಬೇಕು." ಎಂದು ಸರಕಾರವು ಸೂಚಿಸಿತು. ಶನಿವಾರ ವಾಡೆಯ ಬದಲು ಬುಧವಾರ ವಾಡೆಯನ್ನು ಕೊಟ್ಟಿತು. ಅದು ಸೊಸಾಯಿಟಿಯವರ ಮನಸ್ಸಿಗೂ ಬಂದಿತು. ಕಟ್ಟಡಕ್ಕಾಗಿ ೭೦ ಸಹಸ್ರ ರೂಪಾಯಿಗಳನ್ನು ಕೂಡಿಸಿದ್ದರು ಪೂರ್ಣ ಕಟ್ಟಡವನ್ನು ೧|| ಲಕ್ಷದಲ್ಲಿ ಕಟ್ಟಿಕೊಡಲು ಕಾನಿಟಕರ ಎಂಬ ಇಂಜಿನಿಯರರು ಮುಂದೆ ಬಂದರು. ೧೮೮೫ನೇ ಮಾರ್ಚ ೫ನೆ ತಾರೀಖಿನ ದಿನ ಸರಜೇಮ್ಸ

ಫರ್ಗ್ಯೂಸನ್‌ರ ಹಸ್ತದಿಂದ ತಳಹದಿಯು ಹಾಕಲ್ಪಟ್ಟಿತು. ಗವ್ಹರ್ನರರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಚಿಪಳೂಣಕರ, ಟಿಳಕ, ಆಗರಕರ, ಆಪ್ಟೆ ಮೊದಲಾದವರ ಹೆಸರುಗಳನ್ನು ಗೌರವಪೂರ್ವಕವಾಗಿ ಹೊಗಳಿ, ಅವರ ಪರಿಶ್ರಮವೇ ಕಾಲೇಜ ಕಟ್ಟಡರೂಪವಾಗಿ ನಿಲ್ಲುವದೆಂದು ಹೇಳಿದರು. ಸಮಾರಂಭವು ಕೊನೆಗೊಂಡಿತು. ಆದರೆ ದೇವರ ಸಂಕಲ್ಪವು ಬೇರೆಯಿದ್ದಿತು. ಇಲ್ಲಿ ಕಟ್ಟಡವೇ ಕಟ್ಟಲ್ಪಡಲಿಲ್ಲ. ಮುಂದೆ ೧೮೯೨ನೇ ಇಸ್ವಿಯಲ್ಲಿ ಇದೇ ಕೋನ ಶಿಲೆಯು ಚತುಃಶೃಂಗಿಯ ವಿಶಾಲ ಬೈಲಿನಲ್ಲಿ ಇರಿಸಲ್ಪಟ್ಟು, ಪದವೀಧರರಿಗೆ ಯೋಗ್ಯವಾದ ವಿದ್ಯಾನಿಲಯವು ರೂಪುಗೊಂಡಿತು. ಈ ಹೊತ್ತಿಗೆ ಕಾಲೇಜವು ಬಿ. ಎ. ವರೆಗೆ ಪರಿಪೂರ್ಣವಾಗಿ ಮಹಾರಾಷ್ಟ್ರ ಹಾಗು ಕರ್ನಾಟಕ ವಿದ್ಯಾರ್ಥಿಗಳಿಂದ ತುಂಬಿ ತುಳುಕುತ್ತಿತ್ತು.

ಟಿಳಕರು ವರ್ಗದಲ್ಲಿ ಅತ್ಯಂತ ಮಿತ ಭಾಷಿಗಳಾಗಿದ್ದು, ವಿಷಯವನ್ನು ಬಿಟ್ಟು ಅತ್ತಿತ್ತ ಕದಲುತ್ತಿದ್ದಿಲ್ಲ. ಎದುರಿಗೆ ಬರುವ ಪ್ರಶ್ನೆಗಳಿಗೆಲ್ಲ ಉತ್ತರ ಕೊಡುವಾಗ ಅವರ ಬುದ್ಧಿಯ ತೀಕ್ಷ್ಣತೆಯು ಕತ್ತಿಯ ಧಾರೆಯಂತೆ ಕಂಗೊಳಿಸುತ್ತಿತ್ತು. ಗಣಿತವನ್ನು ಕಲಿಸುವಾಗಲಂತೂ ನೋಡಬೇಕು ಇವರ ಬುದ್ಧಿಯ ವೈಭವವನ್ನು! ಎಂತಹ ಗಣಿತವನ್ನೂ ಬಾಯಿಯಿಂದ ಬಿಡಿಸಿ ತೋರಿಸುತ್ತಿದ್ದರು. ಸಾಮಾನ್ಯ ವಿದ್ಯಾರ್ಥಿಗಳಿಗೆ ಒಮ್ಮೊಮ್ಮೆ ಅನುಸರಿಸುವದು ಕಷ್ಟವಾಗುತ್ತಿರಬಹುದು. ಸಂಸ್ಕೃತ ಕಲಿಸುವಾಗ ವೈಮರೆಯುತ್ತಿದ್ದರಂತೆ. ಮೇಘದೂತ ಹಾಗು ಭರ್ತೃಹರಿಯ ನೀತಿ ಶತಕಗಳು ಪಠ್ಯ ವಿಷಯಗಳಾಗಿದ್ದವು. ಅವುಗಳನ್ನು ಅತ್ಯಂತ ಮಾರ್ಮಿಕತೆಯಿಂದ ಕಲಿಸುತ್ತಿದ್ದರೆಂದು ಅವರ ಕೈಯಲ್ಲಿ ಕಲಿತ ವಿದ್ಯಾರ್ಥಿಗಳು ಹೇಳುತ್ತಾರೆ. ಟಿಳಕರ ಬರಹಗಳ ಪರಿಚಯವಿದ್ದವರಿಗೆ ನೀತಿಶತಕದಮೇಲೆ ಅವರಿಗಿದ್ದ ಪ್ರಭುತ್ವದ ಬಗೆಗೆ ಹೇಳುವದೇ ಬೇಡ.

ಈ ತರುಣ ವಿದ್ವಾಂಸರ ಕಾರ್ಯಕುಶಲತೆಯನ್ನು ಕಂಡು ಉದಾರ ಧೋರಣದ ಸರಕಾರವು ತಾನು ನಡೆಯಿಸುತ್ತಿದ್ದ ಡೆಕ್ಕನ್ ಕಾಲೇಜನ್ನು ಈ ತರುಣರಿಗೇಕೆ ಒಪ್ಪಿಸಬಾರದು? ಎಂದು ವಿಚಾರಮಾಡಹತ್ತಿತು ಉಚ್ಚ ಶಿಕ್ಷಣದ ಹೊಣೆಯು ಸರಕಾರದ ಮೇಲಿದ್ದು, ಅದನ್ನು ನಡೆಯಿಸಲೇ ಬೇಕೆಂದು ಕೆಲವರು ಪ್ರತಿಪಾದಿಸುತ್ತಿದ್ದರು. ಅಷ್ಟೇನು ನಮ್ಮ ಮೇಲೆ

ಇರುವದಿಲ್ಲೆಂದು ಸರಕಾರ! ಅಂತೂ ಸರಕಾರವೇ 'ಡೆ. ಎ.' ಸೊಸಾಯಿಟಿಗೆ ನೀವು ಎರಡೂ ಕಾಲೇಜಗಳನ್ನು ನಡೆಯಿಸಿರಿ. ನಾವು ೨೩ ಸಾವಿರ ರೂಪಾಯಿಗಳ ಸಹಾಯಧನವನ್ನು ಕೊಡುವೆವೆಂದು ಮಾತಿಗೆ ಮೊದಲು ಮಾಡಿತು. ಗುಜರಾಥ ಹಾಗೂ ಸಿಂಧದ ಕಾಲೇಜುಗಳಿಗೆ ಸಹಾಯ ಮಾಡುವದು ಅವಶ್ಯವಿರುವ ಮೂಲಕ ಇದನ್ನು ನಿಲ್ಲಿಸಿದರೂ ನಿಲ್ಲಿಸಬಹುದು. ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿತು.

ಡೆ. ಎ. ಸೊಸಾಯಿಟಿಯವರು ವಿಚಾರಮಾಡಿ, ಭಾರತೀಯರು ಉಚ್ಚತರಗತಿಯ ಶಿಕ್ಷಣ ಸಂಸ್ಥೆಯನ್ನು ಒಳ್ಳೇರೀತಿಯಿಂದ ನಡೆಯಿಸಬಲ್ಲರು ಎಂಬುದನ್ನು ಜಗತ್ತಿಗೆ ತೋರಿಸಬಹುದೆಂಬ ಹುಮ್ಮಸದಿಂದ ಸರಕಾರದ ಈ ಕೊಡುಗೆಯನ್ನು ಮನ್ನಿಸುವ ವಿಚಾರವನ್ನು ಪ್ರಕಟಿಸಿದರು.

ಈ ಯೋಜನೆಗೆ ಗಂಡಾಂತರಗಳು ಉತ್ಪನ್ನವಾದವು. ಈ ಗುಂಪಿನ ಬಗ್ಗೆ ಎಲ್ಲ ಕಡೆಗೆ ಆದರ ಭಾವವು ಉತ್ಪನ್ನವಾಗಿದ್ದಿತು. ಸ್ವತಂತ್ರ ವೃತ್ತಿಯ ಈ ದೇಶಾಭಿಮಾನಿ ತರುಣರು ಬೆಳೆದು, ತಮ್ಮ ಕೈಯಲ್ಲಿ ಉಳಿಯಲಿಕ್ಕಿಲ್ಲ ವೆಂಬ ಭೀತಿಯು ಹಳೆಯ ಮುಂದಾಳುಗಳಿಗೆ ಬರಹತ್ತಿತು. ಇಂಥದರಲ್ಲಿಯೇ ಡೆಕ್ಕನ್ ಕಾಲೇಜವು ಕೂಡ ಅವರ ಕೈಸೇರಿತೆಂದರೆ ಆದರಿಂದ ಅವರ ಮಹತ್ವವು ಮಿತಿಮೀರಿ ಬೆಳೆಯುವದೆಂಬ ಮತ್ಸರವೂ ಉಂಟಾಯಿತು ಕೆಲ ವರಿಗೆ ಡೆಕ್ಕನ್ ಕಾಲೇಜದ ವೃಥಾಭಿಮಾನವು ಉಕ್ಕೇರಿತು. ದೇಶೀಯ ಜನರ ಕೈಯಲ್ಲಿ ಕಾಲೇಜ ಕೊಡುವದೆಂದರೇನು ? ಮೊದಲಿನಂತೆ ಯುರೋಪಿಯನ್ನರೇ ಅಲ್ಲಿ ಪೂಜೆಗೊಳ್ಳಬೇಕು. ಇತ್ಯಾದಿಗಳ ಗೊಂದಲವೆದ್ದಿತು. ಸರ್ ಜಮಸೇಟಜಿ ಜೀಜಿಭಾಯಿಯವರು 'ತಮ್ಮ ತಂದೆಯು ಡೆಕ್ಕನ್ ಕಾಲೇಜಿನ ಕಟ್ಟಡಕ್ಕೆ ಲಕ್ಷಾಂತರ ರೂಪಾಯಿಗಳನ್ನು ಸುರಿದಿದ್ದು, ಇದು ಯಾವಾಗಲೂ ಸರಕಾರದ ವಶದಲ್ಲಿಯೇ ಇರುವದೆಂಬ ವಿಶ್ವಾಸದಿಂದ. ಈಗ ಆದನ್ನು ಖಾಸಗಿ ಜನರ ವಶಕ್ಕೆ ಕೊಟ್ಟರೆ, ಮೃತರ ಉದ್ದೇಶದ ವಿಶ್ವಾಸ ಘಾತಮಾಡಿದಂತಾಗುವದು ಎಂದು ದೂರಿಕೊಂಡರು. ಕೊನೆಗೆ ಫರ್ಗ್ಯುಸನ್ ಕಾಲೇಜದ ಜನರಿಗೆ ಈ ಕಾಲೇಜನ್ನು ಒಪ್ಪಿಸುವದಾದರೆ ಅದರಲ್ಲಿ ಕನಿಷ್ಠ ಇಬ್ಬರು ಯುರೋಪಿಯನ್ ಪ್ರೊಫೆಸರರು ಇರಬೇಕೆಂದು ಸೂಚಿಸಿದರು. ಈ ಎಲ್ಲ ಮತಗಳನ್ನು ವಿಚಾರಮಾಡಿ, ಸರಕಾರವು "ಡೆಕ್ಕನ್

ಕಾಲೇಜದ ವ್ಯವಸ್ಥೆಗಾಗಿ ಸ್ವತಂತ್ರ ಮಂಡಳವಿರಬೇಕು. ಅದು ಡೆ. ಎ. ಸೊಸಾಯಿಟಿಯ ಒಂದು ಅಂಗವಾಗಿರಬೇಕು. ಅದರಲ್ಲಿ ಸೊಸಾಯಿಟಿಯ ೫-೬ ಜನ ಮತ್ತು ಸರಕಾರದ ಪ್ರತಿನಿಧಿಗಳೆಂದು ಮೂರು ಜನರು ಇರಬೇಕು. ಸಾಂಪತ್ತಿಕ ಎಲ್ಲ ಹೊಣೆಯನ್ನು ಸೊಸಾಯಿಟಿಯು ಹೊರಬೇಕು. ಸರಕಾರವು ಇಬ್ಬರು ಯುರೋಪಿಯನ್ ಪ್ರಾಧ್ಯಾಪಕರ ಅರ್ಧ ಪಗಾರವೆಂದು ೧೦ ಸಾವಿರ ರೂಪಾಯಿ, ಉಳಿದ ವ್ಯವಸ್ಥೆಗಾಗಿ ೧೦ ಸಾವಿರ ರೂಪಾಯಿ; ಹೀಗೆ ೨೦ ಸಾವಿರ ರೂಪಾಯಿ ಸಹಾಯಧನ ಕೊಡಬೇಕು. ಶಿಷ್ಯವೃತ್ತಿಗಾಗಿ ಮೂರುಸಾವಿರ ರೂಪಾಯಿ ಕೊಡುವದು. ಅದರಲ್ಲಿಯೂ ಒಂದು ಸಾವಿರ ರೂಪಾಯಿ ಪಾರ್ಸಿಗಳಿಗಾಗಿ ಕಾದಿಡಬೇಕು, ಎಂದು ಸೂಚಿಸಿತು. ಅರ್ಥಾತ್ ಸ್ವಾಭಿಮಾನಿ ತರುಣರಿಗೆ ಈ ಸೂಚನೆಗಳು ಹೇಗೆ ಮಾನ್ಯವಾಗಬೇಕು? ಇದು ಕೊಡುಗೆಯಲ್ಲ ಪಾರತಂತ್ರ್ಯ ಬಂಧನವೆಂದು ಬಗೆದು, ಸೊಸಾಯಿಟಿಯ ಮೇಲೆ ನಿಜವಾದ ವಿಶ್ವಾಸವಿದ್ದರೆ, ಯಾವ ಕರಾರುಗಳಿಲ್ಲದೆ ಪೂರ್ಣ ಕಾಲೇಜನ್ನೂ ಕೈತುಂಬ ಸಹಾಯಧನವನ್ನೂ ಕೊಡಿರಿ. ಇಲ್ಲದಿದ್ದರೆ ನಮಗೆ ಕಾಲೇಜವು ಬೇಡವೆಂದು ಸ್ಪಷ್ಟವಾಗಿಯೇ ಹೇಳಿಬಿಟ್ಟರು. ಇದನ್ನು ಕಂಡು ಸರಕಾರವು ಸಿಟ್ಟಿಗೆದ್ದು, ನಿಮಗೆ ಈ ಮೊದಲು ಕೊಡಮಾಡಿದ ವಿಶೇಷ ಸಹಾಯದ ವಚನಗಳನ್ನೆಲ್ಲ ಹಿಂದೆ ತೆಗೆದುಕೊಳ್ಳಲಾಗಿದೆ ಎಂದು ಸಾರಿತು. ಇದಕ್ಕೆ ಉತ್ತರವೆಂದು ಕೇಸರಿಯು 'ಡೆಕ್ಕನ್ ಕಾಲೇಜ ಕೊಡದಿದ್ದರೆ ಬಿಡಬಹುದು. ಆದರೆ ಅದರ ಎದೆಯಮೇಲೆಯೇ ಈ ಪುಣ್ಯನಗರದಲ್ಲಿ ಫರ್ಗ್ಯೂಸನ್ ಕಾಲೇಜವು ಪ್ರತಿಸ್ಪರ್ಧೆಯಾಗಿ ನಿಲ್ಲುವದೆಂಬುದನ್ನು ಮರೆಯಲಾಗದು, ಎಂದು ಗರ್ಜಿಸಿತು.

---

## ಇಬ್ಬಣದ ಇಂಗಿತ

ಟಿಳಕ ಹಾಗೂ ಆಗರಕರರಲ್ಲಿಯ ಮತಭೇದವು ವಿದ್ಯಾರ್ಥಿ ಜೀವನ ದಿಂದಲೂ ಬೆಳೆದು ಬಂದುದನ್ನು ಹಿಂದೆ ವಿವರಿಸಿದ್ದೇವೆ. ಇಬ್ಬರೂ ಬುದ್ಧಿ ವಂತರು ದೇಶಸೇವಾವ್ರತಬದ್ಧರು, ಜೀವದ ಗೆಳೆಯರು. ಇಬ್ಬರಿಗೂ ಸಾಮಾನ್ಯ ಕ್ಷೇತ್ರವೆಂದು ಇಬ್ಬರೂ ಶಿಕ್ಷಣಕಾರ್ಯಕ್ಕೆ ಕೈಹಾಕಿದ್ದರು ತಮ್ಮ ಮತಭೇದದಿಂದ ತಾವು ಕೈಕೊಂಡಕಾರ್ಯಕ್ಕೆ ವಿಘ್ನವಾಗದಂತೆ ಜಾಗೃತರಾಗಿದ್ದರು. ಅಲ್ಲದೆ ತಾವು ಸಾಂಘಿಕ ಜೀವನವನ್ನು ನಡೆಯಿಸು ತ್ತಿರುವೆವೆಂಬ ಅರಿವು ಅವರಿಗೆ ಪೂರ್ಣವಾಗಿದ್ದಿತು. ಕೇಸರಿ ಹಾಗೂ ಮರಾಠಾ ವೃತ್ತಪತ್ರಗಳನ್ನು ಪ್ರಾರಂಭಿಸಿದ ಕೂಡಲೇ ತಮ್ಮಲ್ಲಿಯ ಸ್ವಭಾವ ವೈಚಿತ್ರ್ಯವನ್ನರಿತ ಈ ಗುಂಪು, ಕೆಲವೊಂದು ನಿಯಮಗಳನ್ನು ಹಾಕಿಕೊಂಡು ಮತಭೇದವು ಮನಸ್ತಾಪಕ್ಕೆ ಮಾರ್ಗವಾಗದಂತೆ ಎಚ್ಚರ ತೆಗೆದುಕೊಂಡಿದ್ದರು. ಯಾರಿಗಾದರೂ ಯಾವುದೊಂದು ವಿಷಯದಲ್ಲಿ ಸಾಮಾನ್ಯ ಧೋರಣಕ್ಕಿಂತಲೂ ಭಿನ್ನವಾದ ವಿಚಾರವನ್ನು ಮಂಡಿಸಬೇಕೆಂ ದೆನಿಸಿದರೆ ಅವರು ತಮ್ಮ ಹೆಸರಿನಿಂದ ಆ ಲೇಖವನ್ನು ಪ್ರಸಿದ್ಧಿಸಬಹುದು, ಇಲ್ಲವೆ ಬರೆದುಬಂದ ಶೀರ್ಷಿಕೆಯಲ್ಲಿ ಪ್ರಕಟಿಸಬಹುದು. ಬರವಣಿಗೆಯ ರೀತಿ, ಭಾಷೆ, ವಿಚಾರಗಳ ಸರಣಿ ಇವುಗಳಿಂದ ವಾಚಕರಿಗೆ ಲೇಖಕರು ಯಾರು ? ಎಂಬುದು ಹೊಳೆಯುವದು. ಸ್ವಮತ ಪ್ರಕಾಶನದ ಶ್ರೇಯವೂ ವ್ಯಕ್ತಿಗೆ ದೊರೆತು, ಸಂಪಾದಕೀಯ ಧೋರಣಕ್ಕೂ ಇದರಿಂದ ಯಾವ ವ್ಯತ್ಯಯವೂ ಬರುವದಿಲ್ಲೆಂಬ ಧೋರಣವನ್ನು ಸ್ವೀಕರಿಸಿದ್ದರು. ಇದರಿಂದ ಬಹುಜನ ಲೇಖಕರಿಗೆ ಅನುಕೂಲವಾಯಿತು.

ಆದರೆ ಸಂಪಾದಕರಾದ ಆಗರಕರರಿಗೆ ಮತಭೇದದ ಪ್ರಸಂಗಗಳಲ್ಲಿ ತೊಂದರೆಯುಂಟಾಗಹತ್ತಿತು. ತಮ್ಮ ವಿಚಾರಗಳನ್ನೇ ಪ್ರಕಟಿಸಿದರೆ, ತಮ್ಮ ಸಂಗಡಿಗರು ನೊಂದುಕೊಳ್ಳುವರು. ಅವರ ಮತಗಳನ್ನೇ ಬರೆಯಲು ತಮ್ಮ ವಿವೇಕವು ಒಪ್ಪುವದಿಲ್ಲ. ಬರೆದು ಬಂದುದು ಎಂದು ಹಾಕಬೇಕೆ?

ತಾವೇ ಸಂಪಾದಕರು. ಅದರಂತೆಯೇ ತಮ್ಮ ಹೆಸರಿನಿಂದ ಬರೆಯಬೇಕೆ? ತಾವೇ ಬರೆದ ಸಂಪಾದಕೀಯದ ವಿರುದ್ಧ ಹೇಗೆ ಪ್ರಕಟಿಸಬೇಕು ? ಈ ಧರ್ಮ ಸಂಕಟದಲ್ಲಿ ಆಗರಕರರು ಸಿಕ್ಕರು. ಅವರು ಒಳಗೊಳಗೇ ಕೊರ ಗುತ್ತಿದ್ದರು.

ಮೊದಲನೆಯ ವರ್ಷವು ಕೇಸರಿಯು ತನ್ನ ವೈಶಿಷ್ಟ್ಯವನ್ನು ಪ್ರಕಟಿ ಸುವದರಲ್ಲಿಯೇ ಕಳೆಯಿತು. ಎರಡನೇ ವರ್ಷವು ಕೊಲ್ಹಾಪುರ ಪ್ರಕರಣದ ಗೊಂದಲದಲ್ಲಿಯೇ ಹೋಯಿತು. ಮೂರನೇ ವರ್ಷವೂ ಹಾಗೂ ಹೀಗೂ ನಡೆಯಿತು. ೧೮೮೩ರಲ್ಲಿ 'ಧರ್ಮಾಜ್ಞೆಯ ಮರ್ಯಾದೆ, 'ಗರ್ಭಾದಾನ ಸಂಸ್ಕಾರ' ಮೊದಲಾದ ವಿಷಯಗಳು ಪ್ರಕಟವಾದವು. ಆದರೆ ಪ್ರಜಾ ಪ್ರಾತಿನಿಧಿಕ ರಾಜ್ಯಾಧಿಕಾರ, ಸ್ಥಾನಿಕ ಸ್ವರಾಜ್ಯ, ಇಲ್ಬರ್ಟಬಿಲ್ ಮೊದ ಲಾದ ರಾಜಕೀಯ ವಿಷಯಗಳಿಗೆ ಹೆಚ್ಚಿನ ಮಹತ್ವ ಬಂದಿತು. 'ವೈನೆರೆ ಯುವದು' ಎಂಬ ವಿಷಯವನ್ನು ಚರ್ಚಿಸುವಾಗ, "ಗರ್ಭಾದಾನ ಸಂಸ್ಕಾ ರವು ವೈಕಲ್ಪಿಕವಿರುತ್ತದೆ. ಸೂತ್ರದಲ್ಲಿ ಪ್ರಚಲಿತ ಪದ್ಧತಿಯ ಗರ್ಭಾದಾನ ಸಂಸ್ಕಾರ ಕೊಟ್ಟಿಲ್ಲ. ಆದುದರಿಂದ ಈ ಸಂಸ್ಕಾರವನ್ನು ನಿಲ್ಲಿಸಿದರೂ ವೈದಿಕ ಧರ್ಮದ ವಿರುದ್ಧ ಆಚರಿಸಿದಂತಾಗುವದಿಲ್ಲ. ಪುಣೆಯಲ್ಲಿ ಪ್ರಚಲಿತ ವಿರುವ ವೈನೆರೆದವರ ಮೆರವಣಿಗೆಯನ್ನು ನಿಲ್ಲಿಸಲು ಯಾವ ಶಾಸ್ತ್ರವೂ ಪ್ರತಿಬಂಧಿಸುವದಿಲ್ಲ."ವೆಂದು ಕೇಸರಿಯಲ್ಲಿ ಪ್ರತಿಪಾದಿಸಿದರು.

ಈ ಲೇಖದ ಸಮಾರೋಪವನ್ನು ಮಾಡುತ್ತ 'ಧರ್ಮದ ಬಗೆಗೆ ಸುಮ್ಮನೆ ಗೊಂದಲವನ್ನು ಎಬ್ಬಿಸಿ ಜನರ ಅಂತಃಕರಣವನ್ನು ನೋಯಿ ಸುವ ಇಚ್ಛೆ ನಮಗಿಲ್ಲ. ಆರ್ಯಸಮಾಜ, ಬ್ರಹ್ಮೋಸಮಾಜ, ಪ್ರಾರ್ಥನಾ ಸಮಾಜಗಳ ಗೊಂದಲದಲ್ಲಿ ನಾವು ಬೀಳುವದಿಲ್ಲ. ಆದರೂ ಧರ್ಮದ ವಿರುದ್ಧವಾದ ಅಜ್ಞಾನದಿಂದ ಬಂದ ರೂಢಿಗಳ ಸಮಾಚಾರ ತೆಗೆದು ಕೊಳ್ಳಲು ಕೇಸರಿಯು ಹಿಂದೆಮುಂದೆ ನೋಡುವದಿಲ್ಲ. ಗರ್ಭಾದಾನ ದಂತಹ ಶುಷ್ಕ ಗ್ರಾಮ್ಯ ರೂಢಿಗಳನ್ನು ಸುಧಾರಿಸಲು ಸಮರ್ಥರಾಗದಿದ್ದರೆ ಬಾಲವಿವಾಹದಂತಹ ಪ್ರಶ್ನೆಗಳನ್ನು ಹೇಗೆ ಬಿಡಿಸಬಲ್ಲೆವು ? ಧರ್ಮವಿರುದ್ಧ ವಿದ್ದ ವಿಷಯಗಳನ್ನು ಬಯಲಿಗೆಳೆದು ಅದರ ನಿಜಸ್ವರೂಪವನ್ನು ಜನರೆದು ರಿಗೆ ಇಡುವದೇ ಕೇಸರಿಯು ತನ್ನ ಕರ್ತವ್ಯವೆಂದು ತಿಳಿಯುವದು

"ಅನುಹುಂಕುರುತೇ ಘನಧ್ವನಿಂ ನಹಿ ನೋಮಾಯುರುತಾನಿ ಕೇಸರಿ"

ಈ ಚಿಕ್ಕ ಅವತರಣಿಕೆಯಲ್ಲಿ ಟಿಳಕರ ಸಾಮಾಜಿಕ ಹಾಗು ಧಾರ್ಮಿಕ ಧೋರಣದ ಸ್ಪಷ್ಟವಿವರಣೆಯಿದೆ. ಧರ್ಮಶಾಸ್ತ್ರ, ರೂಢಿ, ವ್ಯವಹಾರ ಈ ಎಲ್ಲ ವಿಷಯಗಳನ್ನು ತಾತ್ವಿಕದೃಷ್ಟಿಯಿಂದ ಚರ್ಚಿಸಿ ನಿಜವಾದ ಧರ್ಮ ಶಾಸ್ತ್ರದ ಶಿಕ್ಷಣಕೊಟ್ಟು ಸಮಾಜಕ್ಕೆ ಮಾರ್ಗದರ್ಶನ ಮಾಡಬೇಕೆಂಬುದೇ ಅವರ ಇಚ್ಛೆ. ಸುಧಾರಣೆಯ ಈ ಎಲ್ಲ ಕಾರ್ಯಗಳನ್ನು ಶಿಕ್ಷಣದಿಂದಲೂ ಉಪದೇಶದಿಂದಲೂ ಸಾಧಿಸಬೇಕೆಂಬುದೇ ಅವರ ಮನೀಷೆ. ಇದನ್ನು ಸಾಧಿ ಸಲು ಎಂತಹ ಕಷ್ಟಬಂದರೂ ಅದನ್ನು ಸಹಿಸಿ ಮುಂದಡಿ ಇಡಬೇಕೆಂದು ಅವರ ಉಪದೇಶ. ಇಷ್ಟೇ ಅಲ್ಲ ಈ ವಿಷಯದಲ್ಲಿ ಏನನ್ನು ಮಾಡಬಾರ ದೆಂಬ ಬಗ್ಗೆಯೂ ಅವರ ಸ್ಪಷ್ಟಕಲ್ಪನೆಗಳಿದ್ದವು. ಉದಾಹರಣೆಗಾಗಿ, ಶಿಕ್ಷಣ ದಿಂದ ಜನರು ಉದಾರ ಮತವಾದಿಗಳಾಗುವಂತೆ ಮಾಡಬೇಕೆಂದು ಇಚ್ಛಿ ಸುತ್ತಿದ್ದರೂ ಈ ವಿಷಯದಲ್ಲಿ ಸರಕಾರದ ಇಲ್ಲವೆ ಕಾಯದೆಯ ಸಹಾಯ ಪಡೆಯುವದಿರಲಿಲ್ಲ. ಅದರಂತೆಯೇ ಧರ್ಮವನ್ನು ಚರ್ಚಿಸಿ, ರೂಢಿ–ಹಾಗು ಶಾಸ್ತ್ರಗಳಲ್ಲಿರುವ ವ್ಯತ್ಯಾಸವನ್ನು ತೋರಿಸಿ ಜನರನ್ನು ಪ್ರಚೋದಿಸಲು ಬಯಸುತ್ತಿದ್ದರೇ ಹೊರತು, ಹೊಸಪಂಥವನ್ನಾಗಲೀ ಹೊಸ ಧರ್ಮವನ್ನಾ ಗಲೀ ಸ್ಥಾಪಿಸುವ ಇಚ್ಛೆ ಅವರಿಗಿರಲಿಲ್ಲ. ಸನಾತನ ಧರ್ಮಾಭಿಮಾನವನ್ನು ಕುದುರಿಸುವದೇ ಅವರ ಇಚ್ಛೆ. ಇದೇ ಧೋರಣವೇ ಅವರ ಜೀವನದಲ್ಲಿ ಒಡೆದು ಕಾಣುವದು.

ನ್ಯೂ ಇಂಗ್ಲಿಷ ಸ್ಕೂಲಿನ ಬಹುಜನರು ಟಿಳಕರ ಮತದಂತೆಯೇ ಇದ್ದರು. ಆಗರಕರರೊಬ್ಬರೇ ಭಿನ್ನಮತದವರಾಗಿದ್ದರು. ಬಾಲ ವಿವಾಹ ನಿಲ್ಲಿಸಲು ಕಾಯದೆಯ ನೆರವನ್ನು ಪಡೆಯಬೇಕೊ ಬೇಡವೋ ? ಎಂಬ ವಿಷಯದ ಬಗೆಗೆ ಮತಭೇದವುಂಟಾಯಿತು. ಮುಂಬಯಿಯ ಮಲಬಾರೀ ಸೇಟರು ಪೂರ್ವಪಕ್ಷವನ್ನು ಮಂಡಿಸಿದರು. "ಬಾಲ ವಿವಾಹವನ್ನು ಪ್ರತಿಬಂಧಿಸಲು, ಅಲ್ಪ ವಯಸ್ಸಿನಲ್ಲಿ ಲಗ್ನವಾದ ಹುಡುಗರಿಗೆ ವಿಶ್ವವಿದ್ಯಾ ಲಯದ ಪರೀಕ್ಷೆಗೆ ಕೂಡಗೊಡಬಾರದು, ಮತ್ತು ಸರಕಾರಿ ನವಕರಿಯನ್ನು ಕೊಡಬಾರದು. ಇಷ್ಟಕ್ಕೆ ನಿಲ್ಲದೆ ಆ ರೂಢಿಯನ್ನು ಕಾಯಿದೆಯಿಂದ ನಿರ್ಬಂಧಿಸಬೇಕು" ಎಂದು ಪ್ರತಿಪಾದಿಸಹತ್ತಿದರು. - ಸರಕಾರದಲ್ಲಿ ಮಲ

ಬಾರೀ ಸೇಟರ ಮಾತು ಕೆಲಮಟ್ಟಿಗೆ ನಡೆಯುತ್ತಿದ್ದ ಮೂಲಕ, ಇದು ಕಾಯದೆಯ ಸ್ವರೂಪವನ್ನು ಎಲ್ಲಿ ತಾಳುವದೋ ಎಂಬ ಭಯವು ಜನರಿಗೆ ಉಂಟಾಯಿತು. ಸುಧಾರಕ ವರ್ಗದವರಾದ ರಾನಡೆ, ಆಗರಕರ ಮೊದಲಾದವರು ಒಂದುಕಡೆ. ತೆಲಂಗ, ಟಿಳಕ ಮೊದಲಾದ ಪ್ರಭೃತಿಗಳು ಇನ್ನೊಂದು ಕಡೆ. ಹೀಗಾಗಿ ದ್ವಂದ್ವ ನಡೆಯಿತು. ಕೇಸರಿಯ ಪರೀಕ್ಷೆಯ ಪ್ರಸಂಗ ಬಂದಿತು. ೧೮೮೪ರ ಕೇಸರಿಯಲ್ಲಿ ಅನುಕೂಲ, ಪ್ರತಿಕೂಲ, ಎರಡೂ ಬಗೆಯ ಬರಹಗಳು ಬರಹತ್ತಿದವು. ಕೊನೆಗೆ ಆಗರಕರರು 'ಬಾಲ ವಿವಾಹವನ್ನು ಪ್ರತಿಬಂಧಿಸಬೇಕೆಂಬ ವಿಷಯದಲ್ಲಿ ಸಭೆ, ಸಂಸ್ಥೆಗಳನ್ನು ಸ್ಥಾಪಿಸಬೇಕೆಂಬುದರಲ್ಲಿ ಹುರುಳಿಲ್ಲ. ರಾಬರ್ಟ ನಾಯಿಟರ ಬರಹದಿಂದ ಪ್ರತಿಬಂಧಕ ಕಾಯಿದೆಯ ಕಲ್ಪನೆಯು ನಮಗೆ ಹೊಳೆಯಿತು. ನಮ್ಮ ಮಿತ್ರರಿಗೆ ಇದು ರುಚಿಸಲಿಲ್ಲ. ಈ ಪ್ರಶ್ನೆಯು ಮೂರು ವರ್ಷಗಳವರೆಗೆ ಚರ್ವಿತ ಚರ್ವಣವಾಗುತ್ತಿರುವ ಮೂಲಕ ನನ್ನ ವೈಯಕ್ತಿಕ ವಿಚಾರಗಳನ್ನು ಇನ್ನು ಬಹಳ ದಿವಸ ತಡೆಹಿಡಿಯುವದು ಸಾಧ್ಯವಿದ್ದಿಲ್ಲ, ಯುಕ್ತವೂ ಅಲ್ಲವೆಂದು ನಾನು ನನ್ನ ಹೆಸರಿನಿಂದಲೇ ಇದನ್ನು ಪ್ರಸಿದ್ಧಿಸಿದ್ದೇನೆ' ಎಂದು ಲೇಖನನ್ನು ಬರೆದರು.

ಈ ವಾದವು ಇಷ್ಟಕ್ಕೆ ನಿಲ್ಲಲಿಲ್ಲ. ಬಾಲ ವಿವಾಹದ ಬಗೆಗೆ ವಿದ್ವಾಂಸರ ಅಭಿಪ್ರಾಯವನ್ನು ಮುಂಬಯಿಯ ಸರಕಾರವು ಕೇಳಿತು. ಮಲಬಾರಿಯವರು ಬಾಲ ವಿವಾಹದೊಡನೆ ಅಸಮ್ಮತ ವೈಧವ್ಯವನ್ನೂ ಕಾಯದೆಯಿಂದ ನಿಲ್ಲಿಸಬೇಕೆಂಬ ಪ್ರಶ್ನೆಯನ್ನೆಬ್ಬಿಸಿದರು ಇದರಿಂದ ಆಗರಕರರ ಪಕ್ಷವು ದುರ್ಬಲವೆಂದು ಬಗೆದು ಅವರ ವಿರುದ್ಧ ಲೇಖಗಳು ಕೇಸರಿಯಲ್ಲಿ ಹೆಚ್ಚಾದವು. ೧೮೮೫ರಿಂದ ಮುಂದೆ ಕೇಸರಿಯಲ್ಲಿ ಸಾಮಾಜಿಕ ವಿಷಯಗಳು ಕಡಿಮೆಯಾಗಿ, ರಾಜಕೀಯ, ಔದ್ಯೋಗಿಕ, ಪರರಾಷ್ಟ್ರೀಯ ಲೇಖಗಳು ಬರಹತ್ತಿದವು ಸುಧಾರಕರು ಹೆಚ್ಚು ಹೆಚ್ಚು ಸರಕಾರದ ಕಾಯದೆಗಳಮೇಲೆ ಕೈಯೂರಿದರು. ಇದರಿಂದ ಸ್ವಾಭಾವಿಕವಾಗಿ ಸನಾತನ ಧರ್ಮದ ಕಡೆಗೆ ಗಾಳಿ ಬೀಸಹತ್ತಿತು. ರಾ. ಬ. ರಾನಡೆ, ಭಾಂಡಾರಕರರ ಧಾರ್ಮಿಕ ಹಾಗೂ ಸಾಮಾಜಿಕ ಮತಗಳ ಬಗ್ಗೆ ಕೇಸರಿ ಹಾಗೂ ಮರಾಠಾ ಪತ್ರಗಳಲ್ಲಿ ಟೀಕೆಗಳು ಬರಹತ್ತಿದವು. ೧೮೮೫ ಜೂನ ೯ ರ

ಸಂಚಿಕೆಯಲ್ಲಿ 'ಅನರೇಬಲ, ರಾ. ಬ. ರಾನಡೆಯವರು ಕುಲಗೆಟ್ಟರು' ಎಂಬ ಟೀಕಾತ್ಮಕ ಅಗ್ರಲೇಖವು ಪ್ರಕಟವಾಯಿತು. ''ರಾ. ಬ. ರಾನಡೆ ಯವರ ಕೆಲವು ಉದ್ಗಾರಗಳಿಂದ ಅವರು ಪ್ರಾರ್ಥನಾ ಸಮಾಜದಲ್ಲಿ ಸೇರಿದ ಬಗ್ಗೆ ಪಶ್ಚಾತ್ತಾಪವಾದ ವಾಸನೆಯು ಬರಹತ್ತಿತು. ರಾನಡೆಯವರು ಹಿಂದೂ ಧರ್ಮದ ಮಹತಿಯನ್ನು ವರ್ಣಿಸಹತ್ತಿದ್ದಾರೆ. ವರ್ಣ ಸಂಕರದ ಬಗ್ಗೆ ಅಂಜಿಕೆಯನ್ನು ವ್ಯಕ್ತಪಡಿಸಿದ್ದಾರೆ. ಸನಾತನ ಧರ್ಮಾಚರಣೆಯ ಇಚ್ಛೆಯು ಅವರಿಗೆ ಆಗಹತ್ತಿದೆ. ಶಿವಕವಚ, ರಾಮರಕ್ಷಾಸ್ತೋತ್ರ ಮೊದಲಾದವುಗಳ ಘೋಷವು ಶಾಲೆಯಲ್ಲಿ ನಡೆಯಬೇಕು. ಪಾರಿತೋಷಕ ಸಮಾರಂಭದಂತೆ ಶ್ರಾವಣಿಯು ಶಾಲೆಯ ಸಮಾರಂಭವಾಗಬೇಕು. ಎಂದು ಉಪದೇಸಿಶಹತ್ತಿದ್ದಾರೆ." ಎಂದು ಉಲ್ಲೇಖಿಸಿ 'ನಮಗೆ, ಹಿಂದೂ ಧರ್ಮಾ ಭಿಮಾನಿಗಳಿಗೆ ಈ ಮಾತುಗಳು ಅತ್ಯಂತ ಉತ್ಸಾಹ ಜನಕವಾಗಿವೆ. ಆದರೆ ಈ ಸಂಗತಿಗಳು ಸುಧಾರಕರ ಕಿವಿಗೆ ಬಿದ್ದರೆ, ತಮ್ಮ ಆಧಾರವೇ ಕಳಚಿ ಬಿದ್ದಿತೆಂದು ಅವರಿಗೆ ದುಃಖವಾಗಬಹುದು. ದೀರ್ಘಸೂತಕವನ್ನು ಅವರು ಆಚರಿಸಬಹುದು' ಎಂದು ಉದ್ಗಾರಗಳನ್ನು ತೆಗೆದಿದೆ. ರಾನಡೆ, ಭಾಂಡಾರಕರ ರಿಬ್ಬರೂ ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿಯ ನಿಯಾಮಕ ಕಮಿ ಟಿಯ ಸದಸ್ಯರಿದ್ದ ಮೂಲಕ, ಈ ಮತಭೇದವು ಎಲ್ಲಿ ವಿರಸವನ್ನುಂಟು ಮಾಡುತ್ತದೆಯೋ ಎಂಬ ಭೀತಿಯು ಉತ್ಪನ್ನವಾಯಿತು. ಆಗರಕರ ಮೊದಲಾದವರು ಪ್ರತ್ಯಕ್ಷವಾಗಿಯೇ ಅವರ ಪಕ್ಷವನ್ನು ಹಿಡಿದರು. ಹೀಗಾಗಿ ಶಾಲೆಯ ಹೊರಗೂ ಒಳಗೂ ಜಗಳಕ್ಕೆ ಪ್ರಾರಂಭವಾಯಿತು. ಇದೇ ಪ್ರಸಂಗದಲ್ಲಿ ವಡ್ಸವರ್ಥ, ವೆಡರಬರ್ನರು 'ನಿಮ್ಮ ಉತಾವಳೀತನದಿಂದ ಒಳ್ಳೇ ಪರಿಣಾಮವಾಗಲಾರದು ಬಾಲವಿವಾಹವು ಅನಿಷ್ಟವಿದ್ದರೂ ಸುಧಾರಕರು ಸುಮ್ಮಸುಮ್ಮನೆ ಅದರ ಅತಿಶಯೋಕ್ತಿಯನ್ನು ಮಾಡುತ್ತಾರೆ. ಹಿಂದೂ ವಿಧವೆಯರ ಸ್ಥಿತಿಯು ಇಟಾಲಿಯಲ್ಲಿಯ ವಿಧವೆಯರಷ್ಟು ಕೆಡಕಿರ ಲಿಕ್ಕಿಲ್ಲ. ಯೋಗ್ಯ ಶಿಕ್ಷಣಕೊಟ್ಟು, ನಿಜವಾದ ಶಾಸ್ತ್ರವಾವುದೆಂಬುದನ್ನು ವಿವರಿಸುವದರಿಂದಾಗುವ ಸುಧಾರಣೆಯು ಸ್ಥಿರವಾಗಿ ಉಳಿಯುವದು. ರಾಜ ಕೀಯ ಸುಧಾರಣೆಯಿಂದ ಸಾಮಾಜಿಕ ಜೀವನದಮೇಲೆ ಪರಿಣಾಮವಾಗು ತ್ತದೆ. ಪ್ರಮಾಣ ಪ್ರಮಿತವಾದ ಶಾಸ್ತ್ರ, ರಾಜಕೀಯ ಶಿಕ್ಷಣ ಇವುಗಳಿಂದಲೇ

ಇಂಗ್ಲಂಡದಲ್ಲಿ ಸಾಮಾಜಿಕ ಸುಧಾರಣೆಯಾಗಿದೆ" ಎಂದು ಮಲಬಾರ ಸೇಟರ ಸಮಾಚಾರ ತೆಗೆದುಕೊಂಡರು.

ಕಾಶಿನಾಥಪಂತ ತೆಲಂಗರು ಕೂಡ ಇದೇ ಬಗೆಯ ಅಭಿಪ್ರಾಯವನ್ನು ೧೮೮೬ನೇ ಫೆಬ್ರುವರಿಯಲ್ಲಿ ವ್ಯಕ್ತಮಾಡಿದರು "ಒಂದು ಬಗೆಯ ಸಮಾಜಿಕಸ್ಥಿತಿ ಇದ್ದರೇನೇ, ಒಂದು ಪ್ರಕಾರದ ರಾಜಕೀಯ ಸ್ಥಿತಿಯು ಪ್ರಾಪ್ತವಾಗುವದೆಂಬ ಸಿದ್ಧಾಂತದಲ್ಲಿ ಹುರುಳಿಲ್ಲ. ಸಾಮಾಜಿಕ ಸುಧಾರಣೆಯಾಗದೆ ರಾಜಕೀಯ ಸುಧಾರಣೆಗೆ ಸ್ಥಾನವಿಲ್ಲವೆಂಬುದರಲ್ಲಿ ತಥ್ಯವಿಲ್ಲ. ಹಿಂದೂ ಗ್ರಹಗಳೆಲ್ಲ ಗುಲಾಮರ ಸ್ಥಾನವೆನ್ನುವದು ಪೂರ್ಣ ಸುಳ್ಳಿದೆ. ಶಿವಾಜಿ, ಪೇಶ್ವೆಯವರಂಥ ಪ್ರತಾಪಶಾಲಿಗಳು ಬಾಲವಿವಾಹದಿಂದಲೇ ಜನ್ಮವೆತ್ತಿದ್ದಾರೆ. ಅವರ ಪರಾಕ್ರಮವೇನೂ ಇಂಗ್ಲಿಷ ಸಂಸ್ಕೃತಿಯನ್ನು ಸರ್ವಥಾ ಆಧರಿಸಿರಲಿಲ್ಲ. ೭ನೇ ಶತಮಾನದಲ್ಲಿ ಈಗಿದ್ದ ನಮ್ಮ ಗ್ರಹಸ್ಥಿತಿಗಿಂತಲೂ ಒಳ್ಳೇ ಸ್ಥಿತಿ ಇರಲಿಲ್ಲ. ಆದರೂ ಭಾರತದ ರಾಜಕೀಯ ಸ್ಥಿತಿಯು ಅತ್ಯಂತ ಉಚ್ಚವಾಗಿದ್ದಿತು........ರಾಜಕೀಯ ಹಾಗೂ ಸಾಮಾಜಿಕ ಸುಧಾರಣೆಗಳು ಸಂಕಟದಲ್ಲಿರುವ ಕೋಟೆಗಳಂತಿವೆ. ರಾಜಕೀಯ ಕೋಟೆಯನ್ನು ವಶಪಡಿಸಿಕೊಳ್ಳಲು ಸರ್ವ ಹಿಂದೀಯರ ಏಕವಾಕ್ಯತೆಯಿದ್ದು ಉತ್ಸುಕರೂ ಆಗಿದ್ದಾರೆ. ಆದರೆ ಸಾಮಾಜಿಕ ಸುಧಾರಣೆಯ ಪ್ರಶ್ನೆಯು ಹಾಗಿಲ್ಲ. ಮೊದಲು ರಾಜಕೀಯ ಕೋಟೆಯನ್ನು ವಶಪಡಿಸಿಕೊಂಡರೆ, ನಂತರ ಎರಡನೆಯದರ ಮೇಲೆ ಏರಿಹೋಗಬಹುದು. ರಾನಡೆಯವರಂಥ ಬುದ್ಧಿವಂತರು ಏಕಕಾಲಕ್ಕೆ ಎಲ್ಲಕಡೆಗೆ ಏರಿಹೋಗಬಹುದು. ಅದು ಸಾಮಾನ್ಯ ಜನರಿಗೆ ಶಕ್ಯವಿಲ್ಲ. ಆದ್ದರಿಂದ ನಮ್ಮ ದೇಶದ ಎಲ್ಲ ಬುದ್ಧಿವಂತರ ಬುದ್ಧಿಸಾಮರ್ಥ್ಯವೆಲ್ಲ ರಾಜಕೀಯ ಸುಧಾರಣೆಯ ಕಡೆಗೇ ವೆಚ್ಚವಾಗಬೇಕು. ಕೆಲವರು ಮಾತ್ರ ಸಾಮಾಜಿಕ ಸುಧಾರಣೆಗಳ ಕಡೆಗೆ ಲಕ್ಷ್ಯ ಕೊಟ್ಟರೆ ಸಾಕು" ಎಂದು ಪ್ರತಿಪಾದಿಸಿದರು.

ಮುಂಬಯಿಯಲ್ಲಿ ೧೮೮೫ರಲ್ಲಿ ಸೇರಿದ ರಾಷ್ಟ್ರೀಯ ಸಭೆಯ ಸಿದ್ಧತೆಯ ಕಾಲಕ್ಕೆ, ಟಿಳಕರು 'ರಾಷ್ಟ್ರೀಯ ಸಭೆಯು ಸಾಮಾಜಿಕ ಸುಧಾರಣೆಗಳ ಬಗ್ಗೆ ಏಕ ವಾಕ್ಯತೆಯನ್ನುಂಟುಮಾಡುವದು ಶಕ್ಯವಿಲ್ಲ. ಆದರೆ ರಾಜಕೀಯ ಸುಧಾರಣೆಗಳನ್ನು ಮಾಡಬೇಕೆಂಬ ಬಗ್ಗೆ ರಾಷ್ಟ್ರದಲ್ಲಿ ಮತೈಕ್ಯವಿದ್ದು

ಸಾಧ್ಯವೂ ಇದೆ, ಅವಶ್ಯವೂ ಇದೆ' ಎಂದು ಪ್ರತಿಸಾದಿಸಿದರು. ಇಲ್ಲಿಯೂ ರಾನಡೆ ಹಾಗೂ ಟಿಳಕರ ಅಭಿಪ್ರಾಯಗಳ ತಾಕಲಾಟ. ಏಕೆಂದರೆ, ರಾಷ್ಟ್ರೀಯ ಸಭೆಯ ಸ್ವರೂಪವು ಸಾಮಾಜಿಕವಿರಬೇಕೆಂದು ಪ್ರಯತ್ನಿಸಿದವರಲ್ಲಿ ರಾನಡೆ ಯವರೂ ಒಬ್ಬರಾಗಿದ್ದರು.

ಹಿಂದೂ ಸಮಾಜದಲ್ಲಿಯ ಸಾಮಾಜಿಕ ರೂಢಿಗಳಲ್ಲಿ ಸರಕಾರವು ಕೈಹಾಕಬೇಕೆಂದು ಸುಧಾರಕರ ಮತ. ಸುಧಾರಕರೇ ಸರಕಾರಕ್ಕೆ ಸಮೀಪ ದವರು. ಅವರ ಮತವೇ ದೇಶದ ಜನಮತವೆಂಬ ಕಲ್ಪನೆಯಾಗುವ ಸಂಭವ ವಿದ್ದಿತು. ಇದನ್ನು ಖಂಡಿಸಬೇಕೆಂಬ ಇಚ್ಛೆಯಿಂದ ಮಾಧವಬಾಗದಲ್ಲಿ ೧೮೮೬ನೇ ಸಪ್ಟಂಬರ ೬ಕ್ಕೆ ಸನಾತನಿಗಳ ಸಭೆಯು ಮಂಡಲೀಕರ ಅಧ್ಯಕ್ಷತೆ ಯಲ್ಲಿ ಜರುಗಿತು. ಇಂತಹ ಕಾರ್ಯದಲ್ಲಿ ಇಷ್ಟು ದೊಡ್ಡ ಸಭೆಸೇರಿದ್ದುದು ಇದೇ ಮೊದಲು. ತೆಲಂಗ-ಈಶ್ವರಲಾಲ ದವೆಯವರ ವಿರೋಧವನ್ನು ಲೆಕ್ಕಿಸದೆ, ಸಭೆಯು ಪ್ರಚಂಡ ಬಹುಮತದಿಂದ ಸರಕಾರಕ್ಕೆ ಕಳಿಸುವ ವಿನಂತಿಯನ್ನು ಸ್ವೀಕರಿಸಿತು. ಡೆ. ಎ. ಸೊಸಾಯಿಟಿಯ ಸದಸ್ಯರಲ್ಲಿ ಆಗರಕ ರರ ಹೊರ್ತಾಗಿ ಆಪ್ಟೇ ಮೊದಲಾದ ಎಲ್ಲ ಸದಸ್ಯರೂ ತಮ್ಮ ಅಂಕಿತದಿಂದ ಸನಾತನಿಗಳಿಗೆ ಬೆಂಬಲವಿತ್ತಿದ್ದರು.

ಬೆಂಕಿಯಲ್ಲಿ ಹುಲ್ಲು ಚಲ್ಲಿದಹಾಗೆ ಈ ಮತಭೇದಕ್ಕೆ ದಾದಾಜಿ ರಖ ಮಾಬಾಯಿ ಪ್ರಕರ್ಣವು ಮತ್ತಿಷ್ಟು ಕಾರಣವಾಯಿತು. ಈ ಪ್ರಕರ್ಣದಲ್ಲಿ ಸುಧಾರಣೆಗಾಗಿ ಹೊಸಕಾಯಿದೆ ಮಾಡುವದಿರಲಿಲ್ಲ. ಇದ್ದ ಕಾಯಿದೆಯನ್ನೇ ಹೇಗೆ ಕಾರ್ಯಕಾರೀಮಾಡಬೇಕೆಂಬುದೇ ಮುಖ್ಯ ಪ್ರಶ್ನೆಯಿದ್ದಿತು. ಈ ಪ್ರಕರ್ಣವು ಸೊಸಾಯಿಟಿ ಸಭಾಸದರ ತಲೆಯನ್ನು ಎರಡು ವರ್ಷ ತಿಂದಿತು. ದಾದಾಜಿಯ ಪಕ್ಷವನ್ನು ಟಿಳಕರೂ ರಖಮಾಬಾಯಿಯ ಪಕ್ಷವನ್ನು ಆಗರಕರರು ವಹಿಸಿದರು. ದ್ವಂದ್ವವು ಪ್ರಾರಂಭವಾಯಿತು.

ಈ ಪ್ರಕರ್ಣದ ಸಂಕ್ಷಿಪ್ತ ಚರಿತ್ರೆಯು ಇಂತಿದೆ. ಡಾ. ಸಖಾರಾಮ ಎಂಬುವವರು ಪಂಚಕಲಶ ಜಾತಿಯ ಒಬ್ಬ ವಿಧವೆಯನ್ನು ಮದುವೆ ಯಾದರು. ಆ ವಿಧವೆಗೆ ಎರಡನೆಯ ಮದುವೆಯ ಮೊದಲು ಒಬ್ಬ ಮಗಳಿ ದ್ದಳು. ಅವಳೇ ರಖಮಾಬಾಯಿ. ಅವಳು ತಾಯಿಯ ಹತ್ತಿರವೇ ಇದ್ದಳು. ರಖಮಾಬಾಯಿಗೆ ತನ್ನ ತಂದೆಯ ಆಸ್ತಿಯು ದೊರೆಯುತ್ತಿತ್ತು.

ಈ ಆಸ್ತಿಯು ಹೊರಗೆ ಹೋಗಬಾರದೆಂದು ಸಖಾರಾಮನು ತನ್ನ ಆಪ್ತರಲ್ಲಿ ಒಬ್ಬನಾದ ದಾದಾಜಿ ಎಂಬುವವನಿಗೆ ರಖಮಾಬಾಯಿಯನ್ನು ಮದುವೆ ಮಾಡಿದನು. ದಾದಾಜಿಯು ಬಡವನಿದ್ದನು. ಡಾ. ಸಖಾರಾಮನೇ ಅವನನ್ನು ಪೋಷಿಸುತ್ತಿದ್ದನು. ದಾದಾಜಿಗೆ ಕ್ಷಯವಾಯಿತು. ಹಾಗೂ ಹೀಗೂ ಉಳಿದುಕೊಂಡನು. ಸಖಾರಾಮನಿಗೂ ದಾದಾಜಿಗೂ ಕೂಡಿ ನಡೆಯದಾಯಿತು. ಸಖಾರಾಮನು ರಖಮಾಬಾಯಿಯನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡನು. ಗಂಡನೆಡೆಗೆ ಕಳಿಸಲಿಲ್ಲ. ನಿರುದ್ಯೋಗಿಯಾದ ರಖಮಾಬಾಯಿಯು ಆರ್ಯ ಮಹಿಲಾಸಮಾಜದ ಕಾರ್ಯದರ್ಶಿಯಾಗಿ ಪ್ರಸಿದ್ಧಿಗೆ ಬಂದಿದ್ದಳು. ಗಂಡನು, ಮನೆಗೆಬರಲು ಎಷ್ಟುಹೇಳಿಕಳಿಸಿದರೂ ಆಕೆಯು ಬರಲಿಲ್ಲ. ಅಷ್ಟುಹೊತ್ತಿಗೆ ಸಖಾರಾಮನೂ ತೀರಿಕೊಂಡನು ದಾದಾಜಿಯು ತನ್ನ ಹೆಂಡತಿಯನ್ನು ವಶಕ್ಕೆ ಕೂಡಿಸಬೇಕೆಂದು ಹಾಯಕೋರ್ಟಿಗೆ ದಾವೆ ಮಾಡಿದನು. ಹಿಂದೂ ಶಾಸ್ತ್ರದಂತೆ ತನ್ನನ್ನು ಕೋರ್ಟು ಗಂಡನ ಮನೆಗೆ ಕಳಿಸುವ ಸಂಭವವಿರುವದೆಂದು ತಿಳಿದು, ರಖಮಾಬಾಯಿಯು ಆಂಗ್ಲೋ ಇಂಡಿಯನ್ ವೃತ್ತಪತ್ರಗಳಲ್ಲಿ ತನ್ನ ಕರುಣಕಥೆಯನ್ನು ಪ್ರಸಿದ್ಧಿಸಿ, ಸುಧಾರಕರ ಸಹಾನುಭೂತಿಯನ್ನು ಪಡೆಯಬೇಕೆಂದೂ ಅದರ ಪ್ರಭಾವವು ಹಾಯಕೋರ್ಟಿನ ಮೇಲೆ ಬೀಳಬೇಕೆಂದೂ ಆಟವನ್ನು ಹೂಡಿದಳು. ರಖಮಾಬಾಯಿಯ ಒಪ್ಪಿಗೆಯಿಲ್ಲದೆ ಲಗ್ನವಾದುದರಿಂದ ಕಾಯಿದೆಯ ಬಲದಿಂದ ದಾದಾಜಿಗೆ ಆಕೆಯನ್ನು ಮನೆಗೆ ಒಯ್ಯಲು ಕೋರ್ಟಿನ ಸಹಾಯವಾಗಬಾರದು ಎಂಬುದೇ ಕೋರ್ಟಿನ ಎದುರಿಗೆ ಪ್ರಶ್ನೆಯಿದ್ದಿತು. ಈ ವಿಷಯಕ್ಕೆ ಕಾಯಿದೆಯ ಯಾವ ಆಧಾರವೂ ಇರಲಿಲ್ಲ. ಆದರೆ ನ್ಯಾಯಮೂರ್ತಿ ಪಿನ್ಹೆಯವರು ರಖಮಾಬಾಯಿಯಂತೆ ನಿರ್ಣಯಕೊಟ್ಟರು. ದಾದಾಜಿಯು ಅಪೀಲುಮಾಡಿದನು. ಮುಖ್ಯ ನ್ಯಾಯಾಧೀಶರಾದ ಸಾರ್ಜಂಟ ಮತ್ತು ಬೇಲಿ ಇವರು ದಾದಾಜಿಗೆ ತನ್ನ ಹೆಂಡತಿಯಮೇಲೆ ಅಧಿಕಾರವಿದೆ ಎಂದು ನಿರ್ಣಯಕೊಟ್ಟರು.

ಈ ನಿರ್ಣಯದ ವಿಷಯಕ್ಕೆ ಮತಭೇದವಾಗುವದು ಸ್ವಾಭಾವಿಕವಿದ್ದಿತು. ನಿರ್ಣಯವು ಧರ್ಮಶಾಸ್ತ್ರ ಸಮ್ಮತವಾದುದರಿಂದ ಧರ್ಮಶಾಸ್ತ್ರವೇ ಕಾಡು ಎನ್ನುವವರೆಗೆ ಸುಧಾರಕರು ರೊಚ್ಚಿಗೆದ್ದರು. ಇತ್ತ ರಖಮಾ

ಬಾಯಿಯು; ಕೋರ್ಟಿನ ನಿರ್ಣಯಕೊಟ್ಟರೂ ತಾನು ಗಂಡನ ಮನೆಗೆ ಹೋಗುವದಿಲ್ಲೆಂದೂ ಈ ವಿಷಯದಲ್ಲಿ ಶಿಕ್ಷೆಯಾದರೂ ಅನುಭವಿಸುವೆ ನೆಂದೂ ಸಾರಿದಳು. ಚರ್ಚೆಗೆ ಆರಂಭವಾಯಿತು. ಆಕೆಗೆ ಶಿಕ್ಷೆಯಾಗು ವುದು ತಪ್ಪೆಂದು ಸುಧಾರಕರು ಎತ್ತಿಹಿಡಿದರು. ಆಕೆಗೆ ಸಹಾಯ ನೀಡಲು ಕಮಿಟಿಯಾಯಿತು. ಕಾಯಿದೆಯ ತಿದ್ದುಪಡಿ ಅವಶ್ಯವೆಂದು ಸುಧಾರಕರಿಗೆ ಅನಿಸಹತ್ತಿತು. ನಮ್ಮ ಆಚಾರವಿಚಾರಗಳಲ್ಲಿ ಸರಕಾರವು ಕೈಹಾಕಕೂಡ ದೆಂದು ಸನಾತನಿಗಳ ಮತವಾಗಿತ್ತು. ವಡ್ಸ್ವರ್ಥ, ತೆಲಂಗ, ಕೀರ್ತಿಕರ ಮೊದಲಾದವರು ಸನಾತನಿಗಳ ಕಡೆಗೆ ಇದ್ದರೂ ಆಕೆಗೆ ಶಿಕ್ಷೆಯಾಗಬಾರ ದೆಂದು ಅನ್ನುತ್ತಿದ್ದರು. ಕೀರ್ತಿಕರರು ''ರಖಮಾಬಾಯಿಯ ಬಗೆಗೆ ಏಕೆ ಕೆಡಕೆನಿಸಬೇಕು? ಹಿಂದೂ ಜನರಲ್ಲಿ ಬಾಲ್ಯದಲ್ಲಿಯೇ ಲಗ್ನವಾದ ಜನರಿ ಲ್ಲವೇ? ಯಾವ ಹೆಣ್ಣುಮಗಳಾದರೂ ಅವಿಚಾರದಿಂದ ತನ್ನ ಗಂಡನನ್ನು ಬಿಟ್ಟಿರುವಳೋ? ಪ್ರತ್ಯಕ್ಷ ಗಂಡನನ್ನೇ ಬಿಡುವಷ್ಟು ಕಠಿಣ ಹೃದಯವು ಈ ವಿದ್ಯೆಯಿಂದಲೇ ಬರುತ್ತಿದ್ದರೆ, ಇಂತಹ ದುಷ್ಟ ವಿದ್ಯೆ ನಮಗೆ ಬೇಡ'' ಎಂದರು. ತೆಲಂಗರೂ ಇದೇ ಬಗೆಯ ಉದ್ಗಾರ ತೆಗೆದರು. ರಾನಡೆಯವರೂ ರಂಗಕ್ಕಿಳಿದರು. ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿಹಿಡಿದರು. ಕೇಸರಿಯು ಅವರ ಸಮಾಚಾರವನ್ನು ಚನ್ನಾಗಿಯೇ ತೆಗೆದುಕೊಂಡಿತು.

ಸೊಸಾಯಿಟಿ ಜನರಲ್ಲಿ ನಡೆದ ಈ ರೀತಿಯನ್ನು ಕಂಡು ಜನತೆ ಗೊಂದಲದಲ್ಲಿ ಬಿದ್ದಿತು. ಅಗರಕರರದು ಒಂದು ಬಗೆ, ಟಿಳಕರದು ಇನ್ನೊಂದು ಬಗೆ, ಆಪ್ಟೆಯವರ ರೀತಿಯೇ ಬೇರೆ. ಒಳಗಿನ ರೂಪ ಬೇರೆ, ಹೊರಗಿನ ನೋಟ ಬೇರೆ. ಈ ಅಸಂಗತತನವು ಜನರಿಗೆ ಅರ್ಥವಾಗದಾ ಯಿತು. ೧೮೮೭ರ ಜೂನ ೨೮ರ ಕೇಸರಿಯ ಸಂಚಿಕೆಯಲ್ಲಿ 'ಸದ್ಯದಲ್ಲಿರುವ ಎಲ್ಲ ಆಜೀವ ಸದ್ಯಸರ ಸಂಬಂಧವು ಕೇಸರಿ ಹಾಗೂ ಮರಾಠಾ ಪತ್ರಗಳಿ ಗಿಲ್ಲ. ಹಿಂದಿನ ಕೆಲಜನರ ಸಂಬಂಧ ಮಾತ್ರವಿರುತ್ತದೆ. ಆದುದರಿಂದ ಕೇಸರಿ ಹಾಗೂ ಮರಾಠಾಗಳಲ್ಲಿ ಬರುವ ಎಲ್ಲ ಲೇಖಗಳ ಹೊಣೆಯು ಎಲ್ಲ ಸದಸ್ಯರ ಮೇಲೆ ಇರುವದಿಲ್ಲ, ಎಂದು ಸಂಪಾದಕರು ಪ್ರಸಿದ್ಧಿಸಿದರು. ಈ ಮತಭೇದವು ವಿಕೋಪಕ್ಕೆ ಹೋಗಿ ೧೮೮೭ ರ ಅಕ್ಟೋಬರದ ಕೊನೆಗೆ ಮುಕ್ತಾಯವಾಯಿತು. ೨೫ ನೇ ಅಕ್ಟೋಬರ ಸಂಚಿಕೆಯಲ್ಲಿ 'ಇಂದಿನಿಂದ

ರಾ. ಬಾಳ ಗಂಗಾಧರ ಟಿಳಕ ಬಿ. ಎ. ಎಲ್ಎಲ್. ಬಿ. ಇವರು ಕೇಸರಿ ಪತ್ರದ ಪ್ರಕಾಶಕರಾದ ಮೂಲಕ, ಪ್ರಕಾಶನದ ಹೊಣೆಯು ಅವರ ಮೇಲೆಯೇ ಇರುತ್ತದೆ. ಆಗರಕರರ ಮೇಲೆ ಇನ್ನು ಯಾವ ಹೊಣೆಯೂ ಇರುವದಿಲ್ಲ' ಎಂದು ಪ್ರಕಟಿಸಿ, ಜನರ ಸಂಶಯಗಳನ್ನೆಲ್ಲ ದೂರಮಾಡಿತು.

ಹೀಗೆ ೧೮೮೭ರ ವರೆಗೆ ನಡೆದ ಈ ಮತಭೇದದಿಂದ ಆಗರಕರರು ಮೆಲ್ಲಮೆಲ್ಲನೆ ಹಿನ್ನಡೆಯಬೇಕಾಯಿತು. ತಾವು ಸಂಪಾದಕರಿದ್ದೂ ತಮ್ಮ ಅಂಕಿತದಿಂದ ಬರೆಯಬೇಕಾಯಿತು. ಕೊನೆಗೆ ಟಿಳಕರಿಗೆ ಒಪ್ಪಿಸಿ ತಾವು ಹಿಂದೆ ಸರಿದರು.

ಈ ಇಬ್ಬರ ವಿಚಾರಸರಣಿಯಲ್ಲಿ ಉತ್ತರ ದಕ್ಷಿಣ ಧ್ರುವಗಳಷ್ಟು ಅಂತರವಿದ್ದಿತು. ವ್ಯಕ್ತಿಗತವಾಗಿದ್ದ ಈ ಭೇದವು ಸಂಸ್ಥೆಯಲ್ಲಿಯ ಮತ ಭೇದವಾಗಿ ಪರಿಣಮಿಸಿತು. ಟಿಳಕರು ಸೊಸಾಯಿಟಿಯನ್ನು ಬಿಟ್ಟನಂತರ ಇವರಲ್ಲಿಯ ಮತಭೇದವು ಮಹಾರಾಷ್ಟ್ರದ ಮತಭೇದವಾಗಿ ಪರಿಣಮಿಸಿತು. ಇಬ್ಬರೂ ಅಂತಹ ಮಹಾವ್ಯಕ್ತಿಗಳೇ.

ಈ ಇಬ್ಬರಲ್ಲಿ ಇಷ್ಟು ಮತಭೇದವಿದ್ದರೂ ಒಬ್ಬರನ್ನೊಬ್ಬರು ಅತ್ಯಂತ ಪ್ರೀತಿಸುತ್ತಿದ್ದರು. ಆಗರಕರರ ಮೃತ್ಯುಲೇಖವನ್ನು ಬರೆಯುವಾಗ ಟಿಳಕರು ಗಳ-ಗಳ ಅಳಹತ್ತಿದರು. ಎರಡು ಅಂಕಗಳನ್ನು ಬರೆಯಲು ನಾಲ್ಕು ತಾಸುಗಳು ಹಿಡಿದವೆಂದು ಹೇಳುತ್ತಾರೆ. "ಸತ್ಯ, ಏಕನಿಷ್ಠತೆ, ಸ್ವಾರ್ಥತ್ಯಾಗ ತತ್ವನಿಷ್ಠ ಜೀವನಗಳ ಪ್ರಭಾವವು ಅತ್ಯದ್ಭುತವಾದುದು. ಭೋಗ, ಐಶ್ವರ್ಯಗಳ, ಕೊನೆಮುಟ್ಟಿದ ಮನುಷ್ಯನು ಕೂಡ ದಾರಿದ್ರ್ಯದಿಂದ ಬಳಲಿದರೂ ಏಕನಿಷ್ಠೆಯಿಂದ ದೇಶಸೇವೆಮಾಡುವ ಮನುಷ್ಯನ ಮಹಿಮೆಯನ್ನು ಕೊನೆಗೆ ಕೊಂಡಾಡಬೇಕಾಗುತ್ತದೆ. ಸ್ವಸಾಮರ್ಥ್ಯದಿಂದ ಶ್ರೀಮಂತಿಕೆಯನ್ನು ಸಂಪಾದಿಸಿ ಶ್ರೇಷ್ಠತೆಯನ್ನು ಪಡೆಯುವೆನೆಂಬ ಆತ್ಮವಿಶ್ವಾಸವಿದ್ದರೂ, ಆಗರಕರರಂತೆ ಮನೋದೇವತೆಯ ಸಾಕ್ಷಿಯಾಗಿ ಕಷ್ಟನಷ್ಟಗಳನ್ನೂ ಮಾನಾಪಮಾನಗಳನ್ನೂ ಸಹಿಸಿ ದೇಶಸೇವೆಯ ವ್ರತಬದ್ಧನಾದ ಪುರುಷನೇ ನಿಜವಾದ ಮಹಾಪುರುಷ" ಎಂದು ಬರೆದಿರುವರು. ಈ ವಾಕ್ಯಗಳೇ ಆಗರಕರರ ಬಗ್ಗೆ ಟಿಳಕರಲ್ಲಿ ಎಷ್ಟು ಆಳವಾದ ಪ್ರೇಮಾದರಗಳಿದ್ದವೆಂಬುದನ್ನು ತೋರಿಸುವವು.

---

# ಶಿಕ್ಷಣ ಸಂಸ್ಥೆಗೆ ಶರಣು

ಟಿಳಕ, ಆಗರಕರರ ಮತಭೇದವು ಆಗರಕರರಿಗೆ ಕೇಸರಿಯನ್ನು ಬಿಡಲು ಹಚ್ಚಿದಂತೆ, ಟಿಳಕ ಹಾಗು ಇತರ ಆಜೀವ ಸದಸ್ಯರ ಮತಭೇದಗಳು ಟಿಳಕರಿಗೆ ರಾಜೀನಾಮೆ ಕೊಡಲು ಹಚ್ಚಿದವು. ಮತಭೇದಗಳು ಬೆಳೆಯುತ್ತ ನಡೆಯಲು ಟಿಳಕರು ಬೇಸತ್ತು ೧೮೯೯ ರಲ್ಲಿ ಕೆಲವು ತಿಂಗಳ ರಜೆಯನ್ನು ತೆಗೆದುಕೊಂಡರು. ರಜೆ ಮುಗಿಸಿ ಮರಳಿ ಬಂದಬಳಿಕ ಕೆಲವು ದಿನಗಳಲ್ಲಿಯೇ ರಾಜೀನಾಮೆಯನ್ನು ಕೊಟ್ಟರು. ಈ ರಾಜೀನಾಮೆಯು ಟಿಳಕರ ಸ್ವಾತಂತ್ರ ಪ್ರೀತಿಯನ್ನೂ ಅವರ ತಾತ್ವಿಕ ಜೀವನದ ಮಟ್ಟವನ್ನೂ ವ್ಯಕ್ತಪಡಿಸುತ್ತದೆ. ಟಿಳಕರಿಗೆ ತಮ್ಮ ಮನಸ್ಸಿನ ವಿರುದ್ಧವಾಗಿ ಸಂಸ್ಥೆಯನ್ನು ತ್ಯಜಿಸುವ ಪ್ರಸಂಗಬಂದಿತು. ಒಂದು ಬಗೆಯಿಂದ ಇದು ಟಿಳಕರ ಸೋಲೆನ್ನಬಹುದು. ಡೆ. ಎ. ಸೊಸಾಯಿಟಿಯಲ್ಲಿಯ ತಮ್ಮ ಆಜೀವ ಸದಸ್ಯತ್ವವನ್ನು ಕಡಿಮೆಮಾಡಬೇಕೆಂದು ಅಕ್ಟೋಬರ ೧೪ ಕ್ಕೆ (೧೮೯೦) ಬರೆದು ತಿಳಿಸಿದರು. ೧೫ ನೇ ಡಿಸೆಂಬರ ದಿನ ಬರಹದ ಮೂಲಕ ರಾಜೀನಾಮೆಯನ್ನು ಕಳಿಸಿದರು. ಅದರಲ್ಲಿ ತಾವೇಕೆ ರಾಜೀನಾಮೆಯನ್ನು ಕೊಡಬೇಕಾಯಿತೆಂಬುದನ್ನು ಉಲ್ಲೇಖಿಸಿದ್ದಾರೆ.

ತಾವು ಸಂಸ್ಥೆಯಿಂದ ಹೊರಬೀಳುವ ಪ್ರಸಂಗ ಬಂದುದಕ್ಕಾಗಿ ಖೇದ ಪ್ರದರ್ಶನ ಮಾಡುತ್ತ "೧೧ ವರ್ಷಗಳ ಪೂರ್ವದಲ್ಲಿ ನಮ್ಮಲ್ಲಿಯ ಕೆಲವರು ಒಂದೆಡೆ ಕೂಡಿದೆವು. ಉಚ್ಚಧ್ಯೇಯವನ್ನು ಕಣ್ಣೆದುರಿಗೆ ಇಟ್ಟುಕೊಂಡು ಪರಿಶ್ರಮಿಸಿದೆವು. ವಿರೋಧವನ್ನು ಎದುರಿಸಿದೆವು. ಉಪಹಾಸವನ್ನು ಸಹಿಸಿದೆವು. ನಿರಾಶೆಗಳನ್ನು ನುಂಗಿದೆವು. ಬಡತನವನ್ನು ಅಪ್ಪಿಕೊಂಡೆವು. ಸಂಸ್ಥೆಯನ್ನು ಕಟ್ಟಿದೆವು. ಇಂತಹ ಸಂಸ್ಥೆಯನ್ನು ಬಿಟ್ಟು ಹೋಗುವಾಗ ನನಗಾದ ವೇದನೆಯನ್ನು ನೀವೇ ಊಹಿಸಬೇಕು. ನನ್ನ ಮಟ್ಟಿಗಂತೂ ಸೊಸಾಯಿಟಿಯು ಅಂದರೆ ಶಿಕ್ಷಣ ಕಾರ್ಯಕ್ಕೇ ನನ್ನ ಆಯುಷ್ಯವು ಮೀಸಲಾಗಿತ್ತು. ಹೀಗಿದ್ದರೂ ಅನಿವಾರ್ಯವಾಗಿ ಅನಿಚ್ಛೆಯಿಂದ ನಾನು ಈ

ಸಂಸ್ಥೆಯನ್ನು ಬಿಡುವ ಪ್ರಸಂಗಬಂದಿದೆ. ಇತ್ತೀಚಿಗೆ ನಮ್ಮಲ್ಲಿ ಕೆಲವರಿಗೆ ಹಳೆಯ ಧೋರಣವನ್ನೂ ತತ್ವಗಳನ್ನೂ ತ್ಯಜಿಸುವ ಪ್ರವೃತ್ತಿಯುಂಟಾಗ ಹತ್ತಿದೆ. ನಾನು ಕಾಲಕಾಲಕ್ಕೆ ಈ ಬಗ್ಗೆ ಎಚ್ಚರಿಸಿದೆ. ಅದರ ಪರಿಣಾಮವಾಗದೆ ಅದರ ವಿರುದ್ಧ ತಪ್ಪುತಿಳುವಳಿಕೆಗಳಾಗಿ ದ್ವೇಷಾಗ್ನಿಯು ಒಳಗೊಳಗೇ ಹೊತ್ತಹತ್ತಿತು. ಈಗ ನಾನು ಉಲ್ಲೇಖಿಸುವ ಸಂಗತಿಗಳು ಕೆಲವರಿಗೆ ಕ್ಷುಲ್ಲಕವೆನಿಸಬಹುದು. ಆದರೆ ಸಂಸ್ಥೆಯ ಇತಿಹಾಸದಲ್ಲಿ ಮತ್ತೆ ಇಂತಹ ತಪ್ಪುಗಳಾಗಬಾರದೆಂಬ ದೃಷ್ಟಿಯಿಂದ ಬರೆಯುತ್ತಿದ್ದೇನೆ."

"ನಮ್ಮ ಸ್ವಭಾವಗಳು ಪರಸ್ಪರ ಹೊಂದಿಕೊಳ್ಳದೆ, ಪರಸ್ಪರರಲ್ಲಿ ಬೆಳೆದ ಮಿತಿಮೀರಿದ ದ್ವೇಷವೇ ಇಂದಿನ ಪರಿಸ್ಥಿತಿಗೆ ಮೂಲಕಾರಣವು. ಆಜೀವ ಸದಸ್ಯರನ್ನು ಮಾಡಿಕೊಳ್ಳುವಾಗ ವಿಶೇಷ ಲಕ್ಷ್ಯವನ್ನು ಪೂರೈಸಿದ್ದರೆ ಅಥವಾ ಇದಕ್ಕಿಂತ ಕಡಿಮೆ ಉದಾರ ಬುದ್ಧಿಯನ್ನು ತೋರಿಸಿದ್ದರೆ, ಒಳ್ಳೆಯದಾಗುತ್ತಿತ್ತು. ಮೂಲತತ್ವಗಳನ್ನು ಧರ್ಮಾಜ್ಞೆಗಳೆಂದು ಬಗೆದು ಅದರಂತೆ ವರ್ತಿಸಬೇಕು, ಇಲ್ಲವೆ ಸಂಸ್ಥೆಯನ್ನು ತ್ಯಜಿಸಬೇಕೆಂಬ ಕಠೋರ ಧೋರಣವನ್ನು ಸ್ವೀಕರಿಸಿದ್ದರೆ ಒಳಿತಾಗುತ್ತಿತ್ತು. ನಮ್ಮಲ್ಲಿಯ ಒಬ್ಬರನ್ನು ಹಿರಿಯರನ್ನಾಗಿ ಮಾಡಿಕೊಂಡು ಅವರು ಹೇಳಿದಂತೆ ಎಲ್ಲರೂ ಕೇಳಬೇಕೆಂಬ ಪದ್ಧತಿಯನ್ನು ಅನುಸರಿಸಿದ್ದರೆ ಚೆನ್ನಾಗಿತ್ತು. ಭಿನ್ನ ಭಿನ್ನ ವಿಚಾರದ ಜನರು ಕಾರ್ಯದ ನಿಮಿತ್ತವಾಗಿ ಒಂಡೆಡೆ ಕೂಡಿದ್ದರ ಪರಿಣಾಮವಿದು. ಸಂಸ್ಥೆಯ ಸಂಸ್ಥಾಪಕರಾದ ನಾವು ಸಮ ವಯಸ್ಕರಿದ್ದೆವು. ಐಹಿಕ ಕಾರ್ಯಕ್ಕಾಗಿ ಒಂದೆಡೆ ಸೇರಿದ್ದೆವು. ಸ್ವಭಾವ ಭಿನ್ನತೆಯನ್ನರಿತ ನಾವು ಸ್ವಾರ್ಥತ್ಯಾಗದಿಂದ ಸಾಧ್ಯವನ್ನು ಸಾಧಿಸುವಾಗ, ಸ್ವಭಾವ ಭೇದವು ಕಾರ್ಯದಲ್ಲಿ ಅಡ್ಡಬರಲಾರದೆಂದು ಭಾವಿಸಿದ್ದೆವು. ನಾವು ಕೈಹಾಕಿದ ಕಾರ್ಯ ಕಷ್ಟಸಾಧ್ಯವಾದುದು. ಫಲಪ್ರಾಪ್ತಿಯ ಕಾಲವು ಬಹುದೂರ. ನಾವೆಲ್ಲರೂ ಸಾಮಾನ್ಯಜನ. ಆದುದರಿಂದ ನಾವು ಮುಖ್ಯ ಕಾರ್ಯದ ಬಗೆಗೆ ನಿಷ್ಠೆ ಹಾಗು ಉತ್ಸಾಹ ತಾಳಿದರೆ ಮಾತ್ರ ಯಶಪ್ರಾಪ್ತಿ, ಎಂದು ನಮ್ಮ ಮೂಕ ಭಾವನೆ. ಮೊದಮೊದಲು ಎಲ್ಲವೂ ನಿರ್ವಿಘ್ನವಾಗಿ ಸಾಗಿತು. ಆದ್ದರಿಂದಲೇ ಕೈಯ್ಯಲ್ಲಿ ಕಾಸಿಲ್ಲದಿದ್ದರೂ ಸಂಸ್ಥೆಯು ಬೆಳೆಯಿತು. ನೈತಿಕ ಶಕ್ತಿಯನ್ನು ಸಂಪಾದಿಸಿತು. ಆದರೆ ಮುಂದೆ ಮೆಲ್ಲಮೆಲ್ಲನೆ ತಾತ್ವಿಕ

ಬಂಧನಗಳು ಶಿಥಿಲವಾದವು. ವ್ಯಕ್ತಿಮಹಾತ್ಮೆಯು ಬೆಳೆಯಹತ್ತಿತು. ಹಿತ ಸಂಬಂಧಗಳು ಹೆಚ್ಚಿದವು. ಉಳಿದ ಉದ್ಯೋಗಗಳು ನಮ್ಮಲ್ಲಿ ಸೇರಿದವು. ಇದರಿಂದ ಆಚಾರ ವಿಚಾರಗಳಲ್ಲಿ ವ್ಯಗ್ರತೆ ಉಂಟಾಯಿತು. ವಾದಗಳು ತಲೆ ಎತ್ತಿದವು. ಪಂಗಡಗಳಾದವು. ಮತ್ಸರ ಬೆಳೆಯಿತು. ದ್ವೇಷ ಹುಟ್ಟಿತು. ಆಯುವ್ಯಯಗಳು ಬಾಯಿಗೂಡದಾದವು. ಸ್ವಾರ್ಥತ್ಯಾಗ, ಸ್ವಾವಲಂಬನ, ಸಾದಾಜೀವನಗಳು ಚೇಷ್ಟೆಯ ವಿಷಯಗಳಾದವು. ಮತ್ತು ಅವುಗಳ ಬಗ್ಗೆ ಎಲ್ಲರಿಗೂ ಬೇಸರ ಉಂಟಾಗಿದ್ದಿತು. ೧೮೮೯ರಲ್ಲಿ ಹೋಳಕರರು ಕೊಟ್ಟ ೭೦೦ ರೂಪಾಯಿಗಳ ವಿಷಯದಲ್ಲಿ ನನ್ನ ಹಾಗು ಆಗರಕರರಲ್ಲಿ ನಡೆದ ಪತ್ರವ್ಯವಹಾರವೇ ಇದಕ್ಕೆ ಸಾಕ್ಷಿ.

ನಾವು ಕಾಲೇಜಿನಲ್ಲಿರುವಾಗ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸ ಬೇಕೆಂದು ನಿಶ್ಚಯಿಸುವಾಗ ಮಿಶನರಿ ಪದ್ಧತಿಯಿಂದ ಖಾಸಗೀ ಶಾಲೆ ಯನ್ನು ಹೇಗೆ ನಡಿಸಬೇಕೆಂಬುದನ್ನು ಚರ್ಚಿಸಿದ್ದೆವು. ಇಂತಹ ಶಾಲೆಗಳು ಸ್ವಾರ್ಥತ್ಯಾಗದಿಂದಲೇ ಯಶಸ್ವಿಯಾಗಲು ಶಕ್ಯವಿದೆ. ಎಲ್ಲರೂ ಒಂದೇ ಕಾರ್ಯವನ್ನು ಕೈಕೊಳ್ಳಬೇಕು. ಎಲ್ಲರೂ ಸರಿಸಮಾನರೆಂದು ತಿಳಿಯ ಬೇಕು. ಸರಿಯಾಗಿ ಶ್ರಮವಿಭಾಗವಾಗಬೇಕು. ವೈಯಕ್ತಿಕ ಲಾಭದ ಉದ್ಯೋಗ ಕೈಕೊಳ್ಳಕೂಡದು. ಇದನ್ನು ಆಚರಿಸುವದು ಕಠಿಣವಿದ್ದರೂ ಇದೇ ಯಶದ ಮೂಲವಾಗಿದೆ, ಎಂದು ನಾವೆಲ್ಲರೂ ಒಮ್ಮತದಿಂದ ಒಪ್ಪಿ ಕೊಂಡಿದ್ದೆವು.

ಕಾರ್ಯರಂಗಕ್ಕಿಳಿದೆವು. ಆಷ್ಟೆಯವರ ಸಂಬಂಧವು ಸಂಸ್ಥೆಗೆ ಬಂದೊ ಡನೆ ಚ್ಯುತಿಗೆ ಪ್ರಾರಂಭವಾಯಿತು. ಅವರಿಗಾಗಿಯೇ ಸುಪರಿಂಟೆಂಡೆಂಟರ ಸ್ಥಳದ ನಿರ್ಮಾಣಮಾಡಬೇಕಾಯಿತು. ಸರಿಸಮಾನತೆಯು ಹಾರಿಹೋಯಿತು. ಮುಂದೆ ಅವರು ಶಾಲೋಪಯೋಗಿ ಪುಸ್ತಕಗಳನ್ನು ಬರೆಯಲುಪಕ್ರಮಿಸಿ ದರು. ನಾವು ಸಂಸ್ಥೆಯನ್ನು ಧೃಡಮಾಡಲು ಪಟ್ಟ ಶ್ರಮವನ್ನು ಹೊಸಬ ರೇನು ಬಲ್ಲರು ? ೧೮೮೩, ೮೪, ೮೫, ಈ ಮೂರು ವರ್ಷಗಳಲ್ಲಿ ಸಂಸ್ಥೆಯ ಘಟನೆಯನ್ನು ಸುದೃಢಮಾಡಿದೆವು. ಸ್ವಾರ್ಥತ್ಯಾಗದಿಂದ ಸಂಸ್ಥೆಯನ್ನು ಕಟ್ಟಿದೆವು. ಸಂಸ್ಥೆಗೆ ಸಾಲವಿದ್ದರೂ ಜಗಳವಿರಲಿಲ್ಲ. ನಮಗೆ ಹೆಚ್ಚಿನ ಆಶೆಗೆ ಆವಕಾಶ ಉಂಟಾಗಬಾರದೆಂದೂ ನಮ್ಮ ಮನಸ್ಸು ಹೊರಗಿನ ದ್ರವ್ಯೋತ್ಪಾ

ದಕ ಉದ್ಯೋಗದ ಕಡೆಗೆ ಹರಿಯಬಾರದೆಂದೂ ತಿಳಿದು, ಪ್ರತಿಯೊಬ್ಬರೂ ಮಾಸಿಕ ವೇತನವನ್ನು ಸ್ವಲ್ಪ ಕಡಿಮೆ ತೆಗೆದುಕೊಂಡು ವಿಶೇಷ ಪ್ರಸಂಗದಲ್ಲಿ ಗ್ರ್ಯಾಚುಟಿ ಪಡೆಯಬೇಕು. ಮತ್ತು ಪ್ರತಿಯೊಬ್ಬನ ಹೆಸರಿನಲ್ಲಿ ಮೂರು ಸಾವಿರ ರೂಪಾಯಿಗಳ ವಿಮೆ ಇಳಿಸಬೇಕೆಂದು ಘಟನೆಯ ಉಪಯನಿಮದಲ್ಲಿ ಬುದ್ಧಿಪೂರ್ವಕ ಸೇರಿಸಲಾಗಿದ್ದಿತು.

ಶಾಲೆ, ಕಾಲೇಜುಗಳಿಗೆ ಸಹಾಯಧನ ದೊರೆತು, ಸಾಂಪತ್ತಿಕ ಸ್ಥಿತಿಯು ಸುಧಾರಿಸಿದೊಡನೆ ನಮ್ಮಲ್ಲಿ ಅವಾಂತರ ವಿಷಯಗಳು ತಲೆ ಎತ್ತಿದವು. ನಮ್ಮಲ್ಲಿಯ ತ್ಯಾಗ ವೃತ್ತಿಯು ಕಡಿಮೆಯಾಗಹತ್ತಿತು. ಹೆಚ್ಚಿನ ಲಾಭದ ಆಶೆ ಹುಟ್ಟಿತು. ಹೊಸಬರಿಗೆ ಹಳಬರ ರೀತಿಯು ಸೇರದಾಯಿತು. ಹೊಸಬರು ಹೆಚ್ಚಾದರು. ಮಿಶನರಿಯ ತತ್ವಗಳಂತೆ ನಡೆಯುವ ಜನರು ಅಲ್ಪ ಸಂಖ್ಯಾಕರಾದರು. ಈ ನಮ್ಮ ಜಗಳವೇ ಏಕೋಪಕ್ಕೆ ಹೋಗಲು ಕಾರಣ. ೧೮೮೫ ರಲ್ಲಿ ಪಗಾರದ ಬಗ್ಗೆ ಜಗಳ ಉಂಟಾಗಿ, ಎಲ್ಲರಿಗೂ ಸರಿ ಸಮಾನ ಪಗಾರ ಹಿಡಿದು ಲೆಖ್ಖ ಮಾಡಬೇಕು. ಯಾರು ಹೆಚ್ಚು ತೆಗೆದುಕೊಂಡಿರುವರೋ ಅವರು ತಿರುಗಿ ಕೊಡಬೇಕೆಂದು ನಿರ್ಣಯವಾಯಿತು. ತಾತ್ವಿಕ ದೃಷ್ಟಿಯಿಂದ ಇದು ಚನ್ನಾಗಿ ಕಂಡರೂ ಮುಂದಿನ ಜಗಳಕ್ಕೆ ಇದೇ ಕಾರಣವಾಯಿತು. ೧೮೮೭ರಲ್ಲಿ ಮುದ್ರಣಾಲಯದ ಜಗಳವು ಸುರುವಾಯಿತು. ವೃತ್ತಪತ್ರಗಳು ಸಾಲವನ್ನು ಮುಟ್ಟಿಸುತ್ತ ನಡೆದಿದ್ದರೂ ಲೇಖಕರಿಗೆ ಏನೂ ಸಿಗುತ್ತಿದ್ದಿಲ್ಲ. ನಮ್ಮಲ್ಲಿಯ ಕೆಲವರು ಇದಕ್ಕಾಗಿಯೇ ದುಡಿಯುತ್ತಿದ್ದರು. ಆದರೆ ಸಂಸ್ಥೆಯಲ್ಲಿ ಕೆಲವರು ಹಣಗಳಿಸುವ ಉದ್ಯೋಗವನ್ನು ಕೈಕೊಂಡರು. ವೃತ್ತಪತ್ರ, ಮುದ್ರಣಾಲಯಗಳು ವೆಚ್ಚದ ಖಾತೆಗಳೆಂದು ಸಂಸ್ಥೆಯಿಂದ ಬೇರ್ಪಡಿಸಲ್ಪಟ್ಟವು. ಕೇಳಕರ, ಗೋಖಲೆ ಹಾಗು ನಾನು ಇವುಗಳನ್ನು ಮುಂದೆಸಾಗಿಸಬೇಕಾಯಿತು. ಇಷ್ಟಕ್ಕೆ ಜಗಳ ನಿಲ್ಲಲಿಲ್ಲ. ಕೇಸರಿಯು ಕೈತಪ್ಪಿತೆಂದು ಅಗರಕರರು ನೊಂದುಕೊಂಡರು. ಸಾಮೂಹಿಕ ಧೋರಣದಂತೆಯೂ ಇಲ್ಲವೆ ಸ್ವತಃ ಅಂಕಿತದಿಂದಲೂ ಬರೆಯಲು ಬಿನ್ನವಿಸಲಾಯಿತು. ಕೊನೆಗೆ ಅವರು 'ಸುಧಾರಕ' ವೆಂಬ ಪತ್ರವನ್ನು ತೆಗೆದರು.

ಆಪ್ಟೆಯವರ ಪುಸ್ತಕ ಪ್ರಕರ್ಣವೂ ಉಪಸ್ಥಿತವಾಯಿತು. ಇಲ್ಲಿಯವರೆಗೆ ಅವರೊಬ್ಬರೇ ಬರೆಯುತ್ತಿದ್ದರು. ಬೇರೆ ಜನರೂ ಬರೆಯಲು

ಉಪಕ್ರಮಿಸಿದರು. ಹೋಳಕರರು ೭೦೦ ರೂಪಾಯಿಗಳನ್ನು ಸಂಸ್ಥೆಗೆ ದಾನ ಕೊಟ್ಟಿದ್ದರು. ಹಿಂದುಗಡೆ ಅದರಲ್ಲಿಯ ೪೦೦ ರೂಪಾಯಿಗಳನ್ನು ಅಗರಕರರ 'ವಾಕ್ಯಮೀಮಾಂಸೆ' ಎಂಬ ಪುಸ್ತಕಕ್ಕೆ ಮೆಚ್ಚುಕೊಡಬೇಕೆಂದು ಪತ್ರ ತರಿಸಲಾಯಿತು. ನಾಮಜೋಶಿಯವರು ಹೊರಗಿನ ಹಣಗಳಿಸುವದರ ಲ್ಲಿಯೇ ಹೆಚ್ಚು ಸಮಯ ಕಳೆಯಹತ್ತಿದರು. ಒಟ್ಟಿನಲ್ಲಿ ಹೊರಗಿನ ಕೆಲಸ ವನ್ನಾದರೂ ಬಿಡಬೇಕು ಇಲ್ಲವೆ ಗಳಿಸಿದ ಹಣವನ್ನು ಸಂಸ್ಥೆಗೆ ಸಲ್ಲಿಸಬೇಕು ಎಂಬ ನಿರ್ಬಂಧ ಹೇರದೆ ಗತ್ಯಂತರವಿಲ್ಲದಾಯಿತು.

ಆಜೀವ ಸಭಾಸದರಾದ ನಾವು ಹೊಟ್ಟೆಗೆ ಬೇಕಾಗುವಷ್ಟು ವೆಚ್ಚ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದ್ದೆವು. ಆದರೆ ಮುಂದೆ ಅಗರಕರರು ಅವಶ್ಯವಿದ್ದಷ್ಟು ವೇತನವೆಂಬ ತತ್ವವನ್ನು ಬಿಟ್ಟು ಸಂಸ್ಥೆಯ ಸಾಂಪತ್ತಿಕ ಸ್ಥಿತಿಯಂತೆ ವೇತನವೆಂಬ ತತ್ವವನ್ನು ಮುಂದೆ ಮಾಡಿದರು ಯಾರು ಕೇವಲ ನಾಲ್ವತ್ತು ರೂಪಾಯಿಗಳ ಮೇಲೆ ಇಡೀ ಆಯುಷ್ಯ ಕಳೆಯಲು ಸಿದ್ಧರಿದ್ದರೋ ಅವರೇ ಹೀಗೆ ಮಾತಾಡಿದ್ದನ್ನು ನೋಡಿ ಆಶ್ಚರ್ಯವಾಯಿತು. ಅಗರಕರರಿಗೆ ಹಣದ ಅವಶ್ಯಕತೆಯಿದ್ದರೆ, (ಗ್ರ್ಯಾಚುಟಿ) ಬಹುಮಾನವನ್ನು ತೆಗೆದುಕೊಳ್ಳಬೇಕೆಂದು ನಾನು ಸೂಚಿಸಿದೆ. ಎಲ್ಲ ಸದಸ್ಯರಿಗೂ ಅದು ಸರಿ ಎನಿಸಿತು. ಗೋಖಲೆಯವರು ತಮ್ಮ ಉದ್ದೇಶ ಸಾಧಿಸಲು ನಿಯಮವನ್ನೇ ತಿದ್ದುವ ಹೊಂಚುಹಾಕಿದರು. ಸಂಸ್ಥೆಯಲ್ಲಿದ್ದು ಪ್ರತಿ ಕ್ಷಣ ಹೀಗೆ ಜಗ ಳಾಡುವದರಲ್ಲಿ ಅರ್ಥವಿಲ್ಲೆಂದು ನನನಗೆ ಅನಿಸಹತ್ತಿತ್ತು. ಕೊನೆಗೆ ನಾನು ಬೇಸತ್ತು ೧೮೯೮ರಲ್ಲಿ ಆರು ತಿಂಗಳ ರಜೆ ಪಡೆದನು. ಸಂಸ್ಥೆ ಹೊರಗಿನ ಕಾರ್ಯವನ್ನು ಕೈಕೊಳ್ಳಕೂಡದೆಂದು ನಿರ್ಣಯವಾಗಿದ್ದರೂ ಅಪವಾದ ವೆಂದು ಗೋಖಲೆಯವರಿಗೆ ಸಾರ್ವಜನಿಕ ಸಭೆಯ ಕಾರ್ಯದರ್ಶಿಯ ಕಾರ್ಯ ವನ್ನು ಕೈಕೊಳ್ಳಲು ಅಪ್ಪಣೆ ಕೊಟ್ಟಮೂಲಕ ಜಗಳ ವಿಕೋಪಕ್ಕೆ ಹೋಯಿತು. ನಾನು ಮೊದಲಿನ ಒಂಬತ್ತು ವರ್ಷ ಯಾವ ಹೊರಗಿನ ಕಾರ್ಯಗಳನ್ನೂ ಕೈಕೊಂಡರಲಿಲ್ಲ. ಶಾಲೆಯ ಕಾರ್ಯ ನೋಡಿಕೊಂಡು ನಾನು ವಕೀಲಿಯನ್ನು ನಡೆಸಬಹುದಾಗಿತ್ತು. ವೃತ್ತಪತ್ರದ ಕೆಲಸವನ್ನು ಕೂಡ ನಾನು ನನ್ನ ಸಲುವಾಗಿ ಮಾಡಲಿಲ್ಲ. ನಾನು ರಜೆ ಪಡೆದಾಗ ಮಾತ್ರ ತಾತ್ಪೂರ್ತಿಕ ಕಾಂಗ್ರೆಸ್ ಕಾರ್ಯಮಾಡಿದೆ.

ನನ್ನಲ್ಲಿ ದೋಷಗಳಿಲ್ಲವೆಂದಲ್ಲ. ನಾನು ಎಷ್ಟೋ ನಿಷ್ಠುರ ಮಾತು ಗಳನ್ನಾಡಿ ಜನರ ಮನಸ್ಸನ್ನು ನೋಯಿಸಿದ್ದೇನೆ. ಆದರೆ ಅದೆಲ್ಲವನ್ನು ಸಂಸ್ಥೆಯ ಹಿತದ ದೃಷ್ಟಿಯಿಂದಲೇ ಮಾಡಿರುತ್ತೇನೆ. ಇರಲಿ, ನಾನು ನಿಮ್ಮಲ್ಲಿರುವದರಿಂದಲೇ ಯಾವಾಗಲೂ ಜಗಳವಾಗುತ್ತಿದ್ದರೆ ನಾನು ಸಂಸ್ಥೆಯನ್ನು ಬಿಡುವುದೇ ಲೇಸು. ಅದರಿಂದ ಸಂಸ್ಥೆಯ ಮೂಲ ತತ್ವ ಗಳು ಮುಳುಗಬಹುದು. ಆದರೆ ಜಗಳವಾದರೂ ಇಲ್ಲದಂತಾಗಬಹುದು. ನಾನು ಈ ಸಂಸ್ಥೆಯನ್ನು ಬಿಡುವುದೆಂದರೆ, ನನ್ನ ಜೀವಿತದ ಧ್ಯೇಯವನ್ನೇ ಬಿಟ್ಟಂತಾಗುವದೆಂದು ಅನಿಸುತ್ತದೆ. ಆದರೆ ಉಪಾಯವಿಲ್ಲ.''

ಟಿಳಕರು, ತಮ್ಮ ವಿವರಣೆಯೊಂದಿಗೆ ರಾಜೀನಾಮೆಯನ್ನು ಕಳಿಸಿ ದರು. ರಾಜೀನಾಮೆಯ ಬಗ್ಗೆ ದೀರ್ಘ ಚರ್ಚೆಯಾಯಿತು. ಟಿಳಕರು ಎತ್ತಿದ ಆಕ್ಷೇಪಗಳಿಗಾಗಿ ೨-೩ ಸಲ ಕೌನ್ಸಿಲ್‌ದಲ್ಲಿ ವಿಚಾರವಾಯಿತು. ಕೊನೆಗೆ ೧೮೯೧ ರ ಎಪ್ರಿಲ ೨೬ನೇ ತಾರೀಖಿನ ಸಭೆಯಲ್ಲಿ ವಿಚಾರವಾಗಿ 'ಟಿಳಕರು ಆಜೀವ ಸದಸ್ಯರಮೇಲೆ ಹೊರಿಸಿದ ಅಪ್ರಾಮಾಣಿಕ ತನದ ಆರೋಪವು ನಿರಾಧಾರವಾಗಿದೆ' ಎಂಬ ಗೊತ್ತುವಳಿಯು ಸ್ವೀಕರಿಸಲ್ಪಟ್ಟಿತು. ಆಜೀವ ಸದಸ್ಯರಾದ ಪ್ರೊ. ಟಿಳಕ ಹಾಗೂ ಪಾಟಣಕರರು ಸಂಸ್ಥೆಯನ್ನು ಬಿಟ್ಟು ತೆರಳುತ್ತಿರುವದರಿಂದ ಈ ಸಂಸ್ಥೆಗೆ ಬಹು ವಿಷಾದವಾಗುತ್ತದೆ ಎಂಬ ಗೊತ್ತು ವಳಿಯನ್ನು ಮಾಡಿತು.

---

## ಕ್ರಾಫರ್ಡ ಪ್ರಕರಣ

ಶಿಕ್ಷಣ ಸಂಸ್ಥೆಯ ಸಂಬಂಧವನ್ನು ಕಡಿದುಕೊಳ್ಳುವದೇ ಯೋಗ್ಯ ವೆಂದು ರಾಜೀನಾಮೆಯನ್ನು ಕೊಟ್ಟ ಸಂಗತಿಯನ್ನು ಹಿಂದೆ ವಿವರಿಸಿದ್ದೇವೆ. ಟಿಳಕರಂತಹ ತರುಣ ಕತೃತ್ವಶಾಲಿಗಳು ಸುಮ್ಮನೆ ಕೂಡುವದೆಂತು. ಸಾರ್ವ ಜನಿಕ ಜೀವನದಲ್ಲಿ ಹೆಚ್ಚು ಹೆಚ್ಚು ಮನಸ್ಸು ಹಾಕಹತ್ತಿದರು. ೧೮೮೫ ರಲ್ಲಿ ರಾಷ್ಟ್ರೀಯ ಮಹಾಸಭೆಯನ್ನು ಪುಣೆಯಲ್ಲಿಯೇ ಕೂಡಿಸಬೇಕೆಂದು ಹುಯಿ ಲೆದ್ದಿತು. ಮುಂಬಯಿಯ ನಾಗರಿಕರು ತಮ್ಮಲ್ಲಿಯೇ ಆಗುವಂತೆ ಹಗ್ಗ ಹಾಕಿದ್ದರು. ಅಲ್ಲಿಯೇ ಜರಗುವ ಲಕ್ಷಣಗಳು ಕಾಣಹತ್ತಿದವು. ಪುಣೆಯ ನಿವಾಸಿಗಳೂ ಸುಮ್ಮನೆ ಕೂಡಲಿಲ್ಲ. ಪುಣೆಯೂ ರಾಷ್ಟ್ರೀಯ ಕಾರ್ಯದಲ್ಲಿ ಸೇವೆಸಲ್ಲಿಸಿದೆ. ಮೊದಲನೆಯ ಮಾನವು ಮುಂಬಯಿಗೆ ದೊರೆತಿದ್ದು ಎರ ಡನೆಯ ಮಾನವು ಪುಣೆಗೆ ಸಲ್ಲಬೇಕೆಂದು ವಾದಿಸಹತ್ತಿದರು. ಇದಕ್ಕಾಗಿ ನೆರೆದ ಸಭೆಯಲ್ಲಿ ರಾಷ್ಟ್ರೀಯ ಮಹಾಸಭೆಯ ಅಧಿವೇಶನದ ವೆಚ್ಚಕ್ಕೆಂದು ೨೫೦೦ ರೂಪಾಯಿಗಳ ವಾಗ್ದಾನವೂ ದೊರೆಯಿತು. ಮುಂಬಯಿ ನಿವಾಸಿಗಳ ಮನ ವೊಲಿಸಲು ಟಿಳಕ ಹಾಗೂ ನಾಮಜೋಶಿ ಅವರನ್ನು ಕಳಿಸಬೇಕೆಂದು ನಿರ್ಣಯವಾಯಿತು. ರಾ. ಬ. ರಾನಡೆಯವರನ್ನು ಬಿಟ್ಟರೆ ಮುಖಂಡತ್ವವು ಮೆಲ್ಲಮೆಲ್ಲನೆ ಟಿಳಕರ ಕಡೆಗೆ ಒಲೆಯಹತ್ತಿತು. ಎಂಬುದು ಇದರಿಂದ ವ್ಯಕ್ತವಾಗುವದು.

ರಾಷ್ಟ್ರೀಯ ಮಹಾಸಭೆಯು ಮುಂಬೈಯಲ್ಲಿಯೇ ಎಂದು ನಿರ್ಣಯ ವಾದರೂ ಮುಂಬಯಿ ಪ್ರಾಂತಿಕ ಎರಡನೆಯ ಪರಿಷತ್ತು ಪುಣೆಯಲ್ಲಿಯೇ ಎಂದು ಒಪ್ಪಬೇಕಾಯಿತು. ಇದರ ಎಲ್ಲ ವ್ಯವಸ್ಥೆಯು ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಡೆಗೆ ಇದ್ದಿತು. ಹಳೆಯ ಕಮಿಟಿಯು ಹಳೆಯು ದಾಗಿತ್ತು. ಹಳಬರಿಂದ ಪ್ರತಿನಿಧಿಗಳ ವ್ಯವಸ್ಥೆಮಾಡುವದಾಗಲಿಲ್ಲ. ಪುಣೆ ಯಿಂದ ಪ್ರತಿನಿಧಿಗಳ ಆಯ್ಕೆ ಕೂಡ ಆಗಲಿಲ್ಲ. ಹೊಸ ಹೊಣೆ ಹೊರಲು ಹೊಸ ಹುದ್ದರಿಗಳ ಅವಶ್ಯಕತೆಯಿದ್ದಿತು. ಪ್ರಾಂತಿಕ ಕಾಂಗ್ರೆಸ್ ಕಮಿಟಿಯ

ಕಾರ್ಯದರ್ಶಿಯ ಸ್ಥಳಕ್ಕೆ ಟಿಳಕ, ನಾಮಜೋಶಿ, ಹಾಗು ಗೋಪಾಲಕೃಷ್ಣ ಗೋಖಲೆ ಈ ಮೂವರು ಆರಿಸಲ್ಪಟ್ಟರು. ಕಾಂಗ್ರೆಸ್ ಕಮಿಟಿಯು ಜೀವಂತವಾಗುವದೆಂದು ಜನರು ಆಶೆಪಟ್ಟಿದ್ದರೆ ಆಶ್ಚರ್ಯವಲ್ಲ.

ಟಿಳಕರ ಪ್ರಚಂಡ ಶಕ್ತಿಗೆ ಈ ಕೆಲಸವೆಂದರೇನು ? ಹಾ, ಹಾ ಅನ್ನು ವಷ್ಟರಲ್ಲಿ ಅದನ್ನು ಮುಗಿಸಿ ಬಿಡುತ್ತಿದ್ದರು. ಅವರ ಕರ್ತೃತ್ವ ಶಕ್ತಿಯನ್ನು ಹೊರಗಡವಲು ಇನ್ನೊಂದು ಕಾರ್ಯವು ಹೊಂಚುಹಾಕಿತ್ತು. ಆ ಕಾರ್ಯ ವೆಂದರೇ ಕ್ರಾಫರ್ಡ ಪ್ರಕರಣವು. ಕ್ರಾಫರ್ಡ ಸಾಹೇಬನ ಹಾವಳಿಗೆ ಮಹಾರಾಷ್ಟ್ರವೇ ಬೇಸತ್ತಿದ್ದಿತು. ಈ ಪ್ರಕರಣದಲ್ಲಿಯು ಮಹತ್ವದ ಕಾರ್ಯ ಗಳು ಎರಡಿದ್ದವು. ಕ್ರಾಪರ್ಡ ಸಾಹೇಬನ ಲಂಚಗುಳಿತನವನ್ನೆಲ್ಲ ಹೊರ ಗೆಳೆದು ಯುರೋಪಿಯನ್ನರ ನೀತಿ ಮತ್ತೆಯನ್ನು ಅಗಸೇಬಾಗಿಲಿಗೆ ಕಟ್ಟು ವದು ಮೊದಲನೆಯ ಕೆಲಸ. ಸರಕಾರದ ವಚನವನ್ನು ನಂಬಿ, ತಾವು ಕ್ರಾಫರ್ಡ ಸಾಹೇಬರಿಗೆ ಲಂಚಕೊಡಿಸಿದವರೆಂದು ಸಾರ್ವಜನಿಕವಾಗಿಯೇ ಒಪ್ಪಿಗೆಯನ್ನಿತ್ತು, ತಾವು ಅಪರಾಧಿಗಳೆಂದು ಸಿದ್ಧಮಾಡಿಕೊಂಡ ಮಾಮಲೇದಾರರ ಮೇಲೆ ಸರಕಾರವು ತನ್ನ ಕಾರ್ಯ ಮುಗಿದೊಡನೆ, ಫೌಜ ದಾರಿ ಖಟ್ಲೆಯನ್ನು ಹಾಕದೆ ತಾನಿತ್ತ ವಚನದಂತೆ, ಅವರಿಗೆ ಮೊದಲಿನ ಎಲ್ಲ ಸೌಕರ್ಯಗಳು ದೊರೆಯುವಂತೆ ಮಾಡುವ ಎರಡನೇ ಮಹತ್ವದ ಕಾರ್ಯವಾಗಿದ್ದಿತು

ಕ್ರಾಫರ್ಡ ಸಾಹೇಬನ ಪುರಾಣ ಕೇಳದೆ ಈ ಪ್ರಕರಣದ ಅರ್ಥವಾಗು ವದಿಲ್ಲ. ಕ್ರಾಫರ್ಡನು ಬದ್ಧಿಶಾಲಿಯಾದ ಇಂಗ್ಲಿಷ ನಾಗರಿಕನು. ಬುದ್ಧಿ ವಂತಸಿದ್ಧಂತೆ ಆಲಸಿಯೂ ಹೌದು. ತಿಂಗಳೆರಡುತಿಂಗಳ ಚೈನಿಯಿಂದ ತಿರುಗಾಡುವದು, ಕೆಲಸವು ಬಹಳ ಕೂಡಿಬಿದ್ದೊಡನೆಯೆ ಒಂದು ರಾತ್ರಿ ಕುಳಿತು ಎಡದ ಕಡೆಗೆ ಮದ್ಯಪಾತ್ರೆ, ಸಿಗಾರೇಟುಗಳನ್ನೂ ಬಲಕ್ಕೆ ಕಾಗದ ಗಳ ರಾಶಿಯನ್ನೂ ಹಾಕಿಕೊಂಡು ಕುಳಿತನೆಂದರೆ ತೀರಿತು. ಬೆಳತನಕ ದೆವ್ವನಂತೆ ಸೆರೆಯನ್ನು ಕುಡಿಯುತ್ತ, ಸಿಗಾರೇಟು ಸೇದುತ್ತ ಅದೇ ಗುಂಗಿ ನಲ್ಲಿ ಎಲ್ಲ ಕೆಲಸವನ್ನು ಮುಗಿಸಿ ಬೆಳಿಗ್ಗೆ ಮಲಗಿದನೆಂದರೆ ಮಧ್ಯಾನ್ಹ ೧೨ ಗಂಟೆ ಆಗುವವರೆಗೆ ಮಲಗುವದೇ ಅವನ ನಿತ್ಯ ಜೀವನ. ಅವನು ಬಹಳ ಖರ್ಚಿಕ. ಇವನು ಯಾವ ಜಿಲ್ಹೆಯಲ್ಲಿರುವನೋ ಆ ಜಿಲ್ಹೆಯಲ್ಲಿಯು ಎಲ್ಲ

ಸುಖಲೋಲುಪ ಯುರೋಪಿಯನ್ ಸ್ತ್ರೀಪುರುಷರ ವಸತಿ ಇವನ ಮನೆ ಯಲ್ಲಿಯೇ. ಇವನ ಮನೆಯೆಂದರೆ ವಿಲಾಸಿಗಳ ಕ್ರೀಡಾಮಂದಿರ. ಆಯಾ ಸ್ತ್ರೀಯಳ ಯೋಗ್ಯತೆಯಂತೆ, ಯಾವಳಿಗೆ ಮುತ್ತಿನ ಸರ. ಯಾವಳಿಗೆ ರತ್ನ ದುಂಗರ, ಇನ್ನೊಬ್ಬಳಿಗೆ ಚಿನ್ನದುಂಗುರಗಳ ಮೆಚ್ಚುಗಳು. ಇವನ ಈ ವಿಲಾಸಕ್ಕೆ ಹೊನ್ನಿನ ಹೊಳೆ ಹರಿದರೂ ಸಾಲದು. ಇವನ ಪಗಾರ ಹಾಗು ಪ್ರವಾಸದ ವೆಚ್ಚಗಳ ಲೆಖ್ಖಹಾಕಿದರೂ ಆ ಹಣ ಒಂದೆರಡು ದಿನ ಕೂಡ ಇವನ ಖರ್ಚಿಗೆ ಸಾಕಾಗುತ್ತಿರಲಿಲ್ಲ. ಹೀಗಿರುವಾಗ ಇವನ ಖರ್ಚು ಹೇಗೆ ನಡೆಯುತ್ತಿತ್ತು ? ಈ ಪ್ರಶ್ನೆಗೆ ಉತ್ತರವು ಯಾರಿಗೂ ಹೊಳೆಯುವದು. ಮೊದಲಿನಿಂದಲೂ ಲಂಚಗುಳಿ. ಕೆಲವರಿಂದ ಸಾಲತೆಗೆದುಕೊಳ್ಳುತ್ತಿದ್ದ. ಕೆಲ ವರಿಂದ ಮೆಚ್ಚುಪಡೆಯುತ್ತಿದ್ದ. ಹೀಗೆ ನಡೆದಿತ್ತು ಇವನ ಹಾವಳಿ. ಅವ ನಲ್ಲಿ ಒಂದು ದೊಡ್ಡಗುಣವೂ ಇದ್ದಿತು. ಯಾರಿಂದ ಹಣಹೊಡೆಯುತ್ತಿ ದ್ದನೋ ಅವರ ಕೆಲಸವನ್ನೂ ಅವರ ಆಪ್ತೇಷ್ಟರ ಕೆಲಸವನ್ನೂ ತಪ್ಪದೆ ಮಾಡುತ್ತಿದ್ದ. ಈ ಕೆಲಸಕ್ಕಾಗಿ ವ್ಯವಸ್ಥಿತವಾದ ಜಾಳಿಗೆಯನ್ನೇ ಹೆಣೆದಿದ್ದ.

ಪಾಪದ ಕೊಡವು ತುಂಬುತ್ತ ಬಂದಿತು. ತಮ್ಮ ಹೆಂಡಂದಿರಿಗೆ ದೊರೆತ ಮೆಚ್ಚುಗಳಿಂದ ಯುರೋಪಿಯನ್‌ರು ಸಂತಪ್ತರಾದರು. ಇವನು ತನ್ನ ದುಶ್ಚಾರಿತ್ರದಿಂದ ಯುರೋಪಿಯನ್ನರ ಮೊರೆಗೆ ಮಸಿ ಬಳೆಯುವ ನೆಂದು ಕ್ರುದ್ಧರಾದರು. ಸರಕಾರದ ಮರ್ಯಾದೆ ಕಳೆಯುವನೆಂದು ಅಧಿಕಾರಿ ಗಳು ಕುದಿಯಹತ್ತಿದರು. ಇದೆಲ್ಲ ಹೊರಬಿದ್ದರೆ, ಬ್ರಿಟಿಷರ ಮರ್ಯಾದೆ ಹೋಗುವದಲ್ಲ ! ಎಂದು ಎಲ್ಲರೂ ಹಿಂದೆ ಮುಂದೆ ನೋಡುತ್ತಿದ್ದರು. ಆದರೆ ಕ್ರಾಫರ್ಡನ ಹಾವಳಿಯು ಮಿತಿಮೀರಿತು. ಸರಕಾರವು ಕೈಹಾಕದೆ ಇದ್ದರೆ, ಬ್ರಿಟಿಶ ಜನಾಂಗಕ್ಕೇ ಅಪಕೀರ್ತಿಬರುವ ಪ್ರಸಂಗ ಬಂದಿತು. ಲಾರ್ಡರೇಯವರು, ೧೮೮೮ರ ಜೂನ ೨೪ನೇ ತಾರೀಖಿಗೆ ಓಮನಿ ಸಾಹಾಬ ರೆಂಬ ಪೋಲೀಸಇನ್‌ಸ್ಪೆಕ್ಟರ ಜನರಲ್‌ರನ್ನು ಇದರ ವಿಚಾರಣೆಗಾಗಿ ನಿಯಮಿಸಿದರು. ರೀಚಿ, ನೇಲರ, ಮೊದಲಾದ ಯುರೋಪಿಯನ್‌ರು ಕ್ರಾಫರ್ಡನ ವಿರುದ್ಧ ಸಿದ್ಧತೆ ನಡಿಸಿದರು. ಬಾಬಾಸಾಹೇಬ ಪೇಂಡಸೆ, ಭೀಮಭಾಯಿ ಕಿರಪರಾಮ ಮೊದಲಾದ ಹಿಂದಿಜನರೂ ಮುಂದಾದರು. ಕ್ರಾಫರ್ಡರು ಕಮಿಶನರರು. ಪೇಂಡಸೆಯವರು ಅವರ ಕಾರ್ಯದರ್ಶಿ

ಇದ್ದ ಮೂಲಕ ಪೆಂಡಸೆಯವರಿಗೆ ಗುಟ್ಟೆಲ್ಲ ಗೊತ್ತಿದ್ದಿತು. ವಿಚಾರಾಂತ್ಯ ದಲ್ಲಿ ಮಾಮಲೇದಾರರಿಂದ ಜುಲುಮೆಯಿಂದ ಲಂಚತಿಂದ ಸ್ಪಷ್ಟ ಪುರಾವೆ ಇರುವ ಎರಡು ಮೂರು ಪ್ರಕರ್ಣಗಳನ್ನು ಸಿದ್ಧ ಮಾಡಬೇಕೆಂದು ಸರಕಾರ ದವರು ನಿರ್ಣಯಿಸಿದರು. ತಾವು ಲಂಚ ಕೊಡಿಸಿದೆವು ಎಂದು ಒಪ್ಪಿಗೆ- ಹೇಳಿಕೆ ಕೊಡುವಂತೆ ಮಾಮಲೇದಾರರ ಮನ ಒಲಿಸಬೇಕೆಂದು ಯೋಚಿಸಿ, ಪೇಂಡ್ಸೆಯವರಿಗೆ ಈ ಕೆಲಸವನ್ನು ಒಪ್ಪಿಸಿದರು. ಈ ಕಾರ್ಯವು ಬಹು ಕಠಿಣವಿದ್ದಿತು. ಮಾಮಲೇದಾರರು ಈ ರೀತಿಯಾಗಿ ತಾವು ಲಂಚಕೊಡಿ ಸಿದ್ದೇವೆ ಎಂದು ಸ್ವತಃ ಒಪ್ಪಿಕೊಳ್ಳುವದೆಂದರೆ ತಮ್ಮ ಕೈಯಿಂದ ತಾವೇ ಕುತ್ತಿಗೆ ಕೊಯ್ದುಕೊಂಡಂತಿದ್ದಿತು. ಸಾಕ್ಷಿದಾರರೆಂಬ ದೃಷ್ಟಿಯಿಂದ ಮಾಮಲೇದಾರರಿಗೆ ಲಂಚಕೊಟ್ಟ ಆರೋಪದ ಮಾಫಿಯಾದರೂ ಸರಕಾರ ದಿಂದ ದೊರೆಯುವದು ಅವಶ್ಯವಿದ್ದಿತು. ಯೋಗ್ಯತೆಯನ್ನು ನೋಡಿ ಮಾಫಿಮಾಡುವ ಅಧಿಕಾರವನ್ನು ಕೊನೆಗೆ ಓಮನಿ ಸಾಹೇಬರ ಕಡೆಗೆ ವಿಚಾ ಣೆಯ ಅಪ್ಪಣೆಯೊಂದಿಗೆ ಕಳಿಸಲಾಯಿತು. ಇದನ್ನೇ ಆಧಾರವಾಗಿಟ್ಟು ಕೊಂಡು ಟಿಳಕರು ಮುಂದೆ ಹೋರಾಡಿದರು.

ಪುರಾವೆಗಳನ್ನು ದೊರಕಿಸುವದು ಕಠಿಣವಿದ್ದಿಲ್ಲ. ಲಂಚಕೊಡಿಸುವ ಎಜಂಟರಾರು ? ಲಂಚಕೊಟ್ಟು ಕಷ್ಟಕ್ಕಿಡಾದವರು ಯಾರು ? ಎಂಬುದು ಬೀದಿಯ ಮಾತಾಗಿದ್ದಿತು. ಓಮಿನಿ ಸಾಹೇಬರು ತಮ್ಮನರದಿಯಲ್ಲಿ 'ಕರಿಜನರೆಲ್ಲರೂ ಸುಳ್ಳುಹೇಳುವವರು. ಮೋರೆ ನೋಡಿ ಮಾತನಾಡುವವರು ಎಂದು ಯುರೋಪಿಯನ್ನರಾದ ನಮ್ಮ ಅಭಿಪ್ರಾಯವಿದ್ದುದರಿಂದ ನಾವಾ ಗಿಯೇ ನಮ್ಮವರಲ್ಲೊಬ್ಬನನ್ನು ಬಯಲಿಗೆಳೆಯಲು ನಾವು ಧೈರ್ಯ ಮಾಡುವ ದಿಲ್ಲ' ಎಂದು ಉಲ್ಲೇಖಿಸಿದ್ದಾರೆ. ಕ್ರಾಫರ್ಡ ಸಾಹೇಬನನ್ನು ಹೊರಗೆಳೆ ಯುವ ಎರಡು ಮೂರು ಪ್ರಸಂಗಗಳು ಯುರೋಪಿಯನ್ನರಿಗೆ ಸಿಕ್ಕಿದ್ದರೂ ಅವೆಲ್ಲವುಗಳನ್ನು ಅವರು ಮುಚ್ಚಿದ್ದರು. ತಮ್ಮ ತಮ್ಮಲ್ಲಿ ಬೇಕಾದಷ್ಟು ಮಾತನಾಡುತ್ತಿದ್ದರೂ, 'ನಮ್ಮವನನ್ನು ಬಯಲಿಗೆಳೆಯಲು ನಾನೇಕೆ ಮುಂದೆ' ಎಂದು ಯುರೋಪಿಯನ್ನರು ಹಿಂಜರಿಯುತ್ತಿದ್ದರು. ಕೊನೆಗೆ ಆ ಜಾತಿ ಯವರೆಲ್ಲ ಒಂದೇ ಆಗುವರು, ನಾವೇಕೆ ಖೊಟ್ಟಿಯಾಗಬೇಕು. ಒಪ್ಪಿಗೆಯ ಹೇಳಿಕೆಕೊಡುವ ಜನರೆಲ್ಲ ಸಂಕಟಕ್ಕೊಳಗಾಗಬೇಕಾಗುವದು' ಎಂದು ಹಿಂದೀಯರು ಹಿಂಜರಿಯುತ್ತಿದ್ದರು.

ನಮ್ಮ ಜನರಲ್ಲಿಯೂ ಎರಡು ಅಭಿಪ್ರಾಯಗಳಿದ್ದವು. ಯುರೋಪಿಯನ್ನ ಸಾಹೇಬನು ಲಂಚತಿಂದ ಖಟ್ಲೆಯಲ್ಲಿ ಅನಾಯಾಸವಾಗಿ ಸಿಕ್ಕಿರುವನು. ಸರಕಾರವೂ ತಾನಾಗಿಯೇ ವಿಚಾರಣೆಗೆ ಹೊರಟಿದೆ. ಹಿಂದೀ ಜನರು ಲಂಚಗುಳಿಗಳು ಎಂದು ನಮ್ಮ ಜನಾಂಗಕ್ಕೆ ಕಲಂಕ ಹಚ್ಚುವ ಯುರೋಪಿಯನ್ನ ಜನಾಂಗದ ನೀತಿಮತ್ತೆಯನ್ನು ಜಗತ್ತಿನೆದುರು ಇಡಲು ಇದೊಂದು ಉತ್ಕೃಷ್ಟವಾದ ಸಂಧಿಯಿದೆ. ಸಂಕಟವನ್ನು ಸಹಿಸಿಯಾದರೂ ಮಾಮಲೇದಾರರು ಒಪ್ಪಿಗೆಯ ಹೇಳಿಕೆ ಕೊಡಲು ಮುಂದೆ ಬರಬೇಕೆಂದು ಒಂದು ಪಕ್ಷ. ಸಾಹೇಬನನ್ನು ಹೊರಗೆಳೆಯಲ್ಪಡುವ ಪ್ರಶ್ನೆಯು ಮುಖ್ಯವಿರದೆ ಒಪ್ಪಿಗೆಯ ಹೇಳಿಕೆಕೊಡುವ ನಾವು ಅಪರಾಧಿಗಳಾಗುತ್ತೇವೆಂಬುದನ್ನು ಮರೆಯಕೂಡದು. ಮೊದಲು ಲಂಚವನ್ನು ಕೊಡಬಾರದು. ಕೊಟ್ಟರೂ ಒಪ್ಪಿಕೊಳ್ಳಬಾರದು. ಸರಕಾರದ ಕಾರಭಾರದಲ್ಲಿ ಲಂಚವು ಯಾವಾಗಲೂ ಇದ್ದದ್ದೆ. ಲಂಚಕೊಡುವದಕ್ಕಿಂತ ಕೊಟ್ಟದ್ದನ್ನು ಒಪ್ಪುವವನು ಹೆಚ್ಚಿನ ಅಪರಾಧಿಯಾಗುವನು ಎಂದು ಎರಡನೇ ಪಕ್ಷ.

ಟಿಳಕರ ರಾಜಕೀಯ ದೃಷ್ಟಿಯು ಮೊದಲನೇ ಪಕ್ಷವನ್ನು ವಹಿಸಿತು. ಭೀಮಭಾಯಿ, ಪೆಂಡ್ಸೆ ಮೊದಲಾದ ಅಧಿಕಾರಿಗಳಿಗೆ ಟಿಳಕರ ಹಾಗೂ ಜನತೆಯ ಬೆಂಬಲವಿದೆಯೆಂಬ ಧೈರ್ಯದಿಂದ ಮಾಮಲೇದಾರರೂ ಮುಂದೆಬಂದರು. ಒಪ್ಪಿಗೆಯ ಹೇಳಿಕೆಯನ್ನುಕೊಟ್ಟರು. ಈ ಕಾರ್ಯದಲ್ಲಿ ಪೆಂಡಸೇ ಭೀಮ ಭಾಯಿಯವರ ಪಾತ್ರವು ಸದಸದ್ವಿವೇಕ ಬುದ್ಧಿಯಿಂದ ಪ್ರೇರಿತವಾದುದೆಂದು ಓಮನಿ ಸಾಹೇಬನು ಕೂಡ ಒಪ್ಪಿಕೊಳ್ಳಬೇಕಾಯಿತು. ಸಾಕಷ್ಟು ಪುರಾವೆಗಳು ದೊರೆತು ಕ್ರಾಫರ್ಡರ ಪಕ್ಷವು ಸಡಿಲಾಗಹತ್ತಿದೆ ಎಂಬುದನ್ನು ಕಂಡು ಸಂಧಿ ಸಾಧಕರು ನಾಮುಂದೆ, ನೀಮುಂದೆ ಎಂದು ಸಾಕ್ಷಿನುಡಿಯಲು ಬಂದರು.

ಪುಣೆಯಲ್ಲಿ ಇಷ್ಟೆಲ್ಲ ಗೊಂದಲ ನಡೆದಿದ್ದರೂ ಕ್ರಾಫರ್ಡ ಸಾಹೇಬನಿಗೆ ಮಾತ್ರ ಇದರ ಗಂಧವು ಕೂಡ ತಗಲಿರಲಿಲ್ಲ. ಆದರೆ ಅವನ ಏಜಂಟರಾದ ಹನುಮಂತರಾವ ಮೊದಲಾದವರಿಗೆ ಇದರ ಸುಳುವು ಹತ್ತಿ ತಮ್ಮಲ್ಲಿರುವ ಕಾಗದ ಪತ್ರಗಳನ್ನೇ ನಾಶಮಾಡಿ ಉಳಿದುಕೊಳ್ಳುವ ಹಾದಿ ಅವರು ಹಿಡಿದರು. ಮುಂಬಯಿ ಕೌನ್ಸಿಲ್ಲಿನಲ್ಲಿ ಭಿನ್ನಾಭಿಪ್ರಾಯಗಳು ಇದ್ದ ಮೂಲಕ

ಕೈಗೆ ಬಂದ ಪುರಾವೆಗಳಿಂದಲೇ ಹಣಮಂತರಾವ ಇನಾಮದಾರರ ಮೇಲೆ ಖಟ್ಲೆಹಾಕುವ ನಿಶ್ಚಯಮಾಡಿ ಆತನನ್ನು ಬಂಧಿಸಿದರು ಕ್ರಾಫರ್ಡನ ಮೇಲೆ ಖಟ್ಲೆ ಹಾಕದ್ದರಿಂದ ಅವನನ್ನು ಸಸ್ಪೆಂಡ ಮಾಡಿದರು. ಪ್ರತ್ಯಕ್ಷವಾಗಿ ವಿಚಾರಣೆ ಪ್ರಾರಂಭವಾಯಿತು. ಒಪ್ಪಿಗೆ ಹೇಳಿಕೆ ಕೊಡಲು ಒಪ್ಪದ ಕ್ರಾಫರ್ಡನ ಹಸ್ತಕರಾದ ಮಾಮಲೇದಾರರನ್ನೆಲ್ಲ ಸಸ್ಪೆಂಡ ಮಾಡಿದರು. ಯುರೋಪಿಯನ್ನರ ಒಣ್ಣವು ಹೊರಬಿದ್ದಿತು. ಯುರೋಪಿಯನ್ನರ ಮರ್ಯಾದೆ ಹೋಗುವದೆಂದು ಎಷ್ಟೋ ಜನ ಯುರೋಪಿಯನ್ ಅಧಿಕಾರಿಗಳು ಗುಪ್ತವಾಗಿಯೂ ಬಹಿರಂಗವಾಗಿಯೂ ವಿರೋಧಿಸಿದರು. ಬಿಳೀ ಪೋಲೀಸರು ಈ ವಿಶಿಷ್ಟ ಕಾರ್ಯವನ್ನು ಮಾಡಲು ನಿರಾಕರಿಸಿದರು. ಯುರೋಪಿಯನ್ನ ಪೋಸ್ಟಮಾಸ್ತರ ಜನರಲ್ಲನು ಕ್ರಾಫರ್ಡ ಹಾಗೂ ಅವನ ಹಸ್ತಕರ ಖಾಸಗೀ ಪತ್ರಗಳನ್ನು ತಡೆಹಿಡಿಯುವಂಥ ಸಾದಾ ಕೆಲಸವನ್ನು ಮಾಡಲು ಕೂಡ ಒಪ್ಪಲಿಲ್ಲ. ಚಳವಳಿಯಲ್ಲಿ ಪೋಸ್ಟ ಖಾತೆಯು ಪೋಲೀಸರಿಗೆ ಹೇಗೆ ನೆರವಾಯಿತೆಂಬುದು ಎಲ್ಲರಿಗೂ ಗೊತ್ತಿದೆ. ಕ್ರಾಫರ್ಡನ ಮೇಲೆ ಖಟ್ಲೆಹಾಕದೆ ಕಮಿಶನ್ ನೇಮಿಸಿದರೆ ಎಲ್ಲ ಸಂಗತಿಗಳು ಒಮ್ಮೆಲೆ ಹೊರಬರುವವು ಎಂದು ನಿರ್ಣಯ ಮಾಡಲ್ಪಟ್ಟಿತು. ಇಲ್ಲಿಂದಲೇ ಕ್ರಾಫರ್ಡನ ಖಟ್ಲೆ ದುರ್ಬಲಗೊಳಿಸುವ ಪ್ರಯತ್ನವು ಪ್ರಾರಂಭವಾಯಿತು. ಹಣಮಂತರಾಯನ ವಿಚಾರವಾಗಿ ೨ ವರ್ಷ ಸಾದಾ ಶಿಕ್ಷೆ ಹಾಗೂ ೨೦೦೦ ರೂ ದಂಡ ವಿಧಿಸಲ್ಪಟ್ಟಿತು. ಕ್ರಾಫರ್ಡ ಸಾಹೇಬನು ತನ್ನ ಕೈಬಿಟ್ಟದ್ದನ್ನು ಕಂಡು ಹಣಮಂತರಾಯನಿಗೆ ಬಹು ಕೆಡಕೆನಿಸಿತು. ಶಿಕ್ಷೆಯನಂತರ ಒಪ್ಪಿಗೆಯ ಹೇಳಿಕೆಯನ್ನು ಹಣಮಂತರಾಯನು ಕೊಟ್ಟನು.

ಸಸ್ಪೆಂಡ ಆದೊಡನೆ ಕ್ರಾಫರ್ಡನು ಬಂಗಲೆಯನ್ನು ಬಿಟ್ಟು ಹೋಟಲಿನಲ್ಲಿರಲು ಹೋದನು. ಕಾಣೆಯಾಗಿದ್ದಾನೆಂದು ಸುದ್ದಿ ಹಬ್ಬಿತು. 'ನನಗೆ ಆದ ಅಪಮಾನ ಹಾಗೂ ಚಿಂತೆಯ ಮೂಲಕ ನಾನು ಮುಳಾನದಿಯಲ್ಲಿ ಜೀವ ಕೊಡಲು ಹೋಗಿದ್ದೇನೆ ನನ್ನ ಹೆಣವು ಹೋಳಕರ ಪೂಲಿನ ಹತ್ತಿರ ಸಿಕ್ಕಬಹುದು.' ಎಂಬ ಕ್ರಾಫರ್ಡನ ಅಂಕಿತವಿದ್ದ ಪತ್ರ ಒಂದು ಸಿಕ್ಕಿತು. ಜನರ ಲಕ್ಷವು ಅತ್ತ ಸೆಳೆಯಲೆಂದು ಹೂಡಿದ ಆಟವಿದು. ಅವರ ಆಪ್ತೇಷ್ಟರು ನದಿಯಲ್ಲಿ ಹುಡುಕಿದರೂ ಕೂಡ. ಆದರೆ ಕ್ರಾಫರ್ಡನು ವೇಷಬದಲಿಸಿ,

ಮುಂಬಯಿಗೆ ಹೋಗಿ, ಅಲ್ಲಿಂದ ಸಿಲೋನಕ್ಕೆ ಜಾರುವ ಹಂಚಿಕೆಯಲ್ಲಿ ದ್ದನು. ಓಮೂನ್‌ನಿಗೆ ಇವೆಲ್ಲವೂ ನಾಟಕವೆಂದೆನಿಸಿ, ಸಮೀಪದ ಎಲ್ಲ ಸ್ಟೇಶನ್ನಗಳನ್ನು ದಿಗ್ಬಂಧಿಸಿದನು. ಕೊನೆಗೆ ಮುಂಬಯಿಯಲ್ಲಿ ವ್ಹಿಕ್ಟೋರಿಯಾ ಹೋಟೆಲಿನಲ್ಲಿ ಬಂಧಿಸಲ್ಪಟ್ಟು ಪುಣೆಗೆ ತರಲ್ಪಟ್ಟನು. ಕಲೆಕ್ಟರರ ಕಡೆಗೆ ಖಟ್ಲೆನಡೆಯಲಿತ್ತು. ಆದರೆ ಕಮೀಶನ್ ನೇಮಿಸಲ್ಪಟ್ಟಿತು.

ಹಣಮಂತರಾಯನಿಗೆ ಶಿಕ್ಷೆಯಾದೊಡನೆಯೆ ಉಳಿದವರಲ್ಲಿ ಭೀತಿಯುಂಟಾಯಿತು. ೧೮೮೮ ಆಕ್ಟೋಬರ ೨ನೇ ತಾರೀಖಿನ ಕೇಸರಿಯಲ್ಲಿ "ಜನರು ತಮಗೆ ಗೊತ್ತಿದ್ದ ಸಂಗತಿಗಳನ್ನು ಹೇಳಿ ನ್ಯಾಯನಿರ್ಣಯಕ್ಕೆ ಪೂರ್ಣಸಹಾಯ ಮಾಡಬೇಕು. ಅಧಿಕಾರದ ಮುಂದೆ ಬುದ್ಧಿಯ ಆಟವು ನಡೆಯುವದಿಲ್ಲವೆಂಬ ನ್ಯಾಯದಿಂದ ಜನ ಲಂಚಕೊಟ್ಟಿದೆ ಎಂಬುದನ್ನು ಲಕ್ಷದಲ್ಲಿಟ್ಟು ಸರಕಾರವು ಈ ಪ್ರಕರಣದಲ್ಲಿ ಅಪರಾಧಿಯ ಹೊರತು ಉಳಿದವರಿಗೆ ತೊಂದರೆ ಕೊಡುವದಿಲ್ಲೆಂದು ನಾವು ನಂಬಿದ್ದೇವೆ" ಎಂದು ಟಿಳಕರು ಉಲ್ಲೇಖಿಸಿದರು. ಇದರಿಂದ ಜನರಿಗೆ ಸ್ವಲ್ಪ ಧೈರ್ಯಬಂದಿತು.

೧೮೮೮ ರ ೨೩ನೇ ಆಕ್ಟೋಬರಕ್ಕೆ ಕಮೀಶನ್ನಿನ ಕಾರ್ಯಾರಂಭವಾಯಿತು. ವುಯಿಲ್ಸನ್ನರು ಅಧ್ಯಕ್ಷರಿದ್ದರು. ಕ್ರಾಫರ್ಡನಿಗೆ ರಕ್ಷಿಸಿಕೊಳ್ಳಲು ಅನುಕೂಲತೆಗಳಿದ್ದವು. ಸರಕಾರದ ವತಿಯಿಂದ ಅಡ್ವೋಕೇಟ ಜನರಲ್ಲರಾದ ಲ್ಯಾಥ್ಯಾಮು ಮತ್ತು ಬ್ಯಾರಿಸ್ಟರ ಜಾರ್ಡಿನರಿದ್ದರು. ಕ್ರಾಫರ್ಡನ ವತಿಯಿಂದ ಬ್ಯಾ. ಇನ್‌ವ್ಹೇರ್ಯಾರಿಟಿ ಇದ್ದನು. ವಿಚಾರಣೆಯು ೨ ವಾರಗಳಲ್ಲಿ ಮುಗಿಯಿತು. ಸರಕಾರದ ವಕೀಲರಾದ ಲ್ಯಾಥ್ಯಾಮರು "ಇಡೀ ಪ್ರಕರಣವನ್ನು ನೋಡಿ ನಮಗೆ ಕೆಡಕೆನಿಸುತ್ತದೆ. ನಾವು ಕ್ರಾಫರ್ಡ ಸಾಹೇಬನ ಮೇಲೆ ಶಕ್ಯವಿದ್ದಷ್ಟು ಹರಿಬೀಳದೆ ಖಟ್ಲೆ ನಡೆಯಿಸಿದ್ದೇವೆ. ಆದರೆ ನಮ್ಮನ್ನು ನಾವು ರಕ್ಷಿಸಿಕೊಳ್ಳುವದಿತ್ತು. ತಾವು ಕ್ರಾಫರ್ಡ ಸಾಹೇಬನನ್ನು ನಿರ್ದೋಷಿಯೆಂದು ನಿಶ್ಚಯಿಸಿದರೆ, ನಮಗೆ ಸಂತೋಷವೇ ಆದೀತು. ಕ್ರಾಫರ್ಡನಿಗೆ ತನ್ನ ನಿರ್ದೋಷತ್ವವನ್ನು ಸಿದ್ಧಮಾಡಲು ಆಗಲಿಲ್ಲವೆಂದು ಹೇಳಿದರೆ, ಅದರಿಂದ ನಮಗೆ ಅತ್ಯಂತ ಖೇದವಾಗುವದು. ಇದರಲ್ಲಿ ಒಬ್ಬ ಕ್ರಾಫರ್ಡನ ಮರ್ಯಾದೆ ಹೋಗದೆ, ಬ್ರಿಟಿಶ ಜನಾಂಗದ ಮೋರೆಗೇ ಮಸಿಹತ್ತುವದು" ಎಂದು ವಾದಿಸಿದರು. ಖಟ್ಲೆಹಾಕಿದ ಸರಕಾರದ ವಕೀಲನೇ ಹೀಗೆ

ಮಾತಾಡಿದಮೇಲೆ, ಆರೋಪಿಯ ವಕೀಲನು ಏನು ಮಾತಾಡಿರಬಹುದೆಂಬು ದನ್ನು ಹೇಳುವದೇಬೇಡ. ಕಮಿಶನ್ನಿನವರು ತಮ್ಮ ವರದಿಯನ್ನು ಸ್ಟೇಟ ಸೆಕ್ರೆಟರಿಯ ಕಡೆಗೆ ಕಳಿಸಿದರು. ಕ್ರಾಫರ್ಡನು ಲಂಚತಿಂದ ಆರೋಪ ಸಿದ್ಧವಾಗಲಿಲ್ಲವೆಂದು ವಾದಿಸಿದ್ದರು. ಸ್ಟೇಟ ಸೆಕ್ರೆಟರಿಯು ಅವರ ನಿರ್ಣಯಕ್ಕೆ ಒಪ್ಪಿಗೆಯಿತ್ತನು. ಆದರೆ ಕ್ರಾಫರ್ಡನು ತನ್ನ ವಶದಲ್ಲಿರುವ ನವಕರರಿಂದ ಸಾಲತೆಗೆದ ಆರೋಪವನ್ನು ನಿಜವೆಂದು ಸಾರಿ, ಕ್ರಾಫರ್ಡನನ್ನು ಕೆಲಸದಿಂದ ಕಡಿಮೆ ಮಾಡಿದನು ಯಾವ ಮಾತು ಸಿದ್ಧಿಸಬೇಕಾಗಿತ್ತೋ ಅದು ಸಿದ್ಧಿಸ ಲಿಲ್ಲ. ಯಾವುದನ್ನು ಸಿದ್ಧಮಾಡುವ ಅವಶ್ಯಕತೆಯಿರಲಿಲ್ಲವೋ ಅದನ್ನು ಸಿದ್ಧಪಡಿಸಿದರು. ಬಿಳೀ ತೊಗಲಷ್ಟೇ ಸದ್ಗುಣದಮೂರ್ತಿ. ಕರಿಯ ತೊಗಲು ಅವಿಶ್ವಾಸಕ್ಕೆ ಆಧಾರವೆಂದು ಹೇಳಿದಂತಾಯಿತು. ಮುಂಬಯಿ ಸರಕಾರವು ಕಮಿಶನ್ನಿನ ಗೊತ್ತುವಳಿಯನ್ನು ಖಂಡಿಸಿ, ಕ್ರಾಫರ್ಡನು ದೋಷಿಯಿರುವನೆಂದು ಸಿದ್ಧಮಾಡಿದ್ದಿತು. ಲಂಚವನ್ನು ಕೊಡಿಸಿದ ಏಜಂಟ ರಿಗೆ ಎರಡುವರ್ಷ ಶಿಕ್ಷೆ, ಎರಡು ಸಾವಿರ ರೂಪಾಯಿ ದಂಡ. ಲಂಚತಿಂದ ಕ್ರಾಫರ್ಡನಿಗೆ ಮಾತ್ರ ಏನೂಯಿಲ್ಲ 'ಇಷ್ಟೇ ಅಲ್ಲ, ಕ್ರಾಫರ್ಡ ಸಾಹೇಬನು ಅಪರಾಧದಿಂದ ಪಾರಾದ ! ಲಂಚಕೊಡಿಸಿದ ಒಪ್ಪಿಗೆಯನ್ನಿತ್ತ ಮಾಮಲೇ ದಾರರೆಲ್ಲ ಅಪರಾಧದಲ್ಲಿ ಸಿಕ್ಕರು. ಇದು ಎಂತಹ ನ್ಯಾಯ !, ಕ್ರಾಫರ್ಡನು ವಿಲಾಯತಿಗೆ ಹೋದನು. ಅವನ ಹೆಂಡರು ಮಕ್ಕಳಿಗೆ ಸರಕಾರವು ಕೈ ತುಂಬ ಪೆನ್‌ಶೆನ್ ಕೊಟ್ಟಿತು.

'ಗೂಳಿಬಿದ್ದರೆ ಆಳಿಗೊಂದು ಕಲ್ಲು, ಎಂಬಂತೆ, ಒಪ್ಪಿಗೆಯ ಹೇಳಿಕೆ ಕೊಟ್ಟ ಮಾಮಲೇದಾರರ ವಿರುದ್ಧವಾಗಿ ಆಂಗ್ಲೋ ಇಂಡಿಯನ್ ಪತ್ರ ಕಾರರು ಕೈಯೆತ್ತಿದರು. ಚಾಡಿಹೇಳುವ, ಲಂಚಕೊಡುವ ಈ ಜನ ಮಾಮಲೇದಾರ ಸ್ಥಳಕ್ಕೆ ಅಯೋಗ್ಯರೆಂದು ಹಾಯ್‌ಕೋರ್ಟಿನ ಜಜ್ಜ ಮೊದಲಾದವರು ಮಾತಾಡಹತ್ತಿದರು. ಕೆಲಸದಲ್ಲಿ ಯಾರನ್ನು ಇಡಬೇಕು, ಯಾರನ್ನು ತೆಗೆಯಬೇಕು ಎಂಬ ಬಗ್ಗೆ ವಿಚಾರಕ್ಕೆ ಪ್ರಾರಂಭವಾಯಿತು. ಟಿಳಕರಿಗೆ ಮಾತ್ರ ಇದರಿಂದ ಬಹು ನೋವಾಯಿತು ಅವರ ಸಾತ್ವಿಕ ಕ್ರೋಧವು ಕಾರ್ಯರಂಗಕ್ಕಿಳಿಯಿತು ಅವರ ಕರ್ತೃತ್ವಶಕ್ತಿಯು ಹೊರ ಹೊಮ್ಮಿತು ಟಿಳಕರು ಈ ಪ್ರಶ್ನೆಗೆ ರಾಜಕೀಯ ಸ್ವರೂಪವನ್ನು ಕೊಟ್ಟು

ಜನರ ಮನಸ್ಸನ್ನೆಲ್ಲ ತಿರುಗಿಸುವ ಪ್ರಯತ್ನ ಹೂಡಿದರು. "ಪಾಪ, ಮಾಮಲೇದಾರರು ಸತ್ಯವನ್ನು ನುಡಿದದ್ದೇ ಅವರ ದುಷ್ಕರ್ಮವೋ ? ರಾ. ಬ. ಬರ್ವೆಯವರಿಂದ ಮೊದಲುಮಾಡಿ ಒಬ್ಬ ಭಟ್ಟನವರೆಗೂ, ಕಚೇರಿಯಲ್ಲಿ ದೊಡ್ಡ ಹುದ್ದೇದಾರರಿಂದ ಚಿಕ್ಕ ಕಾರಕೂನನವರೆಗೂ ಬ್ರಾಹ್ಮಣ, ಶೇಣವಿ, ಲಿಂಗಾಯತ, ಮುಸಲ್ಮಾನ ಮೊದಲಾದ ಎಲ್ಲ ಜನರು ತಮ್ಮ ಕೈಸಾಧಿಸಿದಷ್ಟು ಲಾಭಮಾಡಿಕೊಂಡು ಮೆರೆಯುವವರ ವಿಚಾರವೇ ಇಲ್ಲವೇ ? ಅನ್ಯಾಯವು ಬಯಲಿಗೆ ಬರಲೆಂದು ಸತ್ಯವನ್ನು ನುಡಿದ ಜನರು ಅಪರಾಧಿಗಳೇ ? ನ್ಯಾಯ ದೇವತೆಯ ಕೊಲೆಮಾಡಿದ ಜನ ನೀತಿಯ ಜಂಭವನ್ನು ಕೊಚ್ಚುವದು ನಾಚಿಕೆಗೇಡಿತನವಲ್ಲವೇ ? ಒಬ್ಬ ಅಧಿಕಾರಿಯು ಇಡೀ ಪ್ರಾಂತವನ್ನೇ ಹಾಳುಮಾಡುತ್ತಾನೆಂದರೇನರ್ಥ ? ಇದರ ಬೀಜವೆಲ್ಲಿರುವದು ? " ಎಂಬ ಪ್ರಶ್ನೆಗಳನ್ನು ಉದ್ಭೃತಮಾಡಿ ಟಿಳಕರು ಅದಕ್ಕೆ ಉತ್ತರಕೊಡುತ್ತ 'ಹಿಂದೀಯರಾದ ನಾವೆಲ್ಲ ಸ್ವಭಾವತಃ ಸರಳ ಜನರು. ಅದರಲ್ಲಿಯೂ ಪರಕೀಯರ ಅಂಕಿತಕ್ಕೆ ಒಳಗಾದವರು. ಅಂದಮೇಲೆ, 'ರಾಜಾ ಕಾಲಸ್ಯ ಕಾರಣಂ, ಎಂಬ ಉಕ್ತಿಯಂತೆ ನಮ್ಮ ಎಲ್ಲ ವ್ಯವಹಾರ ಸಾಗುವದು ಸ್ವಾಭಾವಿಕವಿದೆ. ಲಂಚಕೊಡುವ ಮುಂದೆ ಅವರು ಮರುಗಿರಬಹುದು. ಆದರೆ ಲಂಚಕೊಡದೆ ಕ್ರಾಫರ್ಡನ ದರ್ಬಾರದಲ್ಲಿ ಪ್ರವೇಶವೇ ದೊರೆಯದಿದ್ದರೆ ಮಾಡುವದೇನು ? ಸ್ವತಃ ಮುಂಬಯಿ ಸರಕಾರಕ್ಕೆ ಈ ಸುದ್ದಿಯು ಅನೇಕ ವರ್ಷಗಳಿಂದ ಗೊತ್ತಿದ್ದರೂ ಸರಕಾರದಿಂದ ಯಾವ ಪ್ರತಿಕಾರವೂ ಮಾಡಲ್ಪಡಲಿಲ್ಲ. ಬ್ರಿಟಿಶರು ಬ್ರಿಟಿಶರಮೇಲೆ ಹೇಗೆ ಕೈಯೆತ್ತುವದು ? ಎಂದು ಜನರ ಭಾವನೆಯಾಯಿತು ಸಾರಾಂಶ ಈ ಎಲ್ಲ ಪ್ರಕರ್ಣದ ದೋಷವು ಸರಕಾರದ ಮೇಲೆಯೇ ಅಪ್ರತ್ಯಕ್ಷವಾಗಿ ಬರುವದು. ಆದುದರಿಂದ ಸರಕಾರವು ತಾನಿತ್ತ ವಚನಕ್ಕೆ ಧೈರ್ಯದಿಂದ ಅಂಟಿಕೊಂಡು ಮಾಮಲೇದಾರರಿಗೆ ನ್ಯಾಯವೀಯಬೇಕೆಂದು' ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದರು.

ಟಿಳಕರು ಈ ಪ್ರಶ್ನೆಯ ಬೆನ್ನನ್ನೇ ಹತ್ತಿದರು. ಅದಕ್ಕೆ ಸಾರ್ವಜನಿಕ ಸ್ವರೂಪವನ್ನು ಕೊಟ್ಟರು. ಈ ಪ್ರಕರಣದಲ್ಲಿ ಮುಂಬಯಿ ಸರಕಾರವು ತೋರಿದ ಧೈರ್ಯಕ್ಕಾಗಿ ಅಭಿನಂದಿಸುವದಲ್ಲದೆ, ಮಾಮಲೇದಾರರಿಗೆ ಕೊಟ್ಟ ವಚನ

ವನ್ನು ಪೂರ್ಣಗೊಳಿಸಬೇಕೆಂದು ಬಿನ್ನವಿಸುವ ಉದ್ದೇಶದಿಂದ ಪ್ರಚಂಡ ಸಾರ್ವಜನಿಕ ಸಭೆಯನ್ನು ಕೂಡಿಸಿದರು. ಈ ಸಭೆಯ ಆಮಂತ್ರಣ ಪತ್ರಕ್ಕೆ ರಾ. ರಾನಡೆ, ದೇಶಮುಖ, ಭಾಂಡಾರಕರ ಮೊದಲಾದ ಎಲ್ಲ ಪ್ರತಿಷ್ಠಿತರ ಅಂಕಿತಗಳಿದ್ದವು. ಸಭೆಗೆ ಬಹು ಗಂಭೀರ ಸ್ವರೂಪ ಬಂದಿತು. ರಾ. ನೂಲಕರರು ಅಧ್ಯಕ್ಷಸ್ಥಾನದಿಂದ 'ಹಿಂದೀಯರ ಮೇಲೆ ದೋಷ ಹೊರಿಸಿ, ತುಡುಗನನ್ನು ಸಾಧುವೆಂದು ಸಾಧಿಸುವ ಪ್ರಯತ್ನ ನಡೆದಿದೆ. ಹಿಂದೀಯರು ಈ ತನಕ ಸುದ್ದಿಯನ್ನೇ ಹೇಳಲಿಲ್ಲವೆಂದು ಆರೋಪಿಸುವ, ಸರ್ವಜ್ಞತ್ವದ ಜಂಭಕೊಚ್ಚುವ ಸರಕಾರವು ಕಣ್ಣುಮುಚ್ಚಿತ್ತೆ?' ಎಂದು ಆವ್ಹಾನಿಸಿದರು. ನಾಮುಜೋಶಿಯವರು ಸರಕಾರವನ್ನು ಅಭಿನಂದಿಸುವ ಗೊತ್ತುವಳಿಯನ್ನು ಮಂಡಿಸಿ, ಹಿಂದೀಜನರು ಮುಂದಾದರೆಂದೇ ಕ್ರಾಫರ್ಡ ಪ್ರಕರ್ಣದಲ್ಲಿಯ ಹೊಲಸು ಹೊರಬಿದ್ದಿತು ಎಂದು ಸಾರಿದರು. ಸರಕಾರವು ಮಾಮಲೇದಾರರಿಗೆ ಕೊಟ್ಟ ವಚನವನ್ನು ಪಾಲಿಸಬೇಕೆಂಬ ಗೊತ್ತುವಳಿಯನ್ನು ಬ್ಯಾ. ಗಾಡಗೀಳರು ಮಂಡಿಸಿದರು. ಟಿಳಕರು ಬೆಂಬಲ ಕೊಟ್ಟರು. ಟಿಳಕರ ಈ ಭಾಷಣವು ಸರಕಾರವನ್ನು ನಡುಗಿಸಿಬಿಟ್ಟಿತು. ಅವರ ಕೋಟಿ ಕ್ರಮ, ಅವರ ಕಾಯದೇ ಪಾಂಡಿತ್ಯ, ಅವರ ತೀಕ್ಷ್ಣಬುದ್ಧಿಮತ್ತೆಗಳು ಬೆಳಕಿಗೆ ಬಂದವು. ಅದರ ಸಾರಾಂಶವಿಂತಿದೆ. "ಅಭಯ ವಚನವನ್ನು ಪಾಲಿಸದಿರುವದು ವಿಶ್ವಾಸಘಾತವಾಗುವದು. ಸ್ಟೇಟ ಸೆಕ್ರೆಟರಿಗಳಿಗೆ ಏಕೆ? ಪಾರ್ಲಿಮೆಂಟಿಗೂ ಹೀಗೆ ಮಾಡಲು ಬರುವದಿಲ್ಲ ಮಾಮಲೇದಾರರು ದುಡ್ಡುಕೊಟ್ಟು ಅಧಿಕಾರದ ಸ್ಥಳಗಳನ್ನು ಕೊಂಡಿರಬಹುದು. ಆದರೆ ಅಷ್ಟ ರಿಂದಲೇ ಅವರು ನವಕರಿಗೆ ಅಯೋಗ್ಯರಾಗುವರೆಂದು ಪಿನಲ್ ಕೋಡು ಹೇಳುವದಿಲ್ಲ. ಇಂಗ್ಲಂಡದ ೧೫೫೮ರ ಕಾಯಿದೆಯಂತೆ ಅಭಯ ವಚನವು ಕಾಯದೇಭಂಗದ ದೋಷವನ್ನು ಕಳೆಯುವದು. ೧೭೨೫ರಲ್ಲಿ ಇಂಗ್ಲಂಡ ದಲ್ಲಿ ಲಾರ್ಡ ಚಾನ್ಸಲರನ ಕೈಯಲ್ಲಿಯ ಒಬ್ಬ ನಾರ್ಥುರನಾದ ಲಾರ್ಡ ಮ್ಯಾಕಲೀಸ ಫೀಲ್ಡರೆಂಬುವವನು ಐವತ್ತೈವತ್ತು ಸಾವಿರ ರೂಪಾಯಿಗಳ ಲಂಚಕೊಟ್ಟು ಅಧಿಕಾರದ ಸ್ಥಳಗಳನ್ನು ದೊರಕಿಸಿದ್ದನು. ತುಂಬಿದ ಪಾರ್ಲಿ ಮೆಂಟನಲ್ಲಿ ನಡೆದ ಸಂಗತಿಯಿದು. ಅವರೂ ಹಣಮಂತರಾಯರಂಥ ಏಜಂಟರನ್ನು ನೇಮಿಸಿದ್ದರು. ಸಾಕ್ಷಿಗಳನ್ನು ಕಲೆಹಾಕುವಾಗಲೂ ಅಭಯ

ವಚನ ಕೊಡಲ್ಪಟ್ಟಿತ್ತು. ಈ ಅಭಿವಚನ ಪೂರ್ಣಮಾಡಲು ಎರಡೇ ದಿನಗಳಲ್ಲಿ ಪಾರ್ಲಿಮೆಂಟು ಕಾಯದೇ ಪಾಸು ಮಾಡಿತು. ಈಗ ಮಾತ್ರ ನಗೆಯಾಡುತ್ತ ಕುಳಿತಿದೆ ಪಾರ್ಲಿಮೆಂಟಿನ ಈ ಉದಾಹರಣೆಯನ್ನು ಮುಂಬೈ ಸರಕಾರವು ಮನ್ನಿಸಬೇಕು. ಪಾರ್ಲಿಮೆಂಟು ಬಿಲ್ಲನ್ನು ಮಾಡಿದ ನಂತರ ಸಾಕ್ಷಿಗಾರರು ಸಾಕ್ಷಿ ಕೊಟ್ಟರು. ಅದರಂತೆಯೇ ಇಲ್ಲಿಯೂ ಸರಕಾರದ ಅಭಿವಚನವನ್ನು ಕಾಯದೇ ಎಂದು ತಿಳಿದೇ ಮಾಮಲೇದಾರರು ಸಾಕ್ಷಿಯನ್ನು ಕೊಟ್ಟಿದ್ದಾರೆ. ಇದರಲ್ಲಿ ಅಂತರವೇನಿದೆ? ಇಂಗ್ಲಂಡದಲ್ಲಿ ಆ ಜನರು ನವಕರಿಯಲ್ಲಿರಲು ಯೋಗ್ಯರಾಗಿದ್ದರೆ, ಇಲ್ಲಿಯವರೇಕೆ ಅಯೋಗ್ಯರು? ಇದಲ್ಲದೆ ಮಾಮಲೇದಾರರಲ್ಲಿ ಯೋಗ್ಯಾಯೋಗ್ಯರೆಂದು ಆರಿಸಲು ಸರಕಾರಕ್ಕೆ ಅಧಿಕಾರವೇ ಇಲ್ಲ. ಮಾಮಲೇದಾರರು ಇಂತಹ ಸಮಯದಲ್ಲಿ ಮುಂದೆ ಬಂದು ಸಹಾಯ ಮಾಡಿದ್ದೇ ದೊಡ್ಡದೆಂದು ತಿಳಿದು ಭೇದಾಭೇದ ಮಾಡದೆ ಎಲ್ಲರನ್ನೂ ನವಕರಿಯ ಮೇಲೆ ತೆಗೆದು ಕೊಳ್ಳಬೇಕು."

ಇದರ ಪರಿಣಾಮವು ಆಗದೇ ಹೋಗಲಿಲ್ಲ. ಹಿಂದುಸ್ತಾನ ಸರಕಾರವು ಈ ಬಗ್ಗೆ ಒಂದು ಬಿಲ್ಲನ್ನು ಕೌನ್ಸಿಲ್ಲಿನಲ್ಲಿ ಮಂಡಿಸಿತು. ಈ ಪ್ರಕರ್ಣದಲ್ಲಿಯ ಮಾಮಲೇದಾರರ ಮೇಲೆ ದಿವಾಣಿ ಇಲ್ಲವೇ ಫೌಜದಾರಿ ನಡೆಯಲಾರದು ಎಂದು ಅದರಲ್ಲಿ ಕಾಣಿಸಿದ್ದರು. ಮುಂಬೈ ಸರಕಾರವು ೮ ಜನರನ್ನು ಈಗಾಗಲೇ ಮನೆಗೆ ಕಳಿಸಿದ್ದರು. ಅವರಿಗೆ ಆದ ಹಾನಿಯನ್ನು ಹೇಗೆ ತುಂಬಬೇಕೆಂಬ ಬಗ್ಗೆ ಈ ಬಿಲ್ಲಿನಲ್ಲಿ ಉಲ್ಲೇಖವಿರಲಿಲ್ಲ. ಟಿಳಕರು ನಿರಾಶರಾಗಲಿಲ್ಲ. ಲಾರ್ಡ ರೇಯವರ ನೀತಿಪ್ರಿಯತೆಯ ಮೇಲೆ ಟಿಳಕರಿಗೆ ವಿಶ್ವಾಸವಿದ್ದಿತು. ಅವರು ಕೇಸರಿಯಲ್ಲಿ "ಸುಳ್ಳು ಕರಾರುಗಳಿಗೆ ನಾನು ಸಹಿಮಾಡುವದಿಲ್ಲೆಂದು ಕೌನ್ಸಿಲರಾದ ಲಾರ್ಡ ವಾಟ್ಸನ್ನರು, ಲಾರ್ಡ ಕ್ಲೈವನಿಗೆ ಸ್ಪಷ್ಟವಾಗಿ ಹೇಳಿದಂತೆ, ಲಾರ್ಡ ರೇಯವರು ಈ ಪ್ರಸಂಗದಲ್ಲಿ ಲಾರ್ಡ ಲ್ಯಾನ್ಸಡೌನರಿಗೆ ಈ ಕಾಯಿದೆಯು ತಮಗೆ ಮಾನ್ಯವಿಲ್ಲೆಂದು ಸ್ಪಷ್ಟವಾಗಿ ಹೇಳುವರೆಂದು ನಾವು ಆಶಿಸುತ್ತೇವೆ'' ಎಂದು ಬರೆದರು.

ವರಿಷ್ಠ ಕಾಯಿದೇ ಕೌನ್ಸಿಲ್ಲಿನ ಮೆಂಬರರಾದ ನೂಲಕರರು ಈ ಬಿಲ್ಲು ಕೌನ್ಸಿಲ್ಲಿನ ಮುಂದೆ ಬಂದೊಡನೆ, ಇದನ್ನು ಈಗಲೇ ಪಾಸು ಮಾಡದೆ

ಜನಾಭಿಪ್ರಾಯ ಕೇಳಬೇಕೆಂದರು. ಸರಕಾರವು ಕೊಟ್ಟ ವಚನವನ್ನು ಕಾಯದೆಯೆಂದೇ ತಿಳಿದು ಪಾಲಿಸಬೇಕೆಂದು ಎಲ್ಲ ಕಡೆಯಿಂದಲೂ ತಂತಿಗಳು ಬಂದವು. ಎಲ್ಲವೂ ವ್ಯರ್ಥವಾಯಿತು. ಸರಕಾರವು ವಚನವನ್ನು ಮುರಿಯಿತು. ಈ ಬಿಲ್ಲು ಇದ್ದಕ್ಕಿದ್ದಂತೆಯೇ ಪಾಸಾಯಿತು.

ಮುಂಬಯಿ ಸರಕಾರವು ಜನತೆಯ ಅಭಿಪ್ರಾಯವನ್ನು ತಿಳಿದುಕೊಂಡು, 'ನವಕರಿಯಿಂದ ದೂರಮಾಡಿದ ಮಾಮಲೇದಾರರಿಗೆ ಸಂಪೂರ್ಣ ಪಗಾರ, ಅವರಿಗೆ ಕಾಲಕಾಲಕ್ಕೆ ಸಿಗತಕ್ಕ ಹೆಚ್ಚಿನ ಸಂಬಳ ಕೊಡುವದಲ್ಲದೆ ಪೆನ್‌ಶನ್ ಕೊಡಬೇಕು'ಎಂದು ಸೂಚಿಸಿತ್ತು. ಆದರೆ ಸರಕಾರವು ಸಂಬಳದ ಹೆಚ್ಚಳ (ಗ್ರೇಡ)ವೊಂದನ್ನು ಬಿಟ್ಟು, ಉಳಿದುದೆಲ್ಲವನ್ನು ಒಪ್ಪಿಕೊಂಡಿತು. ಕೆಲಸದಿಂದ ತೆಗೆದ ಎಂಟು ಜನರಲ್ಲಿ ಪುನಃ ನಾಲ್ಕು ಜನರನ್ನು ಕೆಲಸಕ್ಕೆ ತೆಗೆದುಕೊಂಡಿತು. ಸಸ್ಪೆಂಡಾದವರೆಲ್ಲ ಕೆಲಸದ ಮೇಲೆ ತೆಗೆದುಕೊಳ್ಳಲ್ಪಟ್ಟರು. ಟಿಳಕರು ಇಷ್ಟಕ್ಕೆ ಬಿಡಲಿಲ್ಲ. ಮುಂಬಯಿಯಲ್ಲಿ ಸೇರಲಿದ್ದ ಕಾಂಗ್ರೆಸ್ಸಿಗೆ, ಪಾರ್ಲಿಮೆಂಟಿನ ಸಭಾಸದರಾದ ಚಾರ್ಲಸ ಬ್ರಾಡಲಾಯರವರು ಬರತಕ್ಕವರಿದ್ದರು. ಅವರ ಕಿವಿಯ ಮೇಲೆ ಈ ಪ್ರಕರ್ಣವನ್ನು ಹಾಕಿದರೆ, ಅವರು ಸಹಾಯ ಮಾಡಬಹುದೆಂಬ ಆಶೆಯು ಟಿಳಕರಿಗೆ ಇದ್ದಿತು. ಅದರಂತೆ ಅವರಿಗೆ ಅನೇಕಸಲ ಭೆಟ್ಟಿಯಾಗಿ ಎಲ್ಲ ಸಂಗತಿಗಳನ್ನು ತಿಳಿಸಿದರು. ಮಿ. ಡಿಗ್ಬಿ ಸಾಹೇಬರ ಮುಖಾಂತರ ಎಲ್ಲ ಪ್ರಯತ್ನ ಮಾಡಿದರು. ಪಾರ್ಲಿಮೆಂಟಿನ ಮುಂದೆ ಬ್ರಾಡಲಾಯರವರು ಗೊತ್ತುವಳಿ ಮಂಡಿಸುವ ನಿಶ್ಚಯವೂ ಆಯಿತು. ಆದರೆ ಈಶ್ವರೇಚ್ಛೆಯಿರಲಿಲ್ಲ. ಸಮಯವಿಲ್ಲೆಂಬ ನೆವದಿಂದ ಈ ಪ್ರಶ್ನೆ ಹಿಂದೆ ಬಿದ್ದಿತು.

ಏನೇ ಇರಲಿ. ಈ ಪ್ರಕರ್ಣದಲ್ಲಿ ಟಿಳಕರು ತೋರಿಸಿದ ಸಾಹಸ, ಧೈರ್ಯ, ದೀರ್ಘ ಪ್ರಯತ್ನ ಕರ್ತೃತ್ವಶಕ್ತಿಗಳು ಮುಖಂಡರ ಹಾಗೂ ಜನತೆಯ ಅಂತಃಕರಣವನ್ನು ಸೆಳೆದವು. ಟಿಳಕರು ಅಸಾಮಾನ್ಯ ವ್ಯಕ್ತಿಗಳೆಂದು ಜನತೆಯು ಗೌರವದಿಂದ ನೋಡಹತ್ತಿತು. ಬ್ರಿಟಿಶರ ನ್ಯಾಯಪ್ರಿಯತೆ ಹಾಗೂ ಚಾರಿತ್ರ್ಯಗಳು ಬಯಲಿಗೆಳೆಯಲ್ಪಟ್ಟವು- ಬ್ರಿಟಿಶ ನ್ಯಾಯದೇವತೆಯ ಮೇಲಿನ ಹಿಂದೀಯರ ವಿಶ್ವಾಸವು ಹಾರಿಹೋಯಿತು. ಟಿಳಕರ ರಾಜಕೀಯ ಉದ್ದೇಶವು ಸಾಧಿಸಿತು.

---

# ಅನ್ನ ಬ್ರಹ್ಮನ ದೇಗುಲದಲ್ಲಿ

ಮಾನವನು ಮನೋರಾಜ್ಯದಲ್ಲಿ ನಲಿದಾಡುವಾಗ ಹಸಿವೆ ನೀರಡಿಕೆ ಗಳ ಪರಿವೆಯಿರುವದಿಲ್ಲ. ಮಧ್ಯಾಹ್ನದ ಸಮಯದಲ್ಲಿ ಅನ್ನ ಬ್ರಹ್ಮನ ಉಪಾಸನೆಯನ್ನು ಪ್ರಾಣಿಮಾತ್ರರೆಲ್ಲ ಮಾಡಬೇಕಾಗುತ್ತದಷ್ಟೆ! ಟಿಳಕರು ಆಗರ್ಭ ಶ್ರೀಮಂತರಲ್ಲ. ಹಣಗಳಿಸುವ ಉದ್ಯೋಗಸ್ಥರಲ್ಲ. ಉಪಜೀವ ನಕ್ಕೆ ಅವಶ್ಯವಿದ್ದಷ್ಟೇ ತೆಗೆದುಕೊಂಡು ಕಾರ್ಯಮಾಡುವ ದೇಶಸೇವಾ ವ್ರತ ಬದ್ಧರು, ಸಂಸಾರಿಗಳು. ಅಂದಮೇಲೆ ಶಿಕ್ಷಣ ಸಂಸ್ಥೆಯನ್ನು ತ್ಯಜಿಸಿದ ಕೂಡಲೇ ಅವರು ಜೀವನದ ಪ್ರಶ್ನೆಯನ್ನು ಎದುರಿಸಬೇಕಾಯಿತು. ಸಾರ್ವ ಜನಿಕ ಕಾರ್ಯಕರ್ತರು ಕಾರ್ಯಾನಂದದಲ್ಲಿ ತಲ್ಲೀನರಾಗುತ್ತಿದ್ದರೂ ಬಹು ಜನರು ಮಧ್ಯಾಹ್ನವನ್ನೆದುರಿಸುವ ಕಾರ್ಯದಲ್ಲಿ ಹೋರಾಡುತ್ತಿರುವದು ಇಂದಿನ ಅನುಭವ.

ಧೀರರಾದ ಟಿಳಕರು ಈ ಪ್ರಶ್ನೆಯನ್ನು ಬಿಡಿಸಲು ಎರಡು ಯೋಜನೆ ಗಳನ್ನು ಸಿದ್ಧಪಡಿಸಿದರು. ಮೊದಲನೆಯ ಯೋಜನೆಯೆಂದರೆ, ಹತ್ತಿಯ ಗಿರಣಿಯನ್ನು ತೆಗೆಯುವದು. ಎರಡನೆಯ ಸಾಧನವೆಂದರೆ, ಲಾ ಕ್ಲಾಸು. ಗಿರಣಿಯನ್ನು ಪ್ರಾರಂಭಿಸುವದೇನು ಸುಲಭವಿರಲಿಲ್ಲ. ಅದಕ್ಕೆ ಬೇಕಾಗುವ ಹಣವೂ ಕೈಯಲ್ಲಿರಲಿಲ್ಲ. ೧೦–೧೫ ಸಾವಿರ ರೂಪಾಯಿಗಳ ಸಾಲವನ್ನು ತೆಗೆದು, ಹೈದ್ರಾಬಾದ ಸಂಸ್ಥಾನದ ಲಾತೂರಿನಲ್ಲಿ ಗಿರಣಿಯನ್ನು ತೆರೆಯುವ ನಿಶ್ಚಯವನ್ನು ಮಾಡಿದರು. ಆಬಾ ಸಾಹೇಬ ಪರಾಂಜಪೆ ಮತ್ತು ಗಣಪತ ರಾವ ಸಹಸ್ರಬುದ್ಧೆ ಎಂಬಿಬ್ಬರು ಪಾಲುಗಾರರನ್ನು ಕೂಡಿಸಿಕೊಂಡ ಮೂವರ ಪಾಲುಗಾರಿಕೆಯಿಂದ ಕಾರಖಾನೆಯು ಪ್ರಾರಂಭವಾಯಿತು. ಪರಾಂಜಪೆಯವರು ಸುಖವಸ್ತುಗಳು. ಸಹಸ್ರಬುದ್ಧೆಯವರು ಬುದ್ಧಿ ವಂತರು. ಅವರು ಸ್ವತಃಹೋಗಿ ಕಾರ್ಯವನ್ನೆಲ್ಲ ಪರೀಶೀಲಿಸುತ್ತಿದ್ದರು. ಟಿಳಕರು ತಮ್ಮ ಅಳಿಯನಾದ ಧೊಂಡೋಪಂತ ವಿದ್ವಾಂಸರನ್ನು ವ್ಯವಸ್ಥಾ ಪಕರೆಂದು ನೇಮಿಸಿದರು. ಕಾರ್ಯದ ಭಾರವೆಲ್ಲವೂ ಧೋಂಡೊಪಂತರ

ಮೇಲೆಯೇ ಬಿದ್ದಿತು. ಟಿಳಕರು ಸುಗ್ಗಿಯಕಾಲದಲ್ಲಿ ಆಗಾಗ ಹೋಗಿ ಬರುತ್ತಿದ್ದರು. ಗಿರಣಿಯು ಮೊದಮೊದಲು ಬಹಳ ಚನ್ನಾಗಿ ಸಾಗಿತು. ಕೆಲವು ವರ್ಷ ಲಾಭವಾಗದಿದ್ದರೂ ಹಾನಿಯಾಗಲಿಲ್ಲ. ಕೆಲವು ವರ್ಷ ಹಾನಿಯಾಗಹತ್ತಿತ್ತು. ಒಟ್ಟಿನಲ್ಲಿ ಅದರಿಂದ ಟಿಳಕರ ಉಪಜೀವನಕ್ಕೆ ಸಹಾಯವಾಗಲಿಲ್ಲ. ಆದರ ಸಾಲದ ಬಡ್ಡಿಯನ್ನು ಪೂರೈಸಬೇಕಾದರೇನೆ ಸಾಕುಬೇಕಾಯಿತು.

ಶಿಕ್ಷಣ ಸಂಸ್ಥೆಯನ್ನು ಬಿಟ್ಟ ನಂತರ ೧೮೯೭ ರ ವರೆಗೆ ಟಿಳಕರ ಉಪ ಜೀವನದ ಮುಖ್ಯ ಸಾಧನವೆಂದರೆ ಲಾ ಕ್ಲಾಸೇ ಎಂದು ಹೇಳಬಹುದು. ಕ್ರಾಫರ್ಡ ಪ್ರಕರಣವನ್ನು ಮುಗಿಸಿ ಟಿಳಕರು ತೆರವಾದನಂತರ, ಅವರು ಕೇಸರಿಯಲ್ಲಿ ಲಾ ಕ್ಲಾಸು ಹೊರಡುವದೆಂದು ಜಾಹೀರಾತು ಕೊಟ್ಟರು. ಆಗ ವಿಂಚೂರಕರ ವಾಡೆಯಲ್ಲಿ ಟಿಳಕರು ವಾಸಿಸುತ್ತಿದ್ದರು. ಮನೆಯಲ್ಲಿಯೇ ವರ್ಗಗಳನ್ನು ಪ್ರಾರಂಭಿಸಿದರು. ಕರ್ನಾಟಕ ಹಾಗೂ ಮಹಾರಾಷ್ಟ್ರಗಳಿಂದ ವಿದ್ಯಾರ್ಥಿಗಳು ಬರಹತ್ತಿದರು. ವರ್ಗಗಳನ್ನು ನಡೆಯಿಸಲು ಜನರನ್ನು ತೆಗೆದು ಕೊಳ್ಳಬೇಕಾಯಿತು. ವಿಷ್ಣುಪಂತ ಗೋಖಲೆ, ವಿಷ್ಣುಪಂತ ಪಟವರ್ಧನ, ವಾಕನೀಸ, ನರಸಿಂಹ ಚಿಂತಾಮಣಿ ಕೇಳಕರ, ಮೊದಲಾದವರು ಕಾಲ ಕಾಲಕ್ಕೆ ಸಹಾಯಕ ಶಿಕ್ಷಕರಾಗಿ ಕೆಲಸ ಮಾಡಿದರು. ಹಿಂದೂ ಕಾಯದೆ, ಎವ್ಹಿಡನ್ಸ ಆ್ಯಕ್ಟ, ಕಾಂಟ್ರಾಕ್ಟ ಆ್ಯಕ್ಟ, ಇಕ್ವಿಟಿ ಮೊದಲಾದ ಕಾಯದೆ ಗಳಲ್ಲಿಯ ಕಠಿಣ ಭಾಗಗಳನ್ನು ಟಿಳಕರು ಸ್ವತಃ ಹೇಳುತ್ತಿದ್ದರು. ಹಿಂದೂ ಧರ್ಮಶಾಸ್ತ್ರವೆಂಬ ವಿಷಯದಲ್ಲಿ ಟಿಳಕರ ಕೈಹಿಡಿಯುವವರು ಯಾರೂ ಇರಲಿಲ್ಲ. ಆ ವಿಷಯದ ಮೇಲಿನ ಅವರ ಉಪನ್ಯಾಸಗಳು ವಿದ್ವತ್‌ಪೂರ್ಣ ವಿರುತ್ತಿದ್ದ ಮೂಲಕ, ಊರಲ್ಲಿಯ ತರುಣ ವಕೀಲರು ಕೂಡ, ಇವುಗಳನ್ನು ಕೇಳಲು ಬರುತ್ತಿದ್ದರು. ಹಿಂದೂ ಕಾಯದೆ ವಿಷಯದಲ್ಲಿ ಇವರ ಜ್ಞಾನವು ಅಗಾಧವಾಗಿದ್ದಿತು. ಪರಿಪೂರ್ಣವಾಗಿದ್ದಿತು- ಹಿಂದೂ ಕಾಯದೆಯ ಕೈಪಿಡಿ ಯೊಂದನ್ನು ಬರೆಯುವ ಇಚ್ಛೆ ಅವರಿಗಿದ್ದಿತು. ಸಮಯವೇ ಸಿಕ್ಕಲಿಲ್ಲ. ಇಷ್ಟೆಲ್ಲ ಪರಿಶ್ರಮಬಟ್ಟರೂ ಟಿಳಕರಿಗೆ ಸಿಗುತ್ತಿದ್ದುದು, ತಿಂಗಳಿಗೆ ಒಂದನೂರಾ ಐವತ್ತು ರೂಪಾಯಿಗಳು ಮಾತ್ರ. ಅಷ್ಟರಲ್ಲಿಯೇ ತಮ್ಮ ಸಂಸಾರ ಯಾತ್ರೆ ಯನ್ನು ಸಾಗಿಸುತ್ತಿದ್ದರು.

ಡೆ. ಎ. ಸೊಸಾಯಿಟಿಯನ್ನು ಬಿಟ್ಟನಂತರ ಹೊಟ್ಟೆಗಾಗಿ ಈ ಎರಡೂ ಉದ್ಯೋಗಗಳನ್ನು ಕೈಕೊಂಡಿದ್ದರೂ ಕೇಸರಿಯ ಸಂಪಾದಕತ್ವವೇ ಇವರ ಮುಖ್ಯ ಕೆಲಸವಾಗಿದ್ದಿತು. ಆಗರಕರರು ಬಿಟ್ಟನಂತರ ೧೮೮೭ ರಿಂದ ಆರ್ಯ ಭೂಷಣ ಮುದ್ರಣಾಲಯ ಮತ್ತು ಕೇಸರಿ ಹಾಗೂ ಮರಾಠಾ ವೃತ್ತಪತ್ರಗಳು ವಾಸುದೇವರಾವ ಕೇಳಕರ, ಹರಿನಾರಾಯಣ ಗೋಖಲೆ, ಸ್ವತಃ ಟಿಳಕ ಈ ಮೂವರ ಪಾಲುಗಾರಿಕೆಯ ಸಂಸ್ಥೆಯಾಗಿ ಏರ್ಪಟ್ಟುದನ್ನು ಹಿಂದೆ ವಿವರಿಸಿದ್ದೇವೆ. ಕೇಸರಿಯಿಂದ ಲಾಭವಿದ್ದರೂ ಅದನ್ನೆಲ್ಲ ಮರಾಠಾ ಪತ್ರವು ಕರಗಿಸುತ್ತಿದ್ದಿತು. ಇದಲ್ಲದೆ ವೃತ್ತಪತ್ರಗಳಿಗೆ ಬೇಕಾಗುವ ವಸ್ತುಗಳನ್ನು ಮೇಲಿಂದ ಮೇಲೆ ತರುವ ಪ್ರಸಂಗ ಬರುತ್ತಿದ್ದಿತು. ಆದುದರಿಂದ ಸ್ವತಃ ಕೇಸರಿಯ ಸ್ವತಂತ್ರವಾದ ಮೊಳೆಗಳನ್ನು ಸಿದ್ಧಪಡಿಸುವ ಪಡಿಯಚ್ಚು (ಟಾಯಿಪ ಫೌಂಡ್ರಿ) ಹಾಗೂ ಯಂತ್ರಗಳು ಇರಬೇಕೆಂದು ಅನಿಸಹತ್ತಿತು. ಆದರೆ ಅವೆಲ್ಲ ವೆಚ್ಚದ ಮಾತಾಗಿದ್ದಿತು. ವಾಸುದೇವರಾವ ಕೇಳಕರ, ಹಾಗೂ ಟಿಳಕ ಇವರಲ್ಲಿ ೧೮೯೧ ರ ವರೆಗೆ ಮತಭೇದದ ಪ್ರಶ್ನೆಗಳಿರಲಿಲ್ಲ. ಆದರೆ 'ಸೇವಾಸದನ'ದ ಪ್ರಶ್ನೆ ಉದ್ಭವಿಸಿದಾಗ ಮತಭೇದಕ್ಕೆ ಪ್ರಾರಂಭ ವಾಯಿತು. ಕೇಸರಿಯಲ್ಲಿ ಟಿಳಕರೂ ಮರಾಠಾದಲ್ಲಿ ವಿಶೇಷವಾಗಿ ಕೇಳಕರರೂ ಬರೆಯುತ್ತಿದ್ದರು. ಎರಡೂ ವೃತ್ತಪತ್ರಿಕೆಗಳಲ್ಲಿ ಒಂದೇ ವಿಷಯದಲ್ಲಿ ಭಿನ್ನ ಭಿನ್ನವಾದ ಅಭಿಪ್ರಾಯಗಳು ಪ್ರಕಟವಾಗಹತ್ತಿದವು. ಎರಡೂ ಪತ್ರಗಳು ಒಬ್ಬರ ಸ್ವತ್ತಾಗಿ ಇರುವದೇ ಒಳ್ಳೇಯದೆಂದು ಅನಿಸಹತ್ತಿತು. ಎರಡೂ ವೃತ್ತಪತ್ರಗಳನ್ನು ಯಾರಾದರೊಬ್ಬರು ತೆಗೆದುಕೊಳ್ಳಬೇಕು. ಇಬ್ಬರು ಕೂಡಿ ಮುದ್ರಣಾಲಯವನ್ನು ತೆಗೆದುಕೊಳ್ಳಬೇಕೆಂದು ನಿರ್ಣಯವಾಯಿತು. ಮುದ್ರಣಾಲಯ ಒಂದುಕಡೆಗೆ, ಎರಡೂ ವೃತ್ತಪತ್ರ ಮತ್ತು ಮೂರರಲ್ಲಿ ಒಂದು ಪಾಲು ಸಾಲ (೭೦೦೦ ರೂ) ಒಂದು ಕಡೆಗೆ. ಹೀಗೆ ಪಾಲು ಮಾಡಲ್ಪಟ್ಟಿತು. ಸ್ವಮತ ಪ್ರಚಾರ, ರಾಜಕೀಯ ಶಿಕ್ಷಣಗಳ ದೃಷ್ಟಿಯಿಂದ ಟಿಳಕರು ವೃತ್ತಪತ್ರವನ್ನು ಆರಿಸುವದು ಸ್ವಾಭಾವಿಕವಿದ್ದಿತು. ಅದಕ್ಕೆ ಅವರು ಅಧಿಕಾರಿಗಳೂ ಇದ್ದರು. ೧೮೯೧ ರಲ್ಲಿ ಕೇಸರಿ, ಮರಾಠಾ ಪತ್ರಗಳು ಮತ್ತು ೭೦೦೦ ರೂ. ಸಾಲ, ಇದು ಟಿಳಕರ ಸ್ವಂತ ಆಸ್ತಿಯಾಯಿತು. ಕೇಳಕರ, ಗೋಖಲೆಯವರು ಆರ್ಯಭೂಷಣ ಮುದ್ರಣಾಲಯದ ಒಡೆಯ ರಾದರು.

ಕೇಸರಿ ಹಾಗೂ ಮರಾಠಾ ವೃತ್ತಪತ್ರಗಳು ಒಡೆತನದ್ದಾದರೂ ಅವುಗಳನ್ನು ನಡೆಯಿಸಿಕೊಂಡು ಹೋಗುವ ಬಗೆ ಹೇಗೆ? ಮೇಲೆ ಸಾಲದ ಭಾರ. ಟಿಳಕರು ಎದೆಗುಂದದೆ ಧೈರ್ಯದಿಂದ ಮುಂದಡಿಯಿಟ್ಟರು. ಹೊಸ ಸಾಲದ ಹೊರೆಯಿಂದ ಮುಕ್ತವಾಗುವ, ಮತ್ತು ವೃತ್ತಪತ್ರಿಕೆಗಳನ್ನು ವ್ಯವಸ್ಥಿತವಾಗಿ ಮುಂದೆ ಸಾಗಿಸುವ ಈ ಎರಡು ಪ್ರಶ್ನೆಗಳು ತೀವರ ಕಣ್ಣೆದುರಿಗಿದ್ದವು. ಅಲ್ಲದೆ ಉಪಜೀವನದ ಮಾರ್ಗವನ್ನು ಕಲ್ಪಿಸಿಕೊಳ್ಳುವ ದೊಡ್ಡ ಪ್ರಶ್ನೆಯೂ ಇದ್ದಿತು. ವೃತ್ತಪತ್ರಗಳೆರಡನ್ನೂ ಮುದ್ರಿಸುವ ವೆಚ್ಚ, ಮರಾಠಾ ಸಂಪಾದಕರ ಸಂಬಳ, ಮತ್ತು ವೃತ್ತಪತ್ರಗಳನ್ನು ಹಂಚುವಿಕೆ, ಈ ಎಲ್ಲವುಗಳ ಖರ್ಚನ್ನು ಕೇಸರಿಯು ಲಾಭದಿಂದ ಕಳೆದು, ಉಳಿದ ಲಾಭಾಂಶವನ್ನು ಸಾಲಕ್ಕೆ ತೆಗೆದುಕೊಳ್ಳಬೇಕು. ಎಂದು ಕರಾರು ಮಾಡಿ, ಈ ಎಲ್ಲ ವ್ಯವಸ್ಥೆಯ ಭಾರವನ್ನು ಇಲ್ಲಿಯ ವರೆಗೆ ಸಹಕಾರಿಗಳಾಗಿದ್ದ ಮಿತ್ರದ್ವಯರಿಗೆ ಒಪ್ಪಿಸಿದರು. ಈ ಯೋಜನೆಯಿಂದ ಟಿಳಕರು ಉಸುರಾಡಿಸಲು ಮಾರ್ಗ ಮಾಡಿಕೊಂಡರು. ಕಾರ್ಯದ ಹೊರೆಯನ್ನು ಹಗರು ಮಾಡಿಕೊಂಡರು. ವೃತ್ತಪತ್ರಗಳು ಸರಾಗವಾಗಿ ಸಾಗುವಂತೆ ಮಾರ್ಗಮಾಡಿಕೊಂಡರು. ಹಿಂದಿನ ಋಣದಿಂದ ಮುಕ್ತರಾಗಲು ಅವರಿಗೆ ೬-೭ ವರ್ಷಗಳು ಹಿಡಿದವು.

ಹೀಗೆ ಸ್ವಾವಲಂಬನದಿಂದ ಉದರ ಪೋಷಣೆಯನ್ನು ಮಾಡುತ್ತ ಎಂತಹ ವಿಪತ್ತುಗಳಲ್ಲಿಯೂ ಎದೆಗುಂದದೆ, ಪುಟಚಂಡಿನಂತೆ ಹೆಚ್ಚು ಹೆಚ್ಚು ಉತ್ಸಾಹದಿಂದ ದೇಶಸೇವೆಯಲ್ಲಿ ಮಗ್ನರಾಗುತ್ತ ನಡೆದ ಟಿಳಕರು ಕರ್ಮಯೋಗಿಗಳಲ್ಲದೆ ಮತ್ತೇನು ?



## ನಾಲ್ಕನೆಯ ಘಟ್ಟ

# ರಾಜಕೀಯ ರಂಗದ ಪೂರ್ವ ಸಿದ್ಧತೆ

### ಸಮ್ಮತಿ ವಯಸ್ಸಿನ ಕಾಯದೆ

ಟಿಳಕರ ಜೀವನದಲ್ಲೆಲ್ಲ, ಹೋರಾಟವೇ ಕಂಡುಬರುವದು. ವೀರ ಯೋಧನಂತೆ ಟಿಳಕರು ವರ್ತಿಸಿದರು. ರಾಷ್ಟ್ರದ ಪುನರುಜ್ಜೀವನದ ಕಾಲವದು. ಪ್ರತಿಯೊಂದು ಕ್ಷೇತ್ರದಲ್ಲಿಯೂ ಹೊಸಕಾಲದ ಸಂದೇಶವನ್ನು ಬೀರುವ ದಿದ್ದಿತು. ಅದಕ್ಕಾಗಿ ಟಿಳಕರು ಹೋರಾಡಬೇಕಾಯಿತು. ಯಾವುದೇ ವಾದ ಉಂಟಾಗಲಿ, ಟಿಳಕರು ಅದರಲ್ಲಿ ಧುಮುಕಿ ತಮ್ಮ ಧೋರಣೆಯಂತೆ ಸಮಾಜಕ್ಕೆ ರೂಪಕೊಡುತ್ತಿದ್ದರು. ಇದೇ ಟಿಳಕರ ವೈಶಿಷ್ಟ್ಯ. ಶತ್ರುವು ಎಷ್ಟೆಷ್ಟು ಏರಿಬರುವನೋ ಅಷ್ಟಷ್ಟು ಅವರ ತೇಜವು ಹೊರಹೊಮ್ಮುತ್ತಿತ್ತು. ಉತ್ಸಾಹವು ಉಕ್ಕೇರುತ್ತಿತ್ತು.

೧೮೮೭ ರಲ್ಲಿ ಮಲಬಾರಿ ಶೇಟರು ಸಮಾಜದ ಸುಧಾರಣೆಯ ವಾದವನ್ನೆಬ್ಬಿಸಿ, ಅಯಶಸ್ವಿಯಾಗಿದ್ದರಷ್ಟೆ! ಅದು ಅವರ ಮನಸ್ಸಿನಲ್ಲಿ ಕುದಿಯುತ್ತಿತ್ತು. ಭಾರತದಲ್ಲಿ ತಮ್ಮ ಆಟವೇನೂ ಸಾಗುವದಿಲ್ಲವೆಂದು ಬಗೆದು, ಇಂಗ್ಲಂಡಿನಲ್ಲಿ ತಮ್ಮ ಗುಪ್ತ ಚಳವಳಿ ಹೂಡಿದರು. ಬ್ರಿಟಿಶ ಪದ್ಧತಿಯ ಸಾಮಾಜಿಕ ಸುಧಾರಣೆಯನ್ನು ಕಾಯದೆಯ ರೂಪದಿಂದ ಭಾರತಕ್ಕೆ ಬಂಧಿಸಲು ಯತ್ನಿಸಿದರು. ಇಂಗ್ಲಂಡದಲ್ಲಿ ಪ್ರಸಿದ್ಧಿಸಿದ ಅವರ ಕಾರ್ಯಕ್ರಮದಲ್ಲಿ ಕೆಳಗಿನ ಮಾತುಗಳಿದ್ದವು.

೧ ಲಗ್ನವಾದ ೧೨ ವರ್ಷದ ಬಾಲಿಕೆಯ ಸಂಭೋಗ ಮಾಡುವ ಗಂಡನಿಗೂ ಕೂಡ ಕಾಯದೆಯಿಂದ ಶಿಕ್ಷೆಯಾಗಬೇಕು. ೨) ಹೆಂಡತಿಯನ್ನು ವಶಕ್ಕೆ ತೆಗೆದುಕೊಳ್ಳುವ ಇಲ್ಲವೆ, ಗಂಡನ ಮನೆಯಲ್ಲಿ ಇರಲಿಲ್ಲವೆಂಬ ಬಗ್ಗೆ ವಾದ ಹೂಡುವ ಅಧಿಕಾರವಿರಕೂಡದು. ೩) ಚಿಕ್ಕತನದಲ್ಲಿ ಲಗ್ನವಾಗಿದ್ದರೆ ಅವರು ಪ್ರೌಢರಾದ ಮೇಲೆ ಗಂಡಹೆಂಡರಿಗೆ ಈ ಲಗ್ನವು ಮನಸ್ಸಿಗೆ ಬರ

ದಿದ್ದರೆ, ಸೋಡಿಚೀಟಿ ಕೊಡಬಹುದು. ೪) ತಮ್ಮ ಮಕ್ಕಳ ಮದುವೆಯನ್ನು ತಮ್ಮ ಮನಸ್ಸಿಗೆ ಬಂದಾಗ ಮಾಡಬಹುದು. ಸ್ವಕೀಯರಾಗಲೀ ಪರಕೀಯ ರಾಗಲೀ ಇದರ ಬಗೆಗೆ ಮಾತೆತ್ತಿದರೆ, ಅವರಿಗೆ ಶಿಕ್ಷೆಯಾಗಬೇಕು. ೫) ವಿಧವೆಯು ಪುನಃ ಮದುವೆಯಾದರೆ, ಅವಳಿಗೆ ಮೊದಲಿನ ಗಂಡನ ಆಸ್ತಿ ದೊರೆಯಬೇಕು. ೬) ಪುನರ್ವಿವಾಹದ ವಿಧಿಯನ್ನು ಸುಲಭಗೊಳಿಸಿ, ಮ್ಯಾಜಿಸ್ಟ್ರೇಟರ ಮುಂದೆ ಪ್ರತಿಜ್ಞೆ ಮಾಡಿದರೆ ಸಾಕು ೭) ಸುಧಾರಣೆಗಾಗಿ ಸಂಸ್ಥೆಗಳು ಏರ್ಪಟ್ಟರೆ, ಅದರ ನಿಯಮಗಳಿಗೆ ಕಾಯದೆಯ ರಕ್ಷಣೆ ದೊರೆಯ ಬೇಕು. ೮) ಹುಡಿಗೆಯರಿಗೆ ಹಾಗೂ ವಿಧವೆಯರಿಗೆ ಶಿಕ್ಷಣದ ಅನುಕೂಲತೆ ಒದಗಿಸಬೇಕು. ಮತ್ತು ಅವರಿಗೆ ನವಕರಿಯ ವ್ಯವಸ್ಥೆಯಾಗಬೇಕು,

ಈ ಕಾರ್ಯಕ್ರಮವು ಭಾರತದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿತು. ಮೊದಲನೆಯ ಕಲಮಿನ ಬಗ್ಗೆ ವಾದ ವಿವಾದವು ಪ್ರಾರಂಭವಾಯಿತು. ಇದೇ 'ಸಮ್ಮತಿ ವಯಸ್ಸಿನ ಕಾಯದೆಯ ಚಳುವಳಿ' ಈ ಚಳುವಳಿಯಲ್ಲಿಯೇ ಟಿಳಕರು 'ಮತ್ತಗಜ ಅಥವಾ ಪ್ರವೀಣ ಬಂಡುಗಾರ'ರೆಂದು ಹೆಸರಾದರು. ಡೆ. ಎ. ಸೊಸಾಯಿಟಿಯ ಜಗಳವು ಅಂತರ್ಗತವಾಗಿದ್ದಿತು ಪುಣೆಯ ಹೊರಗೆ ಹೋಗಿರಲಿಲ್ಲ. ಸಮ್ಮತಿ ವಯದ ಬಿಲ್ಲಿನ ವಾದದಲ್ಲಿ ಡಾ. ಭಂಡಾರಕರರಂಥ ಹಿರಿ ಹುದ್ದರಿಗಳೊಡನೆ ಹೋರಾಡುವ ಪ್ರಸಂಗ ಬಂದುದರಿಂದ ಮುಂಬಯಿ ಪ್ರಾಂತದಲ್ಲಿಯೇ ಏಕೆ, ಅನೇಕ ಪ್ರಾಂತಗಳಲ್ಲಿ ಟಿಳಕರು ಪ್ರಸಿದ್ಧರಾದರು.

ಮಲಬಾರಿ ಸೇಟರ ಈ ಗುಪ್ತಕಾರಸ್ಥಾನವನ್ನು ಕುರಿತು ೧೮೯೦ ರ ೩೦ ನೇ ಸಪ್ಟಂಬರದ ಕೇಸರಿಯಲ್ಲಿ 'ಕಾಯದೆ ಬೇಕೆನ್ನುವ ಅರ್ಜಿ' ಎಂಬ ಅಗ್ರ ಲೇಖವನ್ನು ಬರೆದು, ಕಾಯದೆ ಆಗಬೇಕೆಂಬ ಅರ್ಜಿಯ ಮೇಲೆ ಸಹಿ ತೆಗೆದುಕೊಳ್ಳಲು, ಧೂರ್ತ ಜನರು ಮನೆ ಮನೆಗೆ ಬರುವರು. ಎಚ್ಚರಿಕೆ, ಎಂದು ಜನರನ್ನು ಎಚ್ಚರಿಸಿದರು. ಈ ಅರ್ಜಿಗಳನ್ನು ಆಧರಿಸಿ ಪಿ. ಕೊ ೩೭೫ ನೇ ಕಲಮನ್ನು ತಿದ್ದುವ ಹೊಂಚನ್ನು ಹಾಕಿ, ವಿಲಾಯತಿಯ ಸರ ಕಾರವು ಭಾರತ ಸರಕಾರಕ್ಕೆ ಆಜ್ಞಾಪಿಸಿದ್ದಿತು.

ಈ ವಿಷಯದಲ್ಲಿ ಪುರಾಣಮತವಾದಿಗಳೇ ಮುಂದಾದರು. ೨೬ ನೇ ಅಕ್ಟೋಬರಕ್ಕೆ ಸಾರ್ವಜನಿಕ ಸಭೆ ಕರೆದರು. ಚರ್ಚೆಗೆ ಮುಖ ಒಡೆಯಿತು. ನೂಲಕರ ಮೊದಲಾದ ೧೮ ಜನ ಸುಧಾರಕರು "ಸಾಮಾಜಿಕ ಕಾರ್ಯದಲ್ಲಿ

ಸರಕಾರವು ಕೈಹಾಕಬಾರದೆಂಬ ತತ್ವ ನಮಗೂ ಒಪ್ಪಿಗೆಯಿದೆ. ಆದರೆ ಕಾಲ ಮಾನಕ್ಕನುಸರಿಸಿ, ಕನ್ಯಾವಿಕ್ರಯ, ಬಾಲವೃದ್ಧವಿವಾಹ, ಮೊದಲಾದ ವಿಷಯಗಳಲ್ಲಿ ಸುಧಾರಣೆಯನ್ನು ೬ ತಿಂಗಳಲ್ಲಿ ಮಾಡುವೆವೆಂದು ಹಿಂದೀ ಯರು ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಕಾಯಿದೆ ಬೇಡವೆನ್ನುವದರಲ್ಲಿ ಅರ್ಥವಿಲ್ಲ. ಎಂಬ ಉಪಸೂಚನೆಯನ್ನು ತರುವೆವು" ಎಂದು ಪ್ರಕಟನೆ ಹೊರಡಿಸಿದರು. ಈ ಸುದ್ದಿಯನ್ನು ಕೇಳಿ ಟಿಳಕ, ನಾಮಜೋಶಿ ಮೊದಲಾದ ಪ್ರಭೃತಿಗಳು "ಕಾಯಿದೆ ಆಗಬಾರದೆನ್ನುವವರ ಅರ್ಜಿಯನ್ನಂತೂ ಸರ ಕಾರಕ್ಕೆ ಕಳಿಸಬೇಕು. ಅಲ್ಲದೆ, ಯಾರಿಗಾದರೂ ಯಾವದೊಂದು ಸುಧಾರಣೆ ಮಾಡುವ ನಿಶ್ಚಯವಿದ್ದು, ಅದರಂತೆ ಆಚರಿಸುವ ಕೆಲವರು ಅವರಿಗೆ ಸಿಕ್ಕರೆ, ಅವರಲ್ಲಿ ಯಾರು ವಚನಕೊಟ್ಟಂತೆ ನಡೆಯುವದಿಲ್ಲವೋ ಅವರಿಗೆ, ಸರಕಾರವು ಕಠಿಣ ಶಿಕ್ಷೆ ವಿಧಿಸಬೇಕೆಂದು ನಮ್ಮ ಪ್ರತಿ ಉಪಸೂಚನೆಯಿದೆ. ಅಲ್ಲದೆ, ೧) ೧೬ ವರ್ಷದ ಒಳಗಿನ ಹುಡಿಗೆಯರ ಲಗ್ನ ಮಾಡಬಾರದು. ೨) ೨೦ ವರ್ಷದ ಮೇಲೆ ಹುಡುಗರ ಮದುವೆ ಮಾಡಬೇಕು. ೩) ೪೦ ವರ್ಷ ಮಿಕ್ಕಿದ ಪುರುಷರ ಲಗ್ನ ಮಾಡಕೂಡದು, ಮಾಡಿಕೊಳ್ಳುವದೇ ಆದರೆ ವಿಧವೆಯ ರನ್ನು ಮಾಡಿಕೊಳ್ಳಬೇಕು. ೪) ಶೆರೆ ಕುಡಿಯುವದನ್ನು ನಿಲ್ಲಿಸಬೇಕು. ೫) ವರದಕ್ಷಿಣೆ ತೆಗೆದುಕೊಳ್ಳಬಾರದು. ೬) ಉತ್ಪನ್ನದ ೧೦ ನೇ ಅಂಶವನ್ನು ಸಾರ್ವಜನಿಕ ಕಾರ್ಯಕ್ಕೆ ಕೊಡಬೇಕು. ೭) ವಿಧವೆಯ ಒಪನವನ್ನು ಮಾಡಕೂಡದು ಈ ಸುಧಾರಣೆಗಳು ಈಗ ಅವಶ್ಯವಿದ್ದು, ಇವುಗಳಿಗೆ ಒಪ್ಪಿಗೆಯಿದ್ದವರ ಅಂಕಿತಗಳನ್ನು ತೆಗೆದುಕೊಳ್ಳಬೇಕು. ಇಂತಹ ಜನರ ಅರ್ಜಿಗಳನ್ನು ಸರಕಾರದ ಕಡೆಗೆ ಕಳಿಸಬೇಕೆಂದು ನಮ್ಮ ಅಭಿಪ್ರಾಯವಿದೆ." ಎಂದು ಸಭೆಗೆ ತಿಳಿಸಿದರು.

ಟಿಳಕರು ಇಷ್ಟಕ್ಕೆ ನಿಲ್ಲಲಿಲ್ಲ. ಉಪಸೂಚನೆ ಮಾಡಿದವರಿಗೆ "ಕಾಯದೆಯ ಬಲದಿಂದ ಸುಧಾರಣೆಗಳನ್ನು ಜನತೆಯ ಮೇಲೆ ಹೇರಿದರೆ, ಅದರ ಪರಿಣಾ ಮವು ಒಳ್ಳೆಯದಾಗದೆ ಕೆಡಕಾಗುವದು. ಸುಧಾರಣೆಯ ನಿಜವಾದ ಕಳ ಕಳಿಯು ಯಾರಿಗಿದೆಯೋ ಅವರು ಸುಧಾರಣೆಗಳನ್ನು ಜೀವನದಲ್ಲಿ ತರಲು, ಸ್ವತಃ ನಿಯಮಬದ್ಧರಾಗಬೇಕು. ತಾವು ಹಾಕಿಕೊಂಡ ನಿಯಮದಂತೆ ನಡೆ ಯಲು ತಮಗೆ ಆಗದಿದ್ದರೆ, ಅದು ಅಪರಾಧವೆಂದು ಬಗೆದು ಸರಕಾರಕ್ಕೆ

ಶಿಕ್ಷೆಯನ್ನೀಯಲು ಬಿನ್ನವಿಸಬೇಕು. ಯಾರು ಈ ಮಾರ್ಗವನ್ನು ಹಿಡಿಯು ವರೋ ಅವರಿಗಷ್ಟೆ ಶಿಕ್ಷೆಯಾಗುವದು. ಇದಕ್ಕೆ ಒಪ್ಪಿಗೆ ಇರುವವರೆಲ್ಲ ಸಭೆ ಯಲ್ಲಿ ತಮ್ಮ ಹೆಸರುಗಳನ್ನು ಕೊಡಬೇಕು. ಇಂದು ಆಗಬೇಕಾದ ಸುಧಾರಣೆ ಗಳನ್ನು ನಾನು ಸೂಚಿಸಿದ್ದೇನೆ. ಇವುಗಳಿಂದ ಜಾತಿ ಬಾಹಿರರಾಗುವ ಭೀತಿಯೂ ಇಲ್ಲ. ಇಂತಹ ೨೦೦ ಜನರ ಅಂಕಿತ ದೊರೆತರೆ, ಅವರಿಗೆ ಮಾತ್ರ ಕಾಯದೆ ಮಾಡಬೇಕೆಂದು ಕೇಳಬಹುದು. ಕುಟುಂಬ ವತ್ಸಲರಾದ ಬ್ರಾಹ್ಮಣರ ಅಂಕಿತ ಮಾತ್ರವಾಗಬೇಕು. ಕಾಯದೆಯಾಗಬೇಕೆಂದು ವಾದಿ ಸುವವರಲ್ಲಿ ಸ್ವತಃ ಎಷ್ಟು ಜನರು ಇದಕ್ಕೆ ಸಿದ್ಧರಿರುವರು? ಎಂಬುದನ್ನು ಕಂಡು ಹಿಡಿಯಲು ಇದು ಉತ್ತಮ ಮಾರ್ಗವಾಗಿದೆ" ಎಂದು ವೈಯಕ್ತಿಕ ವಾಗಿ ಪತ್ರ ಬರೆದರು.

ಸಭೆಯ ಪೂರ್ವದಲ್ಲಿ ಟಿಳಕರು ಕೇಸರಿಯಲ್ಲಿ "ಕಾಯದೆ ಆಗಬಾರ ದೆನ್ನುವ ಅನೇಕ ಜನರು, ಕೆಲವು ಸುಧಾರಣೆಗಳಾಗಬೇಕೆಂದು ನನ್ನೊಡನೆ ಚರ್ಚಿಸಹತ್ತಿದ್ದಾರೆ. ನನ್ನ ಅಭಿಪ್ರಾಯವಿಷ್ಟೆ! ನಾನೂ ಸುಧಾರಣೆಗಳಾಗ ಬೇಕೆನ್ನುವವನೆ; ಆದರೆ, ಯಾರ ವಿಚಾರಗಳು ಸುಧಾರಿಸಿಲ್ಲವೋ ಅವರ ಕೊರಳಿಗೆ ಸುಧಾರಣೆಗಳನ್ನು ಕಾಯದೆಯಿಂದ ಕಟ್ಟುವದು ಅನ್ಯಾಯವೂ ಅಪರಾಧವೂ ಆಗುವದೆಂದು ನನಗೆ ಅನಿಸುತ್ತದೆ. ಆದುದರಿಂದ ಅರ್ಜಿಯಲ್ಲಿ ಕಾಯದೆಯು ಬೇಡವೆಂದಷ್ಟೇ ಹೇಳಿ, ನಾನು ನನ್ನ ಭಾಷಣದಲ್ಲಿ ಬಾಲ ವೃದ್ಧವಿವಾಹ, ಮೊದಲಾದ ಸುಧಾರಣೆಗಳನ್ನು ಕೈಕೊಂಡವರ ಛಲ, ಸಮಾಜದಿಂದಾಗಬಾರದೆಂದು ಮಾತನಾಡಲು ಸಿದ್ಧನಿರುವೆ" ಎಂದು ಬರೆ ದರು. ಆದರೆ ಈ ಮಾತುಗಳು ಪ್ರತಿಪಕ್ಷಿಗಳಿಗೆ ರುಚಿಸಲಿಲ್ಲ.

ಸೂಚನೆಗಳೆಲ್ಲ ವ್ಯವಸ್ಥಾಪಕರ ಕಡೆಗೆ ಬಂದವು. ಇಂತಹ ಪ್ರಚಂಡ ಸಭೆಯಲ್ಲಿ ಈ ಎಲ್ಲ ವಿಚಾರಗಳು ಆಗುವದು ಅಶಕ್ಯವೆಂದು ನಿರ್ಣಯಿಸಿ, ಉಪಸೂಚನೆ ಪ್ರತಿ ಉಪಸೂಚನೆ ಮಾಡಿದವರಿಗೆಲ್ಲ ಕೂಡ 'ಜನತೆಯ ಒಪ್ಪಿಗೆಯಿಲ್ಲದೆ, ಅವರ ಮೇಲೆ ಕಾಯದೆಯನ್ನು ಹೇರಬಾರದು' ಎಂಬ ವಿಷಯದಲ್ಲಿ ಮತ್ಯೈಕ್ಯವಿರುವ ಮೂಲಕ ಅದರ ಬಗೆಗೆ ವಿಚಾರ ಮಾಡುವ ಕಾರಣವಿಲ್ಲ. ಮಲಬಾರಿಯವರ ಸೂಚನೆಗಳನ್ನು ಸಭೆಯಲ್ಲಿ ಓದಿ ಹೇಳಿದ ನಂತರ ನಾವು ಕಳಿಸುವ ಅರ್ಜಿಯನ್ನು ತಿಳಿಸಿ ಹೇಳಿದರೆ, ನಮ್ಮ

ಕಾರ್ಯವು ಮುಗಿಯಿತು, ಎಂದು ಗೊತ್ತುಪಡಿಸಿದರು. ಸಂಕಲ್ಪದಂತೆ ಸಭೆ ಜರುಗಿತು. ಟಿಳಕರು, ಮಲಬಾರಿ ಸೇಟರ ಸೂಚನೆಗಳನ್ನು ವಿವರಿಸಿ, ಅದರಿಂದಾಗುವ ಅನರ್ಥಗಳನ್ನೆಲ್ಲ ವರ್ಣಿಸಿ, ಜನಮತದ ವಿರುದ್ಧವಾಗಿ ಸರಕಾರವು ಕಾಯದೆಯನ್ನು ಹೇರಬಾರದೆಂದೂ ಇದಕ್ಕೆ ಒಪ್ಪಿಗೆ ಇದ್ದವರು ಅಂಕಿತಕೊಡಬೇಕೆಂದೂ ಹೇಳಿದರು. ಜೋಗಳೇಕರರು ಅರ್ಜಿಯನ್ನು ಓದಿ, ಸಭೆ ಮುಗಿಯಿತು ಎಂದು ಸಾರಿದರು. ಸುಧಾರಕರು ನಿರುಪಾಯರಾಗಿ ಹಿಂದಿರುಗಬೇಕಾಯಿತು.

ಈ ವಾದವು ಇಷ್ಟಕ್ಕೆ ಮುಗಿಯಲಿಲ್ಲ. ೧ ನೇ ನವ್ಹಂಬರ ದಿನ ಜೋಶಿ ಮಂದಿರದಲ್ಲಿ ಟಿಳಕರ ಉಪಸೂಚನೆಯ ವಿಷಯವಾಗಿ ಚರ್ಚಿಸಲು ಸಭೆ ಕರೆಯಲಾಯಿತು. ಇಬ್ಬರೂ ಬಿಚ್ಚು ಮನಸ್ಸಿನಿಂದ ಚರ್ಚಿಸುವದೇ ಇದರ ಉದ್ದೇಶವಿದ್ದಿತು. ಟಿಳಕರು ಮಾತನಾಡುತ್ತ "ಸುಧಾರಣೆಯ ಬಗೆಗೆ ನಮ್ಮ ಮಾತುಗಳು ಬಹಳವಾಗಿವೆ. ಯಾವ ಸುಧಾರಣೆ ಮಾಡಬೇಕೆಂಬ ಬಗ್ಗೆ ವಿಚಾರ ಮಾಡುವಾಗ ಜನತೆಯೇ ಅದಕ್ಕೆ ಮೂಲಾಧಾರವೆಂಬುದನ್ನು ಮರೆಯಕೂಡದು. ಜನತೆಯನ್ನು ಬಿಟ್ಟು, ಏನೂ ಮಾಡಲು ಬರುವದಿಲ್ಲ. ಪುನರ್ವಿವಾಹ ಮಾಡಬೇಕೆಂದು ಸುಧಾರಕರು ಎಷ್ಟೇ ಬಯಸಿದರೂ ಅವರ ಮನೆತನಗಳೇ ಅದಕ್ಕೆ ಒಪ್ಪುವದಿಲ್ಲ. ಆದುದರಿಂದ ಧೃಡವಿಶ್ವಾಸವಿದ್ದವರು ತಾವು ಆಚರಿಸಿ, ಜನರಿಗೆ ಮಾದರಿಯಾಗಬೇಕು. ಧರ್ಮಶಾಸ್ತ್ರದ ದೃಷ್ಟಿಯಿಂದ ಕಾರ್ಯಾಕಾರ್ಯದ ವಿಷಯದಲ್ಲಿ ಮೂರುವಿಧ. ವಿಧಿ, ವಿಕಲ್ಪ, ನಿಷೇಧವೆಂದು. ನಿಷಿದ್ಧವಿರುವವುಗಳನ್ನು ಮಾಡಲೇಕೂಡದು. ಇನ್ನು ವಿಕಲ್ಪವಿದ್ದ ಹಾಗೂ ಪ್ರಾಯಶ್ಚಿತ್ತವಿದ್ದವುಗಳನ್ನು ಮಾಡಿದರೆ, ಜಾತಿ ಭ್ರಷ್ಟತೆಯ ಪ್ರಶ್ನೆಯೇ ಇಲ್ಲ. ಧರ್ಮಶಾಸ್ತ್ರದ ಉಲ್ಲಂಘನೆಯೂ ಅಲ್ಲ. ಧರ್ಮಶಾಸ್ತ್ರದ ಉಲ್ಲಂಘನೆಯಾಗದಂತಹ, ನಾವು ಸಾಧಿಸಲು ಶಕ್ಯವಿದ್ದಂತಹ ಸುಧಾರಣೆಗಳನ್ನು ಕೈಕೊಳ್ಳಬೇಕು. ಅವುಗಳ ಬಗೆಗೆ ನಾವೇ ಬಂಧನ ಹಾಕಿಕೊಳ್ಳಬೇಕು. ಉದಾಹರಣೆಗಾಗಿ ಕನ್ನೆಯ ವಿವಾಹವನ್ನು ೧೬ ವರ್ಷದ ಒಳಗೆ ಮಾಡಕೂಡದೆಂಬ ನಿಯಮವನ್ನು ಒಪ್ಪಿದರೆ, ಇಂದಿನ ಕಾಯದೆಯ ಅವಶ್ಯಕತೆಯೇ ಇಲ್ಲ. ಋತುಮತಿಯಾದ ಬಗ್ಗೆ ಲಗ್ನದಲ್ಲಿ ಶಾಂತಿಯನ್ನು ಮಾಡಿದರೆ ಶಾಸ್ತ್ರವೂ ಅಡ್ಡ ಬರುವದಿಲ್ಲ:" ಎಂದು ತಮ್ಮ ವಿಚಾರಗಳನ್ನು ಮಂಡಿಸಿ

ದರು. ಆಗ ರಾನಡೆಯವರು ಸಂತುಷ್ಟರಾಗಿ ನಮ್ಮ ನಿಮ್ಮ ವಿಚಾರಗಳಲ್ಲಿ ಅಂತರವೇ ಇಲ್ಲವಲ್ಲವೆಂದು ಉದ್ಗಾರ ತೆಗೆದರು.

ಕೊನೆಗೆ ಸರಕಾರವು ೧೮೯೧ ರ ಜನೆವರಿಯ ೯ ನೇ ದಿವಸ ಕೌನ್ಸಿಲ್ಲಿನಲ್ಲಿ ಸಮ್ಮತಿ ವಯಸ್ಸಿನ ಕಾಯದೆ ಮಂಡಿಸಿತು. ಪಿ. ಕೋ. ೩೭೫ ನೇ ಕಲಮಿನಲ್ಲಿ ಬಲಜಬರಿ ಸಂಭೋಗದ ವಯೋ ಮರ್ಯಾದೆ ೧೦ ಇದ್ದುದನ್ನು ೧೨ ಮಾಡಿದೆ. ಇದು ಸ್ತ್ರೀಯರ ರಕ್ಷಣೆಯ ಸಲುವಾಗಿದೆಯೆಂದು ಸಾರಿತು. ೧೨ ವರ್ಷದ ಲಗ್ನವಾದ ಇಲ್ಲವೆ ಆಗದ ಸ್ತ್ರೀ ಸಂಬಂಧವು ಅಪರಾಧವೆಂದಂತಾಯಿತು. ರಮೇಶಚಂದ್ರ ಮಿತ್ರರು ಎಷ್ಟು ವಿರೋಧಿಸಿದರೂ ಕೇಳಲಿಲ್ಲ.

೨೦ನೇ ಜನೆವರಿಯ ಕೇಸರಿಯಲ್ಲಿ "೧೨ ವರ್ಷದ ವರೆಗೆ ಸಂಭೋಗ ಪ್ರತಿಬಂಧ ಮಾಡಿದರೆ, ಅದರ ಒಳಗಾಗಿ ಮೈ ನೆರೆದ ಸ್ತ್ರೀಯಳ ಶೋಭನ ಮಾಡುವದು ಕಾಯದೆಯ ವಿರುದ್ಧವಾಗುವದು. ಮೈ ನೆರೆದ ಇಷ್ಟು ದಿವಸಗಳೊಳಗೆ ಶೋಭನ ಮಾಡಬೇಕೆಂಬ ಧರ್ಮಾಚಾರಕ್ಕೆ, ಈ ಕಾಯದೆಯಿಂದ ವಿರೋಧವಾಗುವದೆಂಬುದು ಮೇಲೆಯೇ ಕಾಣುತ್ತದೆ." ಎಂದು ಸ್ಪಷ್ಟವಾಗಿ ನಿಷೇಧಿಸಿದರು. ಡಾ. ಭಂಡಾರಕರರಂಥ ವಿದ್ವಾಂಸರು ಇದು ಶಾಸ್ತ್ರಸಮ್ಮತವೆಂದರು. ಆದರೆ ಭಂಡಾರಕರರಂಥವರಿಗೆ ಸಪ್ರಮಾಣವಾಗಿ, ಸಶಾಸ್ತ್ರವಾಗಿ ಉತ್ತರ ಕೊಡುವದು ಸುಲಭವಿರಲಿಲ್ಲ. ಈ ಕಾರ್ಯದಲ್ಲಿಯೇ ಟಿಳಕರ ಸೂಕ್ಷ್ಮಬುದ್ಧಿ, ಶಾಸ್ತ್ರೀಯ ವಾದವಿವಾದದ ಕೌಶಲ್ಯಗಳು ಹೊರಬಿದ್ದವು.

ಭಂಡಾರಕರರು ಹಿರಿಯರು. ತಂದೆಯ ಗೆಳೆಯರು. ಧರ್ಮಬುದ್ಧಿಯುಳ್ಳವರು. ಟಿಳಕರ ಪ್ರೀತ್ಯಾದರಗಳಿಗೆ ಪಾತ್ರರಾದವರು, ಇದ್ದುದರಿಂದ ಅವರ ಮೇಲೆ ಕೈಯೆತ್ತಲು ಮನಸ್ಸು ಹಿಂಜರಿಯುತ್ತಿತ್ತು. ಆದರೆ ಆತತಾಯಿಗಳನ್ನು ಹೊಡೆಯಲೇಬೇಕೆಂಬ ಮನುವಾಜ್ಞೆಯು ಕರ್ತವ್ಯವನ್ನು ಸೂಚಿಸುತ್ತಿದ್ದಿತು. ಆದುದರಿಂದ ಭಂಢಾರಕರರನ್ನು ಈ ವಾದದಲ್ಲಿ ಕೆಡವುವುದು ಧರ್ಮವೆಂದು ಬಗೆದರು.

ಭಂಡಾರಕರರ ಮೊದಲನೆಯ ಮಾತು ವಿವಾಹದ ಕಾಲದ ಬಗೆಗಿದ್ದಿತು. "ಸೂತ್ರಕಾಲದ ಪೂರ್ವದಲ್ಲಿ ಪ್ರೌಢವಿವಾಹವಿದ್ದರೂ, ಸೂತ್ರಕಾಲದಿಂದ ವಯೋ ಮರ್ಯಾದೆಯು ಸಂಕುಚಿತವಾಗುತ್ತ ಬಂದಿತು. ಮೈ ನೆರೆದ

ಮೂರು ವರ್ಷಗಳವರೆಗೆ ತಂದೆಯು ಲಗ್ನ ಮಾಡಿಕೊಡದಿದ್ದರೆ. ಕನ್ಯೆಯು, ತಾನೇ ಪತಿಯನ್ನು ಆರಿಸಿಕೊಳ್ಳಬಹುದು ಎಂಬುದರ ಅರ್ಥ, ಮೈ ನೆರೆಯುವ ಮೊದಲು ಲಗ್ನವಾಗುತ್ತಿದ್ದಿಲ್ಲ, ಇಲ್ಲವೆ ಮಾಡಬಾರದು ಎಂದು ಆಗುವದಿಲ್ಲ. ೧೨ ಇಲ್ಲವೆ ೮ ವರ್ಷಕ್ಕೆ ಮದುವೆಯಾಗುವ ಕನ್ಯೆಗೆ ಎಷ್ಟು ವರ್ಷದ ವರನಿರಬೇಕೆಂದು ಹೇಳುವ ಮನುವಚನದಿಂದ, ಆ ವಯಸ್ಸಿನಲ್ಲಿ ಮದುವೆಯಾಗುತ್ತಿತ್ತೆಂಬುದು ಸಿದ್ಧವಾಗುತ್ತದೆ. ಯೋಗ್ಯ ವರನು ದೊರೆಯದಿದ್ದರೆ ಕನ್ಯೆಯು ಅವಿವಾಹಿತಳಾಗಿ ಉಳಿಯಬಹುದು, ಎಂದು ಶಾಸ್ತ್ರವು ಹೇಳಿದಾಕ್ಷಣಕ್ಕೆ ಯೋಗ್ಯ ವರ ದೊರೆತರೆ ೮ ವರ್ಷಕ್ಕೆ ಲಗ್ನವಾಗಬಾರದೆಂದು ಶಾಸ್ತ್ರವು ಪ್ರತಿಬಂಧಿಸಿದಂತಾಗಲಿಲ್ಲ" ಎಂದು ಯುಕ್ತಿವಾದವನ್ನು ಟಿಳಕರು ಹೂಡಿದರು.

ಎರಡನೆಯ ವಿಷಯವೆಂದರೆ, ಗರ್ಭಾದಾನದ ಕಾಲ. ಈ ವಿಷಯದಲ್ಲಿ ಟಿಳಕರು ಭಂಡಾರಕರರಿಗಿಂತಲೂ ವಿಜ್ಞಾನೇಶ್ವರಾದಿ ನಿಬಂಧಕಾರರಿಗೆ ಹೆಚ್ಚಿನ ಪ್ರಾಮಾಣ್ಯ ಕೊಡಬೇಕಾಗುವದೆಂದರು. ಭಂಡಾರಕರರು ಗೃಹ್ಯಸೂತ್ರದ ಮೇಲೆ ಕೈಯೂರಿದ್ದರು. ಆದರೆ ಪರಿಶಿಷ್ಟ ವಾಕ್ಯದ ಅರ್ಥ ಮಾಡುವದರಲ್ಲಿಯೇ ಅವರ ಕಾಲು ಜಾರಿದ್ದಿತು. ಏಕೆಂದರೆ ಸಂಸ್ಕಾರ ಹಾಗೂ ಅದರ ಸಂಬಂಧದ ಹೋಮ ಎರಡೂ ಏಕ ಕಾಲಕ್ಕೆ ನಡೆಯಬೇಕು. ಆದರೆ ಭಂಡಾರಕರರು ಪ್ರಜಾಪತ್ಯ ಹೋಮ, ಹಾಗೂ ಗರ್ಭಾದಾನವು ಇವೆರಡೂ ಬೇರೆಯೆಂದು ತಿಳಿಯುಲು ಬರುವದು ಎನ್ನುತ್ತಿದ್ದರು. ಗರ್ಭಾದಾನವು ಪ್ರಥಮ ಋತುಕಾಲದಲ್ಲಿಯೇ ಆಗಬೇಕು. ಋತು ೧೨ ವರ್ಷದ ಮೊದಲೇ ಆಗುವ ಸಂಭವವು ಇದೆ ಎಂದು ಬಿಲ್ಲು ತರುವವರೇ ಒಪ್ಪಿಕೊಂಡ ಮೂಲಕ, ೧೨ ವರ್ಷದ ಮೊದಲೇ ಗರ್ಭಾದಾನ ಸಂಸ್ಕಾರ ಮಾಡಬೇಕಾಗುವದು. ಅದು ಹೊಸ ಕಾಯದೆಯಂತೆ ಅಪರಾಧವಾಗುವದು. ಆದುದರಿಂದ ವಿಶಿಷ್ಟ ಧರ್ಮವಿಧಿಯು ಅಪರಾಧವೆಂದಾದರೆ, ಕಾಯದೆಯು ಧರ್ಮದಲ್ಲಿ ಕೈ ಹಾಕಿದಂತಾಗುತ್ತದೆ ಎಂದು ಟಿಳಕರ ಉತ್ತರವಿದ್ದಿತು. '೧೨ ವರ್ಷದೊಳಗೆ ಮೈ ನೆರೆಯುವದು ವಿರಳವಿದ್ದರೂ ಆ ಕಾಲಕ್ಕೆ ಗರ್ಭಾದಾನ ಮಾಡುವ ಶಾಸ್ತ್ರಾಜ್ಞೆಯಿದ್ದ ಮೂಲಕ, ಶಾಸ್ತ್ರವಾದರೂ ಅಪರಾಧಿಯಾಗಬೇಕು, ಇಲ್ಲವೆ ಕಾಯದೆಯಾದರೂ ಆಗಬೇಕು. ಅರ್ಥಾತ್ ಶಾಸ್ತ್ರಕ್ಕೆ ಮರ್ಯಾದೆಯನ್ನು

ಕೊಡಲೇಬೇಕು. ಆಗ ಕಾಯದೆಯು ಅನ್ಯಾಯದ್ದೆಂದು ನಿರ್ಣಯವಾಗು ವದು' ಎಂದು ಉತ್ತರಿಸಿದರು.

ಟಿಳಕರು ಬಹಿರಂಗವಾಗಿಯೇ ಬಿಲ್ಲಿನ ವಿರುದ್ಧವಾಗಿ, ತಮ್ಮ ಮತ ವನ್ನು ಪ್ರಸಿದ್ಧಿಸಿದ ಕೂಡಲೇ ಎಲ್ಲ ಕಡೆಗೂ ಆಂದೋಲನವೇ ಪ್ರಾರಂಭ ವಾಯಿತು. ಮುಂಬಯಿ, ನಾಗಪೂರ, ಬಂಗಾಲ, ಪಂಜಾಬಗಳಲ್ಲಿಯೂ ಕೂಡ ನಿಷೇಧಪರ ಸಭೆಗಳಾದವು. ಟಿಳಕರು ತಮ್ಮ ಕೈವಾರಿಗಳಿಂದು ಎಲ್ಲೆಲ್ಲಿಯೂ ದೇಶದಾದ್ಯಂತ ಸನಾತನಿಗಳ ಸಭೆಗಳಾದವು.

ಈ ವಿರೋಧದ ವಾತಾವರಣವನ್ನು ಕಂಡು, ಸುಧಾರಕರು ಸಭೆ ಗೂಡಿಸಲು ಯತ್ನಿಸಿದರು. ಪುಣೆಯ ಕ್ರೀಡಾಭವನದಲ್ಲಿ ಸಭೆಗರೆದರು. ಸಭೆಗೆ ೧೦೦ ಜನರು ಕೂಡ ಬರಲಿಲ್ಲ. ಹೊರಗಡೆ ಜನಜಂಗುಳಿಯು ನೆರೆದು, ಒಳಗೆ ಬಿಡಲು ಕೇಳಹತ್ತಿದರು. ಬಿಡಲಿಲ್ಲವಾದ್ದರಿಂದ ಕೊನೆಗೆ ಅದು ದಂಗೆಯಲ್ಲಿ ಪರಿಣಮಿಸಿ, ಸಭೆ ಮುಗಿಯಿತು. ಹೀಗೆ ಮುಂಬಯಿಯಲ್ಲಿಯೂ ಅವರ ಪ್ರಯತ್ನಗಳು ವಿಫಲವಾದವು.

ಮುಂಬಯಿಯಲ್ಲಿ ಒಂದು ಪ್ರಚಂಡವಾದ ಸಭೆ ಜರುಗಿತು. ಹಿಂದೂ ಮುಸಲ್ಮಾನರ ಈ ಸಭೆಯು ಅಪೂರ್ವವಾಗಿದ್ದಿತು. ಸರಕಾರವನ್ನು ನಿಷೇಧಿ ಸಿತು. ಈ ಬಗೆಯಾಗಿ ಜನರ ಅಸಂತೋಷವು ಹೊರಬಿದ್ದರೂ ಸರಕಾರವು ಅದನ್ನು ಗಮನಿಸದೆ, ೧೯ ನೇ ಮಾರ್ಚಕ್ಕೆ ಅದನ್ನು ಪಾಸುಮಾಡಿತು.

ಮೇ ತಿಂಗಳಲ್ಲಿ ನೆರೆದ ಪ್ರಾಂತಿಕ ಪರಿಷತ್ತಿನಲ್ಲಿ "ಸಮ್ಮತಿ ವಯಸ್ಸಿನ ಬಿಲ್ಲಿನ ವಿಷಯದಲ್ಲಿ ಪ್ರಕಟವಾದ ಜನಾಭಿಪ್ರಾಯವು ಸರಕಾರಕ್ಕೆ ರುಚಿಸ ದಿರುವದು ವಿಷಾದದ ಸಂಗತಿಯಾಗಿದೆ" ಎಂಬ ಗೊತ್ತುವಳಿಯನ್ನು ಮಂಡಿಸಿ ದರು. ರಾಜಕೀಯ ಪ್ರಗತಿಯ ದೃಷ್ಟಿಯಿಂದ ಈ ಸಂಗತಿಯು ಒಳಿತಾಗಲಿಲ್ಲ ವೆಂಬ ಉದ್ಗಾರಗಳನ್ನು ತೆಗೆದರು.

ಈ ಪ್ರಕರಣದಲ್ಲಿ ಟಿಳಕರು ಸನಾತನಿಗಳ ಬೆಂಬಲವನ್ನು ಸಂಪಾದಿಸಿ ದರು. ಅವರ ಬುದ್ಧಿ ಸಾಮರ್ಥ್ಯವು ಪ್ರಕಟವಾಯಿತು. ಅವರು ಇದರಿಂದ ಅಂತರ ಪ್ರಾಂತೀಯ ಮುಖಂಡರಾದರು.

———

# ಸಕ್ಕಾರ ಪ್ರಾಯಶ್ಚಿತ್ತ

ಕಾಲಮಾನಕ್ಕೆ ಅನುಸರಿಸಿ ಧರ್ಮಾವಿರೋಧಿ ಸುಧಾರಣೆಗಳನ್ನು ಕೈಕೊಳ್ಳುವ, ಧರ್ಮವಿರೋಧಿ ರೂಢಿಗಳನ್ನು ಬದಲಿಸುವ, ಜ್ಞಾನ ಪ್ರಸಾರ ದಿಂದಲೇ ಸುಧಾರಣೆಗಳನ್ನು ಸಾಧಿಸಬೇಕೆನ್ನುವ ಟಿಳಕರ ಈ ಧೋರಣೆಯು ಎಲ್ಲ ಅತಿವಾದಿಗಳನ್ನು ಸಿಟ್ಟಿಗೆಬ್ಬಿಸಿತು. ಸುಧಾರಕರೆನ್ನಬೇಕೆ ? ಸುಧಾರಕರ ಸ್ವೇಚ್ಛಾಚಾರಗಳನ್ನು ಖಂಡಿಸಿ,ಧರ್ಮಾಭಿಮಾನದಿಂದ ಪ್ರೇರಿತರಾಗಿ ಸುಧಾರ ಣೆಯ ಕಾಯಿದೆಗಳ ವಿರುದ್ಧವಾಗಿ ಬಂಡುಹೂಡುತ್ತಿದ್ದರು. ಸನಾತನಿಗಳೆನ್ನ ಬೇಕೆ? ಧರ್ಮಶಾಸ್ತ್ರದ ವಿರುದ್ಧವಿರುವ ರೂಢಿಗಳೊಡನೆ ಹೋರಾಡುತ್ತಿ ದ್ದರು. ಹೀಗಾಗಿ ಸುಧಾರಕ ಸನಾತನಿಗಳಿಬ್ಬರಿಗೂ ವಾಳಿಯಾಗಿದ್ದರು. ಇಬ್ಬರೂ ಇವರನ್ನು ವಕ್ರದೃಷ್ಟಿಯಿಂದ ನೋಡುತ್ತಿದ್ದರು. ಈ ಎರಡೂ ಪಕ್ಷಗಳಿಂದ ರಕ್ಷಿಸಿಕೊಳ್ಳಲು ಟಿಳಕರು ಎರಡೂ ಕಡೆಗೆ ಮೊನೆಯಿರುವ ಕತ್ತಿಯಿಂದ ಸದಾ ಸಿದ್ಧರಾಗಿರುತ್ತಿದ್ದರು. ಅವರ ಈ ಬುದ್ಧಿಯ ವಿಲಾಸ ವನ್ನು ಹೊರಗೆಡುವುವ ಒಂದು ಪ್ರಸಂಗ ಒದಗಿತು. ಅದೇ ಗ್ರಾಮಣ್ಯ ಪ್ರಕರಣವು.

ಗೋಪಾಳರಾವ ಜೋಶಿ ಎಂಬೊಬ್ಬ ಉಲುಕೋಚಿ ಗೃಹಸ್ಥನಿದ್ದನು. ಅವನ ಶಿಕ್ಷಣವು ಅಷ್ಟಕ್ಕಷ್ಟೇ! ಅವನು ಪತ್ನಿ ಪ್ರಖ್ಯಾತ. ತನ್ನ ಹೆಂಡತಿ ಯನ್ನು ಅಮೇರಿಕೆಗೆ ಶಿಕ್ಷಣಕ್ಕೆ ಕಳಿಸಿ, ದೊಡ್ಡ ಸುಧಾರಕನೆಂದು ಹೆಸರಾ ದವ. ಇದೇ ಅವನ ಬಂಡವಲು. ಧರ್ಮವೆಂದರೆ, ಅದೊಂದು ಚೇಷ್ಟೆಯ ವಿಷಯವೆಂದು ಅವನ ಭಾವನೆ. ಇದನ್ನು ಸಿದ್ಧಪಡಿಸುವದಕ್ಕಾಗಿ ಈ ವಿಚಿತ್ರಮೂರ್ತಿಯು, ನಾಲ್ಕು ಜನರ ಸಮಕ್ಷಮ ಕ್ರೈಸ್ತ ಧರ್ಮವನ್ನು ಸ್ವೀಕರಿಸಿದನು. ಅದರಲ್ಲಿ ಏನೂ ಹುರುಳಿಲ್ಲವೆಂದು ತೋರಿಸುವದಕ್ಕಾಗಿ ಮರುದಿನವೇ ಗಂಧಾಕ್ಷತೆಗಳನ್ನು ಹಚ್ಚಿಕೊಂಡು ತಿರುಗಾಡಹತ್ತಿದನು.

ಇಂತಹ ವಿಲಕ್ಷಣ ಪುರುಷನ ತಲೆಯಲ್ಲಿ ಸುಧಾರಕರನ್ನು ಫಜೀತಿ ಮಾಡುವ ಒಂದು ವಿಚಿತ್ರ ಕಲ್ಪನೆಯು ಹೊಳೆಯಿತು ಅದರಲ್ಲಿ ಅವನು

ಯಶಸ್ವಿಯೂ ಆದ. ಆದರೆ ಅದರ ಪರಿಣಾಮಗಳು ಮಾತ್ರ ಸಮಾಜದಲ್ಲಿ ಹಾಹಾಕಾರವನ್ನುಂಟುಮಾಡಿದವು. ಅವನು ಮಿಶನರಿಗಳಲ್ಲಿ ಹೋಗಿ ಬರುವದು ಬಹಳ. ಮಿಶನ್ ಹಾಯಸ್ಕೂಲಿನ ಮುಖ್ಯ ಶಿಕ್ಷಕರಾದ ರೆವ್ಹರೆಂಡ ರೆವ್ಹಿಂಗಟನ್ ಮತ್ತು ಒಬ್ಬ ಧರ್ಮೋಪದೇಶಕಳನ್ನು ಹಿಡಿದು, ಅವರಿಂದ ಊರಲ್ಲಿಯ ಪ್ರಮುಖರಿಗೆಲ್ಲ ವ್ಯಾಖ್ಯಾನಕ್ಕೆ ಆಮಂತ್ರಣ ಕೊಡಿಸಿದ. ಸುಧಾರಣೆಗಳ ವಿಷಯದಲ್ಲಿ ಮುಖಂಡರಾಗಿ ಹೋರಾಡುತ್ತಿದ್ದ, ರಾ. ರಾ. ರಾನಡೆ ಧರ್ಮಾಭಿಮಾನಿ ಟಿಳಕರು ಆಮಂತ್ರಿತರಾಗಿದ್ದರು. ಮಿಶನ್‌ಕಂಪಾಂಡಿನಲ್ಲಿ ಹೋಗುವದು ಪಾಪವೆಂದು ತಿಳಿಯದಂತಹವರಿಗೆಲ್ಲ ಆಮಂತ್ರಣವಿದ್ದಿತು. ಗೋಪಾಳರಾಯನ ಈ ಕಪಟ ನಾಟಕದ ಸುಳಿವು ಯಾರಿಗೂ ಹತ್ತಿರಲಿಲ್ಲ.

ವ್ಯಾಖ್ಯಾನದ ಕಾರ್ಯಕ್ರಮ ಯಥಾ ತಥಾ ನಡೆಯಿತು. ಗೋಪಾಳರಾಯನ ಯೋಜನೆಯಲ್ಲಿ ವ್ಯಾಖ್ಯಾನಕ್ಕೆ ಮಹತ್ವವಿರದೆ, ಸುಧಾರಕರನ್ನು ಪೇಚಿನಲ್ಲಿ ತರುವುದೇ ಮುಖ್ಯ ಉದ್ದೇಶವಿದ್ದಿತು. ವ್ಯಾಖ್ಯಾನ ಮುಗಿಯುವಷ್ಟರಲ್ಲಿಯೇ ಎಲ್ಲರ ಮುಂದೆ ಚಹಾ, ಬಿಸ್ಕಿಟುಗಳು ಬಂದವು. ಇದರ ಕಲ್ಪನೆಯು ಯಾರಿಗೂ ಇರಲಿಲ್ಲ. ಚಹ ತೆಗೆದುಕೊಳ್ಳುವ ಇಚ್ಛೆಯು ಯಾರಿಗೂ ಇರದಿದ್ದರೂ ಬೇಡವೆಂದು ಹೇಳುವ ಧೈರ್ಯವು ಮಾತ್ರ ಯಾರಿಗೂ ಆಗಲಿಲ್ಲ. ಕ್ರಿಸ್ತೀ ಜನರ ಕೈಯಿಂದ ಚಹ ತೆಗೆದುಕೊಂಡರೆ, ಜಾತಿ ಕೆಟ್ಟಿತೆಂದು ಸನಾತನಿಗಳು ತಿಳಿಯುತ್ತಿದ್ದಂತೆ, ಎದುರಿಗಿಟ್ಟ ಪದಾರ್ಥಗಳನ್ನು ಸ್ವೀಕರಿಸದಿರುವದು, ಶಿಷ್ಟಸಂಪ್ರಾದಯದ ವಿರುದ್ಧವೆಂದು ಕ್ರಿಸ್ತೀಯರು ತಿಳಿಯುತ್ತಿದ್ದರು. ಈ ಉಭಯ ಸಂಕಟದಲ್ಲಿ ಜನ ಬಿದ್ದಿತು. ಕೆಲವರು ಕೈಮುಟ್ಟದರು. ಕೆಲವರು ಕುಡಿದರು. ಕೆಲವರು ನಸುನಗುತ್ತ ಮುಂದೆ ಸರಿಸಿದರು. ಕಳ್ಳನಾದ ಗೋಪಾಳರಾಯನು ಇದನ್ನೆಲ್ಲ ನೋಡುತ್ತ ಏನೂ ಅರಿಯದವನಂತೆ ಶಾಂತವಾಗಿ ನಿಂತಿದ್ದನು. ಇದರಲ್ಲಿ ಗೋಪಾಳರಾಯನ ಅಂಗವಿದೆಯೆಂದು ಮೊದಲಿಗೆ ಗೊತ್ತಾಗಿದ್ದರೆ, ಟಿಳಕರು ಇದರ ಸಮೀಪಕ್ಕೂ ಹಾಯುತ್ತಿರಲಿಲ್ಲ ಮತ್ತು ಯಾರನ್ನೂ ಹಾಯಗೊಡುತ್ತಿದ್ದಿಲ್ಲ.

ಗೋಪಾಳರಾಯನ ಬಲೆಯಲ್ಲಿ ಎಲ್ಲರೂ ಬಿದ್ದರು. ಅವನಿಗೆ ಪರಮಾನಂದವಾಯಿತು. ಆವನು ಕೂಡಲೇ ಸನಾತನಿಗಳ ಕಡೆಗೆ ಓಡಿದ.

ಸನಾತನಿಗಳ ಮುಖ ಪತ್ರವಾದ 'ಪುಣೆಯ ವೈಭವ'ವು ಹೆದೆಯನ್ನು ಏರಿಸಿ ಸಿದ್ಧವಾಗಿಯೇ ಇದ್ದಿತು ಗೋಪಾಳರಾಯನಿಗೆ ಉಪನ್ಯಾಸಗಳ ಸುದ್ದಿಯನ್ನು ಕೊಡುವದಕ್ಕಿಂತ, ಮಿಶನರಿ ಜನರಕೈಯಿಂದ ಇಂತಿಂಥವರು ಚಹನನ್ನು ಕುಡಿದರು ಎಂಬುದನ್ನು ಪ್ರಕಟಿಸಿ, ಕೊಳ್ಳಿಕೊಟ್ಟು ಮೋಜು ನೋಡುವದಿದ್ದಿತು. ಸಭೆಗೆ ಬಂದವರೊಡನೆ ಬಾರದಿದ್ದವರ ಹೆಸರನ್ನೂ ಕೊಟ್ಟನು. ಅವನ ಕೆಲಸ ಮುಗಿಯಿತು. ಬೆಂಕಿಹತ್ತಿತು. ಕೋಲಾಹಲವೆದ್ದಿತು. ಟಿಳಕರು ತಮ್ಮ ಕೈಗೆ ಸಿಕ್ಕರೆಂದು ಕಟ್ಟಾ ಸನಾತನಿಗಳು ಶಸ್ತ್ರಗಳನ್ನು ಹಿರಿದರು. ಎದುರಾಳಿಗಳಾಗಿ ಹೋರಾಡುತ್ತಿದ್ದ ರಾನಡೆ, ಟಿಳಕರಿಬ್ಬರೂ ಪ್ರತಿವಾದಿಗಳಾಗಿ ಒಂದೇ ಮಾಲೆಯಲ್ಲಿಯ ಮಣಿಗಳಾದರು.

ಮಿಶನರಿಗಳಿಂದ ಚಹಾ ಕುಡಿದವರ ಹೆಸರುಗಳನ್ನು 'ಪುಣೆಯ ವೈಭವ'ವು ಪ್ರಕಟಿಸಿ, 'ಸನಾತನಿಗಳಲ್ಲಿ ಏನಾದರೂ ನೀರು ಇದ್ದರೆ, ಈಗ ತೋರಿಸಿರಿ' ಎಂದು ಆವ್ಹಾನಿಸಿತು. ಇದರಿಂದ ಈ ಪ್ರಶ್ನೆಯನ್ನು ದುರ್ಲಕ್ಷಿಸಲು ಕಠಿಣವಾಯಿತು. ಸನಾತನಿಗಳು ಈ ಪ್ರಶ್ನೆಯನ್ನು ಧರ್ಮಗುರುಗಳಾದ ಶಂಕರಾಚಾರ್ಯರ ಕಡೆಗೆ ಒಯ್ಯುವ ನಿಶ್ಚಯಮಾಡಿದರು. ಇಷ್ಟರಲ್ಲಿ 'ಪುಣೆಯ ವೈಭವ'ವು ಕೆಲವು ಸುಳ್ಳುಹೆಸರುಗಳನ್ನು ಪ್ರಸಿದ್ಧಿಸಿದೆ ಎಂದು ಕೆಲವರು ಅದರಮೇಲೆ ಮಾನ ಹಾನಿಯ ಖಟ್ಲೆಯನ್ನು ಹಾಕಿದರು. ಅದರಲ್ಲಿ ೨೦೦ ರೂಪಾಯಿಗಳ ದಂಡವೂ ಅದಕ್ಕೆ ಆಯಿತು. ಆದರೆ ಹೋಗಿ ಚಹಾ ಕುಡಿದವರ ಬಗ್ಗೆ ಶಂಕರಾಚಾರ್ಯರ ಹೊರತು ನಿರ್ಣಯ ಕೊಡುವವರಾರು ? ಶ್ರೀ ಶಂಕರಾಚಾರ್ಯರು ನ್ಯಾಯನಿರ್ಣಯಕ್ಕಾಗಿ ವೆಂಕಟಶಾಸ್ತ್ರಿ ನಿಪ್ಪಾಣಿಕರ, ನ್ಯಾಯಗುರು ಬಿಂದುಮಾಧವಶಾಸ್ತ್ರಿ ಎಂಬ ಧರ್ಮ ಸರ್ವಾಧಿಕಾರಿಗಳನ್ನು ಕಳಿಸಿಕೊಟ್ಟರು. ಇದನ್ನು ಕಂಡು ಸನಾತನಿಗಳಿಗೆ ಆನಂದವಾಯಿತು. ಆರೋಪಿಗಳು ಕೂಡ ಈ ವಿಚಾರಣೆಗೆ ಒಪ್ಪಿಕೊಂಡರು.

ನಿಜವಾಗಿ ವಿಚಾರಮಾಡಿದರೆ, ಜನತೆಯು ಧರ್ಮಕ್ಕೆ ಮನ್ನಣೆ ಕೊಟ್ಟದ್ದನ್ನು ನೋಡಿ, ಸಂತೋಷಬಟ್ಟು ಸಾಮಾನ್ಯ ಪ್ರಾಯಶ್ಚಿತ್ತದಿಂದ ಈ ಪ್ರಕರಣವನ್ನು ಮುಗಿಸಬಹುದಿತ್ತು. ಆದರೆ ಸನಾತನಿಗಳ ಮುಂದಾಳುಗಳಾದ ಬಾಳಾಸಾಹೇಬ ನಾತು ಎಂಬುವವರು ಶಾಸ್ತ್ರಾರ್ಥದ ವಿಚಾರವಾಗಲೇಬೇಕೆಂದು ಹಟಹಿಡಿದರು. ಪ್ರತಿವಾದಿಗಳು ಬುದ್ಧಿಪೂರ್ವಕವಾಗಿ

ಜಾತಿಗಳನ್ನು ಮುರಿಯಬೇಕೆಂದು ಚಹಕುಡಿದ ಮೂಲಕ, ಅದಕ್ಕೆ ಪ್ರಾಯಶ್ಚಿತ್ತ, ಅರ್ಥಾತ್ ಆಜನ್ಮ ಅವರು ಬಹಿಷ್ಕೃತರಾಗಿ ಉಳಿಯಬೇಕೆಂಬ ಪೈಶಾಚಿಕ ಮಹತ್ವಾಕಾಂಕ್ಷೆಯುಳ್ಳವರಾಗಿದ್ದರು. ಆದರೆ ಪ್ರತಿವಾದಿಗಳಲ್ಲಿ ಟಿಳಕ, ರಾನಡೆಯವರಂತಹ ಮೇಧಾವಿಗಳಿರುವರೆಂಬುದನ್ನು ಅವರು ಮರೆತಿದ್ದರು.

ವಿಚಾರಣೆಗೆ ಪ್ರಾರಂಭವಾಯಿತು. ಜಾತಿಯನ್ನು ಮುರಿಯುವದರ ಸಲುವಾಗಿಯೇ ೪೨ ಜನರು ಚಹ ಕುಡಿಯಲು ಹೋಗಿದ್ದರು ಎಂದು ಸಿದ್ಧಪಡಿಸಲು ವಾದಿಗಳ ಹತ್ತರ ಪುರಾವೆಗಳೇ ಇರಲಿಲ್ಲ. ವೃತ್ತಪತ್ರಗಳಲ್ಲಿ ಅಲ್ಲಲ್ಲಿ ಬಂದ ಸುದ್ದಿಗಳು ಹೇಗೆ ಗ್ರಾಹ್ಯವಾಗಬೇಕು ? ರೇವ್ಹಿಂಗಟನ್ ಸಾಹೇಬನು ಸಾಕ್ಷಿಗೆ ಬರಲು ನಿರಾಕರಿಸಿದನು. ಗೋಪಾಳರಾಯರನ್ನು ಸಾಕ್ಷಿಗೆ ಕರೆಯಲು ಅವರಿಗೇ ಧೈರ್ಯವಾಗಲಿಲ್ಲ. ತಮಗೆ ಏನು ಬೇಕೋ ಅದೆಲ್ಲ, ಅರ್ಜಿಯಲ್ಲಿದೆ ಎಂದು ಹೇಳಿ ವಾದಿಗಳು ಬಾಯಿ ಮುಚ್ಚಬೇಕಾಯಿತು. ಎರಡನೆ ಮಾತೆಂದರೆ, ಇದಕ್ಕೆ ಪ್ರಾಯಶ್ಚಿತ್ತವೇ ಇಲ್ಲವೆಂಬುದಕ್ಕೆ ಆಧಾರಗಳನ್ನು ತೋರಿಸಿರಿ ಎಂದೊಡನೆ, ಮೇಲಿನಂತೆಯೇ ಉತ್ತರ ಕೊಟ್ಟರು. ಮೊದಮೊದಲು ಶಾಸ್ತ್ರದ ಜಂಬ ಕೊಚ್ಚುವ ಭಟ್ಟರು,ಟಿಳಕರು ಧರ್ಮಗ್ರಂಥಗಳ ರಾಶಿಯನ್ನೊಟ್ಟಿ, ಶಡ್ಡು ಹೊಡೆದು ವಾದಕ್ಕೆ ನಿಲ್ಲಲು,ಅವರು ಶಾಸ್ತ್ರಾಧಾರ ಕಾಣದೆ ನಿರುತ್ತರರಾದರು. ಪಂಚರು ಬೇಕಾದ ನಿರ್ಣಯ ಕೊಡಲಿ, ಕೊನೆಗೆ ಊರಲ್ಲಿ ಹರಿಯುವ ಗಂಗೆಯು ಯಾರನ್ನು ಪುನೀತ ಮಾಡುವಳೋ ಅವರಷ್ಟೇ ಪುನೀತರು ಎಂದು ಸನಾತನಿಗಳು ಹುಯಿಲು ಎಬ್ಬಿಸಿದರು. ನಮ್ಮಂತೆಯೇ ನಿರ್ಣಯಕೊಡಬೇಕೆಂದು ಶ್ರೀಗಳವರ ಕಡೆಗೆ ಶಿಷ್ಟ ಮಂಡಲ ಒಯ್ಯಬೇಕೆಂದು ನಿರ್ಣಯಿಸಿದರು. ನಮ್ಮ ಪೂರ್ವಜರು ಪರಕೀಯರ ಕೈಯಿಂದ ಚಹಾವನ್ನೇ ಕುಡಿಯುತ್ತಿದ್ದಿಲ್ಲವೆಂದ ಮೇಲೆ, ಧರ್ಮಗ್ರಂಥಗಳಲ್ಲಿ ಇಂತಹ ಅಪರಾಧಕ್ಕೆ ಪ್ರಾಯಶ್ಚಿತ್ತ ಹೇಗೆ ದೊರೆಯಬೇಕು ? ಎಂದು ವಾದಿಗಳು ಹೇಳಿದರೆ, ಶಾಸ್ತ್ರದಲ್ಲಿ ಯಾವುದಕ್ಕೆ ಪ್ರಾಯಶ್ಚಿತ್ತವಿಲ್ಲವೋ ಅದು ಅಪರಾಧವೇ ಅಲ್ಲವೆಂದು ಟಿಳಕರು ಉತ್ತರಿಸಿದರು.

ಇದೇ ಕಾಲಕ್ಕೆ ಶ್ರೀ ಭೀಮಾಚಾರ್ಯ ಝಳಕೀಕರ ಶಾಸ್ತ್ರಿಗಳು ಬ್ರಾಹ್ಮಣೇತರರ ಕೈಯಿಂದ ಅನ್ನಗ್ರಹಣದ ಪ್ರಸಂಗ ಘಟಿಸಿದರೆ, ಅದಕ್ಕೆ

ಪ್ರಾಯಶ್ಚಿತ್ತವಿರುವ ವಚನಗಳನ್ನು ಪ್ರಸಿದ್ಧಿಸಿದರು. ಒಂದು ವಚನದಲ್ಲಿ ಯಂತೂ ನೀರು, ಹಾಲು, ಮೊಸರು, ಚುರುಮುರಿ, ಹುರಿದ ಕಡಲೆ ಮೊದಲಾದವುಗಳನ್ನು ತೆಗೆದುಕೊಳ್ಳಬಹುದೆಂದು ಸ್ಪಷ್ಟವಾಗಿದ್ದಿತು. ಆದರೆ ಇದು ನಾತು ಪ್ರಭೃತಿಗಳಿಗೆ ಮಾನ್ಯವಾಗುವ ಬಗೆ ಹೇಗೆ? ಟಿಳಕ ಮೊದಲಾದ ಮುಖಂಡರ ಸಕ್ಷ್ಸಾರ ಪ್ರಾಯಶ್ಚಿತ್ತ ಮಾಡಿಸದಿದ್ದರೆ ತಾವು ಸನಾತನಿಗಳೇ ಅಲ್ಲವೆಂದು ಪ್ರತಿಜ್ಞೆಗೈದ ಜನಕ್ಕೆ ಈ ವಚನಗಳಿಂದ ಹೇಗೆ ಸಮಾಧಾನವಾಗಬೇಕು? ಟಿಳಕರ ಮೀಸೆಯು ಮೇಲೆ ಅವರ ಕಣ್ಣಿದ್ದಿತು.

ಟಿಳಕರು ಈ ರೀತಿಯಾಗಿ, ವಾದಿಗಳನ್ನು ನಿರುತ್ತರರನ್ನಾಗಿ ಮಾಡಿ, ಈ ಪ್ರಾಯಶ್ಚಿತ್ತದ ಬಗೆಗೆ ಜನರಿಗೆ ಯೋಗ್ಯ ತಿಳುವಳಿಕೆ ಮಾಡಿಕೊಡುವ ದಕ್ಕೋಸ್ಕರ ಕೇಸರಿಯ ಎರಡು ಮೂರು ಸಂಚಿಕೆಗಳಲ್ಲಿ ಸರ್ವಶಾಸ್ತ್ರಾಧಾರಗಳನ್ನು ವಿವರಿಸಿದರು. ಟಿಳಕರ ಧರ್ಮಶಾಸ್ತ್ರದ ಅಗಾಧ ಪಾಂಡಿತ್ಯವು ಪ್ರಕಟವಾಯಿತು.

ಇತ್ತ ಪಂಚರು "೧) ಜಾತಿಗಳನ್ನು ಮುರಿಯುವದರ ಸಲುವಾಗಿಯೇ ಮಿಶನ್ ಮಂದಿರಕ್ಕೆ ಹೋಗಿದ್ದರೆಂಬುದಕ್ಕೆ ಆಧಾರಗಳೇ ಇಲ್ಲ. ಸಾಕ್ಷಿಗಳಿಲ್ಲ. ೨) ಇಂಥವರು ಇಂತಹ ಪದಾರ್ಥಗಳನ್ನು ಸೇವಿಸಿದರೆಂದು ವಾದಿಗಳಿಗೆ ಸಿದ್ಧಪಡಿಸಲಾಗಲಿಲ್ಲ. ೩) ಸೇವಿಸಿದ ಪದಾರ್ಥಗಳು ಧರ್ಮಶಾಸ್ತ್ರದಿಂದ ನಿಷಿದ್ಧವಾದವುಗಳೆಂದು ಸಿದ್ಧಪಡಿಸಲು ವಾದಿಗಳಿಗೆ ಆಗಲಿಲ್ಲ. ಎಂದು ಹೇಳಿ ಬೇರೆ ಬೇರೆ ಜನರಿಗೆ ಸಂಕರ್ಪದೋಷ ಮೊದಲಾದವುಗಳಿಗಾಗಿ ಬೇರೆ ಬೇರೆ ಪ್ರಾಯಶ್ಚಿತ್ತವನ್ನು ಹೇಳಿದರು. ಟಿಳಕರು ಮಿಶನರಿಗಳ ಮಂದಿರದಲ್ಲಿ ಚಹಾ ಕುಡಿದನಂತರ ಶ್ರೀ ಕ್ಷೇತ್ರ ಕಾಶಿಗೆ ಹೋಗಿ ಸರ್ವ ಪ್ರಾಯಶ್ಚಿತ್ತ ತೆಗೆದುಕೊಂಡ ಬಗ್ಗೆ ವಿಶ್ವಸನೀಯವಾದ ಪುರಾವೆಗಳನ್ನು ಕೊಟ್ಟದ್ದಾರೆ. ಮತ್ತು ಪುಣೆಯಲ್ಲಿಯೇ ಎರಡು ಸಲ ಕೃತ್ಸ್ನ ಪ್ರಾಯಶ್ಚಿತ್ತ ತೆಗೆದುಕೊಂಡ ಮೂಲಕ ಇನ್ನು ಮತ್ತೆ ಪ್ರಾಯಶ್ಚಿತ್ತ ತೆಗೆದುಕೊಳ್ಳುವ ಕಾರಣವಿಲ್ಲ. ರಾನಡೆ ಮೊದಲಾದ ಜನರು ಜ್ಞಾತಾಜ್ಞಾತ ದೋಷ ನಿವಾರಣೆಗಾಗಿ ಪ್ರಾಯಶ್ಚಿತ್ತವಾಗಬೇಕೆಂದು ಅರ್ಜಿಮಾಡಿರುವ ಮೂಲಕ ಅವರು ಸರ್ವ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಬೇಕು" ಎಂದು ನಿರ್ಣಯಕೊಟ್ಟರು.

ಯಾರು ಈ ಸನಾತನಿಗಳಿಗೆ ಶರಣು ಹೊಡೆಯದೆ, ತಮ್ಮಷ್ಟಕ್ಕೆ ತಾವೇ ಪ್ರಾಯಶ್ಚಿತ್ತವನ್ನು ತೆಗೆದುಕೊಂಡರೋ, ಟಿಳಕರಂತಹರು ಪರಸ್ಥಳದಲ್ಲಿ

ಪ್ರಾಯಶ್ಚಿತ್ತ ತೆಗೆದುಕೊಂಡು ಬಾಳಾಸಾಹೇಬರಂತಹರಿಗೆ ಮೀಶೆಯನ್ನು ತೆಗೆಯಿಸಿದ ನೇತ್ರಾನಂದವನ್ನುಂಟುಮಾಡಲಿಲ್ಲವೋ ಅಂಥವರ ವಿರುದ್ಧವಾಗಿ ಅತಿವಾದಿಗಳು ಪಂಚರ ನಿರ್ಣಯವನ್ನು ಧಿಕ್ಕರಿಸಿ, ಬಹಿಷ್ಕಾರ ಹಾಕಿದರು. ಅವರ ಮನೆಗಳಿಗೆ ಯಾರೂ ಊಟಕ್ಕೆ ಹೋಗದಂತೆ ಮಾಡಿದರು. ಊರಲ್ಲಿಯ ವಾದವು ಮುಗಿಯದೆ ವಿಕೋಪಕ್ಕೆ ಹೋಯಿತು.

ಟಿಳಕರು ಇದಕ್ಕೆ ಬೆದರಲಿಲ್ಲ 'ಪ್ರಾಯಶ್ಚಿತ್ತವೆಂದರೆ ಪಶ್ಚಾತ್ತಾಪವಲ್ಲ. ಕೇವಲ ಪಾಪನಾಶಕ ಕರ್ಮವು. ಆದರೆ ಪಶ್ಚಾತ್ತಾಪದಿಂದ ಪಾಪನಾಶವಾಗುವದಿಲ್ಲವೆಂದು ಮಾತ್ರ ತಿಳಿಯಕೂಡದು. ಯಾವುದೊಂದಕ್ಕೆ ಪ್ರಾಯಶ್ಚಿತ್ತವಿದೆಯೆಂದಾಕ್ಷಣ ಅದು ಮಹಾಪರಾಧವೆಂದು ತಿಳಿಯುವ ಕಾರಣವಿಲ್ಲ. ಯಾವುದೊಂದು ಸಾಂಪ್ರದಾಯ ಮುರಿದರೆ, ಅದಕ್ಕೆ ಪ್ರಾಯಶ್ಚಿತ್ತ ಬೇಕೇ ಬೇಕು. ದೇಶ, ಕಾಲಮಾನಕ್ಕನುಸರಿಸಿ ಕೆಲವು ಆಚಾರಗಳನ್ನು ಬಿಡಬೇಕಾಗುವದು. ಕುಮಾರಿಲ ಭಟ್ಟರು ಅಥವಾ ಶಂಕರಾಚಾರ್ಯರು ಹಳೆಯ ಎಲ್ಲ ಶ್ರೌತಾಚಾರಗಳ ಆಗ್ರಹ ಹಿಡಿಯಲಿಲ್ಲ. ಆದ್ದರಿಂದಲೇ ವೈದಿಕ ಧರ್ಮವು ಉಳಿಯಿತು. ಇಲ್ಲದಿದ್ದರೆ ನಾವೆಲ್ಲರೂ ಬೌದ್ಧರಾಗುತ್ತಿದ್ದೆವು. ತಿಳಿದೂ ತಿಳಿದೂ ಅಗ್ನಿಹೋತ್ರದ ಸಾಂಪ್ರದಾಯವನ್ನು ಬದಿಗಿರಿಸಿ, ಶ್ರಾವಣಿಯಲ್ಲಿ ಪ್ರಾಯಶ್ಚಿತ್ತದಿಂದ ಕೆಲಸ ಸಾಗಿಸುತ್ತಿರುವಾಗ ಸ್ಪರ್ಶಾಸ್ಪರ್ಶ ದೋಷಕ್ಕಾಗಿ ಪ್ರತ್ಯಾಮ್ನಾಯದ್ವಾರ ಪ್ರಾಯಶ್ಚಿತ್ತ ಮಾಡುತ್ತ ಹೋದರೆ, ಈ ಕಾಲದ ಎಲ್ಲ ಪ್ರಶ್ನೆಗಳೂ ಬಿಟ್ಟು, ಸಮಾಜದ ಪ್ರಗತಿಯೂ ಆಗುವದು. ಯೋಗ್ಯ ಧರ್ಮಾಭಿಮಾನವೂ ಉಳಿಯಲು ಸಾಧ್ಯವಾಗುವದು' ಎಂದು ಮಾರ್ಗದರ್ಶನ ಮಾಡಿದರು.

ಧರ್ಮವನ್ನರಿಯದ ಶಾಸ್ತ್ರದ ಒಂದು ವಚನವೂ ಕೂಡ ತಿಳಿಯದ, ಬುದ್ಧಿವಂತರು ಹೇಳಿದ್ದನ್ನು ಕೂಡ ತಿಳಿದುಕೊಳ್ಳುವಷ್ಟು ಬುದ್ಧಿಯಿರದ ಜನ, ಮುಂದಾಳುಗಳಾಗುತ್ತಿರುವದು ದೇಶದ ದುರ್ದೈವವು. ತ್ರಿಯಂಬಕ ಶಾಸ್ತ್ರಿಗಳಂತಹ ವಿದ್ವಾಂಸರು ಮೂರ್ಖರಾಗಿ ಪಂಚಾಂಗ ಮಾರುವ ಜ್ಞಾನಲವದುರ್ವಿದಗ್ಧರು ಮುಂದಾಳುಗಳಾಗಬೇಕಾದರೆ, ಎಂತಹ ವಿಪರೀತ ಕಾಲ. ಶಂಕರಾಚಾರ್ಯರು ಕೊಟ್ಟ ನಿರ್ಣಯವು ಬಹುಜನರಿಗೆ ಮಾನ್ಯ. ಪರ ಊರವರಿಗೆಲ್ಲ ಮಾನ್ಯ. ಆದರೆ ಪುಣೆಯಲ್ಲಿಯ ಈ ವಾದಿಗಳಿಗೆ ಮಾತ್ರ ಅಮಾನ್ಯ.

ರಾನಡೆಯವರಂಥ ಸುಧಾರಕರು ಶಂಕರಾಚಾರ್ಯರ ಆಜ್ಞೆಯನ್ನು ಮನ್ನಿಸಿ, ನಾತುರಂಥ ಧರ್ಮಮಾರ್ತಾಂಡರು ಶಂಕರಾಚಾರ್ಯರನ್ನೇ ಬಹಿಷ್ಕರಿಸುವ ಎಂತಹ ವಿಚಿತ್ರ ಸನ್ನಿವೇಶವಿದು' ಎಂದು ಸನಾತನಿಗಳಿಗೆ ಏಟು ಕೊಡ ಹತ್ತಿದರು.

ಕೊನೆಗೆ ಶ್ರೀಗಳು ಈ ಪ್ರಕರಣಕ್ಕೆ ಬೇಸತ್ತು ವಾದಿಗಳನ್ನೆಲ್ಲ ಕರೆಯಿಸಿಕೊಂಡರು. ಟಿಳಕರಿಗೂ ಬರಲು ತಿಳಿಸಿದರು. ಟಿಳಕರು ಪಂಚರ ನಿರ್ಣಯವು ನಮಗೆ ಮಾನ್ಯವಿದೆಯೆಂಬ ೫೦-೬೦ ಜನರ ಗುಂಪಿನೊಡನೆ ಹೋದರು. ೧೮೯೨ ರ ಡಿಸೆಂಬರ ೧೮ ನೇ ತಾರೀಖಿಗೆ ವಿಚಾರಣೆಯು ಪ್ರಾರಂಭವಾಯಿತು. ಶ್ರೀಗಳು ಕುರಂದವಾಡದ ಅಧಿಪತಿಗಳಾದ ಬಾಪೂ ಸಾಹೇಬ ಹಾಗೂ ಬಾಳಾಸಾಹೇಬರಿಗೆ ಇದನ್ನು ಒಪ್ಪಿಸಿ, ತಮ್ಮ ಅಭಿಪ್ರಾಯದೊಡನೆ ಎಲ್ಲ ಪ್ರಕರಣವನ್ನು ಕಳಿಸಬೇಕೆಂದು ಹೇಳಿಹೋದರು. ವಿಚಾರಣೆಗೆ ಆರಂಭವಾಯಿತು.

ಟಿಳಕರು 'ಬೇಕಾದರೆ ಇನ್ನೂ ಒಮ್ಮೆ ವಿದ್ವಾಂಸರಾದ ಪಂಚರನ್ನು ನಿಯಮಿಸಿ, ನಿರ್ಣಯ ಕೈಕೊಳ್ಳಬಹುದೆಂದು ಹೇಳಿದರು. ಮತ್ತು ಕೇವಲ ಕಾಗದ ಪತ್ರದ ಮೇಲೆಯೇ ನಿರ್ಣಯ ಕೊಡದೆ, ಸಾಕ್ಷಿಗಳನ್ನೂ ತೆಗೆದುಕೊಳ್ಳಬಹುದೆಂದರು. ಜಾತಿಗಳನ್ನು ಮುರಿಯಬೇಕೆಂದೇ ಚಹಾ ತೆಗೆದುಕೊಂಡರೆಂಬ ಪ್ರಶ್ನೆಯಲ್ಲದೆ ಮೊದಲಿನ ಪಂಚರು ಪಕ್ಷಪಾತದಿಂದ ನಿರ್ಣಯ ಕೊಟ್ಟರೆಂಬ ಪ್ರಶ್ನೆಯೂ ಇದ್ದಿತು. ಬೀಸ್ಕೀಟುಗಳನ್ನು ಯಾರು ತಿಂದರೆಂಬ ಬಗ್ಗೆ ಪುರಾವೆಗಳಿರದಿದ್ದರೂ ಟೇಬಲ್ಲಿನ ಮೇಲೆ ಅವು ಇದ್ದವು. ಇಷ್ಟರಿಂದಲೇ ಅವರು ತಿಂದಿರುವರೆಂಬ ಅನುಮಾನ ತೆಗೆಯಬೇಕೆಂದು ನಾತುರವರು ಹೊಸ ಪ್ರಶ್ನೆಯನ್ನು ಎಬ್ಬಿಸಿದರು. ಅದಕ್ಕೆ ಟಿಳಕರು 'ಶ್ರೀ ನಾತುರವರು ಗಣೇಶ ಖಿಂಡಿಯಲ್ಲಿಯ ಎಷ್ಟೋ ಚಹಾದ ಸಮಾರಂಭಕ್ಕೆ ಹೋಗುತ್ತಾರೆ. ಆಗ ಎದುರಿಗೆ ಶೆರೆಯು ಇಡಲ್ಪಟ್ಟಿರುತ್ತದೆ. ಇದರಿಂದ ನಾತುರವರು ಶೆರೆ ಕುಡಿಯುವರೆಂದು ಹೇಳಬೇಕಾದೀತು ಎಂದು ಉತ್ತರಿಸಿದರು. ಕೊನೆಗೆ ಇಬ್ಬರೂ ಅಧಿಪತಿಗಳಿಗೆ ವಾದೀ ಪಕ್ಷದ ದುರಾಗ್ರಹವಿದೆ ಎಂದು ಮನವರಿಕೆಯಾಯಿತು. ಮೊದಲಿನ ನಿರ್ಣಯವು ಯೋಗ್ಯವಿದೆ ಎಂದೆನಿಸಿತು. ಆವರು ಆದದ್ದು ಆಗಿಹೋಯಿತು. ಇಬ್ಬರೂ ಇದನ್ನು ಮರೆಯಬೇಕು. ಇಬ್ಬರೂ

ನಮ್ಮ ಪಂಕ್ತಿಗೆ ಕುಳಿತು ಊಟಮಾಡಬೇಕೆಂದು ಕೇಳಿಕೊಂಡರು. ಸನಾತನಿಗಳಿಗೆ ಇದು ಮಾನ್ಯವಾಗಲಿಲ್ಲ.

ಮುಂದೆ ಶ್ರೀ ಶಂಕರಾಚಾರ್ಯರ ಕಡೆಗೆ ಅಭಿಪ್ರಾಯ ಕಳಿಸಲ್ಪಟ್ಟಿತು. ವಾದಿಗಳು ವಾದಿಸುತ್ತಲೇ ಇದ್ದರು. ಕೊನೆಗೆ 'ಹಗ್ಗ ಹರಿಯಲಿಲ್ಲ, ಕೋಲು ಮುರಿಯಲಿಲ್ಲ' ಎಂಬ ಗಾದೆಯಂತೆ ಜನರು ಬರಬರುತ್ತ ಆ ಪ್ರಕರಣವನ್ನು ಮರೆತು ಬಿಟ್ಟರು.

ಟಿಳಕರು ಮಾತ್ರ ಆವರ ಬಹಿಷ್ಕಾರಕ್ಕೆ ಬಗ್ಗದೆ, ಶಾಸ್ತ್ರಕ್ಕೆ ಮನ್ನಣೆಯಿತ್ತು ಪ್ರಾಯಶ್ಚಿತ್ತ ತೆಗೆದುಕೊಂಡು, ಜನತೆಗೆ ಶಿಕ್ಷಣ ಕೊಡುತ್ತ, ಮಿಾಶೆಗಳನ್ನು ಮೇಲೆ ಮಾಡಿಕೊಂಡೇ ಮುನ್ನಡೆದರು.

---

# ಟಿಳಕ ಹಾಗೂ ಶಾರದಾ ಸದನ

ಗ್ರಾಮೀಣ ಪ್ರಕರಣದಲ್ಲಿ ಟಿಳಕರ ಅಗಾಧ ಪಾಂಡಿತ್ಯವು ಪ್ರಕಟವಾದಂತೆ, ಶಾರದಾ ಸದನದ ಚಳವಳಿಯಲ್ಲಿ ಟಿಳಕರ ಮುಂಧೋರಣವು ಪ್ರಕಟವಾಯಿತು. ಶಾರದಾ ಸದನದ ಸಂಸ್ಥಾಪಕರಾದ ಪಂಡಿತ ರಮಾಬಾಯಿಯವರು ಲೋಕೋತ್ತರ ಸ್ತ್ರೀಯರೆಂದು ಹೇಳಬಹುದು. ಪಂಡಿತ ರಮಾಬಾಯಿಯವರು ಮಂಗಳೂರ ಜಿಲ್ಹೆಯವರು. ಅವರ ತಂದೆ ರಾಜಮನ್ನಣೆಯನ್ನು ಪಡೆದ ಸಂಸ್ಕೃತ ಮಹಾಪಂಡಿತರು. ತಾಯಿಯೂ ಶಾಸ್ತ್ರಾಧ್ಯಯನ ಮಾಡಿಸುವಷ್ಟು ಪಾಂಡಿತ್ಯವನ್ನು ಪಡೆದವಳು. ಇಂತಹರ ಹೊಟ್ಟೆಯಲ್ಲಿ ಹುಟ್ಟಿದ ರಮಾಬಾಯಿಗೆ ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಪಡೆಯಲು ಎಲ್ಲ ಅನುಕೂಲತೆಗಳು ದೊರೆಯುವದು ಸ್ವಾಭಾವಿಕ. ದುರ್ದೈವದಿಂದ ಚಿಕ್ಕ ವಯಸ್ಸಿನಲ್ಲಿಯೇ ತಂದೆ ತಾಯಿಗಳಿಬ್ಬರು ತೀರಿಕೊಂಡರು. ರಮಾಬಾಯಿ ಹಾಗೂ ಅವರ ತಮ್ಮ ಶ್ರೀನಿವಾಸರಿಬ್ಬರು ಹೊಟ್ಟೆಗಾಗಿ ಅಲೆಯುತ್ತ ಕಲಕತ್ತೆಗೆ ಬಂದರು. ಅವರ ಎಳೆಯ ವಯಸ್ಸು, ಪಾಂಡಿತ್ಯ, ಸಂಸ್ಕೃತದ ಮೇಲಿನ ಅವರ ಪ್ರಭುತ್ವಗಳು, ಕಲಕತ್ತೆಯ ವಿದ್ವಾಂಸರನ್ನು ಮುಗ್ಧಗೊಳಿಸಿದವು. ರಮಾಬಾಯಿಯು ಶೀಘ್ರ ಕವಯಿತ್ರಿಯೂ ಇದ್ದಳು. ಪ್ರೊ. ಟಾನೆ, ಪಂಡಿತ ಮಹೇಶಚಂದ್ರ ನ್ಯಾಯರತ್ನ ಮೊದಲಾದವರು ಈ ಬಾಲಕರಿಗೆ ಸಾರ್ವಜನಿಕ ಸನ್ಮಾನವನ್ನು ಮಾಡಿದರು. ರಾಜಾ ಜ್ಯೋತಿಂದ್ರ ಮೋಹನ ಟಾಗೋರರೂ, ಆನಂದ ಮೋಹನ ಬೋಸರೂ ಈ ಕವಯಿತ್ರಿಗೆ ಮಾನಪತ್ರವನ್ನರ್ಪಿಸಿದರು. ಈ ಎಲ್ಲ ವೃತ್ತಾಂತವು ವೃತ್ತಪತ್ರಗಳ ಮುಖಾಂತರ ನಾಡಿನಲ್ಲೆಲ್ಲ ಹಬ್ಬಿತು. ರಮಾಬಾಯಿಯ ಬಗೆಗೆ ಪ್ರೇಮಾದರಗಳುತ್ಪನ್ನವಾದವು. ತಮ್ಮನಾದ ಶ್ರೀನಿವಾಸನು ೧೮೮೦ರಲ್ಲಿ ತೀರಿಕೊಂಡನು. ರಮಾಬಾಯಿಯು ಏಕಾಕಿನಿಯಾದಳು. ಮುಂಬಯಿಗೆ ಬರಬೇಕೆಂಬ ವಿಚಾರವು ಆಕೆಯ ತಲೆಯಲ್ಲಿ ಬಂದಿತ್ತು. ಮುಂಬಯಿಯಿಂದ ಕರೆಯೂ ಬಂದಿತ್ತು. ಮುಂಬಯಿಗೆ ಬಂದರೆ ಸ್ತ್ರೀ ಶಿಕ್ಷಣದ ಕಾರ್ಯದಲ್ಲಿ ಒಳ್ಳೇ ನೆರವಾಗುವದೆಂದು ಸುಧಾರಕರು ಎಣಿಕೆ ಹಾಕಿದ್ದರು. ಆದರೆ ರಮಾಬಾಯಿಯು ಆಸಾಮಕ್ಕೆ

ಹೋದಳು. ಶಿಲ್ಹೆಟದಲ್ಲಿಯ ಬಿಪಿನ ಬಿಹಾರಿದಾಸ ಮೇಧಾವಿ ಎಂಬ ವಕೀಲ ರನ್ನು ಮದುವೆಯಾದಳು. ಆದರೆ ದುರ್ದೈವವು ಆಕೆಯ ಬೆನ್ನು ಹತ್ತಿತ್ತು. ಲಗ್ನವಾದ ಒಂದು ಒಂದೂವರೆ ವರ್ಷದಲ್ಲಿಯೇ ಗಂಡನು ಸತ್ತನು. ಆಗ ಆಕೆಯು ಗರ್ಭಿಣಿ ಇದ್ದಳು. ಮುಂದೆ ಮುಂಬಯಿಗೆ ಬಂದಳು. ಆದರೆ ಮುಂಬಯಿಯಲ್ಲಿಯೂ ನಿಲ್ಲದೆ ೧೮೮೨ ರಲ್ಲಿ ಪುಣೆಗೆ ಬಂದಳು.

ಪುಣೆಯ ಜನರಿಗೆ ಈ ವರ್ತಮಾನ ಕೇಳಿ ಆಶ್ಚರ್ಯವಾಯಿತು. ರಾನಡೆ ಮೊದಲಾದ ಪ್ರಭೃತಿಗಳಿಗೆ ಸ್ತ್ರೀ ಶಿಕ್ಷಣದ ದೃಷ್ಟಿಯಿಂದ ಒಂದು ನಿಧಿಯೇ ಸಿಕ್ಕಿತೆಂದೆನಿಸಿತು. ಆದರೆ ಹಳೆಯ ಜನರಿಗೆ ಮಾತ್ರ ಸಮಾಜದ ಮೇಲೆ ಒಂದು ಬಗೆಯ ಆಪತ್ತಿಯೇ ಒದಗಿತು ಎಂದೆನಿಸಹತ್ತಿತು. ಪಂಡಿತ ರಮಾ ಬಾಯಿಯ ಉಪನ್ಯಾಸಗಳು ಪ್ರಾರಂಭವಾದವು. ಎರಡೂ ದೃಷ್ಟಿಯ ಜನರು ಕೇಳಲಿಕ್ಕೆ ಬರಹತ್ತಿದರು.

೧೮೮೨ ರಲ್ಲಿ ಸ್ತ್ರೀಯರ ಸರ್ವಾಂಗೀಣ ಉನ್ನತಿಯ ಗುರಿಯನ್ನು ಇಟ್ಟುಕೊಂಡು 'ಆರ್ಯ ಮಹಿಳಾ ಸಮಾಜ' ಎಂಬ ಸಂಸ್ಥೆಯನ್ನು ಸ್ಥಾಪಿಸಿ ದರು. ಇದರದೇ ಒಂದು ಶಾಲೆಯು ಮರುವರ್ಷ ಮುಂಬಯಿಯಲ್ಲಿ ಪ್ರಾರಂಭಿ ಸಲ್ಪಟ್ಟಿತು. ಪುಣೆಯ ಸುಧಾರಕರೆಲ್ಲರೂ ಸಹಾಯ ನೀಡಿದರೆಂಬುದನ್ನು ಹೇಳುವದೇ ಬೇಡ.

ಪಂಡಿತ ರಮಾಬಾಯಿಯು ಮಹಿಲಾ ಸಮಾಜವನ್ನು ನಡೆಸುತ್ತಿರು ವಾಗ ತನಗೆ ಸಿಗಬೇಕಾದಷ್ಟು ಸಹಾಯ ದೊರೆಯಲಿಲ್ಲವೆಂದೂ ತನ್ನ ಯೋಗ್ಯತೆಯನ್ನು ಜನ ಗಣಿಸಲಿಲ್ಲವೆಂದೂ ನೊಂದುಕೊಂಡಳು. ಇಂಗ್ಲಿಷ ಕಲಿಯಲು ಪ್ರಾರಂಭಿಸಿದಳು. ಇಂಗ್ಲಂಡಕ್ಕೆ ಹೋಗುವ ಹೊಂಚು ಹಾಕಿದಳು. ಮಿಸ್ ಹಾರಫರ್ಡ, ರೇ ನಿಮಾಯಾಗೊರೆ, ಎಂಬ ಮಿಶನರಿಗಳ ಸ್ನೇಹ ಬೆಳಿಸಿ, ಅವರ ನೆರವಿನಿಂದ ಇಂಗ್ಲಂಡಕ್ಕೆ ಹೋದಳು. ಹೋದ ಸ್ವಲ್ಪ ದಿನಗಳ ಲ್ಲಿಯೇ ತಾಯಿ ಮಕ್ಕಳಿಬ್ಬರೂ ಕ್ರಿಸ್ತಿಧರ್ಮವನ್ನು ಸ್ವೀಕರಿಸಿದರು. ವಿಲಾ ಯತಿಯಲ್ಲಿ ಸ್ತ್ರೀ ಶಿಕ್ಷಣ ಸಂಸ್ಥೆಗಳ ಸುಧಾರಣೆಗಳನ್ನೆಲ್ಲ ನಿರೀಕ್ಷಿಸಿದಳು. 'ಚೌಪ್ಟನ್ ಹ್ಯಾಮ' ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕಳಾದಳು. ಅಮೇ ರಿಕೆಗೆ ಹೋದಳು. ತನ್ನ ಪಾಂಡಿತ್ಯದಿಂದ ಅಮೇರಿಕನ್ ಜನರನ್ನು ಮರಳು ಗೊಳಿಸಿದಳು.

ರಮಾಬಾಯಿಯು ಕ್ರಿಶ್ಚನ್‌ಳಾದ ಮೂಲಕ, ಅಮೇರಿಕೆಯ ಮಿಶನರಿಗಳ ಸಹಾಯ ಆಕೆಗೆ ಚನ್ನಾಗಿ ದೊರೆಯಿತು. 'ರಮಾಬಾಯಿಯು ಸ್ತ್ರೀಯರಿಗೆ ಸಾಮಾನ್ಯ ಶಿಕ್ಷಣ ಕೊಡಬೇಕು. ಧಾರ್ಮಿಕಶಿಕ್ಷಣ ಕೊಡಬಾರದು. ಕೊಟ್ಟರೆ, ಕ್ರಿಸ್ತೀಧರ್ಮದ ಶಿಕ್ಷಣವನ್ನೇ ಕೊಡಬೇಕು. ಯಾವುದೇ ಹೆಸರಿನಿಂದ ಸಂಸ್ಥೆಯನ್ನು ನಡೆಯಿಸಬಹುದೆಂದು ಹೇಳಿ' ಭಾರತದಲ್ಲಿಯ ಆವಳ ಕಾರ್ಯದ ೧೦ ವರ್ಷದ ಎಲ್ಲ ಭಾರವನ್ನು ಹೊರಲು ಅಮೇರಿಕನ್ ಮಿಶನರಿಗಳು ಸಿದ್ಧರಾದರು- ಆಕೆಯು ಮರಳಿ ಭಾರತಕ್ಕೆ ಬಂದಳು. ೧೮೮೯ ರಲ್ಲಿ ಮುಂಬಯಿಯಲ್ಲಿ 'ಶಾರದಾಸದನ'ವೆಂಬ ಸಂಸ್ಥೆಯನ್ನು ಸ್ಥಾಪಿಸಿದಳು. ಉಚ್ಚ ವರ್ಗದ ನಿರಾಶ್ರಿತ ವಿಧವೆಯರನ್ನೂ ಉಳಿದ ನಿರಾಶ್ರಿತ ಉಚ್ಚ ವರ್ಣದವರನ್ನೂ ತೆಗೆದುಕೊಳ್ಳಲಾಗುವದೆಂದೂ ಅವರಿಗೆ ಸಾಮಾನ್ಯ ಶಿಕ್ಷಣವಲ್ಲದೆ, ಕೈಗಾರಿಕೆಯ ಶಿಕ್ಷಣವನ್ನೂ ಕೊಡಲಾಗುವದೆಂದೂ ಉದ್ದೇಶ ಪತ್ರಿಕೆಯನ್ನು ಹೊರಡಿಸಿದಳು. ಅರ್ಥಾತ್ ರಾನಡೆ, ಭಂಡಾರಕರ ಮೊದಲಾದ ಪ್ರಭೃತಿಗಳು ಸಲಹೆಗಾರರ ಮಂಡದಲ್ಲಿದ್ದರು.

ಶಾರದಾ ಸದನವು ಹೇಗೆ ನಡೆಯುವದೆಂಬುದರ ಕಡೆಗೆ ಜನರ ದೃಷ್ಟಿಯಿರುವದು ಸ್ವಾಭಾವಿಕ. ರಮಾಬಾಯಿಯು ಕ್ರಿಸ್ತೀಧರ್ಮವನ್ನು ಸ್ವೀಕರಿಸಿದ್ದ ಮೂಲಕ, ಸಾಶಂಕರಾಗಿ ನೋಡುವದರಲ್ಲೇನೂ ದೋಷವಿರಲಿಲ್ಲ. ಆದರೆ ದುರ್ದೈವದಿಂದ ಜನರ ಸಂಶಯವೇ ನಿಜವಾಗುವ ಲಕ್ಷಣಗಳು ಕಾಣಿಸಹತ್ತಿದವು. ಸಾಶಂಕರಲ್ಲಿ ಟಿಳಕರೂ ಒಬ್ಬರಾಗಿದ್ದರು. ೧೮೮೯ ರ ೨೧ ನೇ ಡಿಶೆಂಬರದ 'ಕ್ರಿಶ್ಚನ್ ವೀಕಲಿ' ಎಂಬ ನ್ಯೂಯಾರ್ಕಿನ ಪತ್ರಿಕೆಯಲ್ಲಿ "ಶಾರದಾ ಸದನದಲ್ಲಿ ಸದ್ಯಕ್ಕೆ ೭ ಬಾಲ ವಿಧವೆಯರಿದ್ದು, ಅವರಲ್ಲಿ ಇಬ್ಬರು ಕ್ರಿಸ್ತೀಧರ್ಮದಲ್ಲಿಯ ತಮ್ಮ ಪ್ರೇಮವನ್ನು ವ್ಯಕ್ತಮಾಡಿದ್ದಾರೆ, ಮತ್ತು ತಪ್ಪದೇ ರಮಾಬಾಯಿಯವರೊಡನೆ ಪ್ರಾರ್ಥನೆಗೆ ಹೋಗುತ್ತಾರೆ. ಇನ್ನೊಬ್ಬ ಹುಡಿಗೆಯೂ ಸ್ವಯಂಪ್ರೇರಣೆಯಿಂದ ಒಬ್ಬ ಮಿಶನರಿಯ ಬಳಿಯಲ್ಲಿ ಶಿಕ್ಷಣ ತೆಗೆದುಕೊಳ್ಳುತ್ತಿದ್ದಾಳೆ. ಆ ಸಂಸ್ಥೆಯಲ್ಲಿಯ ಮತಸ್ವಾತಂತ್ರ್ಯವು ಅಪಾಯಕಾರಕವಿಲ್ಲೆಂಬುದು ಇದರಿಂದ ವ್ಯಕ್ತವಾಗುವದು" ಎಂದು ಪ್ರಸಿದ್ಧವಾಗಿದ್ದಿತು. ಕೇಸರಿಯು ಇದನ್ನು ೨೮ ನೇ ಜನವರಿ (೧೮೯೦) ಯ ಸಂಚಿಕೆಯಲ್ಲಿ "ನಾವು ಮೋಸ ಹೋದೆವು. ಮೊದಲೇ ನೀವೇಕೆ ನಮ್ಮನ್ನು ಎಚ್ಚರಿಸಲಿಲ್ಲ

ವೆಂದು ನಮ್ಮನ್ನು ಜನ ಕೇಳಬಾರದೆಂದು ಇದನ್ನು ಪ್ರಸಿದ್ಧಿಸಿದ್ದೇವೆ. ಮತ್ತು ತಮ್ಮ ಹೆಣ್ಣುಮಕ್ಕಳು ಕ್ರಿಸ್ತಿಗಳಾಗಬಾರದೆಂದು ಬಯಸುವವರು ಇದರ ವಿಚಾರವನ್ನು ಮಾಡಬೇಕು" ಎಂದು ಮುದ್ರಿಸಿ ಎಚ್ಚರಿಕೆ ಕೊಟ್ಟಿತು.

ಜನತೆಯಲ್ಲಿ ಗಡಿಬಿಡಿಯುಂಟಾಯಿತು. ಸಂಸ್ಥೆಯ ಸಂಚಾಲಕಳಾದ ಮಿಸ್ ಹ್ಯಾಮಿಲಿನ್ನಳು ಸಲಹೆಗಾರ ಮಂಡಳದ ಅಂಕಿತದಿಂದ 'ಯಾವ ಜಾತಿ, ಮತ, ಪಂಥ, ರೂಢಿಗಳಿಗೆ ವಿರೋಧವಿಲ್ಲದಂತೆ ಶಿಕ್ಷಣಕೊಡಲಾಗು ವದು' ಎಂಬ ಪ್ರಕಟನೆಯನ್ನು ಕೇಸರಿಗೆ ಕಳಿಸಿದಳು. ಕೇಸರಿಕಾರರು 'ಉದ್ದೇಶ ಪತ್ರಿಕೆ ಸತ್ಯವಿದ್ದರೆ, ಹುಡುಗೆಯರ ಮನಸ್ಸು ಕ್ರಿಶ್ಚಿಯನ್ ಧರ್ಮದ ಕಡೆಗೇಕೆ ಹರಿಯುವದು? ಎಂದು ಮರು ಸವಾಲುಮಾಡಿದರು. ಇದೆಲ್ಲವನ್ನು ನೋಡಿ ರಮಾಬಾಯಿಯು 'ಹಾಗೇನೂ ಇಲ್ಲ. ಹುಡುಗೆಯರು ತುಲಸೀ ಪೂಜೆಮಾಡುತ್ತಾರೆ. ದೇವರಗುಡಿಗೆ ಹೋಗುತ್ತಾರೆ. ಒಬ್ಬ ಹುಡು ಗೆಯು ಕ್ರಿಸ್ತಳಾಗಬೇಕೆಂದು ಬಯಸಿದರೂ ಅಜ್ಞಾನಿ ಬಾಲಿಕೆಯೆಂದು ನಾನು ದೀಕ್ಷೆ ಕೊಟ್ಟಿಲ್ಲ. ತಾವು ಈ ಬಗ್ಗೆ ಸೂಚಿಸಿದ್ದನ್ನು ಮಾಡ ಬಹುದು' ಎಂದು ಬರೆದರು.

"ಶಾರದಾ ಸದನವು ಕ್ರಿಸ್ತಿಗಳ ಸಂಸ್ಥೆಯು" ಎಂಬ ಟೀಕೆಯು ರಮಾ ಬಾಯಿಗೆ ವ್ಯಥೆಯನ್ನುಂಟುಮಾಡಿತು. ಆಗ "ನಮ್ಮ ದೇಶ ಬಾಂಧವರು ನಮಗೆ ಯೋಗ್ಯ ಆಶ್ರಯವನ್ನೂ ಉತ್ತೇಜನವನ್ನೂ ಕೊಟ್ಟಿದ್ದರೆ, ಶಾರದಾ ಸದನವು ಕ್ರಿಸ್ತಿ ಸಂಸ್ಥೆಯಾಗುತ್ತಿರಲಿಲ್ಲ. ಎಷ್ಟು ಪ್ರಯತ್ನಿಸಿದರೂ ಹಿಂದೀ ಯರಿಂದ ಸಹಾಯದೊರೆಯದಿದ್ದ ಮೂಲಕವೇ ಕ್ರಿಸ್ತಿಗಳ ಹತ್ತರ ಭಿಕ್ಷೆ ಬೇಡಬೇಕಾಯಿತು. ಇಂದು ಅವರು ತೆಗೆದುಕೊಂಡು ನಡೆಯಿಸಲು ಸಿದ್ಧರಿದ್ದರೆ ಯಾವ ಕ್ರೈಸ್ತೀಯರೂ ಅಡ್ಡಬರಲಾರರು. ಇಷ್ಟೇ ಅಲ್ಲ. ಅವರು ಎಲ್ಲ ರೀತಿಯಿಂದಲೂ ಸಹಾಯಮಾಡಲು ಸಿದ್ಧರಿರುವರು. ದೋಷಗಳನ್ನು ಎತ್ತಿತೋರಿಸುವದು ಬಹು ಸುಲಭವೆಂಬುದು ಎಲ್ಲರೂ ತಿಳಿದ ವಿಷಯ" ಎಂದು ಉತ್ತರಿಸಿದಳು.

ಟೀಕಾಕಾರರಿಗೂ ಸುಧಾರಕರಿಗೂ ಒಂದು ಬಗೆಯ ಆಹ್ವಾನವೇ ಆಗಿದ್ದಿತು. 'ಹಿಂದೂ ಜನರಮೇಲೆ ಆಕ್ಷೇಪಗಳನ್ನು ಹೊರಿಸುವ ರಮಾಬಾಯಿಯು ಸಹಾಯವೇಕೆ ದೊರೆಯಲೊಲ್ಲದೆಂಬುದನ್ನು ವಿಚಾರ

ಮಾಡಬೇಕು. ತರುಣ ವಿಧವಾಸ್ತ್ರೀಯರನ್ನು ಶಾರದಾ ಸದನದಂತಹ ಸಂಸ್ಥೆಯಲ್ಲಿಡಬಹುದೇ ? ಎಂಬ ಪ್ರಬಲವಾದ ಶಂಕೆಯೇ ಇದಕ್ಕೆ ಕಾರಣ ವೆಂಬುದನ್ನು ರಮಾಬಾಯಿಯಂಥ ಪಂಡಿತರಿಗೆ ಹೇಳಬೇಕೆ ?' ಎಂದು ಕೇಸರಿಯು ಉತ್ತರಕೊಟ್ಟಿತು. ಸಹಾಯಕ ಮಂಡಳದ ಕಾರ್ಯದರ್ಶಿ ಗಳಾದ ಸದಾಶಿವ ಪಾಂಡುರಂಗ ಕೇಳಕರರೆಂಬ ಸುಧಾರಕರು 'ಸಹಾಯಕ ಮಂಡಳದ ಮತ್ತು ರಮಾಬಾಯಿಯ ವಿಚಾರಗಳಲ್ಲಿ ಮತೈಕ್ಯವಿಲ್ಲವೆಂದು' ಕೇಸರಿಯಲ್ಲಿ ಒಂದು ಪತ್ರವನ್ನು ಪ್ರಸಿದ್ಧಿಸಿದರು.

ಹೀಗೆ ಎಲ್ಲ ಕಡೆಯಿಂದಲೂ ಟೀಕೆಗಳು ಬರಹತ್ತಿದ್ದನ್ನು ನೋಡಿ, ಮಿಸ್ ಹ್ಯಾಮಿಲಿನಿಯು ಪುಣೆಗೆ ಬಂದು ಧಾರ್ಮಿಕ ಶಿಕ್ಷಣ ಕೊಡಲಾಗುವ ದಿಲ್ಲೆಂದು ವಚನ ಕೊಟ್ಟಳು. ರಾನಡೆ ಮೊದಲಾದ ಜನರು ಮತ್ತೆ ಸಹಾಯಮಾಡುವ ವಚನವಿತ್ತರು. ಆದರೆ ಹ್ಯಾಮಿಲಿನಿಯು ಮುಂಬಯಿಗೆ ಮರಳಿದೊಡನೆ, ನಾಯಿಯ ಬಾಲದಂತೆ ಸ್ಥಿತಿಯಾಯಿತು. ಶಾರದಾ ಸದನದ ಉದ್ದೇಶವು ಸ್ತ್ರೀ ಶಿಕ್ಷಣವಿರದೆ ಶುಭವರ್ತಮಾನ ಪ್ರಸಾರವೇ ಇರು ವದೆಂದು ಜನರಿಗೆ ಕಂಡು ಬಂದಿತು. ಸಹಾಯಕ ಮಂಡಳದ ಸದಸ್ಯರಾದ ರಾನಡೆಯಂಥವರು 'ರಮಾಬಾಯಿಯು ಕ್ರಿಶ್ಚಿಯನ್ನಳಾದಾಕ್ಷಣಕ್ಕೆ ಆಕೆಯು ಕಲಿಸಬಾರದೇಕೆ ? ಯೋಗ್ಯವಿರುವದನ್ನು ತೆಗೆದುಕೊಂಡು ಕೆಟ್ಟದ್ದನ್ನು ಬಿಟ್ಟರಾಯಿತು, ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಹತ್ತಿದರು. ಟಿಳಕರು "ಈ ಬಗೆಯಾಗಿ ಸಲಹೆ ನೀಡುವ ಜನರಮೇಲೆ ಜನರನ್ನು ಮೋಸಗೊಳಿಸಿದ ಆರೋಪವು ಬಂದೀತು ? ಸ್ತ್ರೀ ಶಿಕ್ಷಣದ ಸೋಗಿನಿಂದ ನಮ್ಮಲ್ಲಿ ಪ್ರವೇಶಿಸುವ ಕ್ರಿಸ್ತಿ ಹೆಂಗಸು ಹಾಗೂ ಆವಳ ಸಹಾಯಕರು, ಎಷ್ಟೇ ವಿದ್ವಾಂಸರಿರಲಿ, ರಾಜಮಾನ್ಯರಿರಲಿ, ಅವರು ನಮ್ಮ ಸಮಾಜದ, ಹಿಂದೂ ಧರ್ಮದ, ಅಷ್ಟೇ ಏಕೆ, ಸ್ತ್ರೀ ಶಿಕ್ಷಣದ ಶತ್ರುಗಳೆಂದು ನಾವು ತಿಳಿಯುತ್ತೇವೆ" ಎಂದು ಶಸ್ತ್ರವನ್ನೇ ಹಿರಿದರು.

ರಾನಡೆಯವರು ಈ ವಾದವನ್ನು ಸಾಂತ್ವನ ಗೊಳಿಸಲು ಪ್ರಯತ್ನಿ ಸಿದರು. ಕೇಸರಿಯು 'ಶಾರದಾ ಸದನ ಮತ್ತು ರಾನಡೆಯವರ ಮಧ್ಯಸ್ತಿ' ಎಂಬ ಬರಹವನ್ನು ಬರೆಯುತ್ತ 'ಜನೋಽ ವಿದ್ವಾನ್ ಏಕಃ ಸಕಲಮಪಿ ಸಂಘಾಯ ಕಪಟೈಃ' ಎಂಬ ಅವತರಣಕೆಕೊಟ್ಟು, ಸದನದ ದೋಷಗಳನ್ನೆಲ್ಲ

ನಿರ್ದೇಶಿಸಿ ಇವುಗಳಿಗೆ ಉತ್ತರವಿಲ್ಲವೆಂದು ಸಾರಿ, ರಾನಡೆ ಮೊದಲಾದ ವರಿಗೆ ಆಡಳಿತದಲ್ಲಿ ಕೈಹಾಕುವ ಅಧಿಕಾರವನ್ನು ಅಮೇರಿಕೆಯ ಮಿಶನರಿಯು ಕಸಿದುಕೊಂಡಿದೆ. ಅದನ್ನು ಇವರು ಮುಚ್ಚುತ್ತಿರುವದೇಕೆ ? ಪಂಡಿತ ರಮಾಬಾಯಿಯಂತಹ ಉಶೃಂಖಲ ಆಧುನಿಕ ಕಾಮುಂದಕೀಯ ಸ್ವೈರವೃತ್ತಿ ಯನ್ನು ತಡೆಹಿಡಿಯಲೆತ್ನಿಸುವದು ಗಾಳಿಯನ್ನು ಕಟ್ಟಹೋದಂತೆಯೇ ಸರಿ. ರಾನಡೆಯವರಿಗೆ ಇಂಥದನ್ನು ಮಾಡಬೇಡಿರಿ ಎಂದು ಹೇಳಲು ಯಾವ ಅಧಿಕಾರವೂ ಇಲ್ಲ. ಹೀಗಿದ್ದು ರಾನಡೆಯವರು ಸ್ವತಃ ಮೋಸಹೋಗುತ್ತಿ ರುವರಲ್ಲದೆ, ಜನರನ್ನು ಮೋಸಗೊಳಿಸಲು ಕಾರಣರಾಗುತ್ತಿದ್ದಾರೆ'ಎಂದು ಕಟುನುಡಿಗಳನ್ನು ಬರೆದರು.

ಟಿಳಕರು ಶಾರದಾ ಸದನದಲ್ಲಿ ಏನೇನು ನಡೆದಿದೆ ಎಂಬುದನ್ನು ಹೊರಗೆಡುವುದಕ್ಕಾಗಿ ಅಲ್ಲಿಂದ ಹೊರಬಿದ್ದ ಒಬ್ಬ ಹೆಣ್ಣುಮಗಳ ಒಂದು ಪತ್ರವನ್ನು ಪ್ರಸಿದ್ಧಿಸಿದರು. 'ತಂದೆ ತಾಯಿಗಳು ಹೇಳಿದರೂ ಕೂಡ ದೇವಾ ಲಯಗಳಿಗೆ ಹೋಗಗೊಡುವದಿಲ್ಲ. ತುಳಸೀ ಪೂಜೆ ಮಾಡಗೊಡುವದಿಲ್ಲ. ಸಮಯವಿಲ್ಲ. ಈಗ ಬೇಡ ಮುಂತಾದ ಕಾರಣಗಳು ಹೇಳಲ್ಪಡುತ್ತವೆ' ಎಂದು ಪತ್ರದಲ್ಲಿದ್ದಿತು

ಪಂಡಿತ ರಮಾಬಾಯಿಯ ಹೃದ್ಗತವನ್ನೆಲ್ಲ ಪೂರ್ಣ ಬಯಲಿಗೆಳೆ ಯುವ ಸಂಕಲ್ಪವನ್ನು ಟಿಳಕರು ಮಾಡಿ, ಆಕೆಯ ಚರಿತ್ರವನ್ನೆಲ್ಲ ಅಭ್ಯಸಿಸಿ ದರು. ಆಕೆಯು ೧೮೮೫ರಲ್ಲಿ ರಾಸೆಲ್ ಎಂಬಲ್ಲಿ ಉಪನ್ಯಾಸವೀಯುವಾಗ "ಹಿಂದೂ ವಿಧವೆಯರಿಗೆ ಶಿಕ್ಷಣಕೊಟ್ಟು, ನಾನು ಕ್ರಿಸ್ತೀ ಧರ್ಮದಿಂದ ಯಾವ ಸುಖವನ್ನು ಅನುಭೋಗಿಸುತ್ತಿರುವೆನೋ ಆ ಧರ್ಮದ ಉಪದೇಶ ವನ್ನು ಮಾಡುವದಕ್ಕಾಗಿ ಹಿಂದೂ ವಿಧವೆಯರನ್ನು ಸಿದ್ಧಪಡಿಸಿ ಕಳಿಸುವದೇ ನನ್ನ ಮಹತ್ವಾಕಾಂಕ್ಷೆ" ಎಂದು ಹೇಳಿದ್ದಳು. ಇದೂ ಅಲ್ಲದೆ, ಅಮೇ ರಿಕೆಯ ಮಿಶನರಿಗಳಿಗೆ ಧನಯಾಚನೆಮಾಡುವಾಗ "ಶುಭ ವರ್ತಮಾನದ ಪ್ರಸಾರದ ಮಾರ್ಗವು ನಿಷ್ಕಂಟಕವಾಗುವದಕ್ಕಾಗಿ, ಹಿಂದೀಜನರ ಮಹಿಳಾ ಮಂದಿರಗಳ ಬಾಗಿಲದ ಕೀಲಿಯನ್ನು ಮುರಿಯುವದೇ ಎಲ್ಲಕ್ಕೂ ಮಹತ್ವದ ಕಾರ್ಯವೆಂದು, ಧೈರ್ಯದಿಂದ ನಾನು ಈ ಧನ ಸಹಾಯವನ್ನು ಅಪೇಕ್ಷಿಸು ತ್ತೇನೆ" ಎಂದು ಬರೆದಿದ್ದಳು. ಆಕೆಯು ಬರೆದ ಪುಸ್ತಕದಲ್ಲಿಯ ವಾಕ್ಯ

ವಿವು ಇಂತಹ ಅನೇಕ ಉದಾಹರಣೆಗಳನ್ನು ಬಯಲಿಗೆಳೆದರು. ಇದರಿಂದ ರಮಾಬಾಯಿಯ ಸ್ವರೂಪವು ಹೊರಬಿದ್ದಿತು.

"ಪಾಪ, ರಮಾಬಾಯಿಗೆ ಹಿಂದೂ ಧರ್ಮಕ್ಕೆ ಬೆಂಕಿ ಹಚ್ಚುವದೇನು ಇಲ್ಲ. ಆದರೆ ಮನೆಯಲ್ಲಿ ಚಿಕ್ಕ ಮಕ್ಕಳು, ಹುಡುಗರು ಇರುವ ಸಂಧಿಯನ್ನು ಸಾಧಿಸಿ, ಮನೆಗೆ ಕೊಳ್ಳಿಕೊಟ್ಟು, ದೇವಾ, ಮಾನವನಿಂದ ಆಗಬಹುದಾದ ಅಲ್ಪ ಸೇವೆಯನ್ನು ಸಲ್ಲಿಸಿದ್ದೇನೆ. ಮುಂದಿನ ಮಾರ್ಗವನ್ನು ತೋರಿಸಲು ನೀನು ಸಮರ್ಥನಿರುವೆ ಎಂದು ಅವರು ಪ್ರಾರ್ಥಿಸುತ್ತಿರುವಾಗ, ರಾ. ಬ. ರಾನಡೆಯಂಥವರು, ಶಂಖವನ್ನೂದಲು ಸಿದ್ಧರೇ ಇರುವರು. ಬೆಂಕಿಯ ಹತ್ತರ ತುಪ್ಪವನ್ನಿಟ್ಟು, ತುಪ್ಪವು ಕರಗಿದ್ದಕ್ಕೆ ನಾನು ಹೊಣೆಗಾರಳಲ್ಲವೆಂದು ಹೇಳುವ ರಮಾಬಾಯಿಯ ಬೆನ್ನು ಹತ್ತುವ ರಾನಡೆಯವರು, ಹುಡಿಗೆಯರನ್ನು ಕುಲಗಡಿಸಿದ ದೋಷಕ್ಕೆ ಪಾತ್ರರಾಗಬೇಕಾದೀತೆಂದು ಸ್ಪಷ್ಟವಾಗಿಯೇ ಎಚ್ಚರಿಸಿಸಿದರು. ರಮಾಬಾಯಿಯ ವಿಧವಾಮಿಶನ್‌ಗೃಹವು, ಸರಕಾರಿ ಇಲ್ಲವೆ ಮಿಶನರಿ ಶಾಲೆಗಿಂತಲೂ ಅಪಾಯಕರವಾಗಿದೆ. ಸರಕಾರವು ಧರ್ಮ ಶಿಕ್ಷಣದ ವಿಷಯದಲ್ಲಿ ತಟಸ್ಥವಿದೆ. ಮಿಶನರಿಗಳು ಹೇಳಿಕೇಳಿ ಕುಲಗೆಡಿಸುವವರು. ಆದರೆ ಈಕೆಯದು ಮಾತ್ರ ಶಿಕ್ಷಣದ ಸೋಗು, ಉದ್ದೇಶ ಮಾತ್ರ ಕುಲಗೆಡಿಸುವದು" ಎಂದು ಟಿಳಕರು ಮರ್ಮಕ್ಕೇ ಪೆಟ್ಟುಕೊಟ್ಟರು.

ಕೊನೆಗೆ ರಾನಡೆ, ಭಂಡಾರಕರ, ಭಟ್ಟ ಮೊದಲಾದ ಪ್ರಭೃತಿಗಳು ಇದಕ್ಕೆ ನಿರುತ್ತರರಾಗಿ, ಅಮೇರಿಕನ್ ಅಧಿಕಾರಿಗಳಿಗೆ ಪತ್ರಬರೆದು, ತಮಗೂ ಸಂಸ್ಥೆಗೂ ಇದ್ದ ಸಂಬಂಧವನ್ನು ಕಡಿದುಕೊಂಡರು

ಈ ಗೊಂದಲದಲ್ಲಿ ಜನರು ತಮ್ಮ ಮಕ್ಕಳನ್ನು ಶಾಲೆಯಿಂದ ತಿರುಗಿ ತಕ್ಕೊಂಡರು. ಇದೇ ಪ್ರೊ. ಕರ್ವೆಯವರ ತಪಶ್ಚರ್ಯಕ್ಕೆ ಕಾರಣವಾಯಿತು.

೧೮೯೩ ರಲ್ಲಿ ರಮಾಬಾಯಿಯು ೧೦-೧೩ ಜನ ಹುಡಿಗಿಯರನ್ನು ಕುಲಗೆಡಿಸಿದಳು ಎಂಬ ಸುದ್ದಿಯು ಪ್ರಸಿದ್ಧವಾಯಿತು. ರಮಾಬಾಯಿಯು ಪುಣೆಯನ್ನು ಬಿಟ್ಟು, ಖೇಡಗಾವಕ್ಕೆ ಹೋದಳು. ಶಾರದಾ ಸದನವು, ಮುಕ್ತಿ ಸದನವೆಂಬ ಅಭಿದಾನವನ್ನು ಹೊಂದಿತು.

ಟಿಳಕರು ಸ್ತ್ರೀ ಶಿಕ್ಷಣಕ್ಕೆ ವಿರುದ್ಧರಿರದೆ, ಇಂತಹ ಕುಲಗೇಡಿಗಳ ಧರ್ಮದ್ರೋಹಿಗಳ, ವಿರುದ್ಧರಿದ್ದರೆಂಬುದು ವ್ಯಕ್ತವಾಯಿತು. ಅವರ ಮುಂಧೋರಣವನ್ನು ಕಂಡು ಜನತೆ ಬೊಟ್ಟು ಕಚ್ಚಿತು.

---

## ಹಿಂದೂ ಮುಸ್ಲೀಮರ ದಂಗೆಗಳು

ಸುವರ್ಣಕ್ಕೆ ಪುಟ ಕೊಟ್ಟಕೊಟ್ಟಂತೆ, ಅದರ ಕಾಂತಿಯು ಹೇಗೆ ಹೇಗೆ ಹೆಚ್ಚುತ್ತ ಹೋಗುವದೋ ಹಾಗೆ ಟಿಳಕರು ಸಂಕಟಗಳನ್ನೆದುರಿಸಹತ್ತಿದಂತೆ ತೇಜಸ್ವಿಗಳಾಗಿ ಹೊರಬೀಳಹತ್ತಿದರು. ರಾಷ್ಟ್ರಕ್ಕೆ ಮಾರ್ಗದರ್ಶನ ಮಾಡುತ್ತ ನಡೆದರು. ಹಿಂದೂ ಮುಸ್ಲೀಮರ ದಂಗೆಗಳಲ್ಲಿ ಇದೇ ಮಾತು ಒಡೆದು ಕಾಣುವದು. ಧರ್ಮಾಂಧತೆಯು ಸಮಾಜವನ್ನೂ ಜನಾಂಗವನ್ನೂ ಹೇಗೆ ಸಂಕಟಕ್ಕೆ ಗುರಿಮಾಡುವದೆಂಬುದನ್ನು ಈ ದಂಗೆಗಳು ಚನ್ನಾಗಿ ಮನಗಾಣಿಸಿ ಕೊಡುತ್ತವೆ.

೧೮೯೩–೯೪ ನೇ ಇಸ್ವಿಗಳಲ್ಲಿ ಹಿಂದೂ ಮುಸ್ಲೀಮರ ದಂಗೆಗಳಿಗೆ ಮಹಾಪೂರ ಬಂದಿತು. ೧೮೫೧; ೧೮೭೪ ರ ದಂಗೆಗಳು ಪಾರ್ಸಿ ಮುಸ್ಲೀಮರಲ್ಲಿ ಮಾತ್ರ ನಡೆದಿದ್ದವು. ೧೮೯೩ ರ ಮುಂಬಯಿ ದಂಗೆಯು ವಿರಾಟರೂಪವನ್ನು ತಾಳಿ, ಹಿಂದೂ ಮುಸ್ಲೀಮ ಸ್ವರೂಪವನ್ನು ಹೊಂದಿತು. ಪ್ರಭಾಸ ಪಟ್ಟಣದಿಂದ ಈ ಕಿಡಿಯು ಹಾರಿ ಬಂದಿದ್ದಿತು. ಡೋಲಿಯ ಸಲುವಾಗಿ ವ್ಯಕ್ತಿ ವ್ಯಕ್ತಿಗಳಲ್ಲಿ ಪ್ರಾರಂಭವಾದ ಈ ಜಗಳವು, ಜಾತಿ ಜಾತಿಗಳಲ್ಲಿ ಹಬ್ಬಿ ಅನೇಕ ದೇವಾಲಯಗಳು ನಾಶ ಮಾಡಲ್ಪಟ್ಟವು. ಮೂರ್ತಿಗಳು ಒಡೆಯಲ್ಪಟ್ಟವು. ಸಾಧು ಸಂತರ ಮೇಲೆ ಚಿಮಣೀ ಎಣ್ಣೆಯನ್ನು ಉಗ್ಗಿ ಬೆಂಕಿಯನ್ನು ಹಚ್ಚಿದರು. ಖಟ್ಲೆಗೆ ಪ್ರಾರಂಭವಾಯಿತು. ಹಿಂದೂ ಮುಸ್ಲೀಮರಿಬ್ಬರೂ ರಕ್ಷಣೆಗಾಗಿ ಯತ್ನಿಸಹತ್ತಿದರು. ಮುಂಬಯಿಯಲ್ಲಿಯ ಅವರವರ ಜನರು ಸಹಾಯಕ್ಕೆ ಮುಂದೆ ಬಂದರು. ಇದೇ ಮುಂಬಯಿ ದಂಗೆಗೆ ಬೀಜವಾಯಿತು. ಯಾರ ಕನಸು ಮನಸಿನಲ್ಲಿಯೂ ಇಲ್ಲದೆ, ೧೧ ನೇ ಅಗಷ್ಟದ ದಿವಸ ಮುಂಬೈಯಲ್ಲಿ ಜುಮ್ಮಾ ಮಸೀದೆಯಿಂದ ದೀನ ದೀನವೆಂದು ಮುಸ್ಲೀಮರು ಹೊರಬಿದ್ದರು. ಪೋಲೀಸರು ಅವರನ್ನು ತಡೆಯುವಷ್ಟರಲ್ಲಿಯೇ ಊರಲ್ಲೆಲ್ಲ ದಂಗೆಯು ಹಬ್ಬಿಬಿಟ್ಟಿತು. ಹನುಮಾನ ಲೇನದಲ್ಲಿರುವ ಮಹಾದೇವ ದೇವಾಲಯದಲ್ಲಿ "ದಿವಸರ" ಎಂಬ ಗುಜರಾತಿಗಳ ಹಬ್ಬದ ನಿಮಿತ್ತ ವಾದ್ಯ ಬಾರಿಸಿದ್ದೇ ಇದಕ್ಕೆ ಕಾರಣವೆಂದು ಹಿಂದುಗಡೆ ಹೇಳಲ್ಪಟ್ಟಿತು. ವಾದ್ಯ

ಬಾರಿಸುವ ಮೊದಲೇ ಮಸೀದಿಯಲ್ಲಿ ಕಲ್ಲು ಹಾಗೂ ಬಡಿಗೆಗಳು ಸಂಗ್ರಹಿಸಲ್ಪಟ್ಟಿದ್ದವೆಂದು ಪೋಲೀಸರಿಂದ ಪ್ರಕಾಶಕ್ಕೆ ಬಂದಿತು. ಮರುದಿನ ಹಿಂದುಗಳು ಆತ್ಮರಕ್ಷಣೆಗಾಗಿ ಕೈಯಲ್ಲಿ ಡೊಣ್ಣೆಗಳನ್ನೆತ್ತಿದರು. ಬಿರುಗಾಳಿಯಂತೆ ದಂಗೆಯು ವಿರಾಟ ರೂಪ ತಾಳಿತು. ದಂಗೆಯನ್ನು ನಿಯಂತ್ರಿಸಲು ೩೦೦೦ ಸೈನಿಕರನ್ನು ಹೊರಗಿನಿಂದ ತರಬೇಕಾಯಿತು. ೧೫೦೦ ಜನರು ಬಂಧಿಸಲ್ಪಟ್ಟರು.

ದಂಗೆಯು ಶಾಂತವಾದ ನಂತರ ಬುದ್ಧಿವಾದ ಮಾಡಲು ಶಾಂತಿ ದೂತರು ಮುಂದೆ ಬಂದರು. ತರ್ಕವಿತರ್ಕಗಳಿಗೆ ಪ್ರಾರಂಭವಾಯಿತು. ಯಾರು ತೀರ ಕ್ಷುಲ್ಲಕ ಕಾರಣಗಳಿಂದ ದಂಗೆಗೆ ಪ್ರವೃತ್ತರಾಗುವರೋ ಅವರನ್ನು ಸದೆಬಡಿಯಬೇಕೆಂಬ ಮಾತನ್ನು ಹೇಳಲು ಎಲ್ಲರೂ ಹಿಂಜರಿಯುತ್ತಿದ್ದರು. ಈ ಅಪ್ರಿಯವಾದ, ಜನಹಿತವಾದ ಕಾರ್ಯವನ್ನು ಕೈಕೊಳ್ಳುವ ಕೆಲಸವು ಟಿಳಕರ ಪಾಲಿಗೆ ಬಂದಿತು. "ಮುಸಲ್ಮಾನರು ಉನ್ಮತ್ತರಾಗಿದ್ದಾರೆ. ಈ ಉನ್ಮತ್ತತೆಗೆ ಸರಕಾರವು ತೋರಿಸುವ ಉತ್ತೇಜಕ ಧೋರಣವೇ ಮುಖ್ಯ ಕಾರಣವು" ಎಂದು ಟಿಳಕರು ಸಾರಿದರು. "ನಾವು ಇಲ್ಲಿ ಇರುವದರಿಂದಲೇ ಮುಸಲ್ಮಾನರ ರಕ್ಷಣೆಯಾಗಿದೆ. ಎಂದು ಬ್ರಿಟಿಶರು ಆಡಿ ತೋರಿಸಹತ್ತಿದ್ದಾರೆ. ಇದು ಮುಸ್ಲೀಮರನ್ನು ಉತ್ತೇಜನಗೊಳಿಸುವದಲ್ಲದೆ ಮತ್ತೇನು ?" ಎಂದು ಕೇಸರಿಯಲ್ಲಿ ಆವ್ಹಾನಿಸಿದರು. ಅಶಿಕ್ಷಿತ ಜನರನ್ನು ಹಿಡಿತದಲ್ಲಿಟ್ಟುಕೊಳಬೇಕೆಂದಿದ್ದರೆ, ಸರಕಾರವು ಒಬ್ಬರನ್ನು ಮುಂದೆಕರೆಯುವ, ಇನ್ನೊಬ್ಬರನ್ನು ದೂರ ಮಾಡುವ ಪಕ್ಷಪಾತದ ಧೋರಣವನ್ನು ಬಿಟ್ಟು, ಎಲ್ಲರಿಗೂ ಒಂದೇ ಬಗೆಯ ಶಿಕ್ಷೆಯನ್ನು ವಿಧಿಸಬೇಕು. ಇಲ್ಲದಿದ್ದರೆ ಮುಂಬಯಿಯಲ್ಲಿ ಎರಡನೆಯ ದಿನ ಆತ್ಮರಕ್ಷಣೆಗಾಗಿ ದಂಡಧರಿಸಿದಂತೆ, ಹಿಂದುಗಳಿಗೆ ತಮ್ಮನ್ನು ತಾವೇ ರಕ್ಷಿಸಿಕೊಳ್ಳುವ ಪ್ರಸಂಗ ಬಂದೀತು" ಎಂದು ಸರಕಾರಕ್ಕೆ ಎಚ್ಚರಿಕೆ ಕೊಟ್ಟರು. ಸರ್ವರನ್ನು ಸವಿಮಾತುಗಳಿಂದ ಸಮಾಧಾನಗೊಳಿಸುವ ಈ ಕಾಲದಲ್ಲಿ ಟಿಳಕರು ಇಂತಹ ಮಾತುಗಳನ್ನಾಡಬಾರದಿತ್ತೆಂದು ಕೆಲವರಿಗೆ ಅನಿಸಿತು. ಸರಕಾರವು ತೋರಿಸುತ್ತಿರುವ ಪಕ್ಷಪಾತತನದ ಮೂಲಕವೇ ಸ್ಪಷ್ಟೋಕ್ತಿಗಳನ್ನಾಡುವ ಪ್ರಸಂಗ ಬಂದಿತೆಂದು ಟಿಳಕರು ಉತ್ತರಿಸಿದರು.

ಈ ಸಮಯದಲ್ಲಿ ಹಿಂದೀಯರು ಮುಸಲ್ಮಾನರ ಬಗ್ಗೆ ತೋರಿಸಬೇಕಾದಷ್ಟು ಸಹಾನುಭೂತಿಯನ್ನು ತೋರಿಸುವದಿಲ್ಲವೆಂಬ ಹೂಲಿಯನ್ನೆಬ್ಬಿಸಿ, ಜನರ ಮನಸ್ಸನ್ನು ಕಲುಷಿತ ಮಾಡುವ ಪ್ರಯತ್ನವು ನಡೆದಿದ್ದಿತು. ಹಿಂದೂ ಮುಸ್ಲೀಮರಿಬ್ಬರೂ ಸೇರಿ ಪಂಚಾಯತಿಗಳ ಮುಖಾಂತರ ದಂಗೆಗಳಾಗದಂತೆ ನೋಡಿಕೊಳ್ಳುವ ಹೊಣೆಯನ್ನು ಹೊರಬೇಕೆಂದು ಸರಕಾರವು ಬಯಸುತ್ತಿತ್ತು. ಸರಕಾರದ ಈ ಸವಿಮಾತುಗಳಿಗೆ ಮರುಳಾಗಿ ಕೆಲವು ಹೌದಪ್ಪಗಳು ಮುಂದೆ ಬರುವ ಲಕ್ಷಣ ಕಂಡಿತು. ಆಗ ಟಿಳಕರು "ಇಲ್ಲಿ ನೀವು ತಪ್ಪುತ್ತಿರುವಿರಿ, ಎಂತಹ, ಸುಶಿಕ್ಷಿತ ಮುಂದಾಳುವೂ ಈ ಕಾರ್ಯವನ್ನು ನಿರ್ವಹಿಸಲು ಸಮರ್ಥನಾಗಲಾರನು. ದಂಗೆಗಳ ನಿಜವಾದ ಕಾರಣ ಅಶಿಕ್ಷಿತರಿದ್ದು, ಯಾರ ಬುದ್ಧಿವಾದವೂ ಅವರ ತಲೆಗೆ ಹತ್ತುವದಿಲ್ಲ. ಸರಕಾರವು ನಿಷ್ಪಕ್ಷಪಾತವಿದ್ದು, ಯಾರ ಭಿಡೆ, ಮುರವತ್ತಿಗೊಳಗಾಗದೆ ಕೇವಲ ನ್ಯಾಯದಿಂದ ಕಾಯದೆಗಳನ್ನು ನಿಷ್ಠುರವಾಗಿ ಎಲ್ಲರಿಗೂ ಅನ್ವಯಿಸುವದೆಂದು ಅವರಿಗೆ ಮನವರಿಕೆಯಾದರೆ ಮಾತ್ರ, ಅವರಿಗೆ ತಿಳಿವಳಿಕೆ ಬರಬಹುದು. ಈ ಪ್ರಕರಣದಲ್ಲಿ ಹಿಂದೂ ಮುಸಲ್ಮಾನ ಎರಡೇ ಪಕ್ಷಗಳಿರದೆ ಸರಕಾರವೂ ಒಂದು ಪಕ್ಷವಾಗಿದೆ ಎಂಬುದನ್ನು ಯಾರೂ ಅಲಕ್ಷಿಸಕೂಡದು." ಎಂದು ಜನರಿಗೆ ಎಚ್ಚರಿಕೆ ಕೊಟ್ಟರು. ಇದಲ್ಲದೆ ಲಾರ್ಡ ಹ್ಯಾರಿಸರು ಹಿಂದೂ ಮುಸಲ್ಮಾನರಿಗಷ್ಟೇ ಉಪದೇಶಿಸದೆ, ತನ್ನ ಕೈಕೆಳಗಿರುವ ಅಧಿಕಾರಿ ವರ್ಗಕ್ಕೂ ನಿಷ್ಪಕ್ಷಪಾತದಿಂದಿರಲು ಹೇಳಬೇಕೆಂದು ಸೂಚಿಸಿದರು.

ಮುಸಲ್ಮಾನರ ದಂಗೆಗಳಾಗಲು ಸರಕಾರಿ ಅಧಿಕಾರಿಗಳ ಪಕ್ಷಪಾತವೇ ಕಾರಣವೆಂದು ಸುಧಾರಕರೂ ಕೇಸರಿಯಂತೆ ಅಭಿಪ್ರಾಯಪಡುತ್ತಿದ್ದರು. ಆದರೆ ಸಭೆ ಕರೆದು ಸರ್ಕಾರದ ಮುಂದೆ ಮಂಡಿಸಲು, ಹಿಂದೆ ಮುಂದೆ ನೋಡುತ್ತಿದ್ದರು. ಯಾರ ವಿರೋಧವನ್ನು ಲೆಕ್ಕಿಸದೆ, ಸರಕಾರವು ಮುಸಲ್ಮಾನರಿಗೆ ಪಕ್ಷಪಾತ ತೋರಿಸುತ್ತಿರುವದೇ ದಂಗೆಗೆ ಕಾರಣವೆಂದು, ಸಾರ್ವಜನಿಕ ಸಭೆಗರೆದು ಟಿಳಕರು ಗೊತ್ತುವಳಿಯನ್ನು ಮಾಡಿಸಿದರು.

ಎದುರಾಳಿಗಳ ದೋಷಗಳನ್ನು ಬಯಲಿಗೆಳೆಯುತ್ತಿದ್ದಂತೆ ಹಿಂದುಗಳ ಸಂಘಟನೆಗೂ ಟಿಳಕರು ಕೈ ಹಾಕಿದರು ಇದೇ ಗಣೇಶೋತ್ಸವದ ಪ್ರಾರಂಭ. "ಈ ಸಲದ ಗಣಪತಿಯ ಉತ್ಸವವು ವಿಶಿಷ್ಟ ರೀತಿಯಿಂದ ನಡೆದು, ಅದಕ್ಕೆ

ಸಾರ್ವಜನಿಕ ಸ್ವರೂಪ ಬಂದಿದೆ. ಗಣಪತಿಯನ್ನು ಪೂಜಿಸದ ಹಿಂದುವಿಲ್ಲ. ಆದ್ದರಿಂದ ಗಣಪತಿ ಕಳಿಸುವ ಸಮಾರಂಭವು ಸಾರ್ವಜನಿಕವಾಗಿ ಜರುಗಿದರೆ, ಒಂದೆಡೆ ಕೂಡಿ ಕಾರ್ಯ ಮಾಡುವ ಅವಕಾಶ ಜನತೆಗೆ ದೊರೆತು, ಐಕ್ಯಕ್ಕೆ ಸಾಧನವಾಗುವದು" (ಕೇಸರಿ ೨೬-೯-೧೮೯೩) ಎಂದು ಹಿಂದೀಯರನ್ನು ಸಂಘಟನೆಗೆ ಪ್ರಚೋದಿಸಿದರು.

ಟಿಳಕರು ಕಂಡು ಹಿಡಿದ ನಿದಾನವು ನಿಜವೆಂದು ಒಪ್ಪುವ ಪ್ರಸಂಗ ಒದಗಿತು. ಏವಲೆಯೆಂಬ ಊರಲ್ಲಿ ಬಾಲಾಜಿಯ ಪಲ್ಲಕ್ಕಿಯು ಪ್ರತಿವರ್ಷ ವಾದ್ಯ ವೈಭವದಿಂದ ಹೊರಡುತ್ತಿದ್ದಿತು. ಪಾಟೀಲ ಮಸೀದಿಯ ಮುಂದೆ ವಾದ್ಯ ಬಾರಿಸಬೇಕೋ ಬಾರದೋ ಎಂಬ ಬಗ್ಗೆ ಜಗಳವಿದ್ದಿತು. ಕಲೆಕ್ಟರನು ಅಂದಿನ ದಿವಸ ಮಸೀದಿಯಲ್ಲಿ ಮುಸಲ್ಮಾನರು ಸೇರಬಾರದೆಂದೂ ಹಿಂದುಗಳು ಮಸೀದಿಯ ಹಿಂದು ಮುಂದೆ ೧೫ ಅಡಿಗಳ ವರೆಗೆ ಬಾರಿಸಬಾರದೆಂದೂ ಆಜ್ಞೆ ಹೊರಡಿಸಿದನು. ಮುಸಲ್ಮಾನರಿಗೆ ಇದು ಮಾನ್ಯವಾಗದೆ ಹೈಕೋರ್ಟಿಗೆ ಹೋದರು. ಹೈಕೋರ್ಟು ಕಲೆಕ್ಟರರ ಆಜ್ಞೆಯನ್ನು ಎತ್ತಿ ಹಿಡಿಯಿತು. ಹಿಂದುಗಳು ಕಲೆಕ್ಟರರ ಆಜ್ಞೆಯಂತೆ ನಡೆದರೂ ಮಸೀದಿಯಿಂದ ಕಲ್ಲುಗಳು ಬಿದ್ದು ದಂಗೆಯು ಪ್ರಾರಂಭವಾಯಿತು. ಆಗ ಟಿಳಕರು "ಸರಕಾರವು ಈ ದಂಗೆಗಳು ನಿಲ್ಲುವಂತೆ ಸ್ಥಿರವಾದ ವ್ಯವಸ್ಥೆಯನ್ನೇ ಮಾಡಬೇಕೆಂದು ಬಯಸುತ್ತಿದ್ದರೆ, ಪೂರ್ವದ ಸಾಂಪ್ರದಾಯಗಳನ್ನು ವಿಚಾರ ಮಾಡಿ, ಯಾವುದು ಸರಿಯಿರುವುದೋ ಅದರಂತೆ ಆಜ್ಞೆ ಹೊರಡಿಸುವ ಅಧಿಕಾರವನ್ನು ನ್ಯಾಯಾಧೀಶರಿಗೆ ಕೊಡಬೇಕು. ಆಜ್ಞೆಯನ್ನು ಮುರಿಯುವ ಉದ್ದೇಶದಿಂದ ಯಾರಾದರೂ ಆಕ್ಷೇಪವನ್ನೆತ್ತಿದರೆ, ಅವರನ್ನು ಸರಕಾರವು ನಿರ್ಭಿಡೆಯಿಂದ ದಂಡಿಸಬೇಕು" ಎಂದು ಸರಕಾರಕ್ಕೆ ಸೂಚಿಸಿದರು. ಸರಕಾರವು ಏನನ್ನೂ ಮಾಡಲಿಲ್ಲ. ಜನತೆ ಸ್ವಾವಲಂಬನದ ಮಾರ್ಗವನ್ನು ಹಿಡಿದು, ಮುಸಲ್ಮಾನರೊಡನಿದ್ದ ತಮ್ಮ ವ್ಯವಹಾರವನ್ನೆಲ್ಲ ನಿಲ್ಲಿಸಿಬಿಟ್ಟರು. ಮತ್ತು ಸರಕಾರದ ಹಾಗೂ ಮುಸ್ಲಿಮರ ಕೃತಿಗಳ ನಿಷೇಧವೆಂದು ಪಲ್ಲಕ್ಕಿ ಹೊರಡಿಸುವದನ್ನೇ ತಡೆ ಹಿಡಿದರು. ರಾವೇರಿ, ಬೆಳಗಾವ, ಸೋಲಾಪೂರ, ಸಾತಾರಾ, ವಾಯಿ, ರತ್ನಾಗಿರಿ, ಪೇಣ ಮೊದಲಾದ ಸ್ಥಳಗಳಲ್ಲಿಯೂ ಕೂಡ, ಸರಕಾರದ ಈ ದುರ್ಬಲ ಧೋರಣದಿಂದಲೇ ದಂಗೆಗಳಾಗುತ್ತವೆಂಬುದು ಹೊರಬಿದ್ದಿತು. ಮುಂಬ

ಯಿಯ ದಂಗೆಯ ವಿಚಾರಣೆಯಲ್ಲಿ ಈ ಮಾತು ಸತ್ಯವೆಂದು ಮರು ಸವಾಲಿ ನಲ್ಲಿ ಪ್ರಕಟವಾಯಿತು. ಏವಲೆಯಲ್ಲಿ ಪಕ್ಷಪಾತವು ಶಿಖರಕ್ಕೆ ಮುಟ್ಟಿತು. ದಕ್ಷಿಣ ಭಾರತದ ಕಮಿಶನ್ನರಾದ ಮಿಸ್ಟರ ಫ್ಲೀಟರು ಏವಲೆಗೆ ಬಂದಾಗ ಮುಸಲ್ಮಾನರ ಉನ್ಮತ್ತತನವನ್ನೂ ಹುಂಬತನವನ್ನೂ ಕಣ್ಣಾರೆ ಕಂಡರು. ಮುಸಲ್ಮಾನರು ರೇಗಿಗೇಳುವ ಹಾಗೂ ಹೊಡೆದಾಡುವ ಸ್ವಭಾವದವರಿದ್ದ ಮೂಲಕ, ಹಿಂದುಗಳು ತಮ್ಮ ಹಕ್ಕುಗಳು ಪೂರ್ವಪರಂಪರೆಗನುಸರಿಸಿದ್ದರೂ ಅವುಗಳನ್ನು ಬಿಟ್ಟು ಬಿಡಬೇಕೆಂಬುದೇ ಸರಕಾರಿ ಅಧಿಕಾರಿಗಳ ಮನೋಭಿ ಪ್ರಾಯವಿದ್ದಿತು. ಲಾರ್ಡ ಹ್ಯಾರಿಸರ ಉಪದೇಶದ ಅರ್ಥವೂ ಇದೇ ಇದ್ದುದ ರಿಂದ ಟಿಳಕರು ಹ್ಯಾರಿಸರ ವಿರುದ್ಧವಾಗಿ ಶಸ್ತ್ರವನ್ನು ಹಿರಿದಿದ್ದರು.

ಸರಕಾರವು ಮುಸಲ್ಮಾನರ ಮನಮುರಿಯುವ ಕೆಲಸಕ್ಕೆ ಕೈ ಹಾಕುವ ದಿಲ್ಲೆಂದು ಏವಲೆಯ ಜನ ರೊಚ್ಚಿಗೆದ್ದರು. ಮುಸಲ್ಮಾನರು ಮಾರುತಿ ದೇವಾಲಯದ ಎದುರಿಗೆ ಕಟ್ಟಿದ ತೋರಣವನ್ನು ಸುಟ್ಟರು. ದಂಗೆಗೆ ಪ್ರಾರಂಭವಾಯಿತು. ಮಸೀದಿಗಳು ದೇವಾಲಯಗಳು ಉಧ್ವಸ್ತವಾದವು. ಕೊಲೆ ಸುಲಿಗೆಗೆ ಪ್ರಾರಂಭವಾಯಿತು. ಸರಕಾರಕ್ಕೆ ಸೈನ್ಯವನ್ನು ತರಿಸಬೇಕಾ ಯಿತು. ಆಶ್ಚರ್ಯದ ಸಂಗತಿಯೆಂದರೆ ಕೇವಲ ಹಿಂದುಗಳೇ ಬಂಧಿಸಲ್ಪಟ್ಟರು. ಅಧಿಕಾರಿಗಳ ಪಕ್ಷಪಾತವು ಅಗಸಿಗೆ ಕಟ್ಟಲ್ಪಟ್ಟಿತು. ಅಧಿಕಾರಿಗಳ ಈ ನಡ ತೆಯು ಅನ್ಯಾಯದ್ದೆಂದು ಸರಕಾರಕ್ಕೆ ಅನಿಸಿ, ಕೊನೆಗೆ ಮುಸಲ್ಮಾನ ಇನ್‌ಸ್ಪೆಕ್ಟ ರರನ್ನೂ ಆ. ಕಲೆಕ್ಟರರನ್ನೂ ವರ್ಗಮಾಡಬೇಕಾಯಿತು. ಆದರೂ ಪರಿಸ್ಥಿತಿಯು ಹಿಡಿತದಲ್ಲಿ ಬರಲಿಲ್ಲ. ಸರಕಾರವು ಬಹಿಷ್ಕಾರವನ್ನು ನಿಲ್ಲಿಸಿರಿಯೆಂದು ಹಿಂದೂ ಗಳಿಗೆ ಹೇಳಹತ್ತಿತು. ನಮ್ಮ ಹಳೆಯ ಸಾಂಪ್ರದಾಯ ಹಾಗೂ ಹಕ್ಕುಗಳನ್ನು ಮುಸಲ್ಮಾನರಿಂದ ರಕ್ಷಿಸುವೆವೆಂದು ವಚನಕೊಡುತ್ತೀರಾ? ಎಂದು ಜನ ಕೇಳ ಹತ್ತಿತು. ಇಷ್ಟೆಲ್ಲ ಅನರ್ಥ ಅನ್ಯಾಯಗಳು ನಡೆದಿದ್ದರೂ ತಿಳಿದೂ ತಿಳಿದೂ ಸರಕಾರವು ಅಧಿಕಾರಿಗಳನ್ನು ಎತ್ತಿ ಹಿಡಿಯುವ, ಮತ್ತು ಮುಸ್ಲೀಮರ ಡುಬ್ಬ ಚಪ್ಪರಿಸುವ ಗೊತ್ತುವಳಿಯೊಂದನ್ನು ನಿರ್ಲಜ್ಜತನದಿಂದ ಸ್ವೀಕರಿ ಸಿತು. ಅದು ಪ್ರಕಟವಾಗುವ ಮೊದಲೇ ಅದನ್ನು ಕೇಸರಿಯಲ್ಲಿ ಟಿಳಕರು ಪ್ರಸಿದ್ಧಿಸಿದರು ಟಿಳಕರು ಏವಲೆಗೆ ಧಾವಿಸಿದರು. ಪರಿಸ್ಥಿತಿಯನ್ನು ನಿರೀಕ್ಷಿಸಿ ದರು. ಜನತೆಗೆ ಬೆಂಬಲವಾಗಿ ನಿಂತರು. ದಬ್ಬಾಳಿಕೆಯನ್ನೂ ಮುಸ್ಲೀಮರ

ಉಚ್ಛೃಂಖಲ ಕೃತಿಗಳನ್ನೂ ಉಗ್ರವಾಗಿ ಖಂಡಿಸಿದರು. ಸರಕಾರದ ಅನ್ಯಾಯ ಗಳನ್ನು ಬಯಲಿಗೆಳೆದರು. ಹ್ಯಾರಿಸನನ್ನ ನ ಮೇಲಂತೂ ಟೀಕೆಗಳ ಮಳೆಯನ್ನೇ ಕರೆದರು. ಟಿಳಕರ ಈ ರೌದ್ರರೂಪವನ್ನು ನೋಡಿ, ಎಲ್ಲಿ ಖಟ್ಲೆಯಾಗುವದೋ ಎಂದು ಜನ ಮಾತನಾಡಹತ್ತಿತು. ಆದರೆ ಆಗಲಿಲ್ಲ.

ಈ ಟೀಕೆಯ ಪರಿಣಾಮವಾಗದೆ ಹೋಗಲಿಲ್ಲ. ಖಟ್ಲೆಗಳನ್ನು ಹಾಕಿ ಸೆಶೆನ್ ಕಮಿಟ ಆಗಿದ್ದರೂ ಕೂಡ, ಊರ ಪ್ರಮುಖರನ್ನೆಲ್ಲ ಬಿಡುಗಡೆ ಮಾಡಬೇಕಾಯಿತು. 'ಸರಕಾರವು ಪೂರೈಸಿದ ಪುರಾವೆಗಳಿಂದ ಬೀದಿಯಲ್ಲಿ ತಿರುಗುವ ನಾಯಿಗೂ ಕೂಡ ಫಾಸೀ ಕೊಡಲು ಬರುವದಿಲ್ಲ' ಎಂದು ಡಿಸ್ಟ್ರಿಕ್ಟ ಜಜ್ಜರಾದ ಮಿಸ್ಟರ ಅನ್ವೀನರು ಉದ್ಗಾರ ತೆಗೆಯಬೇಕಾಯಿತು. ಅಧಿಕಾರಿಗಳ ಮೋರೆಗೆ ಮಸೀ ಹತ್ತುವ ಪ್ರಸಂಗ ಬಂದಿತು. ಕಷ್ಟ ಬಟ್ಟರೂ ಜನತೆ ಜಯಶೀಲವಾಯಿತು. ಟಿಳಕರು ಜಯಶೀಲನಾದ ಯೋಧನಂತೆ ಈ ಪ್ರಕರಣದಿಂದ ಹೊರಬಿದ್ದರು.

ಈ ಗಾಳಿಯು ಪುಣೆಗೂ ಬೀಸಿತು ೧೮೯೪ ರಲ್ಲಿ ಹನುಮಜಯಂತಿಯ ದಿನ ದಂಗೆ ಏಳುವ ಸಂಭವವಿದ್ದಿತು. ಸರಕಾರವು ಮಸೀದಿಗಳ ಮುಂದೆ ವಾದ್ಯ ಬಾರಿಸಬಾರದೆಂಬ ಅನ್ಯಾಯದ ಆಜ್ಞೆಯನ್ನು ಹೊರಡಿಸಿತು ಅದರ ನಿಷೇದಾರ್ಥವಾಗಿ ಟಿಳಕರು ಉತ್ಸವವನ್ನೇ ನಿಲ್ಲಿಸಲು ಸಲಹೆಕೊಟ್ಟರು. ಅಧಿಕಾರಿಗಳಿಗೆ ಇದು ಅವಮಾನವೆನಿಸಿತು. ಪೋಲೀಸರು ತಾವೇ ಮೆರವಣಿಗೆ ಯನ್ನು ಹೊರಡಿಸಬೇಕಾಯಿತು. ಆಳಂದಿಯ ಪಾಲಿಕಿಯು ಹೊರಟಿತು. ಕಬರಸ್ಥಾನದ ಎದುರಿಗೆ ನಗಾರಿಯನ್ನು ಬಾರಿಸಕೂಡದೆಂದು ಮುಸ್ಲಿಮರು ತಡೆದರು. ದರ್ಗಾದಿಂದ ಕಲ್ಲುಗಳು ಬರಹತ್ತಿದವು. ಹಿಂದುಗಳೂ ಅದೇ ಪಾಠ ವನ್ನು ತೀಡಿದರು. ಇಷ್ಟರಲ್ಲಿ ಪಾಲಿಕಿಯು ಮುಂದೆ ಹೋಯಿತು. ಹಿಂದು ಳಿದ ಒಬ್ಬ ಬ್ರಾಹ್ಮಣನನ್ನು ಹಿಡಿದು ಚನ್ನಾಗಿ ಥಳಿಸಿದರು. ಸರಕಾರವು ಅದರ ವಿಚಾರವನ್ನೇ ಮಾಡಲಿಲ್ಲ. ಆಗ ಮುಖಂಡರೆಲ್ಲರು ವಿಚಾರ ಮಾಡಿ, ಇನ್ನು ಮುಂದೆ ಮುಸ್ಲೀಮರ ಉತ್ಸವದಲ್ಲಿ ಯಾವ ಹಿಂದುಗಳು ಸೇರಕೂಡದೆಂದು ನಿರ್ಣಯಿಸಿದರು. ''ದೇವರ ಪಲ್ಲಕ್ಕಿಯು ದರ್ಗಾದ ಎದುರಿಗೆ ಬರುವದು ಮುಸಲ್ಮಾನರಿಗೆ ಸಹನವಾಗದಿದ್ದಾಗ, ಡೋಲಿಗಳ ಮುಂದೆ ಸೋಗು ಹಾಕಿ ಕೊಂಡು ನಾವೇಕೆ ಕುಣಿಯಬೇಕು ? ಪುಣೆಯಲ್ಲಿ ಹೊರಡುವ ನೂರಕ್ಕೆ ೯೦

ರಷ್ಟು ಡೋಲಿಗಳು ಹಿಂದೂ ಜನರಿಂದ ಹೊರಡಿಸಲ್ಪಡುತ್ತವೆ. ನಮಗೇಕೆ ಈ ಉದ್ಯೋಗ? ಪೀರರು ವರವನ್ನು ಕೊಡುವಂತೆ ಹಿಂದೂ ದೇವತೆಗಳೂ ಫಲ ಕೊಡಲು ಸಮರ್ಥರಿದ್ದಾರೆ. ಉತ್ಸವದ ಪ್ರೀತಿಯೇ ನಿಮಗೆ ಇದ್ದರೆ, ಡೋಲಿಗಳನ್ನು ತ್ಯಜಿಸಿ, ಗಣಪತಿಯ ಉತ್ಸವವನ್ನು ಮಾಡಿರಿ, ಇದೇ ನಿಜ ವಾದ ಪ್ರತಿಕಾರದ ಉಪಾಯ" "ನಾವು ಎಷ್ಟೆಷ್ಟು ಸೌಮ್ಯತನವನ್ನು ತೋರಿ ಸುವೆವೋ ಅಷ್ಟಷ್ಟು ಸರಕಾರವೂ ಮುಸಲ್ಮಾನರೂ ನಮ್ಮ ಮೇಲೆ ಏರಿ ಬರುವರೆಂಬುದನ್ನು ಮರೆಯಬೇಡಿರಿ. 'ಯೇ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ' ಎಂದು ಶ್ರೀಕೃಷ್ಣನು ನಮಗೆ ಉಪದೇಶಿಸಿ ದ್ದಾನೆ" ಎಂಬ ಮಂತ್ರೋಪದೇಶವನ್ನು ಮಾಡಿದರು. ಇದರ ಪರಿಣಾಮವು ಬಹಳ ತೀವ್ರವಾಗಿ ಆಯಿತು. ಆ ಸಲದ ಮೋಹರಂ ಒಣ ಒಣ ನಾರ ಹತ್ತಿತು. ಹುಲಿಗಳಿಲ್ಲ, ಡೋಲಿಗಳಿಲ್ಲ, ಸೋಗುಗಳೂ ಇಲ್ಲ. ಈ ಪರಿ ಸ್ಥಿತಿಯನ್ನು ಕಂಡು, ಸರಕಾರವೂ ಮುಸಲ್ಮಾನರೂ ಸುಧಾರಕರೂ ಅಚ್ಚರಿ ಗೊಂಡರು.

ಹಿಂದೂ ಮುಸಲ್ಮಾನರಲ್ಲಿ ಸ್ನೇಹವು ಅವಶ್ಯವೆಂದು, ನಾವು ಅದಕ್ಕಾಗಿ ಸ್ವಾಭಿಮಾನ ಶೂನ್ಯರಾಗಲು ಸಿದ್ಧರಿಲ್ಲ. ಎಂಬುದನ್ನು ಸರಕಾರಕ್ಕೂ ಮುಸ ಲ್ಮಾನರಿಗೂ ಬಿಂಬಿಸಬೇಕೆಂಬುದೇ ಟಿಳಕರ ಮೂಲ ಉದ್ದೇಶವಿದ್ದಿತು. "ಸ್ನೇಹವಾಗಲೀ ಒಪ್ಪಂದವಾಗಲೀ ಸಮಾನಶೀಲರಲ್ಲಿ ಮಾತ್ರ ಬಾಳಬಲ್ಲದು. ಎಂಬುದನ್ನು' ಹಿಂದುಗಳು ಮರೆಯಬಾರದು. ಹಿಂದೂ ಮುಸ್ಲೀಮರಲ್ಲಿ ಸ್ನೇಹ ಹಾಗೂ ಐಕ್ಯವು ನೆಲೆಗೊಳ್ಳಬೇಕಾದರೆ, ಇಬ್ಬರಲ್ಲಿಯೂ ಪ್ರತಿಕಾರ ಮಾಡುವ ಶಕ್ತಿಯು ಇದೆ ಎಂಬ ಮಾತು ಹೊಳೆದಾಗಲೇ ಸಾಧ್ಯವಾಗುವದು'' ಎಂದು ಟಿಳಕರು ಉಪದೇಶಿಸಿದರು.

ಈ ಗೊಂದಲದಲ್ಲಿ ಸರಕಾರವೂ ತಲೆ ಕೆಡಿಸಿಕೊಂಡಿತು. ಸಿಕ್ಕ ಸಿಕ್ಕಂತೆ ಆಜ್ಞೆಗಳನ್ನು ಹೊರಡಿಸಹತ್ತಿತು. ಸುಧಾರಕರು ಗಣಪತಿಯ ಉತ್ಸವದಿಂದ ದ್ವೇಷ ಬೆಳೆಯುವದೆಂದು ಆಕ್ಷೇಪವೆತ್ತಹತ್ತಿದರು. ಆದರೆ ಮುಸಲ್ಮಾನರ ದುಷ್ಕೃತ್ಯಗಳನ್ನು ಖಂಡಿಸುವ ಧೈರ್ಯವು ಮಾತ್ರ ಅವರಿಗೆ ಆಗಲಿಲ್ಲ. ಸುಧಾರಕರು ಸೇರಲಿ ಸೇರದೆ ಇರಲಿ, ಉತ್ಸವವು ಮಾತ್ರ ಹಬ್ಬುತ್ತ ನಡೆದಿತ್ತು. ಮುಸ್ಲೀಮರನ್ನೂ ರೊಚ್ಚಿಗೆಬ್ಬಿಸುವದಕ್ಕಾಗಿ ಈ ಉತ್ಸವವನ್ನು

ಪ್ರಾರಂಭಿಸಿರದಿದ್ದರೂ, ಹಿಂದೂ ಸಮಾಜವು ಸಂಘಟಿತವಾಗಬೇಕೆಂದೂ ಮುಸಲ್ಮಾನರಿಗೆ ಬೆದರದೆ, ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೋರಾಡ ಬೇಕೆಂದೂ ಅದರ ಶಿಕ್ಷಣವನ್ನು ಕೊಡುವದೇ ಈ ಉತ್ಸವದ ಉದ್ದೇಶ ವಿತ್ತೆಂಬುದರಲ್ಲಿ ಸಂದೇಹವಿರುವದಿಲ್ಲ. "ಅನೇಕ ವರ್ಷಗಳಿಂದ ಅಲ್ಪಿದಾ ದಿಂದ ಭ್ರಷ್ಟವಾದ ನಮ್ಮ ನಾಲಿಗೆಯು ಇಂದು ಮಂಗಲಮೂರ್ತಿಯ ನಾಮೋಚ್ಚಾರದಿಂದ ಪುನಃ ಪವಿತ್ರವಾಗುತ್ತ ನಡೆದಿದೆ ಮತ್ತು 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಎಂಬ ಗೀತಾ ವಚನವು ಇಂದು ಜನರ ಮನಸ್ಸಿನ ಮೇಲೆ ಚನ್ನಾಗಿ ಬಿಂಬಿಸಿದೆ" ಎಂದು ಮುಕ್ತಕಂಠ ದಿಂದ ಉತ್ಸವವನ್ನು ಟಿಳಕರು ಹೊಗಳಿದರು

ತ್ರಯೋದಸಿ ದಿನ, ಸರದಾರ ನಾತುರವರ ಮೇಳವು ಸರಕಾರದ ಆಜ್ಞೆಯಂತೆ ಕೇವಲ ಪೇಟೆಯನ್ನು ಬಾರಿಸುತ್ತ ನಡೆದಿದ್ದರೂ ಮಸೀದಿ ಯಿಂದ ಜನ ಹೊರಬಿದ್ದು ಪೇಟೆಯನ್ನು ಮುರಿದು ಮೇಳಗಳನ್ನು ಚದುರಿಸಿ ನಾತುರವರನ್ನು ಥಳಿಸಿ, ಹೊತ್ತುಕೊಂಡು ಹೋಗುವದನ್ನು ಕೇಳಿ ಹಿಂದು ಗಳು ಮಸೀದಿಯನ್ನು ಹೊಕ್ಕು, ಅಲ್ಲಿದ್ದ ವಸ್ತುಗಳನ್ನೆಲ್ಲ ನಾಶಮಾಡಿ ಮಾಯ ವಾದರು. ಪೋಲಿಸರು ಅಲ್ಲಿ ನೋಡುತ್ತನಿಂತ ೧೦–೧೫ ಜನರನ್ನು ಬಂಧಿಸಿ ಖಟ್ಲೆ ಹಾಕಿದರು.

ಸುಪ್ರಸಿದ್ಧ ನ್ಯಾಯಾಧೀಶನಾದ ಜೇಕಬ ಸಾಹೇಬನ ಮುಂದೆ ವಿಚಾರ ಣೆಗೆ ಪ್ರಾರಂಭವಾಯಿತು. ನ್ಯಾಯಾಧೀಶರು ಸರ್ವ ಆರೋಪಿಗಳು ನಿರಪ ರಾಧಿಗಳೆಂದು ಸಾರಿದರು. ನಾತುರವರು ಬಿಡಲ್ಪಟ್ಟರು. ಮರುಸವಾಲು ಮಾಡುವಾಗ ಪೋಲೀಸರ ಕಪಟ ನಾಟಕವೆಲ್ಲ ಹೊರಬಿದ್ದು, ಸರಕಾರದ ನೈತಿಕ ಅಧಃಪತನವಾಯಿತು. ಇದನ್ನೇ ಅನುಲಕ್ಷಿಸಿ "ಇಲ್ಲಿಯ ವರೆಗೆ ಸುಮ್ಮ ಸುಮ್ಮನೆ ಪುಣೆಯ ಬ್ರಾಹ್ಮಣರ ಮೇಲೆ ವಿಷಕಾರಿದ ಗವ್ಹರ್ನರರು ಕ್ಷಮೆಯನ್ನು ಕೇಳಬೇಕು.'' ಎಂದು ಟಿಳಕರು ಆವ್ಹಾನಿಸಿದರು. ಆದರೆ ಅವರಿಗೆ ಆ ನೈತಿಕ ಧೈರ್ಯವೆಲ್ಲಿಂದ ಬರಬೇಕು ? ಈ ಪ್ರಕರಣದಲ್ಲಿ ಟಿಳಕರ ಧರ್ಮಾಭಿಮಾನವನ್ನು ಕಂಡು, ಸನಾತನಿಗಳು ಹಾಗೂ ಅವರ ಮುಖಂಡ ರಾದ ನಾತುರವರು, ತಮ್ಮ ಹಿಂದಿನ ಗ್ರಾಮಣ್ಯ ಪ್ರಕರ್ಣದಲ್ಲಿಯ ದ್ವೇಷ ವನ್ನೆಲ್ಲ ಮರೆತು, ಟಿಳಕರ ಬೆಂಬಲಿಗರಾಗಿ ನಿಂತರು.

ಮುಸಲ್ಮಾನರ ದುರಾಗ್ರಹವೇ ಈ ದಂಗೆಗಳಿಗೆ ವಿಶೇಷವಾಗಿ ಕಾರಣವೆಂಬ ಮಾತು, ಜಿಲ್ಹಾಧಿಕಾರಿಗೆ ಮನವರಿಕೆಯಾಗುವ ಪ್ರಸಂಗ ಒದಗಿತು. ಧುಳೆಯಲ್ಲಿ ಗಣಪತಿಯ ಮೆರವಣಿಗೆ ಹೊರಟಿತು. ಹಿಂದುಗಳು ಅದಕ್ಕೆ ಮೊದಲೇ ಅಪ್ಪಣೆಯನ್ನು ಪಡೆದಿದ್ದರು. ಊರಲ್ಲಿ ದಂಗೆಯಾಗುವದೆಂಬ ಸುದ್ದಿಯು ಹಬ್ಬಿತ್ತು. ಕಲೆಕ್ಟರನು ಪೋಲೀಸ ಪಡೆಯೊಂದಿಗೆ ಮಸೀದೆಯ ಎದುರಿಗೆ ತಳವೂರಿದನು. ಮಸೀದಿಯಲ್ಲಿ ನಾಲ್ಕುನೂರುಜನ ಮುಸಲ್ಮಾನರು ಮೊದಲೇ ಸೇರಿದ್ದರು. ಮೆರವಣಿಗೆಯು ಬಂದಿತು. ದೀನ ದೀನವೆನ್ನುತ್ತ ಜನ ಹೊರಬಿದ್ದಿತು ಕಲೆಕ್ಟರರು ಎಷ್ಟು ತಿಳಿಹೇಳಿದರೂ ವ್ಯರ್ಥವಾಯಿತು. ಕಲೆಕ್ಟರರಿಗೇ ಕಲ್ಲೆಸೆದರು. ಅವರನ್ನು ದರದರ ಎಳೆದು ಮಸೂತಿಯ ಒಳಗೆ ಒಯ್ದರು. ಲಾಠಿಯನ್ನೆತ್ತಿದರು. ಅದನ್ನು ಕಂಡ ಪೋಲೀಸ ಅಧಿಕಾರಿಗಳು ಕೂಡಲೇ ಗುಂಡು ಹಾರಿಸಿದರು. ನಾಲ್ಕು ಜನ ಮುಸ್ಲೀಮರು ತತ್ಕ್ಷಣ ಸತ್ತರು. ೨೮ ಜನರಿಗೆ ಗಾಯವಾಯಿತು. ಈ ದಂಗೆಯಲ್ಲಿ ಹಿಂದುಗಳ ಸಂಬಂಧವು ಏನೂ ಇರಲಿಲ್ಲ. ದಂಗೆ ಪೂರ್ವಯೋಜಿತವಿತ್ತೆಂದು ಮಸೀದಿಯಲ್ಲಿಯ ಕಲ್ಲುಗಳ ರಾಶಿ, ಹಾಗೂ ಲಾಠಿ ಸಂಗ್ರಹವು ಸಾಕ್ಷಿ ನುಡಿಯುತ್ತಿದ್ದವು. 'ಮುಸಲ್ಮಾನರಿಗೆ ಸರಕಾರವು ತೋರಿಸುತ್ತಿರುವ ಪಕ್ಷಪಾತೀ ಧೋರಣವೇ ಒಂದು ದಿನ ಅವರನ್ನೇ ತಿನ್ನುವದು' ಎಂದು ಈ ಎರಡು ವರ್ಷ ಪ್ರತಿಪಾದಿಸುತ್ತ ಬಂದ ಟಿಳಕರ ಮಾತು ಸತ್ಯವಾಗಿ ಪರಿಣಮಿಸಿತು.

ಈ ಪ್ರಸಂಗದಲ್ಲಿ ಟಿಳಕರು ನಾವು ಭಾರತೀಯರು. ಎಲ್ಲರೂ ಭ್ರಾತೃಗಳು ಎಂಬುದನ್ನು ಲಕ್ಷದಲ್ಲಿಟ್ಟು ದಂಗೆಗಳ ಮೂಲ ಕಾರಣಗಳನ್ನು ಪ್ರತಿಪಾದಿಸಿ, ವಿಧಾಯಕ ಸೂಚನೆಗಳನ್ನು ಮಾಡಿದರು. "ಮುಸಲ್ಮಾನರು ತಳೆದ ಧೋರಣವು ಸರಿಯಾದುದಲ್ಲ. ಎಲ್ಲ ಮಸೀದಿಗಳ ಮುಂದೆ ಎಲ್ಲ ವಾದ್ಯಗಳನ್ನು ಎಲ್ಲ ಕಾಲದಲ್ಲಿ ನಿಲ್ಲಿಸಬೇಕೆಂಬ ಮಾತು ತೀರ ತಪ್ಪಾಗಿದೆ. ವಿಚಾರಶೀಲರಾರೂ ಇದಕ್ಕೆ ಸಮ್ಮತಿಸಲಾರರು. ಎಲ್ಲಿ ವಾದ್ಯ ನಿಲ್ಲಿಸಬೇಕು. ಎಲ್ಲಿ ನಿಲ್ಲಿಸಬಾರದೆಂಬ ಬಗ್ಗೆ ನಡೆದು ಬಂದ ಸಾಂಪ್ರದಾಯಗಳು ಸ್ಪಷ್ಟ ಪಡಿಸುತ್ತವೆ. ಆಯಾ ಸ್ಥಳಗಳಲ್ಲಿಯ ಸಾಂಪ್ರದಾಯಗಳು ಆಯಾ ಸ್ಥಳೀಯರಿಗೆ ಗೊತ್ತೇ ಇರುತ್ತವೆ. ಅದುದರಿಂದ ನಮ್ಮ ಮುಸ್ಲೀಮ ಬಾಂಧವರು ಮೃದಂಗ ತಾಳ ಮೊದಲಾದ ಸೌಮ್ಯ ವಾದ್ಯಗಳನ್ನು ಕೂಡ ಮಸೀದಿಯ ಮುಂದೆ

ಯಾವದೇ ವೇಳೆಯಲ್ಲಿ ಬಾರಿಸಕೂಡದೆಂಬ ಆಗ್ರಹವನ್ನು ಬಿಟ್ಟುಬಿಡಬೇಕು. ಉಗಿಬಂಡಿಯಲ್ಲಿ, ಬೀದಿಯಲ್ಲಿ, ಅಂಗಡಿಯಲ್ಲಿ, ಎಲ್ಲಿಯೇ ಇರಲಿ, ಪ್ರಾರ್ಥನೆಯ ವೇಳೆಯಾದೊಡನೆ ಅಲ್ಲಿಯೇ ಪ್ರಾರ್ಥಿಸಬೇಕೆಂದು ಕುರಾನದ ಆಜ್ಞೆಯಿದೆ. ಅಲ್ಲಿ ಗದ್ದಲವಿರುವದಿಲ್ಲವೆ? ಅಂದ ಮೇಲೆ ವಾದ್ಯಗಳಿಂದ ನಮಾಜಿಗೆ ಭಂಗ ಬರುವದು. ಮಸೀದಿಯ ಮುಂದೆ ವಾದ್ಯ ಬಾರಿಸುವದು ಅಧರ್ಮ ಎಂಬ ಆಕ್ಷೇಪಗಳಿಗೆ ಆಧಾರವಿಲ್ಲ. ಯಾರೋ ಹಂಚಿಕೆಗಾರರು ಇದನ್ನು ಮುಸಲ್ಮಾನರ ತಲೆಯಲ್ಲಿ ತುಂಬಿರಬೇಕು. ಎಂಬುದನ್ನು ಅವರು ಮರೆಯಬಾರದು. ಅಂದರೆ ವಾದ್ಯದ ಪ್ರಶ್ನೆಯನ್ನು ಬಿಡಿಸಲು ಹಗುರಾಗುವದು. ಸರಕಾರವು ತಮ್ಮ ಪಕ್ಷವನ್ನು ವಹಿಸುವದು ಎಂದು ಉಬ್ಬುವದರಲ್ಲಿ ಅರ್ಥವಿಲ್ಲ. ಪ್ರಸಂಗ ಬಂದರೆ ಹಿಂದೂ ಮುಸಲೀಮರಿಬ್ಬರೂ ಅವರಿಗೆ ಅಷ್ಟೆ!" ಟಿಳಕರ ಈ ಉಪದೇಶವು ವಿಚಾರಿಗಳಾದ ಎಲ್ಲರನ್ನೂ ತಲೆದೂಗಿಸಿತು,

ಅಂತೂ ಈ ಎರಡು ವರ್ಷಗಳಲ್ಲಿ ಈ ಪ್ರಕರಣದ ಸಲುವಾಗಿ ಸುಧಾರಕರಿಂದ ಜಾತಿದ್ವೇಷವನ್ನು ಬೆಳೆಸುವವನೆಂಬ ಆರೋಪವನ್ನು ಹೊರಬೇಕಾಯಿತು. ಮುಸಲ್ಮಾನರಿಂದ ಇವನೊಬ್ಬ ನಮ್ಮ ವೈರಿ ಎಂದು ಅನಿಸಿಕೊಳ್ಳಬೇಕಾಯಿತು. ಜಾತಿ ಜಾತಿಗಳಲ್ಲಿ ಜಗಳಗಳನ್ನು ಹಚ್ಚುವ ಕಲಿಯುಗದ ನಾರದರು ಎಂದು ಚಿರೋಲರಿಂದ ಬಿರುದನ್ನು ಪಡೆಯಬೇಕಾಯಿತು. ಸರಕಾರದ ರೋಷವನ್ನು ಕಟ್ಟಿಕೊಳ್ಳಬೇಕಾಯಿತು. ಇವೆಲ್ಲವುಗಳನ್ನು ಎದುರಿಸಿ, ದಂಗೆಗಳ ಮೂಲ ಕಾರಣಗಳನ್ನು ಧೈರ್ಯದಿಂದ ಪ್ರತಿಪಾದಿಸುತ್ತ, ಹಿಂದುಗಳನ್ನು ಸಂಘಟಿಸುತ್ತ, ಮುಸಲ್ಮಾನರ ದೋಷಗಳನ್ನು ಅವರಿಗೆ ತೋರಿಸುತ್ತ, ಸರಕಾರದ ಅನ್ಯಾಯದ ನೀತಿಯನ್ನು ಖಂಡಿಸುತ್ತ. ತಮ್ಮ ಸಿದ್ಧಾಂತಗಳನ್ನು ಎಲ್ಲರಿಗೂ ಮನಗಾಣಿಸಿಕೊಟ್ಟರು. ಕೂಲಿಕಾರರ, ಗುಜರಾಥಿಗಳ ಸನಾತನಿಗಳ, ಜನಸಾಮಾನ್ಯರ ಬೆಂಬಲವನ್ನು ಪಡೆದರು. ಮುಸಲ್ಮಾನರಿಗೂ ಟಿಳಕರ ಧೋರಣವೇ ಸರಿಯೆಂದು ಮುಂದೆ ಹೊಳೆಯಿತು. ಆದ್ದರಿಂದಲೇ ಅಲ್ಲೀಬಂಧುಗಳಂಥ ಮುಖಂಡರು, ಟಿಳಕರೇ ತಮ್ಮ ರಾಜಕೀಯ ಗುರುಗಳೆಂದು ಸಾರ್ವಜನಿಕವಾಗಿ ಸಾರಿದರು. ಆದರೆ ಸರಕಾರವು ಮಾತ್ರ ತಮ್ಮ ಮಾರ್ಗದಲ್ಲಿಯ ಪ್ರಬಲವಾದ ಕಂಟಿಯೆಂಬ ದೃಷ್ಟಿಯಿಂದ ಟಿಳಕರ ಕಡೆಗೆ ನೋಡಹತ್ತಿತು.

---

# ಟಿಳಕರ ಕಾರ್ಯ ವೈವಿಧ್ಯ

## ಮಿತ್ರಪ್ರೇಮ

ಟಿಳಕರ ಜೀವನದಲ್ಲಿ ಅವರ ಗುಣಗಳ ವಿಕಾಸದ ಕಾಲವಿದು. ಜೀವನವನ್ನು ರೂಪಿಸುವ ಕಾಲವಿದೆಂದು ಹೇಳಬಹುದು. ಶಿಕ್ಷಣ ಸಂಸ್ಥೆಯನ್ನು ಬಿಟ್ಟನಂತರ ಅವರಿಗೆ ಅರ್ಧಗಳಿಗೆಕೂಡ ವಿಶ್ರಾಂತಿಯಿರಲಿಲ್ಲ. ಹಿಂದೂ ಮುಸಲ್ಮಾನರ ಪ್ರಕರಣ ಮುಗಿಯುತ್ತಿರುವಾಗಲೇ ಟಿಳಕರ ಮಿತ್ರಪ್ರೇಮವನ್ನು ಪ್ರಕಾಶಗೊಳಿಸುವ ಕಾರ್ಯವು ಕಾದುಕೊಂಡು ಕುಳಿತಿದ್ದಿತು. ಅದೇ ಬಾಪಟ ಕಮಿಶನವು.

ಟಿಳಕರ ಬಾಲ್ಯ ಮಿತ್ರರಾದ ವಾಸುದೇವ ಸದಾಶಿವ ಬಾಪಟರು ಬಡೋದೆಯಲ್ಲಿ ಘನತೆಗೇರಿದ್ದರು. ಅವರು ಹುಟ್ಟು ಬಡವರಾದರೂ ತಮ್ಮ ಕತೃತ್ವ ಶಕ್ತಿಯಿಂದ ಮೇಲೇರಿದವರು. ಗಾಯಕವಾಡ ಮಹಾರಾಜರ ಪ್ರೀತಿ ಪಾತ್ರರು. ಇವರು ರೆವ್ಹಿನ್ಯೂ ಸರ್ವೆ ಸೆಟಲ್‌ಮೆಂಟ ಖಾತೆಯ ಅ. ಕಮಿಶನರಾಗಿದ್ದರು. ಇಲಿಯಟ್‌ರೆಂಬುವವರು ಕಮಿಶನ್‌ರಿದ್ದರು. ಅವರು ಬಾಪಟರನ್ನು ಪುತ್ರ ವಾತ್ಸಲ್ಯದಿಂದ ನೋಡುತ್ತಿದ್ದರು. ಅವರ ಮೇಲೆ ಇಲಿಯಟ್‌ರವರಿಗೆ ಪೂರ್ಣ ವಿಶ್ವಾಸ. ಹೀಗಾಗಿ ಬಡೋದೆಯಲ್ಲಿ ಇವರ ಮಾತು ಮೀರುವವರು ಯಾರೂ ಇರಲಿಲ್ಲ.

ಕಾಲವು ತಿರುಗಿತು. ಸರಕಾರಿ ಅಧಿಕಾರಿಗಳಿಗೂ ದಿವಾಣರಿಗೂ ರೆಸಿಡೆಂಟನಿಗೂ ಬಾಪಟರ ಏಳಿಗೆಯು ಸಹನವಾಗಲಿಲ್ಲ. ಮತ್ಸರ ಉಂಟಾಯಿತು. ಅವರನ್ನು ಪೇಚಿನಲ್ಲಿ ತರುವ ಹೊಂಚು ಹಾಕಿದರು. ರೆಸಿಡೆಂಟನು ಈ ಖಾತೆಯ ವಿರುದ್ಧವಾಗಿ ಜನರಿಗೆ ಅರ್ಜಿಕೊಡಲು ಪ್ರೇರೇಪಿಸ ಹತ್ತಿದನು. ಇಲಿಯಟ್, ಮಹಾರಾಜರು ಮತ್ತು ಬಾಪಟರ ಮೇಲಿನ ಸಿಟ್ಟನಿಂದ ಸೆಟಲ್‌ಮೆಂಟ ಆಫೀಸಿನ ವಿಚಾರಣೆಗಾಗಿ ಕಮಿಶನ್ ನೇಮಿಸುವ ಪ್ರಸಂಗವನ್ನು ತಂದರು. ಮಹಾರಾಜರು ಅರ್ಥಾತ್ ಪಾರಾದರು. ಲಿಯಟ್ ಬ್ರಿಟಿಶ ಪ್ರಜೆ. ಅವನ ಮೇಲೆ ಕೈಯೆತ್ತುವವರಾರು? ಇನ್ನು

ಉಳಿದವರೆಂದರೆ ಬಾಪಟ. 'ಅಜಾ ಪುತ್ರಂ ಬಲಿಂ ದದ್ಯಾತ್' ಎಂಬ ನ್ಯಾಯದಿಂದ ಬಾಪಟರನ್ನು ಯಜ್ಞಪಶುಗಳನ್ನಾಗಿ ಮಾಡಿದರು. ೧೮೯೩ ರಲ್ಲಿ ಮಹಾರಾಜರು ವಿಲಾಯತಿಗೆ ಹೋದ ಸಮಯವನ್ನು ಸಾಧಿಸಿ, 'ಬಾಪಟ ಮೊದಲಾದವರು, ಸ್ವತಂತ್ರ ಹಾಗು ಉನ್ಮತ್ತರೀತಿಯಿಂದ ನಡೆಯುವರು.' ಎಂದು ಆಕ್ಷೇಪವೆತ್ತಿದರು. ಆದರೆ ಇಲಿಯಟ್‌ರು ಅದನ್ನು ಸಿದ್ಧಪಡಿಸಲು ಅವ್ಹಾನಿಸಿದಾಗ ಅದು ಕುಸಿದುಬಿದ್ದಿತು. ಇಲಿಯಟ್‌ರು ರಜೆಯ ಮೇಲೆ ಹೋದರು. ಮಹಾರಾಜರೂ ವಿಲಾಯತಿಯಲ್ಲಿದ್ದರು. ಈ ಸಂಧಿಯನ್ನು ಸಾಧಿಸಿ, ರೆಸಿಡೆಂಟ, ದಿವಾಣ, ಮತ್ತು ಇಲಿಯಟ್‌ರ ಸ್ಥಳಕ್ಕೆ ಬಂದ ಮೆಕ್ಯಾನಿಕೆ, ಈ ತ್ರಿಕೂಟವು ಸೇರಿ, ಲಂಚತಿಂದ ಆರೋಪವನ್ನು ಬಾಪಟರಮೇಲೆ ಹಾಕಿದರು. ಇವರ ಸಂಚು ಯಶಸ್ವಿಯಾಗಿ 'ಬಾಪಟ ಕಮಿಶನ್' ನೇಮಿಸಲ್ಪಟ್ಟಿತು.

ಎಲ್ಲ ಕಡೆಯಿಂದ ಸಂಕಟಗಳು ಬರಲು, ಮಿತ್ರರಾದ ಟಿಳಕರ ಸಹಾಯವನ್ನು ಬಾಪಟರು ಅಪೇಕ್ಷಿಸುವದು ಸ್ವಾಭಾವಿಕವಿದ್ದಿತು ಆಪದ್ಬಂಧುಗಳಾದ ಟಿಳಕರು ಕೂಡಲೆ ಬಡೋದೆಗೆ ಧಾವಿಸಿದರು. ಎಲ್ಲವನ್ನು ನೋಡಿಕೊಂಡರು. ಸ್ವತಂತ್ರ ವೃತ್ತಿಯ ಗಾಯಕವಾಡರ ಆಳಿಕೆಗೆ ಮಸಿಹಚ್ಚುವ ಕುಟಿಲ ನೀತಿಯು ಇದರ ಹಿಂದೆ ಇರುವದನ್ನು ಮನಗಂಡು, ಇದರಲ್ಲಿ ಕೈ ಹಾಕಿದರು. ದಿವಾಣ ಹಾಗೂ ರೆಸಿಡೆಂಟರೇ ವಾದಿಗಳು. ಫಿರೋಜಶಹಾ ಮೆಥಾರಂಥವರು ಬ್ಯಾರಿಸ್ಟರರು. ಮೇಲಾಗಿ ಅಪಾರ ಸಂಪತ್ತು. ಸರಕಾರದ ವಿರುದ್ಧ ಬಾಪಟರ ವಕೀಲಿಯನ್ನು ಹಿಡಿಯಲು ಕೂಡ ಜನ ಅಂಜುತ್ತಿದ್ದರು. ರಾಮಭಾವು ಗೋಖಲೆ ಎಂಬುವವರು ವಕೀಲಿ ಹಿಡಿಯಲು ಮುಂದೆಬಂದರು. ಆದರೆ ನಿಜವಾದ ವಕೀಲರು ಟಿಳಕರೇ ಆಗಿದ್ದರು. ಟಿಳಕರು ಈ ಕಾರ್ಯದಲ್ಲಿ ತೋರಿಸಿದ ಬುದ್ಧಿ, ಅವರು ಪಟ್ಟಶ್ರಮ, ಹೊಗಳುವಂಥವು. ಕಮಿಶನ್ನದ ಎದುರಿಗೆ ಬಂದ ಪುರಾವೆಗಳಲ್ಲಿ, ಸಾಕ್ಷಿದಾರರೇ ಹೆಚ್ಚಾಗಿದ್ದರು. ಅವರ ಲೆಖ್ಖಪತ್ರಗಳ ಸಂಬಂಧವು ಬರುತ್ತಿದ್ದಿತು. ಗುಜರಾತಿಯ ಲೆಖ್ಖ ಪತ್ರಗಳನ್ನೆಲ್ಲ ಅಭ್ಯಸಿಸಿ, ಮರುಸವಾಲಿನಲ್ಲಿ ಅವೆಲ್ಲ ಖೊಟ್ಟಿ ಇರುವವೆಂದು ಸಿದ್ಧಪಡಿಸಿ, ಅವುಗಳನ್ನು ಹಾರಿಸಿಬಿಟ್ಟರು. ಮುಖ್ಯ ಸಾಕ್ಷಿದಾರನಾದ ಗಿರಿಧರಲಾಲನನ್ನಂತೂ ಹರಿದು ಚಿಂದೀ ಮಾಡಿದರು.

ಲೆಖ್ಖವನ್ನು ಸುಳ್ಳುಬರೆದಿರುವನೆಂದೂ ಅಲ್ಲಲ್ಲಿ ತಿದ್ದಿರುವನೆಂದೂ ಮರು ಆರೋಪಗಳನ್ನು ಅವನ ಕೊರಳಿಗೆ ಕಟ್ಟಿದರು. ಇದನ್ನೆಲ್ಲ ನೋಡಿ ಫಿರೋಜಶಹಾ ಮೆಥಾರವರು ಇದೆಲ್ಲವು ಸುಳ್ಳು ಇದೆಯೆಂದು ನಡುವೇ ಖಟ್ಲೆ ಬಿಟ್ಟುಹೋದರು. ಟಿಳಕರು ಹಗಲಿನಲ್ಲೆಲ್ಲ ಖಟ್ಲೆ ನಡೆಯಿಸಲು ಸಹಾಯಮಾಡಿ, ರಾತ್ರಿಯಲ್ಲಿ ಡಿಫೆನ್ಸ ಬರೆಯುತ್ತಿದ್ದರು. ಈ ಡಿಫೆನ್ಸು ಫುಲ್‌ಸ್ಕೇಪ ಮುದ್ರಣದ ೨೫೦ ಪುಟಗಳಷ್ಟಿದ್ದಿತು. ಕಮಿಶನ್ನಿಗೆ ಶಿಕ್ಷೆ ವಿಧಿಸುವ ಅಧಿಕಾರವಿರಲಿಲ್ಲ. ಆದರೂ ಅದು ಆ ರೀತಿಯಾಗಿ ನಟಿಸಿತು. ಬಾಪಟರ ಮೇಲಿದ್ದ ೩೬ ಆರೋಪಗಳಲ್ಲಿ ೧೨ ಮಾತ್ರ ಉಳಿದವು. ಅವುಗಳಲ್ಲಿ ೧೧ರ ಬಗ್ಗೆ ಬಾಪಟರು ದೋಷಿಯೆಂದು ನಿರ್ಣಯಿಸಿ, ೬ ತಿಂಗಳ ಸಾದಾ ಕೈದು ಹಾಗೂ ೧೦ ಸಾವಿರ ರೂಪಾಯಿ ದಂಡ ವಿಧಿಸಬೇಕೆಂದು ಸಿಫಾರಸು ಮಾಡಿತು. ಈ ಸಂಗತಿಯು ಅವರ ಅಧಿಕಾರದ ಹೊರಗಿನದಿತ್ತಲ್ಲದೆ, ಕಮಿಶನ್ನಿನ ಕಾಯಿದೆಯ ಅಜ್ಞಾನವೂ ಹೊರಬಿದ್ದಿತು.

ಆದರೆ ಕೊನೆಯ ನಿರ್ಣಯಕೊಡುವ ಅಧಿಕಾರವು ಮಹಾರಾಜರಿಗೆ ಇದ್ದಿತು. ೧೮೯೫ರಲ್ಲಿ ಮಹಾರಾಜರೂ ವಿಲಾಯತಿಯಿಂದ ಬಂದರು. ಕೂಡಲೆ ಅವರು ಬಾಪಟ ಪ್ರಕರಣವನ್ನು ಕೈಯಲ್ಲಿ ತೆಗೆದುಕೊಂಡರು. ಖಟ್ಲೆಯಲ್ಲಿ ಎದುರಿಗೆಬಂದ ಕಾಗದಪತ್ರ ಹಾಗೂ ಬಾಪಟರು ಅಪೇಕ್ಷಿಸಿದ ದಿವಾಣರಿಂದ ಗುಪ್ತವೆಂದು ಹಿಂದೆ ಇಡಲ್ಪಟ್ಟ ಎಲ್ಲ ಕಾಗದಗಳ ಸಹಿತ ಮಹಾರಾಜರು, ರಾ. ಬ. ಪಂಡಿತ ಹಾಗೂ ದಲಾಲರೆಂಬ ಕಾಯದೇ ಪಂಡಿತರ ಕಡೆಗೆ ಸಲಹೆಗಾಗಿ ಕಳಿಸಿಕೊಟ್ಟರು. ಅವರು ಕಾಗದಗಳಲ್ಲಿ ತೀರ ಅಲ್ಪುಸ್ವಲ್ಪು ದೋಷ ಕಾಣುತ್ತಿದ್ದು, ಎಲ್ಲ ಖಟ್ಲೆಗಳಲ್ಲಿ ಬಾಪಟರು. ನಿರ್ದೋಷಿಗಳಿರುವರೆಂಬ ಅಭಿಪ್ರಾಯಕೊಟ್ಟರು. ಸ್ವಲ್ಪು ಶಂಕೆಗಾದರೂ ಏಕೆ ಅವಕಾಶವೀಯಬೇಕೆಂದು ಮಹಾರಾಜರು ಹಾಯಕೋರ್ಟ ಜಜ್ಜರ ಮತ್ತು ದಿವಾಣರ ಅಭಿಪ್ರಾಯ ತೆಗೆದುಕೊಂಡು, ಬಾಪಟರವರು ನಿರ್ದೋಷಿಗಳೆಂದು ಮಹಾರಾಜರು ನಿರ್ಣಯಕೊಟ್ಟರು. ಬ್ರಿಟಿಶ ಸರಕಾರದ ಕ್ರೋಧಾಗ್ನಿಯನ್ನು ಬಾಪಟರ ನವಕರಿಯ ಬಲಿಕೊಟ್ಟು ಶಮನಮಾಡಬೇಕಾಯಿತು. ಆದರೆ ಬಾಪಟರ ಮೇಲಿನ ಮಹಾರಾಜರ ಪ್ರೇಮವು ಮಾತ್ರ ಕಡಿಮೆಯಾಗಲಿಲ್ಲ. ಅವರಿಗೆ ೧೨೫ರೂ ಪೆನ್‌ಶನ್ ದೊರೆಯುವಂತೆ ಮಾಡಿದರು.

ಟಿಳಕರು ಬಾಪಟರನ್ನು ಉಳಿಸಿದರು. ರಾಜ್ಯಕ್ಕೆ ಬರುವ ಕಲಂಕ ವನ್ನು ತಪ್ಪಿಸಿದರು, ಮಹಾರಾಜರ ಪ್ರೇಮವನ್ನು ಸಂಪಾದಿಸಿದರು. ಈ ಮೈತ್ರಿಯು ಮುಂದಿನ ಜೀವನದ ಸಹಾಯಕ ನಿಧಿಯಾಯಿತು. ಗಾಯಕವಾಡ ವಾಡೆಯು ಟಿಳಕರಿಗೆ ಶ್ರಮವಿಲ್ಲದೆ ೧೫ ಸಾವಿರ ರೂಪಾಯಿ ಗಳಿಗೆ ದೊರೆಯಲು ಈ ಮೈತ್ರಿಯೇ ಕಾರಣವಾಯಿತು. ಟಿಳಕರು ಈ ಪ್ರಕರಣದಲ್ಲಿ ತೋರಿಸಿದ ಮಿತ್ರ ಪ್ರೇಮವು ಜಗತ್ತಿಗೇ ಆದರ್ಶವಾಗಿದೆ.

**ಪ್ರಾಂತಿಕ ಪರಿಷತ್ತಿನ ಕಾರ್ಯದರ್ಶಿಗಳು**

ಡೆ. ಎ. ಸೊಸಾಯಿಟಿಯನ್ನು ಬಿಟ್ಟನಂತರ ಟಿಳಕರು ತಮ್ಮ ಶಕ್ತಿ ಯನ್ನು ರಾಜಕೀಯ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಉಪಯೋಗಿಸಹತ್ತಿದ್ದ ರೆಂಬುದನ್ನು ಹೇಳಲಿಕ್ಕೆಬೇಡ. ೧೮೯೫ರಲ್ಲಿ ರಾಷ್ಟ್ರೀಯ ಮಹಾಸಭೆಯು ಪುಣೆಯಲ್ಲಿ ಜರುಗಬೇಕೆಂಬ ಪ್ರಯತ್ನಮಾಡಿದರೆಂಬ ಸಂಗತಿಯನ್ನು ಹಿಂದೆಯೇ ಹೇಳಿದ್ದೇವೆ. ಕಾಂಗ್ರೆಸ್ಸು ಪುಣೆಯಲ್ಲಿ ಸೇರಿದ್ದರೂ ಕಾಂಗ್ರೆಸ್ಸಿ ಗಾಗಿ ಮಹಾರಾಷ್ಟ್ರದಲ್ಲಿ ೧೦ ಸಾವಿರ ರೂಪಾಯಿಗಳನ್ನು ಕೂಡಿಸಿಕೊಟ್ಟರು. ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯ ಕಾರ್ಯವನ್ನು ಸತತವಾಗಿ ೫-೬ ವರ್ಷ ವಹಿಸಿ, ಆದರಲ್ಲಿ ಚೈತನ್ಯವನ್ನು ತುಂಬಿದರು. ತಾವು ಕಾರ್ಯದರ್ಶಿಯಾದ ವರ್ಷವೇ ಪುಣೆಯಲ್ಲಿ ಪ್ರಾಂತಿಕ ಪರಿಷತ್ತನ್ನು ಸೇರಿಸಿದರು. ಮತಭೇದದ ಪ್ರಶ್ನೆಯಾಗಿದ್ದ 'ಕ್ರಾಫರ್ಡ ಪ್ರಕರ್ಣದ ಗೊತ್ತುವಳಿಯನ್ನು ಪರಿಷತ್ತಿನಲ್ಲಿ ಕುಶಲತೆಯಿಂದ ಪಾಸುಮಾಡಿಕೊಂಡರು. ಮೂರನೇ ಪರಿಷತ್ತು ೧೮೯೦ರಲ್ಲಿ ಪುಣೆಯಲ್ಲಿಯೇ ಸೇರಿತು. ಈ ಸಲ ಟಿಳಕರು ಅಬಕಾರಿ ಖಾತೆಯ ಸರಕಾರದ ಧೋರಣವನ್ನು ಕಟುವಾಗಿ ಟೀಕಿಸಿದರು. ಟಿಳಕರ ವರ್ಚಸ್ಸು ರಾಜಕೀಯ ಕ್ಷೇತ್ರದಲ್ಲಿ ಬೆಳೆಯಹತ್ತಿತು ತಾವು ಮಾಡಿದ ಸೇವೆಗೆಲ್ಲ ಗೊತ್ತುವಳಿಯ ರೂಪಕೊಟ್ಟು ಪ್ರಾಂತಿಕ ಪರಿ ಷತ್ತಿನ ಮುದ್ರೆಯನ್ನೊತ್ತಿ ಜನರ ಬೆಂಬಲವನ್ನು ಪಡೆಯುತ್ತಿದ್ದರು. ಐದ ನೆಯ ಪರಿಷತ್ತು ಪುಣೆಯಲ್ಲಿಯೇ ಕೂಡಿತು. ಟಿಳಕರ ಮೂರು ನಾಲ್ಕು ವರ್ಷದ ರಾಜಕೀಯ ಜೀವನ, ಅವರ ಸಂಘಟನೆ ರಾಜಕೀಯ ಮಹತ್ವಾ ಕಾಂಕ್ಷೆಗಳನ್ನು ಕಂಡ ಫಿರೋಜಶಹಾ ಮೆಥಾರಂಥ ರಾಜ ಕೀಯ ಮುಖಂಡರಿಗೂ ಟಿಳಕರ ಆಮಂತ್ರಣವನ್ನು ನಿರಾಕರಿಸುವ ಧೈರ್ಯವಾಗಲಿಲ್ಲ.

ಪರಿಷತ್ತು ಅತ್ಯಂತ ಯಶಸ್ವಿಯಾಯಿತು. ಅದೇ ಪಾರ್ಲಿಮೆಂಟಿನಲ್ಲಿ ಕಾಯದೆ, ಕೌನ್ಸಿಲ್‌ಗಳ ಸುಧಾರಣೆಯ ಬಿಲ್ಲು ಪಾಸಾಗಿದ್ದಿತು. ಅದನ್ನು ಕಾರ್ಯಕಾರೀಮಾಡುವ ಮೊದಲನೇ ಗೊತ್ತುವಳಿಯನ್ನು ಟಿಳಕರೇ ಮಂಡಿಸಿದರು. ಮುನಸಿಪಾಲಿಟಿಗಳಂಥ ಸಂಸ್ಥೆಗಳನ್ನು ಮತದಾರ ಸಂಘಗಳನ್ನು ಮಾಡಬೇಕೆಂಬುದೇ ಟಿಳಕರ ಆಶಯವಿದ್ದಿತು. ಮುಂದಿನ ಪರಿಷತ್ತನ್ನು ಗುಜರಾಥದಲ್ಲಿ ಸೇರಿಸುವ ನಿಶ್ಚಯವಾಯಿತು. ರಹಿಮತುಲ್ಲಾ ಮಹಮ್ಮದ ಸಯಾನಿಯವರ ಅಧ್ಯಕ್ಷತೆಯಲ್ಲಿ ಅಹಮ್ಮದಾಬಾದಿನಲ್ಲಿ ಪರಿಷತ್ತು ನಡೆಯಿತು. ಟಿಳಕರು ಪೇಣ-ದೇವಗಡ ತಾಲೂಕಿನಲ್ಲಿ ನಡೆದ ರಿವ್ಹಿಜನ್ ಸೆಟಲ್‌ಮೆಂಟನ ಆಕ್ಷೇಪಗಳ ಬಗ್ಗೆ ಗೊತ್ತುವಳಿಯನ್ನು ಮಂಡಿಸಿದರು. ೧೮೯೪ ರಲ್ಲಿ ಸೇರಿದ ಸಭೆಗೆ ಟಿಳಕರಿಗೆ ಹೋಗುವದಾಗಲಿಲ್ಲ. ಆದರೆ ಕಾರ್ಯದರ್ಶಿತ್ವ ಮಾತ್ರ ಇವರನ್ನು ಬಿಡಲಿಲ್ಲ. ಮುಂದೆ ಟಿಳಕರು ಯುನಿವ್ಹರ್ಸಿಟಿ, ಕಾಯದೆ ಕೌನ್ಸಿಲ್ಲುಗಳ ಸಭಾಸದರಾದ ಮೂಲಕ, ಮೇಲ್ಕಟ್ಟದ ಕಾರ್ಯಗಳು ಪ್ರಾರಂಭವಾದವು.

೧೮೯೪ರಲ್ಲಿ ಪಾರ್ಲಿಮೆಂಟಗೆ ಸಿವ್ಹಿಲ್‌ಸರ್ವ್ಹೀಸ ಪರೀಕ್ಷೆಯನ್ನು ಒಂದೇ ಕಾಲಕ್ಕೆ ಇಂಗ್ಲಂಡ ಹಾಗೂ ಭಾರತಗಳಲ್ಲಿ ನಡೆಯಿಸಬೇಕೆಂಬ ಅರ್ಜಿಯನ್ನು ಮಾಡಿದರು. ತಮ್ಮ ಬ್ರಿಟಿಶ ಮಿತ್ರರ ಮುಖಾಂತರ ಅದು ಪಾರ್ಲಿಮೆಂಟಿನಲ್ಲಿ ಬರುವಂತೆ ಮಾಡಿದರು. ಹರ್ಬರ್ಟಪಾಲರು ಅದನ್ನು ಪಾಸು ಮಾಡಿಕೊಂಡರು. 'ದೇವರು ವರವನ್ನು ಕೊಟ್ಟರೆ, ಪೂಜಾರಿಗಳು ಏನನ್ನೂ ಕೊಡಲಿಲ್ಲ' ಎಂಬಂತೆ ಭಾರತ ಸರಕಾರವು ಅದನ್ನು ಕಾರ್ಯಕಾರೀ ಮಾಡಲಿಲ್ಲ.

**ನಗರ ಪಿತಾಮಹರು**

೧೮೯೫ ರಿಂದ ೨-೩ ವರ್ಷಗಳು ಟಿಳಕರ ಆಯುಷ್ಯದಲ್ಲಿ ಮಹತ್ವದ ದಿನಗಳು. ಸಾಮಾಜಿಕ ಜೀವನದ ಎರಡನೇ ಮೆಟ್ಟಲನ್ನು ಏರಿದ ದಿನಗಳು. ಸಾರ್ವಜನಿಕ ಜೀವನದಲ್ಲಿ ಕಾಲಿಡುವಾಗಲೇ ಸ್ಥಾನಿಕ ಸ್ವರಾಜ್ಯ ಹಾಗೂ ಔದ್ಯೋಗಿಕ ಚಳವಳಿಯನ್ನು ನಾಮಜೋಶಿಯವರೂ ರಾಜಕೀಯ ಸಾಮಾಜಿಕ ಹಾಗೂ ಧಾರ್ಮಿಕ ಚಳುವಳಿಗಳನ್ನು ಟಿಳಕರೂ ಮಾಡಬೇಕೆಂದು ನಿಶ್ಚಯಿಸಿದ್ದರು. ಟಿಳಕರು ಯಾವಾಗಲೂ ನಾಮಜೋಶಿಯವರ ಕಾರ್ಯದಲ್ಲಿ ನೆರವಾಗುತ್ತಿದ್ದರು. ಹೀಗೆಯೇ ನಡೆದಿರಲು ೧೮೯೫ ರಲ್ಲಿ ಟಿಳಕರೂ

ಮುನಸಿಪಾಲಿಟಿಯ ಚುನಾವಣೆಯ ರಂಗಕ್ಕೆ ಇಳಿಯಬೇಕೆಂದು ಗೊತ್ತು ಮಾಡಿ ಚುನಾವಣೆಗೆ ನಿಂತರು. ಆರಿಸಿಯೂ ಬಂದರು. ತಾವಷ್ಟೇ ಅಲ್ಲದೆ, ದಾದಾಸಾಹೇಬ ಘಾಟಕರನ್ನೂ ಆರಿಸಿ ತಂದರು. ಕಾರ್ಯಕಾರೀ ಮಂಡಲ ದಲ್ಲಿಯೂ ಆರಿಸಿಬಂದರು. ಅವರೇ ಚೇರಮನ್‌ರೂ ಆಗಬಹುದಿತ್ತು. ಆದರೆ ವಯಸ್ಸಿನಿಂದ ಹಿರಿಯರಾದ ಘಾಟಕರಿಗೆ ಈ ಮಾನವನ್ನು ಕೊಟ್ಟು, ಎಲ್ಲರೂ ಕೂಡಿ ಐಕ್ಯತೆಯಿಂದ ಕಾರ್ಯಮಾಡಿದರು. ಟಿಳಕ ಹಾಗೂ ಘಾಟಕರ ಈ ಸ್ನೇಹವು ಆಮರಣ ಉಳಿಯಿತು. ಟಿಳಕರ ಮುನಸಿಪಾಲಿಟಿಯ ಜೀವನವು ೧೮೯೭ ರಲ್ಲಿಯೇ ಅವರ ರಾಜಕೀಯ ಖಟ್ಲೆಯ ಕಾರಣಕ್ಕಾಗಿ ಮುಕ್ತಾಯ ವಾಯಿತು. ರಾಷ್ಟ್ರೀಯ ವೃತ್ತಿಯ ಜನರ ಕೈಯಲ್ಲಿಯೇ ಇಂತಹ ಸಂಸ್ಥೆಗಳು ಇರಬೇಕೆಂಬುದೇ ಟಿಳಕರ ಧೋರಣವು. ಇದೇ ಧೋರಣದಿಂದಲೇ ಅವರು ಈ ಸಂಸ್ಥೆಗಳ ಕಡೆಗೆ ನೋಡುತ್ತಿದ್ದರು.

**ನಾಮದಾರ ಟಿಳಕ**

೧೮೯೨ ರಲ್ಲಿ ಪಾರ್ಲಿಮೆಂಟು 'ಕೌನ್ಸಿಲ್ ಆ್ಯಕ್ಟ'ನ್ನು ಸ್ವೀಕರಿಸಿ, ಪ್ರಜಾಪ್ರತಿನಿಧಿಗಳನ್ನು ತೆಗೆದುಕೊಳ್ಳುವ ತತ್ವವನ್ನು ಮಾನ್ಯಮಾಡಿತು. ಕೌನ್ಸಿಲ್ ವಿಸ್ತರಿಸಲ್ಪಟ್ಟಿತು. ವರಿಷ್ಠ ಕೌನ್ಸಿಲ್ಲಿಗೆ ೧೬, ಪ್ರಾಂತಿಕ ಕೌನ್ಸಿಲ್ಲಿಗೆ ೨೦ ಸ್ಥಳಗಳೆಂದು ಸರಕಾರವು ನಿಶ್ಚಯಿಸಿತು. ಮುಂಬಯಿ ಸರಕಾರವು ೮ ಸ್ಥಳಗಳನ್ನು ಚುನಾವಣೆಗಾಗಿ ತೆರೆದಿಟ್ಟಿತು. ಜನತೆಯ ದೃಷ್ಟಿಯಿಂದ ಈ ಸ್ಥಳಗಳು ತೀರ ಕಡಿಮೆಯಾಗಿದ್ದವು. ಅದರಲ್ಲಿಯೂ ಪುಣೆ ಹಾಗೂ ಮಧ್ಯಭಾಗದ ಆರು ಜಿಲ್ಹೆಗಳಿಗೆ ಪ್ರತಿನಿಧಿತ್ವವೇ ಇರಲಿಲ್ಲ. ಇದರ ನಿಷೇಧಾ ರ್ಥವಾಗಿ ಪ್ರಚಂಡ ಚಳವಳಿಯಾಯಿತು. ಲಾರ್ಡ ಹ್ಯಾರಿಸರ ಕಡೆಗೆ ಅರ್ಜಿ ಮಾಡಲ್ಪಟ್ಟಿತು. ಸರಕಾರವು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಸ್ಥಳಗಳನ್ನು ಕೊಟ್ಟರೆ, ಚಳವಳಿಗಾರ ರಾಜದ್ರೋಹಿ ಬ್ರಾಹ್ಮಣನೊಬ್ಬನು ಬಂದು ಸೇರುವನೆಂದು ಮುಂಬಯಿ ಸರಕಾರಕ್ಕೆ ಭೀತಿ.

ಈ ಚಳವಳಿಯ ಪರಿಣಾಮವಾಗಿ ಮಧ್ಯಭಾಗಕ್ಕೆ ಲೋಕಲ್ ಬೋರ್ಡ ಗಳ ವತಿಯಿಂದ ಒಬ್ಬ ಪ್ರತಿನಿಧಿಯು ಆರಿಸಿಬರಬೇಕೆಂದು ಚುನಾವಣೆಯ ನಿಯಮಗಳಲ್ಲಿ ತಿದ್ದುಪಡೆಯಾಯಿತು. ಹೊಸ ಚುನಾವಣೆಗಳು ಬಂದವು. ಈ ಸ್ಥಳಕ್ಕೆ ಹುರಿಯಾಳು ಯಾರು? ಎಂಬ ಪ್ರಶ್ನೆಯು ಏಳುವದು

ಸ್ವಾಭಾವಿಕವಿದ್ದಿತು. ಈ ಸ್ಥಳಕ್ಕೆ ಶ್ರೀರಾಮ ಭಿಕಾಜಿ, ಜಠಾರರನ್ನು ನ್ಯಾ. ರಾನಡೆ ಪಕ್ಷದವರು ನಿಲ್ಲಿಸಿದರು. ಖಾನದೇಶದ ಮುಖಂಡರೆಂದು ಧೊಂಡೋ ಶಾಮರಾವ ಗರುಡರವರು ನಿಂತರು. ಜನರ ಪ್ರತಿನಿಧಿಗಳೆಂದು ಟಿಳಕರು ಮುಂದೆ ಬಂದರು. ಈ ಮೂವರಲ್ಲಿ ಹೋರಾಟ ನಡೆಯಿತು. ಚುನಾವಣಿಯ ಕಾವು ಏರಹತ್ತಿತು. ಒಬ್ಬರ ಮೇಲೊಬ್ಬರು ವಾಗ್ಬಾಣ ಗಳನ್ನು ಬಿಡಹತ್ತಿದರು. ಚುನಾವಣಿಯ ಪ್ರಕಾರಗಳೆಲ್ಲವೂ ನಡೆದವು. ಅದರಲ್ಲಿಯೂ ಸುಧಾರಕರಿಗೂ ಸರಕಾರಕ್ಕೂ ಟಿಳಕರು ಬೇಡಾದವರು. ಎಲ್ಲ ಶಕ್ತಿಗಳು ಟಿಳಕರನ್ನು ವಿರೋಧಿಸಲು ಒಂದುಗೂಡಿದ್ದವು. ಸರಕಾರದ ಗ್ಯಾಝೆಟಂತೂ ತಲೆಯನ್ನೇ ಕೆಡಿಸಿಕೊಂಡಿತು. On Election should be presented to the Government for nomination ಎಂಬ ವಾಕ್ಯದ ಲಾಭ ತೆಗೆದುಕೊಂಡು ಕೀಳು ತರಗತಿಯ ಉಲ್ಲೂ ಪತ್ರದ ಸಂಪಾದಕರಾದ ಟಿಳಕರನ್ನು ಒಂದು ವೇಳೆ ಜನರು ಆರಿಸಿದ್ದಾದರೆ, ಗವ್ಹರ್ನರರು ತಮ್ಮ ಅಧಿ ಕಾರದಲ್ಲಿ ಅದನ್ನು ಕಿತ್ತೊಗೆಯಬೇಕೆಂದು ಪ್ರಸಿದ್ಧಿಸಿತು. ಇದು ಟಿಳಕರಿಗೆ ಅನುಕೂಲವಾಗಿಯೇ ಪರಿಣಮಿಸಿತು. ಜನರು ಸಿಟ್ಟಿಗೆದ್ದು, ಟಿಳಕರನ್ನೇ ಆರಿಸಬೇಕೆಂದು ನಿಶ್ಚಯಮಾಡಿದರು.

೧೮ ನೇ ಮೇ ದಿವಸ ಚುನಾವಣಿಯ ಪರಿಣಾಮವು ಹೊರಬಿದ್ದಿತು. ೩೫ ಮತಗಳು ಟಿಳಕರಿಗೆ, ೨೬ ಮತಗಳು ಗರುಡರಿಗೆ, ಕೇವಲ ೨ ಮತಗಳು ಜಠಾರರಿಗೆ ಬಿದ್ದು, ಟಿಳಕರು ಆರಿಸಿಬಂದರು. ೧೨ ನೇ ಜೂನ ದಿವಸ ಕೌನ್ಸಿಲ್ ಕಾರ್ಯದರ್ಶಿಯಿಂದ ನಿಮ್ಮ ಚುನಾವಣಿಯು ಮಾನ್ಯ ಮಾಡಲ್ಪ ಟ್ಟಿದೆ. ಎಂಬ ಪತ್ರವೂ ಟಿಳಕರಿಗೆ ಬಂದಿತು. ಟಿಳಕರು ನಾಮದಾರ ಟಿಳಕ ರಾದರು.

ಅಗಸ್ಟ ತಿಂಗಳಲ್ಲಿ ಕೌನ್ಸಿಲ್ಲಿನ ಮೊದಲನೆಯ ಸಭೆಯು ಪುಣೆಯಲ್ಲಿ ನಡೆಯಿತು. ಅದರಲ್ಲಿ ಮುಂಬಯಿ ಪ್ರಾಂತದ ಅಂದಾಜ ಪತ್ರಿಕೆಯ ವಿಚಾರವಾಗುವದಿದ್ದಿತು. ಈ ಸಭೆಯಲ್ಲಿ ಚರ್ಚಿಸಲ್ಪಡತಕ್ಕ ೩೯ ಪ್ರಶ್ನೆ ಗಳಲ್ಲಿ ೬ ಟಿಳಕರವೇ ಇದ್ದವು ಅಂದಾಜ ಪತ್ರಿಕೆಗೆ ಕೌನ್ಸಿಲ್ಲಿನ ಒಪ್ಪಿಗೆಯ ಮುದ್ರೆ ಬೇಕಾಗದಿದ್ದರೂ ಕೆಲವು ತಾತ್ವಿಕ ಪ್ರಶ್ನೆಗಳನ್ನು ಉಪಸ್ಥಿತ ಮಾಡ ಬಹುದೆಂದು ಟಿಳಕರಿಗೆ ಅನಿಸುತ್ತಿದ್ದಿತು. ಭಾರತ ಸರಕಾರ ಹಾಗೂ

ಪ್ರಾಂತಿಕ ಸರಕಾರಗಳ ಅರ್ಥಿಕ ಸಂಬಂಧಗಳು ಹೇಗೆ ಇರಬೇಕೆಂಬ ಬಗೆ ಐದ್ಯೈದು ವರ್ಷಗಳ ಕರಾರುಗಳು ಆಗುತ್ತಿದ್ದವು. ವೆಚ್ಚದ ಭಾರವನ್ನೆಲ್ಲ ಪ್ರಾಂತಿಕ ಸರಕಾರಗಳ ಮೇಲೆ ಹೊರಿಸುವ ಯುಕ್ತಿಯನ್ನು ಭಾರತ ಸರಕಾರವು ಮಾಡುತ್ತಿತ್ತು. ಇದನ್ನು ತಪ್ಪಿಸಲು ಹೊಸ ಕರಾರುಗಳ ಅವಶ್ಯಕತೆಯಿದ್ದಿತು. ಮತ್ತು ಅವುಗಳನ್ನು ಪಾಲಿಸುವ ವಚನವೂ ಬೇಕಿದ್ದಿತು. ಎಲ್ಲ ಸಭಾಸದರೂ ಇದನ್ನು ಅಪೇಕ್ಷಿಸುತ್ತಿದ್ದರು. ಟಿಳಕರು ಈ ಪ್ರಶ್ನೆಯನ್ನೇ ಎತ್ತಿದರು. ೧೮೭೦ ರಿಂದ ೯೫ರ ವರೆಗೆ ಸರಕಾರದ ಉತ್ಪನ್ನವು ಹೇಗೆ ಬೆಳೆದಿದೆ ? ನಿರುಪಯುಕ್ತ ಕಾರ್ಯಗಳಿಗೆ ಹೇಗೆ ವೆಚ್ಚವಾಗತೊಡಗಿದೆ? ಜನರ ಸಂಕಟಗಳು ಹೇಗೆ ಹೆಚ್ಚಿವೆ? ಎಂಬುದನ್ನು ಅಂಕಿ ಸಂಖ್ಯೆಗಳಿಂದ ಸಿದ್ಧಮಾಡಿ ತೋರಿಸಿದರು. ಇದನ್ನೇ ಅವರು ಪಂಚವಾರ್ಷಿಕ ಕರಾರು ಎಂಬ ಪ್ರಬಂಧವನ್ನು ಬರೆದರು. ಅದು ಸಾರ್ವಜನಿಕ ಸಭೆಯ ಪತ್ರಿಕೆಯಲ್ಲಿ ಪ್ರಕಟವಾಯಿತು.

ಕೌನ್ಸಿಲ್ಲಿನಲ್ಲಿ ಕಾರ್ಯವಾಗುವ ಆಶೆಯಿಲ್ಲೆಂದು ಅವರಿಗೆ ಅನಿಸಹತ್ತಿತು. ಅಲ್ಲಿಯ ಕಾರ್ಯಗಳೆಲ್ಲ ತೋರಿಕೆಯವೆಂದು ಮೇಲಿಂದಮೇಲೆ ಉದ್ಗಾರ ತೆಗೆದದ್ದುಂಟು. ಕೇಸರಿಯಲ್ಲಿ "ಕಾಯದೆ ಕೌನ್ಸಿಲ್ಲಿನ ಸಭೆಯು ಒಂದು ಬಗೆಯ ನಾಟಕವೇ ಇದೆ. ಹೋದ ಕೌನ್ಸಿಲ್ಲಿನ ಸಭೆಯು ೪೫ ನಿಮಿಷ ನಡೆದು, ಅದರಲ್ಲಿ ೨೦ ಪ್ರಶ್ನೆಗಳಿಗೆ ಉತ್ತರ, ಕೆಲವು ಕಾಗದ ಪತ್ರಗಳ ವಾಚನ, ಅಲ್ಲದೆ ಒಂದು ಕಾಯದೆಗೆ ಮನ್ನಣೆ ಪಡೆಯುವ ಕಾರ್ಯವೆಲ್ಲ ಮುಗಿಯಿತು. ಇದು ಚೇಷ್ಟೆಯಲ್ಲದೆ ಮತ್ತೇನು ?" ಎಂದು ಬರೆದದ್ದು ಕಂಡು ಬರುತ್ತದೆ. ಹೀಗಿದ್ದರೂ ಅವುಗಳ ಉಪಯೋಗವನ್ನು ಲೋಕಹಿತದ ದೃಷ್ಟಿಯಿಂದ ಮಾಡಿಕೊಳ್ಳಬೇಕೆಂದು ಅವರ ಮತ. ನಾಮದಾರರಾದರೆ ಜನಹಿತ ಕಾರ್ಯಕ್ಕೆ ನಿರುಪಯೋಗಿಗಳಾಗುವರೆಂಬ ಮಾತನ್ನು ಸುಳ್ಳು ಮಾಡಿ ತೋರಿಸಿ, ಕೌನ್ಸಿಲ್ಲಿನ ಸಭಾಸದರಿರುವದರಿಂದ ಸಾರ್ವಜನಿಕ ಕಾರ್ಯಗಳಿಗೆ ಹೇಗೆ ಕಳೆಕಟ್ಟುವದೆಂಬುದನ್ನು ಬರಗಾಲದಲ್ಲಿ ತೋರಿಸಿಕೊಟ್ಟರು.

೧೮೯೭ರಲ್ಲಿ ಮತ್ತೆ ಚುನಾವಣೆಗೆ ಅದೇ ಮತದಾರ ಸಂಘದಿಂದ ನಿಂತು, ಆರಿಸಿಬಂದರು. ಆದರೆ ಅವರ ಮೇಲೆ ರಾಜದ್ರೋಹದ ಖಟ್ಲೆ

ಯಾದ ಮೂಲಕ ಅವರೇ ಸ್ವಲ್ಪದಿನಗಳಲ್ಲಿ ರಾಜೀನಾಮೆಯನ್ನು ಕಳಿಸಿದರು.

ಶೆರೆಮನೆಯಿಂದ ಮರಳಿದ ನಂತರ, ೧೮೯೯ರಲ್ಲಿ ಮತ್ತೆ ಚುನಾವಣೆಗೆ ನಿಲ್ಲಬೇಕೆಂದು ಮಿತ್ರರು ಆಗ್ರಹ ಪಡಿಸಹತ್ತಿದರು. ಆದರೆ ಪರಿಸ್ಥಿತಿಯು ಪಲ್ಲಟವಾಗಿತ್ತು. ಗೋಖಲೆಯವರು ಚುನಾವಣೆಯ ರಂಗಕ್ಕೆ ಇಳಿದಿದ್ದರು. ಚಾಣಾಕ್ಷರಾದ ಟಿಳಕರು ಇದೆಲ್ಲವನ್ನು ಕಂಡು, ತಾವು ಚುನಾವಣೆಗೆ ನಿಲ್ಲುವದಿಲ್ಲೆಂದು ಮಿತ್ರರಿಗೆ ತಿಳಿಸಿದರು.

ಕೌನ್ಸಿಲ್ಲಿನಲ್ಲಿ ಸಿಕ್ಕ ಅಲ್ಪಾವಕಾಶದಲ್ಲಿಯೇ ಅಂದಾಜ ಪತ್ರಿಕೆಗಳ ಸಮಾಚಾರವನ್ನು ತೆಗೆದುಕೊಂಡು, ಅರ್ಥಶಾಸ್ತ್ರದಲ್ಲಿಯೂ ಅಂಕಿಸಂಖ್ಯೆಗಳಲ್ಲಿಯೂ ತಮ್ಮ ಬುದ್ಧಿಯು ಓಡುವದೆಂಬುದನ್ನು ತೋರಿಸಿದರು. ಸರಕಾರದ ಈ ಕೋಟೆಗಳಲ್ಲಿ ಆದಷ್ಟುಹೊಕ್ಕು, ಅವುಗಳನ್ನು ವಶಪಡಿಸಿಕೊಳ್ಳಬೇಕೆಂಬುದೇ ಅವರ ಧೋರಣವಾಗಿದ್ದಿತು.

## ಸೋಲಿನಲ್ಲಿ ಗೆಲವು

೧೮೯೪ರಲ್ಲಿ ಮದ್ರಾಸಿನಲ್ಲಿ ಸೇರಿದ ರಾಷ್ಟ್ರೀಯ ಸಭೆಯಲ್ಲಿ, ೧೧ ನೇ ಅಧಿವೇಶನವನ್ನು ಪುಣೆಯಲ್ಲಿ ಜರುಗಿಸಬೇಕೆಂದು ಆಮಂತ್ರಣಕೊಡಲ್ಪಟ್ಟಿತು. ಪುಣೆಯ ರಾಷ್ಟ್ರೀಯ ವೃತ್ತಿಯ ತರುಣರೆಲ್ಲರೂ ಅದನ್ನು ಯಶಸ್ವಿಗೊಳಿಸಲು ಬದ್ಧ ಕಂಕಣರಾದರು. ಎಪ್ರಿಲ್ ತಿಂಗಳಲ್ಲಿ ಕಾರ್ಯಕಾರಿ ಮಂಡಳವೂ ನಿರ್ಮಾಣವಾಯಿತು. ಪುಣೆ ಪಟ್ಟಣ ಒಂದರಲ್ಲಿಯೇ ೧೫ ಸಾವಿರ ರೂಪಾಯಿಗಳನ್ನು ಕೂಡಿಸುವ ಹುಮ್ಮಸದಿಂದ ಕಾರ್ಯಪ್ರಾರಂಭವಾಯಿತು. ಟಿಳಕರು ಕಾರ್ಯದರ್ಶಿಗಳಲ್ಲೊಬ್ಬರಿದ್ದರು.

ಟಿಳಕ ಹಾಗೂ ಅವರ ಅನುಯಾಯಿಗಳು ಮುನಸಿಪಾಲ್ಟಿ, ವಿಶ್ವವಿದ್ಯಾಲಯ, ಕಾಯದೆ ಕೌನ್ಸಿಲ್‌ಗಳಲ್ಲಿ, ವಿಜಯಿಗಳಾದ್ದರಿಂದ ರಾಷ್ಟ್ರೀಯ ಸಭೆಯಲ್ಲಿಯೂ ಅವರದೇ ಮೇಲುಗೈಯಾಗುವದೆಂದು, ಮತ್ಸರವು ಮೂಡಿ, ಪಕ್ಷಗಳ ವಾದವು ತಲೆಯೆತ್ತಿತು.

ರಾ. ಸಭೆಯ ಮಂಡಪವನ್ನು ಸಾಮಾಜಿಕ ಪರಿಷತ್ತಿಗೆ ಕೊಡಕೂಡದೆಂದು ನಾತು ಪಕ್ಷದವರು ಹೂಲಿಯನ್ನೆಬ್ಬಿಸಿದರು. ಇವರೆಲ್ಲರೂ ಟಿಳಕರ ಪರಮ ಸ್ನೇಹಿತರು. ಈ ವಾದವು ಕಾಂಗ್ರೆಸ್ಸಿನ ಕಾರ್ಯದಲ್ಲಿ ಅಡ್ಡಬರಬಾರ

ದೆಂದು ಟಿಳಕರು ಪುನಃಪೂರ್ವಕವಾಗಿ ಪ್ರಯತ್ನಿಸಿದರು. ಆದರೆ ರಾನಡೆಯವರ ಅನುಯಾಯಿಗಳು ಹಣಕೂಡಿಸಲು ಹೋದಾಗ ಮೇಲಿನ ಪ್ರಶ್ನೆಯೇ ಚರ್ಚಿಸಲ್ಪಡಹತ್ತಿತು. ಮಂಟಪದಲ್ಲಿ ಸಾಮಾಜಿಕ ಪರಿಷತ್ತು ನೆರೆದರೇ ಸಹಾಯ ಮಾಡುವೆವು, ನೆರೆಯದಿದ್ದರೆ ಸಹಾಯ ಮಾಡುವೆವು ಎಂಬ ಎರಡು ಪಕ್ಷಗಳಾದವು. ಇಬ್ಬರನ್ನೂ ಟಿಳಕರು ನಿಷೇಧಿಸಹತ್ತಿದರು. ಕಾಂಗ್ರೆಸ್ ಯಶಸಿಯಾಗುವಂತೆ ಸಹಾಯ ನೀಡಬೇಕೆಂದು ಪ್ರಚಾರ ನಡೆಯಿಸಿದರು. ರಾ. ಸಭೆ ಮುಗಿದನಂತರ ಸಭೆ ಮಾಡಿಕೊಳ್ಳಲಿ, ಎಂದು ಮಿತ್ರರ ಮನವಲಿಸಲು ಪ್ರಯತ್ನ ಮಾಡಿದರು. ಒಂದು ವೇಳೆ ಈ ವಾದದಿಂದ ರಾಷ್ಟ್ರೀಯ ಸಭೆಯು ಸೇರದೆ ಹೋದರೆ, ಅದರ ದೋಷವೆಲ್ಲವೂ ತಮ್ಮ ತಲೆಯ ಮೇಲೆ ಬರುವದು ಎಂಬುದನ್ನು ಟಿಳಕರು ಚೆನ್ನಾಗಿ ಅರಿತಿದ್ದರು. 'ಸಾಮಾಜಿಕ ಪರಿಷತ್ತಿನ ನಿರ್ಣಯವಾಗದೆ ಹಣಕೊಡಬೇಡಿರಿ, ಎನ್ನುವವರು ರಾಷ್ಟ್ರೀಯ ಸಭೆಯ ವೈರಿಗಳು ಎಂದು ಕೇಸರಿಯಲ್ಲಿ ಬರೆದರು. ಟಿಳಕರು 'ಮೊದಲು ಎಲ್ಲರೂ ಸ್ವಾಗತ ಸಮಿತಿಯ ಸದಸ್ಯರಾಗಿರಿ. ಸ್ವಾಗತ ಸಮಿತಿಯು ಈ ಪ್ರಶ್ನೆಯನ್ನು ಬಿಡಿಸಲಿ,' ಎಂದು ಉಪದೇಶಿಸಿದರು. ಟೀಕೆ, ಪ್ರತಿಟೀಕೆಗಳು ನಡೆದವು. ಸುಧಾರಕರು ಟಿಳಕರು ಏನೂ ಕಾರ್ಯವಾಡುವದಿಲ್ಲೆಂದು ಸುದ್ದಿ ಹಬ್ಬಿಸಿದರು. ಪುಣೆಯಲ್ಲಿ ರಾ. ಸಭೆ ಸೇರಿಸುವದು ಶಕ್ಯವಿಲ್ಲೆಂದು ಕಾಂಗ್ರೆಸ್ ಸಂಚಾಲಕರಿಗೆ ಅನಿಸಿ, ಅವರು ಸಭೆಯ ಸ್ಥಳಾಂತರ ಮಾಡಬೇಕೆಂಬುದೇ ಅವರ ಉದ್ದೇಶವಿದ್ದಿತು. ಸಾತಾರೆಯಿಂದ 'ಪುಣೆಯಲ್ಲಿ ಪಕ್ಷ ಭೇದದ ಮೂಲಕ ರಾಷ್ಟ್ರೀಯ ಸಭೆ ಕೂಡುವದು ಶಕ್ಯಕಾಣುವದಿಲ್ಲ. ನಾವು ಅದನ್ನು ಸೇರಿಸುವೆವು, ಎಂಬ ತಂತಿಯು ಕಾಂಗ್ರೆಸ್ ವರಿಷ್ಠರ ಕಡೆಗೆ ಹೋಯಿತು. ಟಿಳಕರನ್ನು ಕಾರ್ಯದರ್ಶಿಯ ಸ್ಥಳದಿಂದ ತಳ್ಳಿ, ತಮ್ಮ ಕೈಯಲ್ಲಿಯೇ ಎಲ್ಲ ವ್ಯವಸ್ಥೆಯನ್ನು ತೆಗೆದುಕೊಳ್ಳಬೇಕೆಂದು ಸುಧಾರಕರು ಕಾರಸ್ಥಾನ ನಡೆಸಿದ್ದರು.

ಇದನ್ನು ತಿಳಿದು ಟಿಳಕ ಪಕ್ಷೀಯರು ಸಾರ್ವಜನಿಕ ಸಭೆ ಸೇರಿಸಿದರು. ರಾಷ್ಟ್ರೀಯ ಸಭೆಯು ಎಲ್ಲ ಪಕ್ಷಗಳದು, ಜಾತಿಗಳದು ಇರುವ ಮೂಲಕ ಅಧಿವೇಶನದ ವ್ಯವಸ್ಥೆಯು ಬಹು ಜನರ ಇಚ್ಛೆಯಂತೆ ನಡೆಯಬೇಕು. ಹೊಸ ವರ್ಕಿಂಗ ಕಮಿಟಿಯನ್ನು ಆರಿಸಬೇಕು. ಎಂದು ಅದರಲ್ಲಿ ಗೊತ್ತುವಳಿಗಳನ್ನು ಮಾಡಿದರು.

ವಿರುದ್ಧ ಪಕ್ಷದವರು ಇದನ್ನೇ ಮುಂದೆ ಮಾಡಿ ಟಿಳಕರು ವರ್ಕಿಂಗ ಕಮಿಟಿಯಲ್ಲಿದ್ದು, ಅದರ ವಿರುದ್ಧವಾಗಿ ಪ್ರಯತ್ನ ನಡೆಯಿಸಿರುವರೆಂಬ ಆರೋಪಹೊರಿಸಿ, ಅವರನ್ನು ವರ್ಕಿಂಗ ಕಮಿಟಿಯಿಂದ ಹೊರಗೆ ಹಾಕಿದರು. ಇದೆಲ್ಲವನ್ನು ಕಂಡು ಫಿರೋಜಶಹಾ ಮೆಥಾರವರು ಎರಡೂ ಪಕ್ಷದ ಸಭೆ ಕರೆದು, ಪ್ರತಿಯೊಂದು ಪಕ್ಷದ ಇಬ್ಬಿಬ್ಬರು ಕಾರ್ಯದರ್ಶಿಗಳು ಮತ್ತು ವಾಚ್ಛಾ, ಸೆಟಲವಾಡ, ಖರೆ ಈ ಮೂವರು. ಹೀಗೆ ೭ ಜನ ಕಾರ್ಯದರ್ಶಿಗಳು ಸಭೆಯ ವ್ಯವಸ್ಥೆ ಮಾಡಬೇಕೆಂದರು. ಕಾಂಗ್ರೆಸ್ ಯಶಸ್ವಿಯಾಗಲಿ ಎಂಬ ಬುದ್ಧಿಯಿಂದ ಜನರ ಬೆಂಬಲ ತಮಗೆ ಪೂರ್ಣವಾಗಿದ್ದರೂ ಅದಕ್ಕೆ ಒಪ್ಪಿಗೆ ಕೊಟ್ಟು ಟಿಳಕರು ರಾಜೀನಾಮೆಯನ್ನು ಕಳಿಸಿದರು. ನಾನು ಕಾರ್ಯದರ್ಶಿಯಲ್ಲದಿದ್ದರೂ ರಾಷ್ಟ್ರೀಯ ಸಭೆಗೆ ಎಲ್ಲರೂ ಸಹಾಯ ಮಾಡಬೇಕೆಂದು ಬಿನ್ನವಿಸಿದರು. ಸುಧಾರಕರು ವಿಜಯಿಗಳಾದರು.

ಆದರೆ ಈ ವಾದ ನಿಲ್ಲಲಿಲ್ಲ. ವಿಕೋಪಕ್ಕೆ ಹೋಯಿತು. ಶ್ರೀಧರ ವಿಠ್ಠಲ ದಾತೆ ಅಂಥವರು ರಾಷ್ಟ್ರೀಯ ಸಭೆಯ ಮಂಟಪದಲ್ಲಿ ಸಾಮಾಜಿಕ ಪರಿಷತ್ತು ಕೂಡಿದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ಉಲುಕೋಚಿಗಳು ಬೆಂಕಿಹಚ್ಚಿದರೆ ಅದರ ಹೊಣೆ ಯಾರ ಮೇಲೆ ಎಂದು ಎಚ್ಚರಿಕೆ ಕೊಟ್ಟರು. ಈ ಎಲ್ಲ ಪರಿಸ್ಥಿತಿಯನ್ನು ನೋಡಿ, ಆಂಗ್ಲೋ ಇಂಡಿಯನ್, ಹಿಂದೂ ಮೊದಲಾದ ಪತ್ರಿಕೆಗಳೂ ಕಾಂಗ್ರೆಸ್ ಅಧ್ಯಕ್ಷರೂ ರಾಷ್ಟ್ರೀಯ ಸಭೆಗೆ ಧಕ್ಕೆ ತಗಲುತ್ತಿದ್ದರೆ, ಸಾಮಾಜಿಕ ಪರಿಷತ್ತನ್ನು ಅಲ್ಲಿಯೇ ನೆರೆಯಿಸುವ ಆಗ್ರಹವನ್ನು ಬಿಡಬೇಕೆಂದು ಸಲಹೆ ಕೊಟ್ಟರು. ರಾನಡೆಯವರು ಸಾಮಾಜಿಕ ಪರಿಷತ್ತನ್ನು ಕೂಡಿಸಲು ಈ ಸಲ ರಾಷ್ಟ್ರೀಯ ಸಭೆಯ ಮಂಡಪವನ್ನು ಬೇಡುವದಿಲ್ಲವೆಂದು ತಂತಿಯನ್ನು ವೃತ್ತಪತ್ರಗಳಿಗೆ ಕಳಿಸಿದರು. ಲೋಕಮತಕ್ಕೆ ಮನ್ನಣೆ ದೊರೆಯಿತು. ಟಿಳಕರ ಸೋಲಿನಲ್ಲಿಯೇ ಅವರ ಗೆಲವಿದ್ದಿತೆಂದು ಜನತೆಯು ಅವರನ್ನು ಕೊಂಡಾಡಿತು. ಟಿಳಕರು ತಾವು ಹೊರಗಿದ್ದರೂ ಕಾಂಗ್ರೆಸ್ಸಿಗೆ ೨೫೦೦ ರೂಪಾಯಿಗಳನ್ನು ಕೂಡಿಸಿಕೊಟ್ಟರು. ಇದೇ ಅಲ್ಲವೇ ಮಾನವನ ದೊಡ್ಡಿಸ್ತಿಕೆ.

ಕಾಂಗ್ರೆಸ್ ಸಮಾಪಿಸಿತು. ಅಧ್ಯಕ್ಷರಾದ ಸುರೇಂದ್ರನಾಥರು ಪುಣೆಗೆ ಹೊರಟರು. ಟಿಳಕರು ಧೋಂಡ ಸ್ಟೇಶನಕ್ಕೆ ವಿದ್ವಾಂಸರನ್ನು ಕಳಿಸಿ, ತಮ್ಮ

ಪಕ್ಷದ ಸ್ವಾಗತದ ಆಮಂತ್ರಣಕೊಟ್ಟರು. ಕಾಂಗ್ರೆಸ್ಸಿನ ವತಿಯಿಂದ ಗೋಖಲೆಯವರು ಹೋಗಿದ್ದರು. ಪುಣೆಯ ಸ್ಟೇಶನ್ನಿನ ಮೇಲೆ ಕಾಂಗ್ರೆಸ್ಸಿನ ವತಿಯಿಂದ ಸ್ವಾಗತವಾಗುವದಿದ್ದಿತು, ಆದರೆ ಹಡಪಸರ ಸ್ಟೇಶನ್ನಿನಲ್ಲಿಯೇ ಟಿಳಕರು ಅಪೂರ್ವವಾದ ಸ್ವಾಗತವನ್ನಿತ್ತು ತಮ್ಮ ರಾಷ್ಟ್ರೀಯ ಸಭೆಯ ಪ್ರೇಮವನ್ನು ವ್ಯಕ್ತಮಾಡಿದರು. ಕಾಂಗ್ರೆಸ್ಸಿನ ಎರಡನೇ ದಿವಸ ಶ್ರೀ ಶಿವಾಜಿ ಸ್ಮಾರಕಸಂಸ್ಥೆಯ ವತಿಯಿಂದ ಪ್ರಚಂಡ ಸಾರ್ವಜನಿಕ ಸಭೆಯನ್ನು ಜರುಗಿಸಿ, ಸುರೇಂದ್ರನಾಥ ಬ್ಯಾನರ್ಜಿ, ಪಂಡಿತ ಮದನ ಮೋಹನ ಮಾಲವೀಯ ಮೊದಲಾದವರ ಭಾಷಣಗಳನ್ನು ಮಾಡಿಸಿದರು. ಸುರೇಂದ್ರನಾಥ ಬ್ಯಾನರ್ಜಿಹಾಗೂ ಟಿಳಕರ ಸ್ನೇಹವು ಜನರ ಕಣ್ಣನ್ನು ಕುಕ್ಕಿಸಿತು. ಅಂದೇ ಕಾಂಗ್ರೆಸ್ಸಿನ ಪ್ರತಿನಿಧಿಗಳಿಗೆಲ್ಲ ಬಾಬಾ ಮಹಾರಾಜರು ಸಂತೋಷ ಕೂಟವನ್ನು ಏರ್ಪಡಿಸಿದ್ದರು. ಅಲ್ಲಿಯೂ ಟಿಳಕರ ನಾಯಕತ್ವವೇ ! ಇದನ್ನು ಕಂಡು ಪರಪ್ರಾಂತೀಯರೆಲ್ಲರೂ ಟಿಳಕರೇ ಪುಣೆಯ ಮುಂದಾಳುಗಳೆಂದು ತಿಳಿದುಕೊಂಡದ್ದರಲ್ಲಿ ಆಶ್ಚರ್ಯವಿಲ್ಲ.

ಟಿಳಕರು ವರ್ಕಿಂಗ ಕಮಿಟಿಯಲ್ಲಿ ಸೋಲಿಸಲ್ಪಟ್ಟರೂ ಟಿಳಕರಿಂದ ಪ್ರತಿಪಾದಿತ ತತ್ವಗಳು ಮನ್ನಣೆ ಪಡೆದವು. ಟಿಳಕರು ಕಾರ್ಯದರ್ಶಿಗಳಿರದಿದ್ದರೂ ಸಾಮಾಜಿಕ ಪರಿಷತ್ತನ್ನು ಕಾಂಗ್ರೆಸ್ ಮಂಡಪದಿಂದ ಹೊರಗಳೆದರು. ಸುರೇಂದ್ರನಾಥ ಬ್ಯಾನರ್ಜಿ ಮೊದಲಾದವರಿಗೆ ತಮ್ಮ ಪಕ್ಷದ ಶಕ್ತಿ ಸಾಮರ್ಥ್ಯಗಳನ್ನು ಮನಗಾಣಿಸಿಕೊಟ್ಟರು. ಟಿಳಕರು ವಿಜಯಿಗಳಾದರು ಸೋಲಿನಲ್ಲಿಯೂ ಗೆಲವನ್ನು ಪಡೆದರೆಂದು ಜನ ಕೌತುಕಪಟ್ಟಿತು.

## ಕೋಟೆಯು ಕೈವಶವಾಯಿತು

ಸಾರ್ವಜನಿಕ ಸಭೆಯು ಪುಣೆಯ ಸಾರ್ವಜನಿಕ ಜೀವನದ ಕೇಂದ್ರವಾಗಿದ್ದಿತು. ಸಾರ್ವಜನಿಕ ಸಭೆಯು ಮಾತನಾಡಿದರೆ, ಸರಕಾರವೂ ಜನತೆಯೂ ವಿಚಾರ ಮಾಡಬೇಕಾಗುತ್ತಿದ್ದಿತು. ಪುಣೆಯಲ್ಲಿ ಪಕ್ಷೋಪ ಪಕ್ಷಗಳು ಬಲಗೊಂಡು ಪಕ್ಷಗಳ ರಾಜಕಾರಣಕ್ಕೆ ಉಕ್ಕು ಬಂದಿದ್ದಿತು. ಪ್ರತಿಯೊಬ್ಬರೂ ಸಂಸ್ಥೆಯ ಉದ್ದೇಶಗಳನ್ನು ನೆರವೇರಿಸುವದಕ್ಕಿಂತ ತಮ್ಮ ಸೂತ್ರದಂತೆ ಅದು ನಡೆಯಬೇಕೆಂದು ಅಪೇಕ್ಷಿಸುತ್ತಿದ್ದರು. ೧೮೯೫ ರಲ್ಲಿ ಚುನಾವಣೆಗಳು

ಬಂದವು. ಮುಂದ, ಉಗ್ರ ಪಕ್ಷಗಳೆರಡೂ ಸಭಾಸದರನ್ನು ಹೆಚ್ಚಿಸುವ ಪ್ರಯತ್ನ ಮಾಡಿದವು. ವರದಿವಾಚನ,ಅಂದಾಜಪತ್ರಿಕೆಗಳನ್ನು ಸ್ವೀಕರಿಸುವ ಕಾರ್ಯವು ಸುಸೂತ್ರವಾಗಿ ನಡೆಯಿತು. ಕಾರ್ಯಕಾರೀ ಮಂಡಳದಲ್ಲಿ ತಮ್ಮ ಬಹುಮತವಾಗುವಂತೆ ಯೋಚಿಸಿ, ಅಧ್ಯಕ್ಷರನ್ನೂ ಕೋಶಾಧ್ಯಕ್ಷರನ್ನೂ ಬದಲು ಮಾಡಿದರು. ಗೋಖಲೆಯವರೇ ಕಾರ್ಯದರ್ಶಿಗಳಾಗಿ ಉಳಿಯು ವಂತೆ ಮಾಡಿದರು.

ರಾನಡೆಯವರ ಪಕ್ಷದವರು ಇದರ ಬಗ್ಗೆ ಹೊಲಿಯನ್ನು ಎಬ್ಬಿಸಿದರು. ಟಿಳಕರು ೧೦ ವರ್ಷ ಅಲ್ಪ ಸಂಖ್ಯಾಕರಿದ್ದರೂ ಯಾವ ತಕರಾರುಗಳನ್ನೂ ಮಾಡಿರಲಿಲ್ಲ. ಆದರೆ, ಇಂದು ಅಧ್ಯಕ್ಷರು ಟಿಳಕ ಪಕ್ಷದವರು, ಬಹುಮತ ಅವರದು, ಎಂಬುದೇ ಈ ಕಳವಳಕ್ಕೆ ಕಾರಣವಾಗಿದ್ದಿತು. ವಾದ ವಿವಾದ ನಡೆಯಿತು. ಗೋಖಲೆಯವರು ಕೊನೆಗೆ ರಾಜೀನಾಮೆಯನ್ನು ಕೊಟ್ಟರು. ಸಂಸ್ಥೆಯು ಸುಧಾರಕರ ಕೈತಪ್ಪಿ ಪೂರ್ಣವಾಗಿ ಟಿಳಕರ ಕೈವಶವಾಯಿತು.

ಸುಧಾರಕರು ಬೇರೆ ಸಂಸ್ಥೆಯನ್ನು ತೆರೆಯುವ ವಿಚಾರವನ್ನು ಮಾಡಿ ದರು. ಟಿಳಕರು ಇಷ್ಟು ದಿನಗಳವರೆಗೆ ಕೂಡಿಕೊಂಡು ಹೋಗುವ ಧೋರಣ ವನ್ನು ವಹಿಸಿದಂತೆ, ಗೋಖಲೆ ಪಕ್ಷದವರೂ ವಹಿಸಿ, ದೊಡ್ಡಿಸ್ತನದಿಂದ ನಡೆಯಬೇಕಿದ್ದಿತು. ಟಿಳಕರ ಶಕ್ತಿ ಸಾಮರ್ಥ್ಯಗಳು ತಮ್ಮಲಿಲ್ಲವೆಂದು ಗೋಖಲೆಯವರು ಒಪ್ಪಿಕೊಂಡರು. ಮತ್ತು ಇಬ್ಬರಲ್ಲಿಯೂ ರಾಜಕೀಯ ಮತಭೇದಗಳಿರುವ ಮೂಲಕ, ತಮ್ಮ ಮಂದಪಕ್ಷಕ್ಕೆ ಒಂದು ಸಂಸ್ಥೆಯು ಅವಶ್ಯವೆಂದು ಪ್ರತಿಪಾದಿಸಿ, ಡೆಕ್ಕನ್ ಸಭೆ ಯೆಂಬ ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಿದರು. ಅಂದಿನಿಂದ ಗೋಖಲೆ ಪಕ್ಷಕ್ಕೆ ಮಂದಪಕ್ಷವೆಂದು ಹೆಸರು ಬಿದ್ದಿತು.

ಟಿಳಕರು ಸಾರ್ವಜನಿಕ ಸಭೆಯಲ್ಲಿ ಪ್ರವೇಶಮಾಡಿ ಅದನ್ನು ಕೈವಶ ಪಡಿಸಿಕೊಂಡು, ತಮ್ಮ ಪಕ್ಷದ ಕಾರ್ಯರಂಗವನ್ನಾಗಿ ಮಾರ್ಪಡಿಸಿದರು.

---

# ರಾಷ್ಟ್ರೀಯ ಉತ್ಸವಗಳ ಜನಕರು

ನಮ್ಮ ಧಾರ್ಮಿಕ ಭಾವನೆಯು ಜಾಗೃತವಾಗಿರಬೇಕು. ರಾಷ್ಟ್ರೀಯ ಹಾಗೂ ನೈತಿಕ ಶಕ್ತಿಗಳು ವೃದ್ಧಿಂಗತವಾಗಬೇಕು. ನಮ್ಮ ರಾಷ್ಟ್ರೀಯತ್ವದ ಜ್ಯೋತಿಯು ಯಾವಾಗಲೂ ಜಾಜ್ವಲ್ಯವಾಗಿ ಬೆಳಗಬೇಕೆಂಬ ದೃಷ್ಟಿಯಿಂದಲೇ ನಮ್ಮ ಹಿರಿಯರು ಇಂತಹ ಉತ್ಸವಗಳ ಯೋಜನೆಯನ್ನು ಮಾಡಿದ್ದಾರೆ. (ಕೇಸರಿ ೧-೯-೯೬)

ಹಿಂದೀಯರ ರಕ್ತದ ಕಣಕಣಗಳಲ್ಲಿ ತುಂಬಿದ ಧಾರ್ಮಿಕ ಶ್ರದ್ಧೆಯ ತಳಹದಿಯ ಮೇಲೆಯೇ ನವಭಾರತದ ನಿರ್ಮಾಣವನ್ನೂ ರಾಜಕೀಯ ಜಾಗೃತಿಯನ್ನೂ ಮಾಡಿದರೆ, ಅದು ನಾಲ್ಕು ದಿನ ಬಾಳಬಲ್ಲದೆಂದು ಬಗೆದು ಟಿಳಕರು ಶ್ರೀ ಗಣಪತಿ ಉತ್ಸವವನ್ನೂ ಶಿವಾಜಿಯ ಉತ್ಸವವನ್ನೂ ಪ್ರಾರಂಭಿಸಿದರು. ಈ ಉತ್ಸವಗಳು ಜನ ಸಾಮಾನ್ಯರ ಅಂತಃಕರಣವನ್ನು ಸೆಳೆದುಕೊಂಡು ಜನಪ್ರಿಯವಾದವು. ರಾಷ್ಟ್ರದಲ್ಲಿ ನವ ಶಕ್ತಿಯು ಸಂಚಾರವಾಯಿತು. ಗಣಪತಿ ಉತ್ಸವದಿಂದ ಹಿಂದುಗಳ ಸಂಘಟನೆಯಾಗಿ ಏಕ ರಾಷ್ಟ್ರೀಯತ್ವದ ಕಲ್ಪನೆಯು ಉದಯವಾದರೆ, ಶ್ರೀ ಶಿವಾಜಿ ಉತ್ಸವದಿಂದ ರಾಷ್ಟ್ರದಲ್ಲಿ ಕ್ಷಾತ್ರವೃತ್ತಿಯು ಹೊರಹೊಮ್ಮಿ, ಸ್ವದೇಶಾಭಿಮಾನ, ಸ್ವಾಭಿಮಾನಗಳು ಜಾಗೃತವಾದವು. ಇವೇ ನವಯುಗದ ನಾಂದಿಯಾದವು. ಭಾರತದ ದ್ವೇಷಿಗಳಾದ ಸರ್ ವ್ಹಾಲಂಟಾಯಿನ್ ಚಿರೋಲರು 'ಭಾರತೀಯ ಅಶಾಂತಿ' ಎಂಬ ತಮ್ಮ ಪುಸ್ತಕದಲ್ಲಿ ''ಹಿಂದೂ ಸಂಸ್ಕೃತಿಯ ಕಟ್ಟಡದ ಮುಖಂಡರೂ ಗಣೇಶೋತ್ಸವದ ಪ್ರಧಾನ ಪುರೋಹಿತರೂ ನವರಾಷ್ಟ್ರ ಧರ್ಮ ಪ್ರವರ್ತಕರೂ' ಎಂದು ಲೋಕಮಾನ್ಯರನ್ನು ಚಿತ್ರಿಸಿದ್ದಾರೆ. ಸಾರ್ವಜನಿಕ ಗಣಪತಿ ಉತ್ಸವದ ಹೊಸ ಸಂಪ್ರದಾಯವನ್ನು ಹೂಡಿ, ತರುಣರ, ಗರಡೀಸಾಧಕರ, ಮೇಳಗಳನ್ನು ಸಂಘಟಿಸಿ, ಸಾಮಾನ್ಯ ಜನರ ಮೇಲೆ ತಮ್ಮ ವಿಲಕ್ಷಣ ಪ್ರಭಾವವನ್ನು ಬೀರಿದ ಟಿಳಕರ ಬುದ್ಧಿಯು ಅದ್ವಿತೀಯವಾದುದು. ಗಣಪತಿಯ ಉತ್ಸವದಿಂದ ಅವರ ಚಳವಳಿಯ ಕಾರ್ಯಕ್ಷೇತ್ರವು ಬಹಳ ವಿಸ್ತಾರವಾಯಿತು. ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸಿದ ಶ್ರೀ ಶಿವಾಜಿ ಮಹಾರಾಜನ ಉತ್ಸವವನ್ನು ಪ್ರಾರಂಭಿಸಿ,

ಅವರ ಪರಾಕ್ರಮದ ಲಾವಣಿಗಳನ್ನು ಹಾಡಿಸಿ, ರಾಷ್ಟ್ರದಲ್ಲಿ ಕ್ಷಾತ್ರವೃತ್ತಿಯನ್ನು ನಿರ್ಮಿಸಿದರು ಟಿಳಕರು ಶಿವಾಜಿಯನ್ನು ಮುಂದೆಮಾಡಿ ದೊಡ್ಡ 'ರಾಷ್ಟ್ರೀಯ' ಆಂದೋಲನವನ್ನು ಹೂಡಿದರು. ಅದು ಭಾರತ ವ್ಯಾಪಿಯಾಯಿತು.,, ಚಿರೋಲ ಸಾಹೇಬನು ಯಾವ ಬುದ್ಧಿಯಿಂದಲೇ ಬರೆಯಲಿ ಈ ಉತ್ಸವಗಳ ಯಥಾರ್ಥ ಚಿತ್ರಗಳನ್ನು ತೆಗೆದು, ಲೋಕಮಾನ್ಯರ ನೈಜ ವರ್ಣನೆಯನ್ನು ಮಾಡಿದ್ದಾನೆ.

**ಶ್ರೀಗಣೇಶೋತ್ಸವ**

ಶ್ರೀಗಣೇಶೋತ್ಸವವು ಹಿಂದೂ ಮುಸಲ್ಮಾರ ದಂಗೆಯಲ್ಲಿ ಸ್ಫುರಣವಾದರೂ ಅದರಲ್ಲಿ ಮುಸ್ಲೀಮರ ದ್ವೇಷವಿರದೆ, ಹಿಂದುಗಳ ಸಂಘಟನೆಯೇ ಇದರ ಮುಖ್ಯ ಉದ್ದೇಶವಿದ್ದಿತೆಂಬುದನ್ನು ಹಿಂದೆ ಹೇಳಿದ್ದೇವೆ. ಗಣಪತಿಯ ಉಪಾಸನೆಯೇನೂ ಭಾರತಕ್ಕೆ ಹೊಸದಾದುದಲ್ಲ. ವೇದಕಾಲದಿಂದಲೂ ನಡೆದು ಬಂದುದು ಉತ್ಸವವೂ ನಡೆದು ಬಂದಿದ್ದಿತು. ಟಿಳಕರು ಅದಕ್ಕೆ ಸಾಮಾಜಿಕ ಸ್ವರೂಪವನ್ನು ಮಾತ್ರ ಕೊಟ್ಟರು. ಸಮಾಜವನ್ನು ಸಂಘಟಿಸಿದರು. ಸಕಲಜಾತಿಯ ಜನರು ಒಂದೆಡೆ ಸೇರಿ, ಒಂದೇ ದೇವತೆಯ ಆರಾಧನೆಯಲ್ಲಿ ಭಕ್ತಿಭಾವದಿಂದ ಒಂದುಗೂಡಿ, ಏಕಜೀವರಾಗುವಂತೆ ಮಾಡಿದರು. ಇದೇ ಇವರ ಕುಶಲತೆಯು. ಇದರಿಂದ ಉತ್ಸವಕ್ಕೆ ರಾಷ್ಟ್ರೀಯ ಸ್ವರೂಪ ಪ್ರಾಪ್ತವಾಯಿತು.

ಜನತೆ ಉತ್ಸಾಹದಿಂದ ಈ ಉತ್ಸವವನ್ನು ಎತ್ತಿಹಿಡಿಯಿತು. ವಸಂತಮಾಸ ಬರುತ್ತಲೆ ಕೋಗಿಲೆಯು ಉಲಿಯುವಂತೆ, ರಾಷ್ಟ್ರದ ಚೈತನ್ಯವು ಚಿಗುರಿತು. ಕವಿಗಳ ಕಾವ್ಯಕ್ಕೆ ಸ್ಫೂರ್ತಿಬಂದಿತು. ಮೇಳಗಳ ಸಂಘಟನೆಗಳಾಗಹತ್ತಿದವು. ಉಪನ್ಯಾಸಕರ ನಾಲಿಗೆಯಲ್ಲಿ ನಿಂತು, ಗಣೇಶನು ರಾಷ್ಟ್ರೀಯ ಸಂದೇಶವನ್ನು ಬೀರಹತ್ತಿದನು. ಬರೆಹಗಾರರ ಲೆಕ್ಕಣಿಕೆಗಳು ಕುಣಿಯತೊಡಗಿದವು. ಸಾಮಾನ್ಯ ಜನರು ಭಕ್ತಿಭಾವದಿಂದ ಮತ್ತರಾಗಿ ಕುಣಿಯಹತ್ತಿದರು. ಉತ್ಸವ ಪ್ರಿಯರ ಉತ್ಸಾಹಕ್ಕಂತೂ ಮಿತಿಯೇ ಉಳಿಯಲಿಲ್ಲ.

ಈ ದೃಶ್ಯವನ್ನು ಕಂಡು, ಟಿಳಕರು 'ಈ ವರ್ಷದ ಉತ್ಸವವು ಸುವರ್ಣಾಕ್ಷರಗಳಿಂದ ಬರೆದಿಡುವ ರೀತಿಯಲಿ ಜರುಗಿತು' ಎಂದು ಉದ್ಗಾರ ತೆಗೆದಿದ್ದಾರೆ. ಯಾರು ಏನೇ ಅನ್ನಲಿ, ಯಾರು ಎಷ್ಟೇ ವಿರೋಧಿಸಲಿ,

ಉತ್ಸವವು ಮಾತ್ರ ಭರದಿಂದ ಹಬ್ಬಿತು. ಮಹಾರಾಷ್ಟ್ರ, ಕರ್ನಾಟಕ, ಬಂಗಾಲ, ದಿಲ್ಲಿ, ಪಂಜಾಬ ಪ್ರಾಂತಗಳಲ್ಲಿಯೂ ಕೂಡ ವ್ಯಾಪಿಸಿತು, ತಿಳುವಳಿಕೆ ಹೆಚ್ಚಾದಂತೆ, ಜಾತಿಯ ಬಣ್ಣವೂ ಬದಲಾಯಿತು. ಮುಂದೆ ಮುಂದೆ ಮುಸಲ್ಮಾನರೂ ಉತ್ಸವದಲ್ಲಿ ಬೆರೆಯಹತ್ತಿದರು.

## ಶ್ರೀ ಶಿವಾಜಿ ಉತ್ಸವ

ಶ್ರೀ ಗಣೇಶೋತ್ಸವದಂತೆ ಶ್ರೀ ಶಿವಾಜಿಯ ಉತ್ಸವವು ಕೂಡ ವಿಶಿಷ್ಟ ಪ್ರಸಂಗದಲ್ಲಿ ಸ್ಫುರಣವಾಗಿದೆ. ಸಮಯ ಸಾಧಿಸಿ, ಅದಕ್ಕೆ ಸಾರ್ವಜನಿಕ ರೂಪಕೊಡುವ ಹತೋಟಿಯು ಟಿಳಕರಿಗೆ ಚನ್ನಾಗಿ ಸಾಧಿಸಿತ್ತೆನ್ನಬಹುದು. ಕಾಲರೂಪಿ ಪರಮಾತ್ಮನ ಗರ್ಭದಲ್ಲಿರುವ ಯಾವ ಸಂಗತಿಗಳು ಯಾವಾಗ ಬೆಳಕಿಗೆ ಬರುವವೆಂಬುದನ್ನು ಯಾರು ಬಲ್ಲರು ? ೧೮೮೫ ರಲ್ಲಿ ಸಿಂಕ್ಲೇ ಸಾಹೇಬರು ರಾಯಗಡವನ್ನು ಉಲ್ಲೇಖಿಸಿ ವೃತ್ತಪತ್ರಗಳಲ್ಲಿ ಲೇಖನವನ್ನು ಬರೆದರು. ಡಗ್ಲಸ್ ಸಾಹೇಬನು ರಾಯಗಡದ ದುಸ್ಥಿತಿಯನ್ನು ಮನೋವೇಧಕವಾಗಿ ಚಿತ್ರಿಸಿದನು. "ಸ್ವರಾಜ್ಯ ಸಂಸ್ಥಾಪಕನಾದ ಶ್ರೀ ಶಿವ ಛತ್ರಪತಿಯ ಸಮಾಧಿಯು ಗಿಡಗಂಟೆಗಳಲ್ಲಿ ಮುಚ್ಚಿಹೋಗಿದೆ. ಧರ್ಮಶಾಲೆಯಲ್ಲಿಯ ಫರ್ಸಿಗಳಲ್ಲಿ ದೊಡ್ಡ ದೊಡ್ಡ ಮರಗಳು ಬೆಳೆಯಹತ್ತಿವೆ. ದೇವಾಲಯಗಳು ದುರ್ಗಂಧವನ್ನು ಬೀರುತ್ತಿವೆ. ದೇವಾಲಯಗಳಲ್ಲಿಯ ಮೂರ್ತಿಗಳು ನೆಲದ ಮೇಲೆ ಉರುಳಾಡುತ್ತಿವೆ...........ತನ್ನ ರಕ್ತವನ್ನು ಸುರಿಸಿ, ಜೀವನವನ್ನೇ ಧಾರೆ ಎರೆದು, ಸ್ವರಾಜ್ಯವನ್ನು ಸ್ಥಾಪಿಸಿ, ಬೆಳೆಸಿದ ಆ ಶಿವ ಛತ್ರಪತಿಯ ಗದ್ದುಗೆಯನ್ನೇರಿದ ಕೊಲ್ಹಾಪೂರದ ಮಹಾರಾಜರೇ ಆಗಲಿ, ಸಾತಾರೆಯ ಭೋಸಲೆಯವರೇ ಆಗಲಿ, ಪುಣೆಯ ಪೇಶ್ವೆಯರೇ ಆಗಲಿ, ಆ ಪ್ರಭುವಿನ ಸಮಾಧಿಯ ವ್ಯವಸ್ಥೆಯ ಬಗ್ಗೆ ಒಂದು ಪೈಯನ್ನು ಕೂಡ ಖರ್ಚು ಮಾಡದಿರುವದು ಆಶ್ಚರ್ಯವು ಎಂದು ಬರೆದ ಲೇಖನವು ಮಹಾರಾಷ್ಟ್ರೀಯರ ಅಂತಃಕರಣಕ್ಕೆ ಬರೆಕೊಟ್ಟಂತಾಯಿತು. ಇದೇ ಶಿವಾಜಿಯ ಉತ್ಸವಕ್ಕೆ ಬೀಜವಾಯಿತು. ಮುಂಬಯಿ ಗವ್ಹರ್ನರರಾದ ರಿಚರ್ಡ ಟೆಂಪಲರವರೂ ಇದೇಸುಮಾರಕ್ಕೆ ರಾಯಗಡದ ದರ್ಶನ ತೆಗೆದುಕೊಂಡು, ಅದನ್ನು ಒಳ್ಳೆಯ ಸ್ಥಿತಿಯೊಳಗಿಡಲು ಕಲೆಕ್ಟರರಿಗೆ ಬರೆದಿದ್ದರು. ಗೋ. ವಾ. ಜೋಶಿ ಎಂಬುವವರು ಈ ಬಗ್ಗೆ ಒಂದು

ಕವಿತೆಯನ್ನು ಬರೆದು ಪ್ರಸಿದ್ಧಿಸಿದರು. ಹೀಗಾಗಿ ಜನರ ಲಕ್ಷವು ಈ ಕಡೆಗೆ ಸೆಳೆಯಲ್ಪಟ್ಟಿತು.

ನ್ಯಾ. ರಾನಡೆ ಹಾಗು ಸರದಾರ ಪುರಂದರೆ ಮೊದಲಾದವರು ಸಾರ್ವಜನಿಕ ಸಭೆ ಕರೆದರು. ಸಮಾಧಿಯ ಸುವ್ಯವಸ್ಥೆಗಾಗಿ ನಿಧಿ ಕೂಡಿಸಬೇಕೆಂದೂ ಈ ಬಗ್ಗೆ ಸರಕಾರಕ್ಕೆ ಅರ್ಜಿ ಮಾಡಬೇಕೆಂದೂ ನಿರ್ಣಯಗಳನ್ನು ಮಾಡಿದರು. ಇದೇ ಸುಮಾರಿಗೆ ಸಿಂಕ್ಲೇಯುವರ ಸಿಫಾರಿಸಿನ ಮೇರೆಗೆ ಆ ಕಾಲದ ಗವ್ಹರ್ನರರಾದ ಲಾರ್ಡ ರೇಯುವರು ಸಮಾಧಿಯು ಜೀರ್ಣೋದ್ಧಾರ ಮಾಡುವ ಅಪ್ಪಣೆಯನ್ನು ಕೊಟ್ಟರು. ಚಿಕ್ಕಪುಟ್ಟ ರಿಪೇರಿಗಾಗಿ ಪ್ರತಿವರ್ಷ ೫ ರೂಪಾಯಿಗಳನ್ನು ಮಂಜೂರಮಾಡಿದರು. ಮುಂದೆ ಹತ್ತು ವರ್ಷಗಳ ನಂತರ ಟಿಳಕರು ಕೈ ಹಾಕುವ ವರೆಗೆ ಈ ಚಳುವಳಿಯು ಮಲಗಿದ್ದಿತು.

೧೮೯೫ ನೇ ಇಸ್ವಿಯು ಟಿಳಕರ ಜೀವನದಲ್ಲಿ ಕ್ರಾಂತಿಕಾರಕ ವರ್ಷವಾಗಿದೆ. ಅವರ ಎಲ್ಲ ಉಚ್ಚಗ್ರಹಗಳು ಒಂದೆಡೆ ಕೂಡಿದಂತೆ ಕಾಣುತ್ತದೆ, ಹಿಡಿದುದೆಲ್ಲ ಹೊನ್ನಾಗುವ ಕಾಲವದು. ಟಿಳಕರು ಕೈ ಹಚ್ಚುವದೇ ತಡ, ಉತ್ಸವಕ್ಕೆ ಜೀವಕಳೆ ಬಂದಿತು. ಕೇಸರಿಯಲ್ಲಿ ಎಪ್ರಿಲ ೨೩ ನೇ ತಾರೀಖಿನಿಂದ ಈ ವಿಷಯದ ಮೇಲೆ ಲೇಖಗಳು ಪ್ರಾರಂಭವಾದವು. ಟಿಳಕರು, "ಶ್ರೀ ಶಿವ ಛತ್ರಪತಿಯ ಜಯಜಯಕಾರ ಮಾಡಿರಿ, ಎಂಬ ಪದ್ಯವನ್ನೇನೋ ಓದಿ ಬಹಳ ದಿನಗಳಾದವು. ಆದರೆ ಅದರ ಮರ್ಮದ ಅರ್ಥ ಮಾತ್ರ ನಮಗಾಗಲಿಲ್ಲ" ಎಂದು ಪ್ರಾರಂಭಿಸಿ, "ಮರಾಠರ ಹಿತಶತ್ರುವಾದ ಲಾರ್ಡ ಹ್ಯಾರೀಸರಂಥವರು ಕೂಡ ಶ್ರೀ ಶಿವಾಜಿಯ ಗುಣವರ್ಣನ ಮಾಡುತ್ತಿರುವಾಗ ಅವರ ವಂಶಜರೂ ಸರದಾರರೂ ಇದರ ಸ್ಮಾರಕದ ವಿಷಯವಾಗಿ ಏನೂ ವಿಚಾರ ಮಾಡದಿರುವದನ್ನು ನೋಡಿದರೆ ಅವರ ಜೀವನವು ವ್ಯರ್ಥವೆನಿಸುತ್ತದೆ'' ಎಂದು ಉಲ್ಲೇಖಿಸಿದರು. 'ಎಲ್ಲ ಸಂಸ್ಥಾನಿಕರೂ ಸರದಾರರೂ ಸಾಮಾನ್ಯ ಜನರೂ ಎಚ್ಚರಾಗಿ ಉದಾಸೀನತೆಯನ್ನು ತೊರೆದು, ಅಲ್ಲಲ್ಲಿ ಸಭೆಗಳನ್ನು ಕೂಡಿಸಿ, ನಿಧಿ ಸಂಗ್ರಹ ಕಾರ್ಯವನ್ನು ಕೈಕೊಂಡು, ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಸಬೇಕೆಂದು'' ಸಾರಿದರು.

ಕೇಸರಿಯ ಈ ಬರಹವು ಜನರನ್ನು ಬಡಿದೆಬ್ಬಿಸಿತು. ಅನೇಕರು ಸ್ಫೂರ್ತಿ ಗೊಂಡು ಹಣಕೂಡಿಸುವ ಅನೇಕ ಸೂಚನೆಗಳನ್ನು ಮಾಡಹತ್ತಿದರು. ಮಹಾಡದವರು ರಾಯಗಡ ಕೋಟೆಯಲ್ಲಿ ಉತ್ಸವ ಜರುಗಿಸಲು ಮುಂದೆ ಬಂದರು. ಸಂಸ್ಥಾನಿಕರು ಸಹಾಯ ಮಾಡುವ ಮನೋವೃತ್ತಿಯನ್ನು ವ್ಯಕ್ತಪಡಿಸಹತ್ತಿದರು. ಇದನ್ನು ಕಂಡು ಬ್ರಿಟಿಶರ ಮನಸ್ಸಿನಲ್ಲಿ ಕಳವಳ ವುಂಟಾಯಿತು. ಮುಂಬಯಿಯ ಟಾಯಿಮ್ಸ ಪತ್ರಿಕೆಯು “ಸಮಾಧಿಯ ಬಗೆಗೆ ಸರಕಾರವು ಈ ಮೊದಲೇ ಮಾಡುವದನ್ನೆಲ್ಲ ಮಾಡಿದೆ. ಅದರಿಂದ ರಾನಡೆಯಂಥವರು ತೃಪ್ತರೂ ಆಗಿದ್ದಾರೆ. ಸರಕಾರವೇ ಕಾರ್ಯ ಕೈಕೊಂಡಿ ರುವಾಗ ಈ ಹೊಸ ಚಳವಳಿಯ ಅವಶ್ಯಕತೆ ಏನಿದೆ?” ಎಂದು ಟೀಕಿಸಿತು. ಟಿಳಕರು ಇಷ್ಟಕ್ಕೆ ಬಿಡಲಿಲ್ಲ. ೩೦ ನೇ ಮೇ ದಿವಸ ಒಂದು ಪ್ರಚಾರ ಸಭೆಯನ್ನು ಜರುಗಿಸಿ, ಸರದಾರರೂ ಜಹಗೀರದಾರರೂ ಮೊದಲಾದ ವರನ್ನೆಲ್ಲ ಆಮಂತ್ರಿಸಿದರು. ಶ್ರೀಮಂತ ಪಂತ ಪ್ರತಿನಿಧಿಗಳೇ ಅಧ್ಯಕ್ಷಸ್ಥಾನ ವನ್ನಲಂಕರಿಸಿದರು. ನ್ಯಾ. ರಾನಡೆಯವರು ಸ್ಥಿರನಿಧಿಯ ಸೂಚನೆಯನ್ನು ಮಾಡಿದರು. ಟಿಳಕರು ಭಾಷಣ ಮಾಡುತ್ತ, “ಸಮಾಧಿಯ ವ್ಯವಸ್ಥೆಯನ್ನು ಕೊಲ್ಹಾಪುರದ ಮಹಾರಾಜರಂಥವರು ಮನಸ್ಸು ಮಾಡಿದರೆ ಒಬ್ಬರೇ ಮಾಡಬಹುದು. ಆದರೆ ನಮಗೆ ಅದು ಬೇಕಿಲ್ಲ. ಸರ್ವಜಾತಿಯವ ರಿಂದ, ಸರ್ವ ವರ್ಗಗಳಿಂದ ಪೈಪೈಗಳಂತೆ ಹಣ ಸಂಗ್ರಹವಾಗಿ ಕಾರ್ಯ ವಾಗಬೇಕೆಂಬುದೇ ನಮ್ಮೆಲ್ಲರ ಅಪೇಕ್ಷೆಯಿದೆ.” ಎಂದು ಹೇಳಿದರು. ಅಬ್ದುಲ್ಲಾ ರಘುನಾಕ ಎಂಬುವವನು ಗೊತ್ತುವಳಿಗೆ ಅನುಮೋದನಕೊಟ್ಟನು. ಜನರ ಒಂದು ಕಮಿಟಿಯು ಸ್ಥಾಪಿಸಲ್ಪಟ್ಟಿತು. ಟಿಳಕರು ಕಾರ್ಯದರ್ಶಿ ಗಳಾಗಿ ಆರಿಸಲ್ಪಟ್ಟರು.

ಜನರ ಉತ್ಸಾಹವು ಉಕ್ಕೇರಿತು. ಪ್ರವಾಸಿಕರ ಕೈಪಿಡಿಗಳು ಪ್ರಕಟ ವಾಗಹತ್ತಿದವು. ಎಲ್ಲ ಕಡೆಗೂ ಸಭೆಗಳಾಗಹತ್ತಿದವು. ನಿಧಿ ಸಂಗ್ರಹವು ನಡೆ ಯಿತು. ಪಾಚೋರೆ ಎಂಬ ಊರಿನಿಂದ ಮುಸಲ್ಮಾನರು ನಿಧಿಸಂಗ್ರಹಿಸಿ ಕಳಿ ಸಿದರು ಮುಂಬೈ, ಬಡೋದೆ, ಪುಣೆ, ಸೊಲ್ಲಾಪೂರ, ಬೆಳಗಾಂವಗಳಲ್ಲಿ ನಿಧಿ ಸಂಗ್ರಹ ಕಮಿಟಿಗಳು ಸ್ಥಾಪಿಸಲ್ಪಟ್ಟವು. ಅಗಸ್ಟ ೬ ನೇ ತಾರೀಖಿನ ವರೆಗೆ ೫೬೦೦ ರೂಪಾಯಿಗಳು ಕೂಡಿದವು. ಶ್ರೀ ಶಂಕರಾಚಾರ್ಯರು ಆಶೀರ್ವಾದ

ರೂಪವಾಗಿ ಹಣ ಕಳಿಸಿದರು. ಒಂದು ತಿಂಗಳಲ್ಲಿ ಈ ನಿಧಿಯು ೧೧ ಸಾವಿರಕ್ಕೆ ಏರಿತು. ಕೊಲ್ಹಾಪುರಮಹಾರಾಜರು ಶಿಷ್ಟಮಂಡಳವನ್ನು ಸ್ವಾಗತಿಸಿ. 'ನಮ್ಮ ಪೂರ್ವಜರ ಸಮಾಧಿಗಳಂತೆಯೇ ರಾಯಗಡ ಸಮಾಧಿಯ ಮೇಲೆ ಛತ್ರನ್ನು ಕಟ್ಟಿಸುವೆವು. ಲೆಕ್ಕಾಚಾರ ಮಾಡಿ ನಮ್ಮ ದೇಣಿಗೆಯನ್ನು ಸಾರುವೆವು' ಎಂದು ಹೇಳಿದರು. ಗಾಯಕವಾಡ ಮಹಾರಾಜರು ೧೦೦೦ ರೂಪಾಯಿಗಳನ್ನು ಕಳಿಸಿದರು. ನಾಟಕ ಕಂಪನಿ, ವಿದ್ಯಾರ್ಥಿಗಳು, ಖಾನಾವಳಿಗಳು, ಹಣಕೂಡಿಸಲು ಮುಂದಾದವು. ಈ ದಾನಿಗಳ ಹೆಸರುಗಳಿಂದ ಕೇಸರಿಯು ತುಂಬಹತ್ತಿತು. ಇಂತಹ ಸನ್ನಿವೇಶದಲ್ಲಿಯೇ ಪುಣೆಯಲ್ಲಿ ರಾಷ್ಟ್ರೀಯ ಮಹಾಸಭೆಯು ಸೇರಿತು. ಆ ಕಾಲದಲ್ಲಿ ಟಿಳಕರು ಪ್ರಚಂಡ ಸಭೆ ಸೇರಿಸಿ ಸುರೇಂದ್ರನಾಥ ಬ್ಯಾನರ್ಜಿ, ಹಾಗೂ ಮಾಲವೀಯರ ಭಾಷಣಗಳನ್ನು ಮಾಡಿಸಿ, ಈ ಪ್ರಶ್ನೆಗೆ ಅಖಿಲ ಭಾರತದ ಸ್ವರೂಪ ಕೊಟ್ಟುದನ್ನು ಹಿಂದೆ ಹೇಳಿದ್ದೇವೆ.

ಉತ್ಸವವನ್ನು ಹೇಗೆ? ಎಂದು? ಜರುಗಿಸಬೇಕೆಂಬ ಬಗೆಗೆ ಸೂಚನೆಗಳ ಸುರಿಮಳೆಯಾಯಿತು. ೧೮೯೬ ರ ಅಕ್ಷತೃತಿಯೆ ಸಮೀಪಿಸಿದಂತೆ ಜನತೆಯು ಕುಣಿಯಹತ್ತಿತು. ಮಹಾಡದ ಪಟವರ್ಧನರು ವೈಶಾಖಶುದ್ಧ ದ್ವಿತಿಯ ದಿವಸ ನಾವು ರಾಯಗಡದಲ್ಲಿ ಉತ್ಸವವನ್ನು ಮಾಡುವೆವೆಂದು ಸಾರಿದರು. ಉತ್ಸವದ ನಿಯಮಗಳು ಪ್ರಸಿದ್ಧಿಸಲ್ಪಟ್ಟವು. ಟಿಳಕರು ಸ್ಮಾರಕ ನಿಧಿಯು ೧೬೦೦೦ ರೂಪಾಯಿಗಳು ಕೂಡಿವೆಯೆಂದೂ ಅದು ಕನಿಷ್ಠ ೫೦ ಸಾವಿರಕ್ಕೆ ಮುಟ್ಟಬೇಕೆಂದೂ ಸಾರಿ ಈ ಉತ್ಸವಕ್ಕಾಗಿ ಸ್ಮಾರಕನಿಧಿಯನ್ನು ಉಪಯೋಗಿಸುವದಿಲ್ಲೆಂದೂ ಪ್ರಕಟಿಸಿದರು. ಉತ್ಸವದ ಸಿದ್ಧತೆಗಳೆಲ್ಲ ಭರದಿಂದ ಜರುಗಹತ್ತಿದವು. ಕಲೆಕ್ಟರರು ಜನಸಂದಣಿಯು ಹೆಚ್ಚಾಗುವದು. ಅವಧಿಯ ಒಳಗಾಗಿ ಅರ್ಜಿ ಬಂದಿಲ್ಲವೆಂದು ಹೇಳಿ, ಉತ್ಸವವನ್ನು ತಡೆಹಿಡಿದರು. ಟಿಳಕರು ಗವ್ಹರ್ನರರ ಕಡೆಗೆ ಹೋಗಿ, ಅಪ್ಪಣೆಯನ್ನು ತೆಗೆದುಕೊಂಡು ಬಂದರು.

ರಾಯಗಡ ಕೋಟೆಯು ಜನರಿಂದ ಕಿಕ್ಕಿರಿದು ತುಂಬಿತು. ಉತ್ಸವವು ಮಂಗಲ ಪ್ರಭಾತದಲ್ಲಿ ಚೌಘಡ–ನಗಾರೆ–ನವಬತ್ತುಗಳಿಂದ ಪ್ರಾರಂಭವಾಯಿತು. ಕೀರ್ತನೆಯಾಯಿತು. ಮೇಳಗಳ ಕುಣಿತಗಳಾದವು. ಮಾವಳೇ

ಜನರ ಜಯಘೋಷ ನಡೆಯಿತು. ಲಾವಣಿಗಳು ಹಾಡಲ್ಪಟ್ಟವು. ದಾಂಡ ಪಟ್ಟಾ ಮೊದಲಾದ ಕಸರತ್ತುಗಳು ತೋರಿಸಲ್ಪಟ್ಟವು. ವೀರ ಮರಾಠರಾದ ಮಾವಳೇ ಜನರ ಸನ್ಮಾನವು ಮಾಡಲ್ಪಟ್ಟಿತು ಅನೇಕರ ಸ್ಫೂರ್ತಿದಾಯಕ ಭಾಷಣಗಳಾದವು. ಲೋಕಮಾನ್ಯರು 'ನಮ್ಮ ಮಹಾಪುರುಷರ ಸ್ಮರಣೆ, ಅವರ ಕೃತಿಗಳ ನೆನಪು ಜಾಗ್ರತವಿರುವದು ಆ ರಾಷ್ಟ್ರದ ಜೀವಂತತನದ ಲಕ್ಷಣವು. ಸರ್ವ ದೃಷ್ಟಿಯಿಂದ ಪಾರತಂತ್ರ್ಯದಲ್ಲಿ ತೊಳಲಾಡುತ್ತಿರುವ ಭಾರತದಂಥ ರಾಷ್ಟ್ರಕ್ಕೆ ಶ್ರೀ ಶಿವಾಜಿಯಂಥ ವಿಭೂತಿಯ ಸ್ಮರಣೆಯು ಅತ್ಯಂತ ಅವಶ್ಯಕವು. ಇಂಗ್ಲಿಷರು ಆಲಿವ್ಹರ ಕ್ರಾಮವೆಲ್‌ನ ಸ್ಮಾರಕ ಮಾಡಿದಂತೆ, ಫ್ರೆಂಚರು ನೇಪೋಲಿಯನ್ನನ ಸ್ಮಾರಕವನ್ನು ನಿಲ್ಲಿಸಿದಂತೆ, ನಾವೂ ಸ್ವರಾಜ್ಯ ಸಂಸ್ಥಾಪಕನಾದ ಶ್ರೀಶಿವ ಛತ್ರಪತಿಯ ಸ್ಮಾರಕವನ್ನು ಮಾಡುತ್ತಿದ್ದೇವೆ. ಇದರಲ್ಲಿ ಅರಾಜಕತೆಯ ಗಂಧವೂ ಕೂಡ ಇರುವದಿಲ್ಲ" ಎಂದು ಸ್ಫೂರ್ತಿದಾಯಕ ಭಾಷಣವನ್ನು ಮಾಡಿದರು. ಜನಮುದ್ಧವಾಗಿ ಕುಳಿತಿದ್ದಿತು. ಶಿವ ಛತ್ರಪತಿಯ ರಾಜದರ್ಬಾರದಲ್ಲಿಯೇ ತಾವಿರುವೆವೆಂಬ ಆನಂದವನ್ನು ಕೆಲಕಾಲ ಅನುಭವಿಸಿತು. ಈ ಅಭೂತಪೂರ್ವವಾದ ಉತ್ಸವವು ರಾಷ್ಟ್ರದಲ್ಲಿ ನವಶಕ್ತಿಯನ್ನುಂಟು ಮಾಡಿತು. ಶತ್ರುಗಳ–ಹಿತಶತ್ರುಗಳ ಹೃದಯವನ್ನು ನಡುಗಿಸಿತು. ಸ್ವಕೀಯರಲ್ಲಿ ಮತ್ಸರವನ್ನೂ ಪರಕೀಯರಲ್ಲಿ ಭೀತಿಯನ್ನೂ ಹಬ್ಬಿಸಿತು. ಇಬ್ಬರಿಂದಲೂ ವಿರೋಧವು ಪ್ರಾರಂಭವಾಯಿತು. ಆದರೆ ಜನತೆ ಯಾವುದನ್ನು ಲೆಕ್ಕಿಸದೆ, ಉತ್ಸಾಹದಿಂದ ಮುನ್ನಡೆಯಿತು. ವಾದ ವಿವಾದ, ಚರ್ಚೆಗಳು ಉತ್ಸಾಹವನ್ನು ಮತ್ತಿಷ್ಟು ಕುದರಿಸಿದವು.

ಈ ಉತ್ಸವವು ರಾಷ್ಟ್ರದಲ್ಲಿ ನವಮನ್ವಂತರವನ್ನೇ ಉಂಟುಮಾಡಿತು. ತರುಣರು ಸ್ಫೂರ್ತಿಗೊಂಡು ಕ್ಷಾತ್ರವೃತ್ತಿಯನ್ನು ಸ್ವೀಕರಿಸಿದರು. ಅಲ್ಲಲ್ಲಿ ಗರಡೀ ಮನೆಗಳೂ ವ್ಯಾಯಾಮ ಶಾಲೆಗಳೂ ತಲೆಯೆತ್ತಿದವು. ಸ್ವದೇಶಾಭಿಮಾನದ ಗಾಳಿಯೇ ಬೀಸಿತು. ವ್ಯಾಖ್ಯಾತರು ಸ್ವಾತಂತ್ರ್ಯ, ಸ್ವದೇಶಾಭಿಮಾನ, ಸ್ವಾಭಿಮಾನಗಳನ್ನು ಪ್ರಚೋದಿಸಹತ್ತಿದರು. ಅನೇಕ ಲೇಖಕರು ಸ್ವಾಭಿಮಾನವನ್ನು ಕುದರಿಸಹತ್ತಿದರು. ರಾಷ್ಟ್ರದಲ್ಲಿ ಸ್ವಾಭಿಮಾನದ ಹೊಳೆಯೇ ಹರಿಯಿತೆಂದು ಹೇಳಬಹುದು. ಟಿಳಕರು ನವರಾಷ್ಟ್ರ ನಿರ್ಮಾಪಕರೆಂದೂ ವೀರಕ್ಷತ್ರಿಯರೆಂದೂ ಭಾರತವೇ ಇವರ ಕಡೆಗೆ ನೋಡಹತ್ತಿತು. ಭಾರತದ ಮುಖಂಡತ್ವವು ಟಿಳಕರನ್ನು ಸ್ವಾಗತಿಸಲು ಎದುರು ನೋಡಹತ್ತಿತು.

ಅರವಿಂದ ಘೋಷರು ಟಿಳಕರ ಈ ಕಾಲದ ಕಾರ್ಯವನ್ನು ಕೆಳಗಿನಂತೆ ವರ್ಣಿಸಿದ್ದಾರೆ.

ಭೂತಕಾಲದ ವೈಭವದ ತಳಹದಿಯ ಮೇಲೆ, ಭವಿಷ್ಯತ್ತಿನ ಕಟ್ಟಡವನ್ನು ಕಟ್ಟಿ, ಭಾರತೀಯರನ್ನು ಸಂಘಟಿಸಿ, ಭಾರತದ ರಾಜಕಾರಣವು ಧರ್ಮದ ಸ್ಫೂರ್ತಿಯಿಂದಲೂ ಆಧ್ಯಾತ್ಮಿಕ ತೇಜದಿಂದಲೂ ತುಂಬಿ ತುಳುಕುವಂತೆ ಮಾಡಿ, ರಾಷ್ಟ್ರೀಯತ್ವವನ್ನು ಹುರಿಗೊಳಿಸಬೇಕೆಂದು, ಎಷ್ಟೋ ಲೇಖಕರಿಗೂ ಧರ್ಮಗುರುಗಳಿಗೂ ಹೊಳೆದಿದ್ದರೂ ಅದನ್ನು ಆಚರಣೆಯಲ್ಲಿ ತಂದವರೆಂದರೆ ಲೋಕಮಾನ್ಯರೇ.

"He (Mr. Tilak) was the Triamphant Champion of Hindu orthodoxy, the high-priest of Ganesh, the inspired prophet of a new nationalism, which in the name of Shivaji would cast out the mlenchas and restore the glories of the maharatta history"

Indian Unrest Page 47

ಟಿಳಕರ ಈ ರಾಷ್ಟ್ರೀಯ ಉತ್ಥಾನವು, ಭಾರತಕ್ಕೆ ಅರ್ಪಿಸಿದ ಅವರ ಅಪೂರ್ವ ಕಾಣಿಕೆಯು.

# ರಾಷ್ಟ್ರೀಯ ಆಪತ್ತುಗಳು

ಜನಜಾಗೃತಿಯ ಕಾರ್ಯವನ್ನು ಕೈಕೊಂಡು ಟಿಳಕರು ಸರಕಾರದ ರೋಷಕ್ಕೆ ಪಾತ್ರರಾಗುತ್ತ ನಡೆದಿದ್ದರು. ೧೮೯೬-೯೭ ರಲ್ಲಿ ಪ್ರತ್ಯಕ್ಷವಾಗಿ ಸರಕಾರದೊಡನೆ ಕುಸ್ತಿ ಹಿಡಿಯುವ ಪ್ರಸಂಗ ಬಂದಿತು. ಹಿಂದೀ ರಾಷ್ಟ್ರವು ಭೀಕರವಾದ ಬರಗಾಲಕ್ಕೂ ಭಯಂಕರವಾದ ಪ್ಲೇಗಿನ ಹಾವಳಿಗೂ ತುತ್ತಾಯಿತು. ಇಂತಹ ಆಪತ್ತುಗಳಿಗೆ ರಾಷ್ಟ್ರವು ಎಂದೂ ಸಿಕ್ಕಿರಲಿಕ್ಕಿಲ್ಲ. ಈ ಪ್ರಸಂಗದಲ್ಲಿ ಟಿಳಕರು ತೋರಿಸಿದ ಅಪ್ರತಿಮವಾದಧೈರ್ಯ, ಸಾಹಸ, ಸಂಘಟನಾ ಶಕ್ತಿಗಳು ಅವರ್ಣನೀಯವಾಗಿವೆ.

### ಭೀಕರ ಬರಗಾಲ

೧೮೯೬ ರಲ್ಲಿ ಭಾರತದಲ್ಲಿ ಭೀಕರವಾದ ಬರಗಾಲವು ತಲೆಯೆತ್ತಿತು. ಭಾರತಕ್ಕೆ ಬರಗಾಲವೇನು ಹೊಸದಿರಲಿಲ್ಲ. ಆದರೆ ೧೮೭೬ ರಿಂದ ೧೯೦೦ ರ ವರೆಗಿನ ಕಾಲುಶತಮಾನದಲ್ಲಿ ಅರ್ಧಕೋಟಿಗಿಂತಲೂ ಹೆಚ್ಚು ಜನರ ಮೃತ್ಯುದೇವತೆಗೆ ತುತ್ತಾಗಿದ್ದರು. ಡೌಗಿ ಬರದ ಕತೆಗಳನ್ನು ಮುದುಕರು ಇನ್ನೂ ಹೇಳುತ್ತಾರೆ. ಬ್ರಿಟಿಶರಲ್ಲಿ ಕೆಲವರು ಭಾರತದ ಈ ಸ್ಥಿತಿಯ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಇಂಗ್ಲಂಡದವರೆಗೂ ಸುದ್ದಿಯನ್ನು ಮುಟ್ಟಿಸಿದರು. ಆದರೆ ಈ ಶಾಬ್ದಿಕ ಸಹಾನುಭೂತಿಯಿಂದ ಹಸಿದ ಹೊಟ್ಟೆಗಳು ತುಂಬುವ ಬಗೆ ಹೇಗೆ ?

ಟಿಳಕರ ದಯಾದ್ರ್ರ ಹೃದಯವು ಅವರನ್ನು ಕರ್ತವ್ಯಕ್ಕೆ ಹಚ್ಚಿತು. ಜನರ ಪ್ರಾಣಗಳನ್ನು ಉಳಿಸಲು ಶಕ್ಯವಿದ್ದಷ್ಟು ಪ್ರಯತ್ನ ಮಾಡುವ ಸಂಕಲ್ಪವನ್ನು ಮಾಡಿದರು. ೮ ನೇ ಸಪ್ಟಂಬರದ ಕೇಸರಿಯಲ್ಲಿ "ಹಸ್ತಾಮಳೆಯು ಕಳೆಯಿತು. ಇನ್ನೂ ಮಳೆಯಿಲ್ಲ. ವಾಯವ್ಯ ಪ್ರಾಂತದಲ್ಲಿ ಬರಗಾಲವು ಇಣಿಕಿ ನೋಡುತ್ತಲಿದೆ. ಬರಗಾಲದ ಕಾರ್ಯಗಳು ಪ್ರಾರಂಭವಾಗಿವೆ. ನಮ್ಮಲ್ಲಿಯೂ ಅದೇ ಲಕ್ಷಣಗಳು ಕಾಣಹತ್ತಿವೆ." ಎಂದು ಬರೆಯಲು ಪ್ರಾರಂಭಿಸಿದರು. ದುರ್ದೈವದಿಂದ ಆ ಭೀತಿಯು ನಿಜವಾಯಿತು. ಆದರೂ ಸರಕಾರದ ವರದಿ

ಯಲ್ಲಿ ಅದರ ಸುದ್ದಿಯೇ ಇಲ್ಲ. ಕ್ರಿಸ್ತಿ ಪಾದ್ರಿಗಳು ಹಸಿದ ಹಿಂದು ಮಕ್ಕಳನ್ನು ಕರೆದುಕೊಂಡು ಹೋಗಿ, ಕ್ರಿಶ್ಚಿಯನ್‌ರನ್ನಾಗಿ ಮಾಡಹತ್ತಿದರು.

ಈ ಬರಗಾಲವನ್ನು ಎದುರಿಸುವ ಪ್ರತ್ಯಕ್ಷ ಕೃತಿಯ ಅವಶ್ಯಕತೆಯಿದ್ದಿತು. ದೈವವನ್ನು ಬಯ್ಯುತ್ತ, ಜನರ ಜೀವವನ್ನು ಉಳಿಸಿರಿ ಎಂದು ಸರಕಾರವನ್ನು ಪ್ರಾರ್ಥಿಸುತ್ತ, ಕೈಕಟ್ಟಿಕೊಂಡು ಕುಳಿತುಕೊಳ್ಳುವ ಕಾಲವಿದಲ್ಲವೆಂದು ತಿಳಿದು ಟಿಳಕರು ಕಾರ್ಯರಂಗಕ್ಕಿಳಿದರು. "ಬರಗಾಲದಲ್ಲಿ ಸರ್ವರ ಜೀವಗಳು ಬದುಕಲೇಬೇಕಲ್ಲದೆ, ಬರಗಾಲದಿಂದ ಜನರು ಮೃತ್ಯುಮುಖದಲ್ಲಿ ಬೀಳದಂತೆ ನೋಡಿಕೊಳ್ಳಬೇಕೆಂದು ಸ್ವತಃ ಮಹಾರಾಣಿಯವರ ಆಜ್ಞೆಯಾಗಿದೆ" ಎಂದು ಕೇಸರಿಯಲ್ಲಿ ಸರಕಾರಕ್ಕೆ ಸೂಚನೆಯನ್ನು ಕೊಟ್ಟರು. ಸರಕಾರವು ಬರಗಾಲದ ನಿವಾರಣೆಗಾಗಿ ಯಾವ ಉಪಾಯಗಳನ್ನೂ ಕೈಕೊಳ್ಳದೆ ಇದ್ದರೆ, ರೈತರು ಬಂಡನ್ನೆಬ್ಬಿಸಬಹುದು ಎಂದು ಎಚ್ಚರಿಸಿದರು 'ಬರಗಾಲವು ಬಿದ್ದಿದೆ ಎಂಬುದನ್ನು ಹೇಳಲಿಕ್ಕೇ ಬೇಡ. ಎತ್ತು ಆಕಳುಗಳು ಹುಲ್ಲಿನ ಬೆಲೆಗೆ ಮಾರಾಟವಾಗತೊಡಗಿವೆ. ಹುಲ್ಲಿನ ಬೆಲೆಯು ಬಂಗಾರವನ್ನು ಮೀರಿಸುತ್ತಿದೆ' ಎಂದು ಭೀತಿಯನ್ನು ವ್ಯಕ್ತಪಡಿಸಿದರು.

ಸರಕಾರವನ್ನು ಎಚ್ಚರಿಸಿದಂತೆ ಜನತೆಯನ್ನು ಜಾಗೃತಗೊಳಿಸಲು ಪ್ರಾರಂಭಿಸಿದರು. "ಫ್ಯಾಮಿನ್ ಇನ್‌ಶೂರೆನ್ಸ ಫಂಡ, ಫ್ಯಾಮಿನ್ ರಿಲೀಫ ಕೋಡುಗಳಿರುವವೆಂದು ಸುಮ್ಮನೆ ಕುಳಿತರೆ ಯಾರೂ ಕೇಳುವದಿಲ್ಲ. ಸರಕಾರವು ಕೊಡಲೊಪ್ಪಿದ ಸಹಾಯವನ್ನೆಲ್ಲ ಜನತೆಯು ಸರಕಾರದಿಂದ ಪಡೆಯಬೇಕು. ಸರಕಾರಿ ಅಧಿಕಾರಿಗಳು ಹಾರಿಸಿಕೊಳ್ಳಹತ್ತಿದರೆ, ಅವರು ಕೊಟ್ಟೇತೀರುವಂಥ ಪ್ರಸಂಗ ತರಬೇಕೆಂದು" ಜನತೆಗೆ ನಿರ್ಭಯದಿಂದ ಉಪದೇಶಿಸಹತ್ತಿದರು.

ಟಿಳಕರು ಇಷ್ಟಕ್ಕೇ ಬಿಡಲಿಲ್ಲ. ಕೇಸರಿಯ ಮುಖಾಂತರ ಜನತೆಗೆ ಶಿಕ್ಷಣಕೊಡಹತ್ತಿದರು. ತಮ್ಮ ಹಕ್ಕುಗಳೇನಿವೆ ಎಂಬುದನ್ನು ತಿಳಿಸಹತ್ತಿದರು. ಅಧಿಕಾರಿಗಳ ಕೃಷ್ಣಕಾರಸ್ಥಾನಗಳನ್ನೆಲ್ಲ ಬಯಲಿಗೆ ಎಳೆಯಹತ್ತಿದರು. ಬರಗಾಲದ ಕಾಯದೆಗಳನ್ನು ಅಭ್ಯಸಿಸಿ ಜನರಿಗೆ ತಿಳಿಸಿಕೊಡಬೇಕೆಂದು ಮುಂದಾಳುಗಳಿಗೆ ಸೂಚಿಸಿದರು. ಹಪ್ತೆಯನ್ನು ಇಂಥ ಸಮಯದಲ್ಲಿ ಸೂಟಬಿಡಬೇಕೆಂಬ ಬಗ್ಗೆ ಬರಗಾಲದ ಕಾಯದೆಯಲ್ಲಿ ಹೇಳಿದೆಯೋ ಅಂತಹ

ಪರಿಸ್ಥಿತಿಯಿದ್ದರೆ, ಈ ವರ್ಷ ಹಪ್ತೆಕೊಡುವ ಅವಶ್ಯಕತೆಯಿಲ್ಲ "ಇಂತಹ ಪ್ರಸಂಗದಲ್ಲಿ ಅಧಿಕಾರಿಗಳು ಗೊಂದಲಹಾಕುವರೆಂಬುದನ್ನು ನಾವು ಬಲ್ಲೆವು. ಈ ಗೊಂದಲವನ್ನು ನಾವು ಸಹಿಸುತ್ತಿರುವದರಿಂದಲೇ ಅವರು ಹಾಕುತ್ತಿರುವರೆಂಬುದನ್ನೂ ನಾವು ಲಕ್ಷ್ಯದಲ್ಲಿಡಬೇಕು. ಒಕ್ಕಲಿಗರ ಒಕ್ಕಲತನದ ಸಾಮಾನುಗಳನ್ನೂ ದನಕರುಗಳನ್ನೂ ಭೂಮಿಯನ್ನೂ ಮಾರಿ, ಹಪ್ತೆವಸೂಲ ಮಾಡಬಾರದೆಂದು ಕಾಯದೆಯಲ್ಲಿ ಸ್ಪಷ್ಟವಿದೆ. ಆದರೆ ಇದು ಯಾರಿಗೂ ಗೊತ್ತಿರದ ಮೂಲಕ, ಗೌಡ, ಕುಲಕರ್ಣಿಯವರು ಜುಲುಮೆ ಮಾಡುತ್ತಿರುವರೆಂದು ಜನ ಭೀತರಾಗುವರು. ತಿಳಿದ ಜನರು ಅಲ್ಲಲ್ಲಿ ಈ ತಿಳುವಳಿಕೆಯನ್ನು ಹೆಚ್ಚಿಸುವ ಕಾರ್ಯಕ್ಕೆ ಹತ್ತಬೇಕು. ಯಾರಿಗೆ ತಮ್ಮ ಹಾಗು ತಮ್ಮ ದನಕರುಗಳ ಪ್ರಾಣ ಉಳಿಸಿಕೊಳ್ಳಬೇಕಾಗಿದೆಯೋ ಅವರು ಸರಕಾರದ ಕಡೆಗೆ ಹೋಗಬೇಕು. ಸರಕಾರವು ನಮ್ಮದೇ ಇದ್ದು, ಕೆಲಸ ಕೊಡಲು ಸಮರ್ಥವಿದೆ" ಎಂದು ಉಪದೇಶಿಸಿದರು.

ಇದೇ ಸಮಯಕ್ಕೆ ಸ್ಟೇಟ ಸೆಕ್ರೆಟರಿಗಳು ಬೊಕ್ಕಸದಲ್ಲಿಯ ಹಣವು ಒಂದು ವೇಳೆ ಸಾಲದೆ ಹೋದರೆ, ಸಾಲವನ್ನು ಮಾಡಿಯಾದರೂ ಜನರ ಜೀವವನ್ನು ಉಳಿಸೋಣವೆಂದು ಪಾರ್ಲಿಮೆಂಟಿನಲ್ಲಿ ಮಾತನಾಡಿದರು. ಇದನ್ನೇ ಎತ್ತಿಕೊಂಡು ಟಿಳಕರು "ಸರಕಾರವು ಹೀಗೆ ಸಿದ್ಧವಿರುವಾಗ ಜನರು ಉಪವಾಸ ಸಾಯುವದೇಕೆ? ಕೊಡುಗೈಯು ಮುಂದೆ ಚಾಚಿರಲು, ಕೊಳ್ಳುವ ಕೈ ಇಲ್ಲೆಂಬ ಪರಿಸ್ಥಿತಿಯು ಉಂಟಾಗಬಾರದು. ದಾನಿಯು ನಿಜವಾಗಿದ್ದರೇ ಬಾಳುವನು. ಇಲ್ಲದಿದ್ದರೆ ಅವನ ಬಣ್ಣವು ಹೊರಬೀಳುವದು. ಆದುದರಿಂದ ಬದುಕುವ ಇಚ್ಛೆಯಿದ್ದವರೆಲ್ಲರೂ ಕಲೆಕ್ಟರರ ಕಡೆಗೆ ಅರ್ಜಿಯನ್ನು ಮಾಡಿರಿ" ಎಂದು ಟಿಳಕರು ಉಪದೇಶಿಸಿದರು ಮುಖಂಡರಿಗೆ ಸುಮ್ಮನೆ ಕೂಡುವ ಸಮಯವಿದಲ್ಲ. ಜನ ಮೃತ್ಯುಮುಖದಲ್ಲಿ ಬೀಳುತ್ತಿದೆ. ಪಾಪ ಬಡರೈತರಿಗೆ ಏನು ಮಾಡಬೇಕೆಂಬುದೇ ಹೊಳೆಯುವದಿಲ್ಲ. "ಸರಕಾರದ ಕಡೆಗೆ ಹೋಗಿರಿ, ಎಂದು ಉಪದೇಶಿಸುವವೇ ಮಹತ್ವದ ಕಾರ್ಯವಾಗಿದೆ. ಪರಿಸ್ಥಿತಿಯು ವಿಕೋಪಕ್ಕೆ ಮುಟ್ಟಿದ ಸ್ಥಳಗಳಿಂದ ೧) ನಮ್ಮ ಹಪ್ತೆಯನ್ನು ಈ ವರ್ಷ ಬಿಟ್ಟುಬಿಡಿರಿ. ೨) ನಮ್ಮ ಊರ ಸುತ್ತುಮುತ್ತು ಕೆಲಸಗಳನ್ನು ಪ್ರಾರಂಭಿಸಿ ಹೊಟ್ಟೆಗೆ ಕೊಡಿರಿ. ೩) ಒಕ್ಕಲತನಕ್ಕಾಗಿ ತಗಾಯಿ ಸಾಲಕೊಡಿರಿ. ೪)

ಮುದಕರ, ಅವಯವ ಹೀನರ ಸಲುವಾಗಿ ಡೋಲು ಕೊಡಿರಿ. ಎಂಬರ್ಥದ ಅರ್ಜಿಗಳನ್ನು ಮಾಡಿಸಿರಿ'' ಎಂದು ಸಂದೇಶವನ್ನಿತ್ತರು.

ಈ ಕಾರ್ಯದಲ್ಲಿ ಶಕ್ಯವಿದ್ದ ಎಲ್ಲ ಸಾಧನಗಳ ಉಪಯೋಗವನ್ನು ಟಿಳಕರು ಮಾಡಿಕೊಂಡರು. ಸಾರ್ವಜನಿಕ ಸಭೆಯ ಮುಖಾಂತರ ಅರ್ಜಿಗಳನ್ನು ಕಳಿಸಿ, ಜನತೆಯ ಕರುಣಕಥೆಯನ್ನು ಸರಕಾರದ ಮುಂದೆ ಇಟ್ಟರು. ನೇಕಾರರ ಬಗೆಗೆ ಒಂದು ಯೋಜನೆಯನ್ನು ಸಿದ್ಧಪಡಿಸಿ ಸರಕಾರದ ಕಡೆಗೆ ಕಳಿಸಿ ಕೇವಲ ೩ ಲಕ್ಷ ರೂ ಗಳ ಸಹಾಯ ಮಾಡಲು ಹೇಳಿದರು. ಅದು ಮನ್ನಿಸಲ್ಪಡಲಿಲ್ಲ. ಆ ಯೋಜನೆಯಿಂದ ೪-೫ ಸಾವಿರ ನೇಕಾರರಿಗೆ ಉದ್ಯೋಗ ದೊರೆಯುತ್ತಿತ್ತು.

ಟಿಳಕರು ಸಾರ್ವಜನಿಕ ಸಭೆಯಿಂದ ಇನ್ನೊಂದು ಮಹತ್ವದ ಕಾರ್ಯವನ್ನು ಸಾಧಿಸಿದರು. ವ್ಯಾಪಾರಿಗಳ, ಸಾವುಕಾರರ ಮನವಲಿಸಿ, ಅವರ ಧಾರ್ಮಿಕ ಬುದ್ಧಿಯನ್ನು ಜಾಗೃತಗೊಳಿಸಿ, ಅವರಿಂದ ಅಗ್ಗದರದ ಅಂಗಡಿಗಳನ್ನು ತೆರೆಯಿಸಿದರು. ಬಡಬಗ್ಗರಿಗೆ ಅನ್ನವಸ್ತ್ರಗಳನ್ನು ನೀಡಲು, ಅನೇಕ ಶ್ರೀಮಂತರು ಮುಂದೆ ಬಂದರು. ಅನ್ನಛತ್ರಗಳು ಹೊರಟವು. ಟಿಳಕರು ಮಾನವೀ ಧರ್ಮದ ಹೊಸ ಮಾರ್ಗವನ್ನು ಜನತೆಗೆ ಉಪದೇಶಿಸಿದರು. ಟಿಳಕರ ಈ ಕರೆಗೆ ಅಸಂಖ್ಯ ಜನರು ಓಗೊಟ್ಟು ಸಹಾಯ ಮಾಡಲು ಮುಂದೆ ಬಂದು, ಧನದ ಮಳೆಯನ್ನೇ ಸುರಿಸಿದರು.

ಸಾರ್ವಜನಿಕ ಸಭೆಯಿಂದ ಟಿಳಕರು ಕೈಕೊಂಡ ಇನ್ನೊಂದು ಕಾರ್ಯವೆಂದರೆ ಫ್ಯಾಮಿನ್ ರಿಲೀಫ ಕೋಡಿನ ಸಂಕ್ಷಿಪ್ತ ವರ್ಣನೆಯ ಒಂದು ಚಿಕ್ಕ ಹೊತ್ತಿಗೆಯನ್ನು ಮರಾಠಿಯಲ್ಲಿ ಮುದ್ರಿಸಿ, ಅದರ ಸಾವಿರಾರು ಪ್ರತಿಗಳನ್ನು ಮಹಾರಾಷ್ಟ್ರದಲ್ಲೆಲ್ಲ ಹಂಚಿಸಿದರು. ಸರಕಾರಿ ಅಧಿಕಾರಿಗಳ ಕಡೆಗೂ ಪ್ರತಿಗಳು ಕಳಿಸಲ್ಪಟ್ಟವು. ಉನ್ಮತ್ತರಾದ ಎಷ್ಟೋ ಅಧಿಕಾರಿಗಳು ಅವುಗಳನ್ನು ಮರಳಿ ಕಳಿಸಿಕೊಟ್ಟರು. ''ನಾವು ಏನು ಮಾಡಬೇಕೆಂಬುದನ್ನು ಕಲಿಸಲು ಇವರು ಯಾರು ?" ಎಂಬುದೇ ಅವರ ವಾದ.

ಈ ಸಭೆಯ ಮುಖಾಂತರ ಕೈಕೊಂಡ ಸಂಘಟನೆಯ ಕಾರ್ಯವೇ ಎಲ್ಲಕ್ಕೂ ಮಹತ್ವವಾದುದು ನ. ಚಿ. ಕೇಳಕರ, ಖಾಪರ್ಡೆರಂಥ ಪ್ರಚಾರಕರನ್ನು ಮಹಾರಾಷ್ಟ್ರದಲ್ಲೆಲ್ಲ ಕಳಿಸಿದರು. ಫ್ಯಾಮಿನ್ ರಿಲೀಫ್ ಕೋಡಿನಲ್ಲಿ ಕೊಟ್ಟ ವಚನ ಪಾಲಿಸಬೇಕೆಂಬುದೇ ಇವರ ಪ್ರಚಾರದ ಮುಖ್ಯ ಸಂದೇಶ

ವಾಗಿದ್ದಿತು. ಸರಕಾರದ ಅಧಿಕಾರಿಗಳಿಗೆ ಜನತೆಯ ಬೇಡಿಕೆಗಳನ್ನೆಲ್ಲ ತಿಳಿಸುತ್ತಿದ್ದರು. ಎಷ್ಟೋ ಜನ ಅಧಿಕಾರಿಗಳು ಉನ್ಮತ್ತತೆಯಿಂದ ನಡೆಯುತ್ತಿದ್ದರು. ಅಂಥವರನ್ನು ಉದ್ದೇಶಿಸಿ ಟಿಳಕರು 'ಕಾಯದೇ ಬದ್ಧವಾಗಿ ಸರಕಾರದೊಡನೆ ಹೇಗೆ ಹೋರಾಡಬೇಕೆಂಬುದನ್ನು ರೈತರಿಗೆ ಕಲಿಸುವ ವಿದ್ಯೆಯನ್ನು ನಮ್ಮ ಮುಂದಾಳುಗಳಿಗೆ ಕಲಿಸಬೇಕಾಗಿದೆ. ಅದನ್ನು ಅವರು ಯಾವಾಗ ಕಲಿಯುವರೋ ಆಗ ಅಧಿಕಾರಿಗಳ ಉನ್ಮತ್ತತನವು ಕಡಿಮೆಯಾಗಿ ರೈತರಿಗೆ ಲಾಭವಾಗುವದು' ಎಂದು ಸ್ಪಷ್ಟೋಕ್ತಿಗಳನ್ನು ಬರೆದರು. ಸಾರ್ವಜನಿಕ ಸಭೆಯ ಪ್ರಚಾರಕರಾದ ಪ್ರೊ. ಅಚ್ಯುತರಾವ ಸಾಠೆ ಎಂಬುವವರು, ಠಾಣೆ ಜಿಲ್ಹೆಯ ಖತ್ತಲವಾಡ ಎಂಬ ಹಳ್ಳಿಯಲ್ಲಿ ಸಾರ್ವಜನಿಕ ಸಭೆಯನ್ನು ಕೂಡಿಸಿದ್ದರು. ಪದ್ಧತಿಯಂತೆ ಬರಗಾಲದ ಕಾಯಿದೆಯ ಹಸ್ತಪತ್ರಿಕೆಗಳನ್ನು ಹಂಚಿದ್ದರು. ಸಭೆಗೆ ಕೋಳೀ,ವಾಗಲಿ, ಮೊದಲಾದ ಕೆಳತರಗತಿಯ ೨-೩ ಸಾವಿರ ಜನರು ನೆರೆದಿದ್ದರು. ಸಭೆಗೆ ಅ. ಕಲೆಕ್ಟರರಾದ ಡಬೋಲೆಯವರು ಪೋಲೀಸ ಪಡೆಯನ್ನು ತೆಗೆದುಕೊಂಡೇ ಬಂದಿದ್ದರು. ದಂಗೆಯಾದರೆ ಗುಂಡು ಹಾರಿಸುವ ಅಪ್ಪಣೆ ಮೊದಲೇ ಕೊಡಲಾಗಿತ್ತು. ಬೆದರಿಕೆಗೆ ಸಭೆ ತಾನಾಗಿ ಮುರಿದರೆ ಮುರಿಯಲಿ ಎಂಬುದೇ ಸರಕಾರದ ಬಯಕೆ. ಸಭೆ ಮುಗಿಯುವವರೆಗೆ, ಯಾರೂ ಸ್ಥಳಬಿಟ್ಟು ಕದಲಲಿಲ್ಲ. ಸಾಠೆಯವರು "ನಿಮ್ಮ ಬೆಳೆಯು ಬಂದಿರದ್ದರೆ, ಸರಕಾರದ ಹಪ್ತೆಯನ್ನು ತುಂಬದಿರುವದು ಕಾಯದೆಬದ್ಧವಾಗಿದೆ" ಎಂದು ನಿರ್ಭೀತಿಯಿಂದ ಮೂರು ಸಲ ಜನರಿಗೆ ತಿಳಿಸಿ ಹೇಳಿದರು ....... "ಸರಕಾರಿ ಅಧಿಕಾರಿಗಳ ಸಮಕ್ಷಮ ನಾವು ಮಾತನಾಡುತ್ತಿದ್ದೇವೆ ಪೋಲೀಸರ ಬಂದೂಕಕ್ಕೆ ಬೆದರಕೂಡದು. ನೀವು ಅಂಜಿದರೆ, ಮೋಸಹೋಗುವಿರಿ. ಗಾಬರಿಯಾಗದೆ, ಕಾಯದೆಬದ್ಧವಾಗಿ ಕಾರ್ಯ ನಡೆಯಿಸಿರಿ. ಅಂದರೆ ಹಸಿದ ಕೋಳೀ,ವಾಗಲಿ, ಜನರ ಹೊಟ್ಟೆಗೆ ಬಂದೂಕದ ಏಟು ಬೀಳದೆ, ಭಕ್ಕರಿಯ ಚೂರುಗಳು ಸಿಕ್ಕುವವು" ಎಂದು ಉಪದೇಶಿಸಿದರು.

ಮುಂದಿನ ಸಂಚಿಕೆಯಲ್ಲಿ ಟಿಳಕರು "ತುಂಬಿದ ಬಂದೂಕುಗಳುಳ್ಳ ಪೋಲೀಸರ ಮಧ್ಯದಲ್ಲಿ ಸೇರಿದ ರೈತರ ಪ್ರಚಾರ ಸಭೆ" ಎಂಬ ಅಗ್ರಲೇಖವನ್ನು ಬರೆದರು. "ದಬ್ಬಾಳಿಕೆಗೆ ಬೆದರಕೂಡದು. ಈ ದಿನಗಳಲ್ಲಿ ದಾಂಡಿಗತನವು ನಡೆಯದು. ಕಾಯದೆಯ ದಿನಗಳಿವು ಎಂಬುದನ್ನು ಸರಕಾರಿ ಅಧಿಕಾರಿ

ಗಳೂ ರೈತರೂ ಮರೆಯಕೂಡದು. ಇಂತಹಪ್ರಸಂಗದಲ್ಲಿ ಮರಣಕ್ಕೂ ಅಂಜ ಕೂಡದು. ಕಾಯಿದೆಯಿಂದ ನಮಗೆ ಸಿಗತಕ್ಕದ್ದನ್ನು ತಕ್ಕೊಂಡೇ ತೀರ ಬೇಕು. ಈ ಕಾರ್ಯದಲ್ಲಿ ರೈತರಿಗೆ ಮುಂದಾಳುಗಳು ಬೆಂಬಲವಾಗಿ ನಿಲ್ಲ ಬೇಕು." ಎಲ್ಲಕ್ಕೂ ಸಿದ್ಧರಾಗಿರಿ! ಎಂಬುದೇ ಉಪದೇಶದ ಸಾರವಾಗಿದ್ದಿತು.

ಅದರಂತೆಯೇ ಹಿಂದೀ ಅಧಿಕಾರಿಗಳನ್ನೂ ಎಚ್ಚರಿಸಿದರು. ನಾವು ಮೊದಲು ಹಿಂದೀಯರು. ನಂತರ ಸರಕಾರಿ ನವಕರರು, ಎಂಬುದನ್ನು ಮರೆಯಬಾರದು. ಮೇಲಧಿಕಾರಿಗಳನ್ನು ಸಂತುಷ್ಟಗೊಳಿಸುವದಕ್ಕಾಗಿ ಸುಳ್ಳು ವರದಿಗಳನ್ನು ಮಾಡಬೇಡಿರಿ. ಎಂದು ಕಿವಿಮಾತು ಹೇಳಿದರು. 'ಜೀವನ ಮರಣದ ಸಮಯವಿದು. ಇಂತಹ ಸಮಯದಲ್ಲಿ ನೀವು ನಿಮ್ಮ ಹಕ್ಕುಗಳಿ ಗಾಗಿ ಹೋರಾಡದಿದ್ದರೆ ನೀವು ಜೀವಂತವಿದ್ದರೂ ಸತ್ತಂತೆಯೇ ಸರಿ' ಎಂದು ಜನರನ್ನು ಬಡಿದೆಬ್ಬಿಸಿದರು

ಟಿಳಕರ ಈ ವೀರವಾಣಿಯು ಜನತೆಯಲ್ಲಿ ನವಚೈತನ್ಯವನ್ನುಂಟು ಮಾಡಿತು ಜನರಲ್ಲಿ ಧೈರ್ಯ ಬಂದಿತು. ತಮ್ಮ ಸಲುವಾಗಿ ಹೋರಾಡುವ ಮಹಾಪುರುಷನೊಬ್ಬನು ಇರುವನೆಂದು ಜನತೆ ಟಿಳಕರ ಕಡೆಗೆ ಭಕ್ತಿಭಾವ ದಿಂದ ನೋಡತೊಡಗಿತು. ಲಕ್ಷ ಗಟ್ಟಲೆ ಅರ್ಜಿಗಳು ಬರಹತ್ತಿದವು. ಟಿಳಕರ ಉದ್ದೇಶವು ಸಾಧಿಸಿತು. ಬಡ ರೈತರ, ಹಸಿವೆಯಿಂದಕಂಗಾಲಾದವರ ಹೃದಯ ಗಳು ಮಾತನಾಡಹತ್ತಿದವು. ಅವರ ಆರ್ತಧ್ವನಿಯು ಗಗನಭೇದಿಸಿ, ಅಧಿ ಕಾರಿಗಳ ಹೃದಯಕ್ಕೆ ಬಂದು ಬಡಿಯಹತ್ತಿತು.

ಸರಕಾರಕ್ಕೆ ಇದು ಸಹನವಾಗುವದು ಶಕ್ಯವಿಲ್ಲೆಂಬುದು ಎಲ್ಲರಿಗೂ ಗೊತ್ತು ಇದ್ದಿತು. ಈ ಜಾಗೃತಿ ನಿರ್ಮಾಣಕರನ್ನು ಹತ್ತಿಕ್ಕುವ ಹೊಂಚು ಹಾಕಹತ್ತಿತು. ಡಿಸೆಂಬರ ತಿಂಗಳ ಪ್ರಾರಂಭಕ್ಕೆ ಮೂವರು ಕಾರ್ಯಕರ್ತರ ಮೇಲೆ ಖಟ್ಲೆಯನ್ನು ಹಾಕಿತು. ಅದರಲ್ಲಿ ಪ್ರೊ. ಸಾಠೆಯವರು ಒಬ್ಬರು. ಈ ಖಟ್ಲೆಗೆ ಒಳ್ಳೇ ಕಳೆಯೇರಿತು. ಏಕೆಂದರೆ ಒಂದು ಬಗೆಯಿಂದ ಸಾರ್ವಜನಿಕ ಸಭೆಯ ಮೇಲೆಯೇ ಖಟ್ಲೆ ಹಾಕಿದಂತಾಗಿದ್ದಿತು. ಆ ಸಮಯ ದಲ್ಲಿ ಕಾಂಗ್ರೆಸ್ಸಿಗಾಗಿ ಟಿಳಕರು ಕಲಕತ್ತೆಗೆ ಹೋಗಿದ್ದರು. ಈ ಸುದ್ದಿ ತಿಳಿದೊಡನೆಯೇ ಪುಣೆಗೆ ಧಾವಿಸಿದರು. ಸಾಠೆಯವರನ್ನು ಸಂರಕ್ಷಿಸುವ ಕಾರ್ಯದಲ್ಲಿ ನಿರತರಾದರು.

ಸಾಠೆಯುವರ ಖಟ್ಲೆಗೆ ಒಳ್ಳೇ ಮಹತ್ವ ಬಂದಿತು ಕೋರ್ಟಿನಲ್ಲಿ ಜನ ಕಿಕ್ಕಿರಿದು ತುಂಬಿದ್ದಿತು. ಈ ಖಟ್ಲೆಯು ಪೇಣದಲ್ಲಿ ನಡೆದಿತ್ತು. ಟಿಳಕರು ಸ್ವತಃ ಅಲ್ಲಿಗೆ ಹೋದರು. ಮೊದಲನೆಯ ದಿವಸ ಸಾರ್ವಜನಿಕ ಸಭೆಯಲ್ಲಿ "ಸದ್ಯದ ರಾಜ್ಯವು ಕಾಯುದೆಯ ರಾಜ್ಯವು. ಸರಕಾರದ ಕಾಯುದೆಯುನ್ನು ಕೈಯಲ್ಲಿ ಹಿಡಿದು, ಅದು ಜನರಿಗೆ ಚನ್ನಾಗಿ ತಿಳಿಯುವಂತೆ ಹೇಳಿದ್ದಕ್ಕಾಗಿ ಪ್ರೊ. ಸಾಠೆಯವರ ಮೇಲೆ ಖಟ್ಲೆ ನಡೆಯುವದಾದರೆ, ಅನೇಕ ಜನರಿಗೆ ದಿನಾಲು ಕಾಯುದೆಯುನ್ನು ಕಲಿಸುವ ನನ್ನ ಮೇಲೆ ಎಷ್ಟು ಖಟ್ಲೆಗಳಾಗಬೇಕು? '' ಎಂದು ಪ್ರಶ್ನಿಸಿದರು. ಇದರ ಪರಿಣಾಮವು ಜನರ ಮೇಲೆ ಬಹಳವಾಯಿತು. ಸಾಠೆಯುವರ ಖಟ್ಲೆಯಿಂದ ಅಂಜಿದ್ದ ಸಾರ್ವಜನಿಕ ಕಾರ್ಯಕರ್ತರೆಲ್ಲರೂ ನಿರ್ಭೀತರಾದರು.

ಖಟ್ಲೆಯು ಪ್ರಾರಂಭವಾಯಿತು. ೩-೪ ಸಾಕ್ಷಿಗಳನ್ನು ವಿಚಾರಿಸಿ, ನ್ಯಾಯಾಧೀಶರು ಸಾಠೆಯುವರು ನಿರ್ದೋಷಿಗಳೆಂದು ನಿರ್ಣಯಕೊಟ್ಟರು. ಆಪ್ಟೆಯವರು ಮಾತ್ರ ದೋಷಿಗಳೆಂದು ನಿರ್ಣಯವಾಗಿ, ೨೦೦ ರೂಪಾಯಿಗಳ ದಂಡ,ಒಂದು ವರ್ಷದ ಸಾದಾ ಶಿಕ್ಷೆ ವಿಧಿಸಲ್ಪಟ್ಟಿತು. ೧೯ ನೇ ಜನವರಿ ೧೮೯೭ ರ ಕೇಸರಿಯಲ್ಲಿ ''ಫ್ಯಾಮಿನ್ ರಿಲೀಫ್ ಕೋಡನ್ನು ತಿಳಿಸಿ ಹೇಳುವ ಪ್ರಯತ್ನವು ಅಪರಾಧವಲ್ಲ. ಇಂತಹ ಪ್ರಯತ್ನಗಳಿಗೆ ಅಪರಾಧದ ರೂಪ ಕೊಡುವ ಸರಕಾರಿ ಅಧಿಕಾರಿಗಳು ಮಾತ್ರ ಹಾಸ್ಯಕ್ಕೆ ಈಡಾಗುವರು. ಹಾಗು ತಮ್ಮ ಮೂರ್ಖತನವನ್ನು ಪ್ರದರ್ಶಿಸುವರು....ಅಧಿಕಾರಿಗಳ ಸಿಟ್ಟಿಗೆ ಜನರು ಅಂಜದೆ, ಮೇಲಿಂದ ಮೇಲೆ ಅರ್ಜಿಮಾಡಿ, ತಮ್ಮ ಕಾರ್ಯ ಸಾಧಿಸಿಕೊಳ್ಳಬೇಕು. ಬಾಗಿಲನ್ನು ಬಡೆಯದೆ, ಬಾಗಿಲ ತೆರೆಯುವದಿಲ್ಲ. ಎಂದು ಇಂಗ್ಲೀಷಿನಲ್ಲಿ ಗಾದೆಯಿದೆ. ಮತ್ತೆ ಮತ್ತೆ ಪ್ರಯತ್ನಿಸಿರಿ'' ಎಂದು ಟಿಳಕರು ಜನತೆಯನ್ನು ಹುರಿದುಂಬಿಸಿದರು.

ಈ ಚಳವಳಿಯಲ್ಲಿ ಪ್ರತ್ಯಕ್ಷವಾಗಿ ಸರಕಾರದೊಡನೆ ಹೋರಾಡುವ ಪ್ರಸಂಗವು ಟಿಳಕರಿಗೆ ಬಂದಿತು. ಟಿಳಕರ ಶಕ್ತಿ ಸಾಮರ್ಥ್ಯಗಳು ಪ್ರಕಟವಾದವು. ಟಿಳಕರಿಗೆ ತಮ್ಮ ತಪಶ್ಚರ್ಯದ ಫಲ ನೋಡಲು ದೊರೆಯಿತು. ಟಿಳಕರು ಹೋದ ಹೋದಲ್ಲಿ ನವಜಾಗೃತಿಯುನ್ನು ಕಂಡರು. ತಮ್ಮ ಹಕ್ಕುಗಳಿಗಾಗಿ ಹೋರಾಡಬೇಕೆನ್ನುವ ಹೊಸ ಹುರುಪು, ಹೊರಹೊಮ್ಮುತ್ತಿರುವ

ದನ್ನು ಕಂಡು ಹಿಗ್ಗಿದರು. ರಾಷ್ಟ್ರದ ದಾರಿದ್ರ್ಯ, ಅಜ್ಞಾನ, ದೈನ್ಯಗಳ ದರ್ಶನ ದಿಂದ ಅವರ ಅಂತಃಕರಣವು ಕಳವಳಗೊಂಡಿತು. ದೀನ ಜನರನ್ನು ಸಂಘಟಿಸಿದರೆ, ಅವರಲ್ಲಿ ಪ್ರತಿಕಾರ ಮಾಡುವ ಅದ್ಭುತ ಸಾಮರ್ಥ್ಯವಿರುವದೆಂಬುದನ್ನು ಅವರು ಕಂಡುಕೊಂಡರು.

ಒಮ್ಮೆ ಪೇಣದಲ್ಲಿ ಜಿಲ್ಹಾಧಿಕಾರಿಯಾದ ಬ್ರೂಕ್ ಸಾಹೇಬನ ಮುಂದೆ, ಇಬ್ಬರು ಸ್ವಯಂಸೇವಕರ ಖಟ್ಲೆ ನಡೆದಿದ್ದಿತು. ಟಿಳಕರು ಅಲ್ಲಿಗೆ ಬಂದರು. ಅವರ ದರ್ಶನಾರ್ಥವಾಗಿ ಸಾವಿರಾರು ಜನರು ನೆರೆದಿದ್ದರು. ಅವರನ್ನು ಕಂಡಕೂಡಲೇ 'ಟಿಳಕ ಮಹಾರಾಜಕೀ ಜೈ!' ಎಂಬ ಜಯ ಘೋಷ ಮಾಡಿದರು. ಜಯ ಘೋಷದಿಂದ ಆಕಾಶವೆಲ್ಲ ತುಂಬಿ ಹೋಯಿತು. ಬೇರೆ ಶಬ್ದವೇ ಕೇಳದಂತಾಯಿತು. ಪೋಲೀಸರು ಎಷ್ಟು ಪ್ರಯತ್ನಿಸಿದರೂ ನಿಲ್ಲಲಿಲ್ಲ. ಬ್ರೂಕ್ ಸಾಹೇಬರು ಟಿಳಕರ ಕಡೆಗೆ ನೋಡಿ, ದರು. ಶಾಂತಪಡಿಸಲು ಬಿನ್ನವಿಸಿದರು. ಟಿಳಕರು ಹೊರಗೆಬಂದು ಎಲ್ಲರಿಗೂ ದರ್ಶನಕೊಟ್ಟರು. ಜನತೆ ಮತ್ತೊಮ್ಮೆ ಜಯಜಯಕಾರ ಮಾಡಿ ನಂತರ ಶಾಂತವಾಯಿತು. ಟಿಳಕರು ರೈತರ ನಿಜವಾದ ಮುಂದಾಳುಗಳೆಂದು ಬ್ರೂಕ್ ಸಾಹೇಬರು ಮನ್ನಿಸಿದರು.

## ಪ್ಲೇಗದ ಹಾವಳಿ

ರಾಷ್ಟ್ರವು ಬರಗಾಲದ ಸಂಕಟದಿಂದ ಚೇತರಿಸಿಕೊಳ್ಳುವಷ್ಟರಲ್ಲಿಯೇ ಇನ್ನೊಂದು ಭಯಂಕರವಾದ ಆಪತ್ತನ್ನು ಎದುರಿಸಬೇಕಾಯಿತು. ೧೮೯೬ ನೇ ಅಕ್ಟೋಬರದಲ್ಲಿ ಮುಂಬಯಿಯಲ್ಲಿ ಪ್ಲೇಗಿನ ಹಾವಳಿಯು ಪ್ರಾರಂಭವಾಯಿತು. ಒಂದು ತಿಂಗಳಲ್ಲಿಯೇ ೪೦೦ ಜನರು ಈ ರೋಗಕ್ಕೆ ಬಲಿಯಾದರು. ಭಾರತಕ್ಕೆ ಈ ರೋಗವು ಹೊಸದು. ಬೇನೆ ಯಾವುದೆಂಬುದೇ ಡಾಕ್ಟರ, ವೈದ್ಯರಿಬ್ಬರಿಗೂ ತಿಳಿಯಲಿಲ್ಲ. ಬೇನೆ ಬಂದಿತೆಂಬ ಸುದ್ದಿಯೊಡನೆಯೇ ಸತ್ತನೆಂಬ ಸುದ್ದಿಯೂ ಬರುತ್ತಿದ್ದಿತು. ಜನ ಗಾಬರಿಗೊಂಡು ಊರು ಬಿಟ್ಟು ಹೊರಡಹತ್ತಿದರು. ಬೇನೆಯು ಎಲ್ಲ ಕಡೆಗೂ ಹಬ್ಬಿತು. ೧೮೯೭ ರ ಪ್ರಾರಂಭಕ್ಕೆ ಪುಣೆಗೂ ಬಂದಿತು

ಈ ಸುದ್ದಿ ತಿಳಿದೊಡನೆಯೇ ಬ್ರಿಟಿಶರು ಈ ಪಿಡುಗು ಇಂಗ್ಲಂಡಿಗೆ ಎಲ್ಲಿ ಮರಳುವದೋ ಎಂಬ ಭೀತಿಯಿಂದ 'ಈ ರೋಗವನ್ನು ತಡೆಯುವ ಎಲ್ಲ

ಉಪಾಯುಗಳನ್ನು ಕೂಡಲೇ ಕೈಕೊಳ್ಳಿರಿ' ಎಂದು ಕಟ್ಟೆಪ್ಪಣೆ ಇತ್ತರು. ಟಿಳಕರು ಸರಕಾರವು ಯೋಗ್ಯ ವೇಳೆಯಲ್ಲಿ ಉಪಾಯುಗಳನ್ನು ಕೈಕೊಂಡಿದ್ದರೆ ಬೇನೆಯು ಎಲ್ಲ ಕಡೆಗೂ ಹಬ್ಬುತ್ತಿದ್ದಿಲ್ಲವೆಂದು ಟೀಕಿಸ ಹತ್ತಿದ್ದರಿಂದ ಇಷ್ಟು ದಿನ ಮಲಗಿದ್ದ ಭಾರತ ಸರಕಾರವು ಅರನಿದ್ದಿಯಲ್ಲಿ ಎಚ್ಚತ್ತವರಂತೆ ಗಾಬರಿಯಾಗಿ ಹುಚ್ಚರಂತೆ ವರ್ತಿಸಹತ್ತಿತು. ಉಗ್ರೋಪಾಯಗಳನ್ನು ಕೈಕೊಂಡಿತು. ಇದನ್ನು ಕಂಡು ಟಿಳಕರು 'ಕೇವಲ ಸರಕಾರೀ ಅಧಿಕಾರಿಗಳಿಂದಲೇ ಈ ಕಾರ್ಯಸಾಧಿಸದು. ಜನರ ವಿಶ್ವಾಸವುಳ್ಳ ಮುಖಂಡರ ಸಹಾಯ ಪಡೆದು, ವಿನಯಶೀಲ ಅಧಿಕಾರಿಗಳಿಂದ ಈ ಕಾರ್ಯವನ್ನು ಸಾಧಿಸಬೇಕೆಂದು' ಸರಕಾರಕ್ಕೆ ಕಿವಿಮಾತು ಹೇಳಿದರು.

ಆದರೆ ಭಾರತ ಸರಕಾರವು ಸೈನಿಕ ಮಾದರಿಯ ಸರ್ವವ್ಯಾಪಕ ಕಾಯದೆಯನ್ನು ಮಾಡಿ ತನ್ನ ನೌಕರರಿಗೆ ಅಧಿಕಾರಕೊಟ್ಟಿತು. ಇದನ್ನು ಮನ್ನಿಸದಿದ್ದವರಿಗೆ ಶಿಕ್ಷೆಯನ್ನು ವಿಧಿಸಿತು. ಕೇಳುವದೇನು ಅಧಿಕಾರಿ ವರ್ಗವು ಶಸ್ತ್ರಾಸ್ತ್ರಗಳಿಂದ ಸಜ್ಜಾಯಿತು. ಅವರು ನುಡಿದದ್ದೇ ಪೂರ್ವದಿಕ್ಕು, ಮಾಡಿದ್ದೇ ಮಹಾಕಾರ್ಯ. ಇದರಿಂದ ಜನರಿಗೆ ಹೀಗೇಕೆ ಎಂದು ಕೇಳುವ ಅಧಿಕಾರ ಕೂಡ ಉಳಿಯಲಿಲ್ಲ. ಜನರನ್ನು ದಿಗ್ಬಂಧಿಸುವ, ಬೇನೆಯ ಸಂಶಯದಿಂದ ವಸ್ತುಗಳನ್ನೂ ಮನೆಗಳನ್ನೂ ಸುಡುವ, ಯಾವುದೇ ಸ್ಥಿತಿಯಲ್ಲಿದ್ದ ಮನುಷ್ಯನನ್ನು ಎಲ್ಲಿ ಬೇಕಾದಲ್ಲಿ ಸಾಗಿಸುವ ಸರ್ವಾಧಿಕಾರವು ಜಿಲ್ಹಾಧಿಕಾರಿಗಳಿಗೆ ದೊರೆತಿತ್ತು. ಅವಶ್ಯವಿದ್ದರೆ ಹೆಚ್ಚಿನ ಅಧಿಕಾರಿಗಳನ್ನು ನಿಯಮಿಸಿಕೊಳ್ಳಲು ಅಧಿಕಾರವಿತ್ತು.

ಸರಕಾರದ ಉಗ್ರೋಪಾಯಗಳು ಪ್ರಾರಂಭವಾದವು. ಪ್ಲೇಗಾಧಿಕಾರಿಗಳು ನೇಮಿಸಲ್ಪಟ್ಟರು. ರ್‍ಯಾಂಡ ಸಾಹೇಬನು ಪುಣೆಯ ಅಧಿಕಾರಿಯಾಗಿ ಬಂದನು. ಸಾತಾರೆಯಲ್ಲಿಯ ಇವನ ಕ್ರೂರ ಆಳಿಕೆಯು ಎಲ್ಲರಿಗೂ ಪರಿಚಿತವಿದ್ದಿತು. ಅವನು ಕರ್ತೃತ್ವಶಾಲಿಯಿದ್ದರೂ ಕ್ರೂರನಾಗಿದ್ದನು. ವಿನಯವು ಅವನಿಂದ ೧೦೦ ಮೈಲು ದೂರವಿದ್ದಿತು. ಅಲ್ಲದೆ ಅವನಿಗೆ ಸಹಾಯಕರೆಂದು ಇಬ್ಬರು ಸೈನಿಕರನ್ನು ಕೊಡಲಾಗಿದ್ದಿತು. ಮೊದಲೇ ಉಲ್ಹಾಸ ಅದರಲ್ಲಿಯೂ ಫಾಲ್ಗುಣಮಾಸ, ಕೇಳುವದೇನು? ರೋಗಿಗಳನ್ನು ಹುಡುಕುವದಕ್ಕಾಗಿ ಸೈನಿ

ಕರು ಸಿಕ್ಕ ಸಿಕ್ಕ ಮನೆಗಳಿಗೆ ಹೋಗಹತ್ತಿದರು. ಮನೆಯಲ್ಲಿಯ ವಸ್ತುಗಳನ್ನು ನಾಶಮಾಡಹತ್ತಿದರು. ಕೇವಲ ಸಂಶಯದಿಂದ ಹೆಣ್ಣುಮಕ್ಕಳನ್ನೂ ಹುಡುಗರನ್ನೂ ಕ್ವಾರಂಟೈನಲ್ಲಿ ಇಡಹತ್ತಿದರು. ರೋಗಿಗಳನ್ನು ದವಾಖಾನೆಗೆ ಸಾಗಿಸಹತ್ತಿದರು. ಮನೆಗಳನ್ನು ತೊಳೆಯಹತ್ತಿದರು ಅಡಿಗೆಯಮನೆ-ದೇವರಮನೆಗಳನ್ನು ಹೊಕ್ಕು ಎಲ್ಲವನ್ನೂ ಭ್ರಷ್ಟಗೊಳಿಸಿದರು. ಕೈಗೆ ಸಿಕ್ಕದ್ದನ್ನು ಕಿಸೆಗೆ ಹಾಕಹತ್ತಿದರು. ಸ್ತ್ರೀಯರ ಬೆಲೆಯುಳ್ಳ ಆಭರಣಗಳನ್ನು ಎತ್ತಿ ಹಾಕಹತ್ತಿದರು. ಹೆಚ್ಚೇನು ನಮ್ಮ ಒಬ್ಬಿಬ್ಬ ಸ್ತ್ರೀಯರನ್ನೂ ಕೆಡಿಸಿದರು. ಪ್ಲೇಗಕ್ಕಿಂತಲೂ ರ್‍ಯಾಂಡ ಸಾಹೇಬನ ಯಮದೂತರಿಗೇ ಜನ ಬೆದರಿದರು. ಟಿಳಕರು 'ಪ್ಲೇಗದಿಂದ ಹೋಳಿಹುಣ್ಣಿವೆಯು ಈ ಸಲ ೮ ದಿನ ಮೊದಲೇ ಬಂದಿದೆ' ಎಂದು ಪರಿಸ್ಥಿತಿಯನ್ನು ಚಿತ್ರಿಸಿದರು.

ಇಂತಹ ವಿಪರೀತ ಪರಿಸ್ಥಿತಿಯ ಮೂಲಕ ಜನರು ಧೈರ್ಯಗೆಟ್ಟಿದ್ದರು. ತೇಜೋಹೀನರಾಗಿದ್ದರು. ಅವರಲ್ಲಿ ಪ್ರತಿಕಾರದ ಶಕ್ತಿಯೇ ಉಳಿದಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಟಿಳಕರು ಮಾಡಿದ ಸೇವೆಯು ಅವರ್ಣನೀಯವಾದುದು. ಅವರು ಕೈಕಾಲು ಬಿಡಲಿಲ್ಲ. ದ್ವಿಗುಣಿತ ಉತ್ಸಾಹದಿಂದ ಕಾರ್ಯರಂಗಕ್ಕಿಳಿದರು. ಜನತೆಯ ಸಂಘಟನೆಗೆ ಕೈ ಹಾಕಿದರು. ಜನರ ಒಂದು ಸೇವಾ ಸಮಿತಿಯನ್ನು ನಿರ್ಮಿಸಿದರು. ದವಾಖಾನೆಯನ್ನು ಪ್ರಾರಂಭಿಸಿದರು. ಸ್ವಯಂ ಸೇವಕರ ಸೇವಾ ಪಥಕವನ್ನು ರಚಿಸಿದರು. ಕೇಸರಿಯ ಮುಖಾಂತರ ವಿಧಾಯಕ ಸೂಚನೆಗಳನ್ನು ಪ್ಲೇಗ ಕಮಿಟಿಗೆ ಸೂಚಿಸಹತ್ತಿದರು. ಪ್ಲೇಗ ಕಮಿಟಿಯು ಕೈಕೊಂಡ ಕಾರ್ಯಗಳು ಆರೋಗ್ಯದ ದೃಷ್ಟಿಯಿಂದ ಚೆನ್ನಾಗಿದ್ದು, ಎಲ್ಲರೂ ಸಹಕರಿಸಬೇಕೆಂದು ಜನತೆಗೆ ಉಪದೇಶಿಸಿದರು. ಸರಕಾರಿ ಅಧಿಕಾರಿಗಳೊಡನೆ ತಾವೂ ಪ್ರಚಾರಕ್ಕೆ ಹೋಗಹತ್ತಿದರು.

ಇತ್ತ ರ್‍ಯಾಂಡ ಸಾಹೇಬರ ಆಳಿಕೆ ಹಾಗೂ ಅವನ ಸೈನಿಕರ ಅತ್ಯಾಚಾರಗಳನ್ನು ತೀವ್ರವಾಗಿ ಖಂಡಿಸಹತ್ತಿದರು ಸ್ತ್ರೀಪುರುಷರನ್ನು ಒತ್ತಟ್ಟಿಗೆ ಇಡುವದನ್ನು ನಿಷೇಧಿಸಿದರು ಬಾಣಂತಿಯರನ್ನೂ ಮುದುಕರನ್ನೂ ಒಂದೆಡೆ ಇಡಕೂಡದೆಂದು ತಿಳಿಸಿದರು. ರ್‍ಯಾಂಡ ಸಾಹೇಬನ ಕಡೆಗೆ ಶಿಷ್ಟ ಮಂಡಲವನ್ನು ತೆಗೆದುಕೊಂಡು ಹೋಗಿ, ಸೈನಿಕರು ನಡೆಯಿಸಿದ ಅತ್ಯಾಚಾರಗಳ ಪ್ರತಿಕ್ರಿಯೆ ಏನಾಗಿದೆ ಎಂಬುದನ್ನು ತಿಳಿಸಿದರು. ಆದರೆ ಅದೆಲ್ಲವೂ ಘೋರ್ಕಲ್ಲ ಮೇಲೆ

ಮುಳಿಗರೆದಂತಾಯಿತು. “ಸದ್ಯಕ್ಕೆ ನಡೆದ ರ‍್ಯಾಂಡ ಸಾಹೇಬರ ದಬ್ಬಾಳಿಕೆಯು ಅಥವಾ ವೊಗಲಾಯಿಯು, ಯಾವಾಗಲೂ ಹೀಗೆಯೇ ನಡೆಯುವದು ಶಕ್ಯವಿಲ್ಲ. ಜನರು, ಎಷ್ಟೇ ಸಂಪನ್ನರಿದ್ದರೂ ಈ ತೊಂದರೆಗಳನ್ನು ಒಂದೇ ಸವನೆ ಸಹಿಸುವರೆಂದು ನಮಗೆ ಅನಿಸುವದಿಲ್ಲ. ನಾವು ಪ್ಲೇಗದಿಂದ ಸತ್ತರೂ ಚಿಂತೆಯಿಲ್ಲ. ಈ ತೊಂದರೆಯಿಂದ, ಮುಕ್ತರಾಗುವಾ, ಎಂದು ಜನರಿಗೆ ಅನಿಸುವಷ್ಟು ಅವರ ಸಂಯಮುವನ್ನು ಪರಿಕ್ಷಿಸಬಾರದೆಂದು ನಾವು ಲಾರ್ಡ ಸ್ಯಾಂಡಸ್ಟರಿಗೆ ಬಿನ್ನವಿಸಿಕೊಳ್ಳುತ್ತೇವೆ.'' ಎಂದು ಕೇಸರಿಯಲ್ಲಿ ಬರೆದರು.

“ಈ ಭಯಂಕರವಾದ ಬೇನೆಯ ಪ್ರತಿಬಂಧಕ್ಕಾಗಿ ಉಗ್ರ ಉಪಾಯಗಳನ್ನು ಕೈಕೊಳ್ಳುವದು ಗವ್ಹರ್ನರರ ಇಚ್ಛೆಯಂತೆ ಅವಶ್ಯವಿದ್ದರೂ ಜನರ ರೀತಿ, ನೀತಿಗಳಿಗೆ ಧಕ್ಕೆ ತಗಲದಂತೆ ಜಾಗೃತೆ ತೆಗೆದುಕೊಳ್ಳುವದು ಅವಶ್ಯವಿದೆ. ಅದರಂತೆಯೇ ಬಾಣಂತಿಯರನ್ನೂ ಗರ್ಭಿಣಿಯರನ್ನೂ ಮುದುಕ ತದುಕರನ್ನೂ ಕೈದಿಗಳಂತೆ ಹಿಡಿದು ಕ್ಯಾಂಪಿಗೆ ಕಳಿಸುವ ಕಾರಣವಿಲ್ಲ. ಅಂತಹರನ್ನು ಅವರವರ ಮನೆಯಲ್ಲಿಯೇ ಇಟ್ಟು, ಉಪಚರಿಸಿದರೆ ಹಾನಿ ಏನೂ ಇಲ್ಲವೆಂದು ನಮುಗನಿಸುತ್ತದೆ. ಮತ್ತು ಸೈನಿಕರ ಸ್ವೈರಾಚಾರವು ನಿಲ್ಲಲೇಬೇಕೆಂದು'' ಟಿಳಕರು ಕೇಸರಿಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಮಾಡಿದರು. ಮತ್ತು ಸರಕಾರಿ ಅಧಿಕಾರಿಗಳು ಕೈಕೊಂಡ ಉಪಾಯುಗಳೆಲ್ಲವೂ ನಿರುಪಯೋಗಿಯಾಗಿವೆ ಎಂದು ಸರಕಾರದ ನಿದರ್ಶನಕ್ಕೆ ತಂದುಕೊಟ್ಟರು. ಅನೇಕ ಜನ ಡಾಕ್ಟರರು ಟಿಳಕರ ಅಭಿಪ್ರಾಯವನ್ನು ಎತ್ತಿಹಿಡಿದರು. ಮುಂದೆ ೧೯೦೦ ನೇ ಇಸ್ವಿಯಲ್ಲಿ ಭಾರತ ಸರಕಾರವು ‘ಪ್ಲೇಗ ಪ್ರತಿಬಂಧಕ ಉಪಾಯುಗಳ ಪರೀಕ್ಷಣಮಾಡುವದಕ್ಕಾಗಿ ಒಂದು ಮಂಡಳವನ್ನು ನಿಯಮಿಸಿತು. ಆ ಮಂಡಳವು ಕೂಡ ಸರಕಾರವು ಪ್ಲೇಗ ಪ್ರತಿಬಂಧಕ್ಕಾಗಿ ಕೈಕೊಂಡ ಉಪಾಯುಗಳು ತೀರ ನಿರುಪಯೋಗಿ ಇದ್ದವು’ ಎಂಬ ಅಭಿಪ್ರಾಯುವನ್ನು ವ್ಯಕ್ತಪಡಿಸಿತು.

ಆ ವರದಿಯಲ್ಲಿ ಸ್ನೀಡರೆಂಬುವವರು ಕೆಳಗಿನಂತೆ ಟೀಕಿಸಿದ್ದಾರೆ. “ನಾಲ್ಕು ವರುಷಗಳವರೆಗೆ ಪ್ಲೇಗಿನ ಹಾವಳಿಯಿಂದ ಅಧಿಕಾರಿ ವರ್ಗವು ಬೆದರಿ ಹೋಗಿತ್ತು. ಅದರೊಡನೆ ಹೋರಾಡಲು ತಮ್ಮ ನಿರಂಕುಶ, ನಿಷ್ಠುರವಾದ ಅಧಿಕಾರವನ್ನು ನಡೆಯಿಸಿತು. ಆದರೆ ಅದಾವದೂ ಉಪಯೋಗ ಬೀಳ

ಲಿಲ್ಲ. ಭಾರತೀಯರ ಆಚಾರ ವಿಚಾರಗಳಿಗೆ ತಾವು ನಿಯೋಜಿಸುವ ಉಪಾಯಗಳು ಸರಿಹೋಗುವದಿಲ್ಲವೆಂಬ ಮಾತು ತಿಳಿಯಲು ಸರಕಾರಕ್ಕೆ ೪ ವರ್ಷಗಳು ಹಿಡಿದವು. ಈ ನಾಲ್ಕು ವರ್ಷದಲ್ಲಿ ಅಧಿಕಾರಿಗಳ ಸ್ವೇಚ್ಛಾಚಾರಗಳನ್ನೂ, ಅತ್ಯಾಚಾರಗಳನ್ನೂ ಜನತೆಯು ತೀವ್ರವಾಗಿ ಖಂಡಿಸಿದೆ. ತಾವು ಅಧಿಕಾರಿಗಳ ಕೈಯಲ್ಲಿ ಸಿಗುವದಕ್ಕಿಂತ ಪ್ಲೇಗದಿಂದ ಸಾಯುವದೇ ಒಳ್ಳೇಯದು ಎಂದು ಜನ ಭಾವಿಸಿದ್ದರು. ಸರಕಾರವು ಕೈಕೊಂಡ ಉಪಾಯಗಳು ಯೋಗ್ಯವೋ ಅಯೋಗ್ಯವೋ ಎಂಬುದು ಸಂಶಯಾಸ್ಪದವಾದ ವಿಷಯ. ಈ ಕಾರ್ಯದಲ್ಲಿ ತಮಗೆ ಸೋಲು ಉಂಟಾಗಿದೆ ಎಂದು ಸರಕಾರವೇ ಒಪ್ಪಿಕೊಳ್ಳುತ್ತಿದ್ದು, ಪ್ರತಿಬಂಧಕೋಪಾಯಗಳನ್ನು ಒತ್ತಾಯದಿಂದ ಹೇರುವದನ್ನು ಸರಕಾರವು ಇನ್ನು ಮುಂದೆ ನಿಲ್ಲಿಸಿಬಿಟ್ಟಿದೆ.''

ಕೊನೆಗೆ ಮೇ ತಿಂಗಳಲ್ಲಿ ಪ್ಲೇಗದ ಹಾವಳಿಯು ಕಡಿಮೆಯಾದ ಲಕ್ಷಣಗಳು ಕಾಣಹತ್ತಿದವು. ೧೬ ನೇ ಮೇ ದಿನ ಪ್ಲೇಗದ ಸಂಶೋಧನೆಯನ್ನು ನಿಲ್ಲಿಸಲಾಗಿದೆಯೆಂದು ರ್‍ಯಾಂಡ ಸಾಹೇಬನು ಪ್ರಕಟಿಸಿದನು. ಜನತೆಗೆ ಭಾರವಿಳಿದಂತಾಯಿತು. ಊರುಬಿಟ್ಟು ಹೋದ ಜನ ಮರಳಿ ಬರಹತ್ತಿತು. ವ್ಯಾಪಾರವು ಪ್ರಾರಂಭವಾಯಿತು. ಊರ ಮೋರೆಯ ಮೇಲೆ ಜೀವಕಳೆ ಬರಹತ್ತಿತು. ಮೊದಲಿನಂತೆ ಎಲ್ಲವೂ ಸುಸೂತ್ರವಾಗಿ ಜೀವನ ಸಾಗಹತ್ತಿತು.

ಈ ಕಾಲದಲ್ಲಿ ಟಿಳಕರು ತೋರಿಸಿದ ಧೈರ್ಯ, ಸೇವಾಬುದ್ಧಿಗಳು ಎಲ್ಲರ ಕಣ್ಣು ಕುಕ್ಕಿಸಿದವು. ಎಲ್ಲರಂತೆ ಟಿಳಕರಿಗೂ ಊರು ಬಿಟ್ಟು ಹೋಗಲು ಬರುತ್ತಿದ್ದಿತು. ಆದರೆ ಆರ್ತರಾದ. ದೀನರಾದ, ಬೇನೆಯಿಂದ ಕಂಗಾಲರಾದ ದೇಶಬಾಂಧವರನ್ನು ಬಿಟ್ಟು ಹೋಗುವದು, ಅವರಸೇವೆಯನ್ನು ಕೈಕೊಳ್ಳದಿರುವದು ಅವರಿಗೆ ಮಹತ್ಪಾಪವೆನಿಸಿತು. ಪ್ಲೇಗದ ಮಧ್ಯದಲ್ಲಿಯೇ ನಿಂತು ಜನರನ್ನು ಸಂತೈಸುತ್ತ, ಧೈರ್ಯಕೊಡುತ್ತ, ಸಹಾಯವನ್ನು ಒದಗಿಸುತ್ತ, ಸರಕಾರದೊಡನೆ ಸಹಕರಿಸುತ್ತ, ಅನ್ಯಾಯದೊಡನೆ ಹೋರಾಡುತ್ತ ನಿಂತ ಟಿಳಕರನ್ನು ಆಪದ್ಬಂಧುಗಳೆಂದು ತಿಳಿದು, ಜನತೆಯು ಹರಿಸಿದ್ದರೆ ಆಶ್ಚರ್ಯವೇನು ?

———

# ರಾಜದ್ರೋಹಿ ಟಿಳಕರು

**ಅರ್ಥಾತ್**

# ರಾಜದ್ರೋಹದ ಮೊದಲನೆಯ ಖಟ್ಲೆ

## ರ್‍ಯಾಂಡಸಾಹೇಬರ ಕೊಲೆ

ಮರವು ಮಾನವನಿಗೆ ದೇವರು ಕೊಟ್ಟ ವರವು. ಪ್ಲೇಗಿನ ಹಾವಳಿಯಲ್ಲಿ ನೊಂದು ಬೆಂದ ಜನರು ರ್‍ಯಾಂಡ ಸಾಹೇಬನ ಅತ್ಯಾಚಾರದ ದಿನಗಳನ್ನು ಮೆಲ್ಲನೆ ಮರೆತು ಸುಖದಿಂದ ಜೀವನ ಸಾಗಿಸಹತ್ತಿದರು. ಟಿಳಕರು ಪುನಃ ತಮ್ಮ ವಕೀಲ ವರ್ಗವನ್ನು ಪ್ರಾರಂಭಿಸುವ ಜಾಹಿರಾತು ಕೊಟ್ಟರು ಅಷ್ಟರಲ್ಲಿ ೨೨ ಜೂನಕ್ಕೆ ಮಹಾರಾಣಿಯ ವಜ್ರಮಹೋತ್ಸವವೆಂದು ಸಾರಲ್ಪಟ್ಟಿತು

ಟಿಳಕರು ೮, ೧೫, ೨೨ ನೇ ತಾರೀಖಿನ ಜೂನ ತಿಂಗಳ ಕೇಸರಿಯ ಸಂಚಿಕೆಗಳಲ್ಲಿ ಮಹಾರಾಣಿಯವರ ಶೀಲ, ಗುಣ, ಸಾಮ್ರಾಜ್ಯದ ವಿಸ್ತಾರ ಈ ಎಲ್ಲವುಗಳನ್ನು ಗುಣಗ್ರಾಹಕ ದೃಷ್ಟಿಯಿಂದ ವರ್ಣಿಸಿ. ಈ ಆನಂದದಲ್ಲಿ ಪ್ರಜೆಗಳು ಭಾಗಿಯಾಗಬೇಕೆಂದು ಹೇಳಿ, ಭಾರತದ ದಾರಿದ್ರ್ಯವನ್ನು ವರ್ಣಿಸಿ, ಬ್ರಿಟಿಶರ ಆಳಿಕೆಯಲ್ಲಿ ಭಾರತವು ಉತ್ಕರ್ಷ ಹೊಂದಿದಂತೆ ಕಂಡರೂ 'ಬಾವು ಬೇರೆ ಧೃಡ ಕಾಯ ಬೇರೆ' ಎಂಬ ವಿವೇಕವನ್ನು ನಾವು ತಿಳಿಯಬೇಕು ಎಂದು ಸೂಚಿಸಿದರು.

ಶಿವ ಜನ್ಮೋತ್ಸವವು ಬಂದಿತು. ಈ ಉತ್ಸವದಲ್ಲಿ ತರುಣರಾದ ಪದವೀಧರರು ಮುಂದೆ ಬಂದುದನ್ನು ಕಂಡು ಟಿಳಕರಿಗೆ ಆನಂದವಾಯಿತು. ೧೮೯೭ ರ ೧ ನೇ ಜೂನ ಕೇಸರಿಯಲ್ಲಿ 'ವಿಭೂತಿ ಪೂಜೆಯೆಂಬ ವಿಷಯದ ಮೇಲೆ ಒಂದು ಸುಂದರವಾದ ಅಗ್ರಲೇಖವನ್ನು ಬರೆದರು'. ೧೨ ನೇ ಜೂನದ ದಿವಸ ಪುಣೆಯಲ್ಲಿ ಶಿವಜನ್ಮೋತ್ಸವವು ಜರುಗಿತು. ಶ್ರೀ ಶಿವರಾಮಪಂತ ಪರಾಂಜಪೆಯವರು ರಾಜಸೂಯಯಜ್ಞ, ಹಾಗೂ ಶಕುನಿ ಧೃತರಾಷ್ಟ್ರ ಸಂವಾದ ಎಂಬ

ವಿಷಯವನ್ನು ಕುರಿತು, ಪುರಾಣವನ್ನು ಹೇಳಿದರು. ಅಸಂತೋಷಃ ಶ್ರಿಯೋ ಮೂಲಂ'' ಮತ್ತು "ಸಂತೋಷಸ್ತು ಶ್ರಿಯೋಹಂತಿ'' ಇವೇ ಅವರಿಗೆ ಆಧಾರವಾಗಿದ್ದವು. ಪ್ರೊ. ಜಿನಸೀವಾಲಾರವರು ಸ್ವದೇಶ, ಹಾಗೂ ಸ್ವಧರ್ಮ ಗಳ ದುರ್ದಶೆಯ ಪ್ರಭಾವವೇ ಶಿವಾಜಿಯ ಪರಾಕ್ರಮವನ್ನು ಹೊರೆಗೆಡವಿ ತಲ್ಲದೆ, ವ್ಯಕ್ತಿ ಮಹತ್ವಾಕಾಂಕ್ಷೆಯಲ್ಲ'' ಎಂದು ಹೇಳಿದರು. ಅಂದೇ ರಾತ್ರಿ ಟಿಳಕರ ಅಧ್ಯಕ್ಷತೆಯಲ್ಲಿ ಪ್ರೊ. ಭಾನು ಅವರು 'ಅಫಜೂಲ್‌ಖಾನನ ವಧೆ' ಎಂಬ ವಿಷಯವಾಗಿ ಮಾತನಾಡುತ್ತ, ಕೊಲೆಯ ಆರೋಪದಿಂದ ಶಿವಾ ಜಿಯು ಮುಕ್ತನೆಂದು ಸಿದ್ಧಮಾಡಿದರು. ನೇಪೋಲಿಯನ್, ಸೀಝರ್, ಮೊದಲಾದವರಿಂದ ಆದ ಮಾನವ ವಧೆಯ ಉದಾಹರಣೆಯನ್ನು ಕೊಟ್ಟು ಇತಿಹಾಸಕಾರರು ಅವರನ್ನು ಯಾವ ಕಾರಣಗಳಿಂದ ನಿರ್ದೋಷಿಗಳೆಂದು ಹೇಳಿದರೋ ಅದೇ ನ್ಯಾಯದಿಂದ ಶಿವಾಜಿಯು ನಿರ್ದೋಷಿಯೆಂದರು. ಟಿಳಕರು ತಮ್ಮ ಸಮಾರೋಪ ಭಾಷಣದಲ್ಲಿ ''ದೊಡ್ಡ ವಿಭೂತಿಗಳು ಸಾಮಾನ್ಯ ಶಾಸ್ತ್ರದ ತತ್ವಗಳಿಗಿಂತಲೂ ಮೇಲ್ಮಟ್ಟದಲ್ಲಿರುತ್ತಾರೆ. ಶಾಸ್ತ್ರದ ಸಾಮಾನ್ಯ ತತ್ವ ಅವರಿಗೆ ಅನ್ವಯಿಸುವದಿಲ್ಲ ಅಫಜೂಲ್‌ಖಾನನ್ನು ಕೊಂದು ಶಿವಾಜಿಯು ಪಾಪವನ್ನು ಮಾಡಿದನೋ ಇಲ್ಲವೋ ಎಂಬ ಪ್ರಶ್ನೆಯ ಉತ್ತ ರವು ಮಹಾಭಾರತದಲ್ಲಿದೆ. ಫಲಾಪೇಕ್ಷೆಯಿಲ್ಲದೆ ಕರ್ತವ್ಯವನ್ನು ಮಾಡುತ್ತಿರು ವಾಗ ತನ್ನ ಗುರು ಅಥವಾ ತಂದೆಯನ್ನೂ ಕೊಂದರೂ ಪಾಪವಿಲ್ಲೆಂದು ಶ್ರೀ ಕೃಷ್ಣನೇ ಹೇಳಿದ್ದಾನೆ ಶ್ರೀ ಶಿವಾಜಿ ಮಹಾರಾಜನು ತನ್ನ ಗೇಣು ಹೊಟ್ಟೆಗಾಗಿ ಇದನ್ನು ಮಾಡಿಲ್ಲ. ಸಾತ್ವಿಕ ಬುದ್ಧಿಯಿಂದ ಪರೋಪಕಾರ ಕ್ಕಾಗಿ ಅಫಜೂಲ್‌ಖಾನನ ವಧೆ ಮಾಡಿದ್ದಾನೆ. ತಮ್ಮ ಮನೆಯಲ್ಲಿ ಒಂದು ವೇಳೆ ಕಳ್ಳನು ಹೊಕ್ಕರೆ ಅವನನ್ನು ಹೊರಗೆ ಹಾಕುವ ಸಾಮರ್ಥ್ಯವು ತನಗೆ ಇರದಿದ್ದರೆ, ಅವನನ್ನು ಮನೆಯಲ್ಲಿಯೇ ಹಾಕಿ, ಆ ಮನೆಗೆ ಬೆಂಕಿ ಹಚ್ಚ ಬಹುದು. ಮ್ಲೇಂಚ್ಛರಿಗೆ ಭಾರತದ ತಾಮ್ರಪಟವನ್ನೇನೂ ದೇವರು ಹಾಕಿ ಕೊಟ್ಟಿಲ್ಲ. ನಮ್ಮ ಮಾತೃಭೂಮಿಯಿಂದ ಅವರನ್ನು ಹೊರಗೆ ಹಾಕಲು ಮಹಾರಾಜನು ಪ್ರಯತ್ನಿಸಿದನು. ಅದರಲ್ಲಿ ಸ್ವಾರ್ಥದ ಪಾಪವಿಲ್ಲ'' ಎಂದು ಹೇಳಿದರು, ೧೫ ನೇ ಜೂನದ ಕೇಸರಿಯಲ್ಲಿ, ಶ್ರೀ ಶಿವಾಜಿಯ ಉದ್ಗಾರ ಗಳು' ಎಂಬ ಕವಿತೆಯು ನಿಶಾನಿ ಭವಾನಿ ತಲವಾರ' ಎಂಬ ಸಹಿಯಿಂದ

ಪ್ರಸಿದ್ಧವಾಯಿತು. ಈ ಕವಿತೆಯಲ್ಲಿ ತನ್ನ ಪ್ರಜೆಗಳ ಅವನತಿಯ ವಿಷಯ ವಾಗಿ ಶಿವಾಜಿಯು ದಿನಾಲು ಖೇದ ಪಡುತ್ತಿದ್ದುದರಿಂದ ಪ್ರಜೆಗಳು ಅವನ ಆಳಿಕೆಯಲ್ಲಿ ಸುಖಿಗಳಾದರು. ಮತ್ತು ಬ್ರಿಟಿಶರ ನ್ಯಾಯದಾನದ ಖಟ್ಲೆಯೂ ಬ್ರಿಟಿಶ ಸೈನಿಕರು ಹಿಂದೀ ಸ್ತ್ರೀಯರ ಮೇಲೆ ಮಾಡಿದ ಅನ್ಯಾಯಗಳ ಬಗ್ಗೆಯೂ ಭಾರತದ ದಾರಿದ್ರ್ಯದ ವಿಷಯವಾಗಿಯೂ ಅದರಲ್ಲಿ ವರ್ಣನೆ ಯಿದ್ದಿತು. ಇದಲ್ಲದೆ, 'ನೀವು ನಿಮ್ಮ ಹಳೇ ರೀತಿಗಳನ್ನು ಮರೆತಿರಾ! ಎಂದು ಶಿವಾಜಿಯು ಪ್ರಶ್ನಿಸಿದಂತೆಯೂ, ಭಾರತೀಯರ ದೊಡ್ಡ ಮನಸ್ಸೇ ಬ್ರಿಟಿಶರನ್ನು ರಕ್ಷಿಸಿದೆ ಎಂತಲೂ ವರ್ಣಿಸಿದ್ದಿತು.

ಕೂಡಲೆ ಟಿಳಕರ ದ್ವೇಷಿಯೊಬ್ಬನು ಈ ಬರಹದಲ್ಲಿ ಉತ್ಸವದ ಭಾಷಣದಲ್ಲಿ ರಾಜದ್ರೋಹವು ತುಂಬಿ ತುಳುಕುತ್ತದೆ. ಎಂಬ ಪತ್ರ ಒಂದನ್ನು ಮುಂಬೈ ಟಾಯಿಮ್ಸಿಗೆ ಬರೆದರು. ಈ ಪತ್ರ ಪ್ರಸಿದ್ಧವಾಗುವದಕ್ಕೂ ರ್‍ಯಾಂಡ ಸಾಹೇಬನ ಕೊಲೆಯಾಗುವದಕ್ಕೂ ಕಾಕತಲೀ ನ್ಯಾಯದಿಂದ ಗಂಟು ಬಿದ್ದಿತು. ಇವೆಲ್ಲವುಗಳಿಗೆ ರಾಜದ್ರೋಹದ ಸ್ವರೂಪ ಬಂದಿತು.

೨೨ ನೇ ಜೂನ ಮಹಾರಾಣಿಯ ವಜ್ರ ಮಹೋತ್ಸವವು ಗವ್ಹರ್ನರರ ಮನೆಯಲ್ಲಿ ನಡೆಯಿತು. ಪ್ರಮುಖರೆಲ್ಲರೂ ಆಮಂತ್ರಿಸಲ್ಪಟ್ಟಿದ್ದರು. ರಾಜ್ಯ ಕರ್ತರಿಗೆಲ್ಲ ಆನಂದದ ದಿನವದು. ರಾತ್ರಿಯಲ್ಲಿ ಭೋಜನ ಸಮಾರಂಭವೂ ಇದ್ದಿತು. ಜನ ನಕ್ಕು ನಲಿದಾಡಿತು. ಈ ಆನಂದವು ಕ್ಷಣಿಕವೆಂಬುದನ್ನು ಆಗ ಯಾರಾದರೂ ನಂಬಬಹುದಿತ್ತೇ? ಸಮಾರಂಭವು ಕೊನೆಗೊಂಡಿತು. ೧೨ ಗಂಟೆಯ ರಾತ್ರಿಯಲ್ಲಿ ರ್‍ಯಾಂಡಸಾಹೇಬನು ಮನೆಗೆ ಹೊರಟನು. ಅವನ ಹಿಂದೆ ಅಯರ್ಸ್ಟನ ಗಾಡಿಯು ಹೊರಟಿತು. ಗಣೇಶ ಖಿಂಡಿಯಿಂದ ಗಾಡಿಯು ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಯಾರೋ ಒಬ್ಬರು ರ್‍ಯಾಂಡ ಸಾಹೇಬನ ಗಾಡಿಯನ್ನು ಹಿಂದಿನಿಂದ ಹತ್ತಿ ಗುಂಡು ಹಾರಿಸಿದರು. ಎಡ ಪಕ್ಕಡಿಯಲ್ಲಿ ಗುಂಡು ಹೊಕ್ಕು ಅವನು ಮೂರ್ಛೆಹೋದನು. ಅಷ್ಟರಲ್ಲಿಯೇ ಎರಡನೇ ಗುಂಡುಹಾರಿತು. ಅಯರ್ಸ್ಟನು ಅಲ್ಲಿಯೇ ಮರಣ ಹೊಂದಿದನು. ರ್‍ಯಾಂಡ ಸಾಹೇಬನು ೧೧ ದಿನಗಳ ನಂತರ ದವಾಖಾನೆಯಲ್ಲಿ ಮರಣ ಹೊಂದಿದನು. ಈ ಸುದ್ದಿ ಬೆಳಗಾಗುವಷ್ಟರಲ್ಲಿ ಪುಣೆಯ ತುಂಬ ಹಬ್ಬಿತು. ಬೆಳಗಾಗುವದರಲ್ಲಿ ಊರಲ್ಲೆಲ್ಲ ಗುಪ್ತಚಾರರು ವ್ಯಾಪಿಸಿದ್ದರು. ಒಬ್ಬನು

ಟಿಳಕರ ಪ್ರತಿಕ್ರಿಯೆಯನ್ನು ತಿಳಿದುಕೊಳ್ಳಲು ಬಂದು ಎಲ್ಲವನ್ನೂ ಹೇಳಿದನು. ಆದರೆ ಟಿಳಕರಿಗೆ ಇದಾವುದೂ ಗೊತ್ತಿರಲಿಲ್ಲ.

ಗಣೇಶ ಖಿಂಡಿಯ ಬೀದಿಯು ದಿಗ್ಬಂಧಿಸಲ್ಪಟ್ಟಿತು. ಶೋಧಿಸಲಾಗಿ ಒಂದು ಗಟಾರದಲ್ಲಿ ಎರಡು ಕತ್ತಿಗಳು ಸಿಕ್ಕವು. ನಿಷ್ಣಾತರಾದ ಪೋಲೀಸರನ್ನು ಕರೆಯಿಸಿ, ಶೋಧಕ್ಕೆ ಪ್ರಾರಂಭಿಸಿದರು. ಕೊಲೆಗಡಕನನ್ನು ಹಿಡಿದು ಕೊಟ್ಟವರಿಗೆ ೨೦ ಸಾವಿರ ರೂಪಾಯಿಗಳ ಮೆಚ್ಚು ಎಂದು ಸಾರಿದರು. ಬ್ರುಯಿನ್ ಸಾಹೇಬನು ಈ ಪಡೆಯ ಮುಖ್ಯಸ್ಥನಿದ್ದನು. ಇದೆಲ್ಲಕ್ಕೂ ಪುಣೆಯ ನಾಗರಿಕರೇ ಕಾರಣರೆಂದು ವಿಶೇಷ ಪೋಲೀಸರನ್ನು ನೇಮಿಸಿದರು. ಪುಣೆಯ ನಾಗರಿಕರು ತಾವೇ ನಿಷೇಧದ ಸಭೆ ಜರುಗಿಸಬಹುದೆಂದು ಭಾವಿಸಿದ್ದ ಕಲೆಕ್ಟರನು ೪-೫ ದಿನ ಹಾದಿ ನೋಡಿ ತಾನೇ ಸಭೆ ಕರೆದನು.

ಈ ಕೊಲೆಯು ರಾಜಕೀಯ ಕ್ರಾಂತಿಕಾರಕರಿಂದ ಆಗಿರಬೇಕೆಂದು ಸರಕಾರದ ಗ್ರಹಿಕೆಯಾಗಿದ್ದಿತು. ಲ್ಯಾಬ್ ಸಾಹೇಬನು ಹೊಟ್ಟೆಯೊಳಗಿನ ವಿಷವನ್ನೆಲ್ಲ ಕಾರಿ "ನಿಮ್ಮಲ್ಲಿಯ ಕೆಲವರು ಅರಾಜಕತೆಯ ಬೀಜಗಳನ್ನು ಎಲ್ಲ ಕಡೆಗೆ ಬಿತ್ತುವದರಲ್ಲಿಯೇ ತಮ್ಮ ಆಯುಷ್ಯವನ್ನು ಕಳೆಯುತ್ತಿರುವರು. ಯಾರ ಲೇಖನದಲ್ಲಿ ರಾಜದ್ರೋಹವು ತುಂಬಿ ತುಳುಕುತ್ತಿರುವದೋ ಯಾರ ಮಾತಿನಲ್ಲಿ ಕೊಲೆಯ ಹೊರ್ತು ಬೇರೆ ಮಾತುಗಳಿಲ್ಲವೋ ಅಂಥಹರು ಹೊತ್ತಿಸಿದ ರಾಜಕೀಯ ಪ್ರಖರವಾದ ಜ್ವಾಲೆಯನ್ನು, ರಾಜನಿಷ್ಠೆಯ ನೀರಿನಿಂದ ಅದನ್ನು ಆರಿಸುವ ಶಕ್ತಿಯು ನಿಮ್ಮಂತಹರಲ್ಲಿದೆ'' ಎಂದು ಹೇಳಿದನು.

ಲ್ಯಾಬ್‌ರ ವಾಗ್ಬಾಣವು ಟಿಳಕರ ಮೇಲೆಯೇ ಎಂಬುದು ಮೇಲೆಯೇ ಕಾಣುತ್ತಿದ್ದಿತು. ಕರ್ಫ್ಯೂ ಆಜ್ಞೆಯು ಹೊರಟಿತು. ವಿಶೇಷ ಪೋಲೀಸರ ಖರ್ಚು ಕೂಡ ಪುಣೆಯ ಮೇಲೆಯೇ ಹೇರಲ್ಪಟ್ಟಿತು. ಪುಣೆಯ ಬ್ರಾಹ್ಮಣರ ಮೇಲೆ ವಿಶೇಷವಾಗಿ ಟಿಳಕರ ಮೇಲೆ ಪೋಲೀಸರ ಕಣ್ಣು ಕೂತಿತು. ತಮ್ಮ ಮೇಲೆ ಯಾವದೋ ಆಪತ್ತು ಬರುತ್ತಿದೆ ಎಂಬ ಸ್ವಪ್ನವನ್ನು ಟಿಳಕರು ಕಂಡರು. ಆದರೆ ಅದಕ್ಕವರು ಜುಮ್ಮೆನ್ನಲಿಲ್ಲ.

''ಸರಕಾರದ ತಲೆಯು ತಾಳಿಯ ಮೇಲಿರುವದೇ ?" ಎಂಬ ಅಗ್ರಲೇಖವನ್ನು ಬರೆದು, ಪುಣೆಯ ಮೇಲೆ ಹೇರಿದ ವಿಶೇಷ ಪೋಲೀಸರ ಖರ್ಚನ್ನು ಕಟುವಾಗಿ ಖಂಡಿಸಿದರು. ''ಮದವೇರಿದ ಮದ್ದಾನೆಯು ಗೊಂದಲಹಾಕುತ್ತ,

ಕಂಡದ್ದನ್ನು ಹಾಳುಮಾಡುವಂತೆ ಸರಕಾರದ ಸ್ಥಿತಿಯಾಗಿದೆ. ಕೊಲೆಗಡಕ ನಿಗೆ ಕೊಲೆಯಿಂದ ರಾವು ಹೊಡೆದಂತೆ, ಸರಕಾರಕ್ಕೂ ತಲೆಗೇರಿ, ಅದರ ತಲೆಯೂ ತಿರುಗಿ ಹೋಗಿದೆ." ಎಂದು ಟೀಕಿಸಿದರು. ಕೊಲೆಗಡಕನನ್ನು ಅವಶ್ಯವಾಗಿ ಗಲ್ಲಿಗೇರಿಸಿರಿ, ರಾಜದ್ರೋಹಿಗಳಿಗೆ ಕಾಯ್ದೆಯಂತೆ ಶಿಕ್ಷೆ ವಿಧಿಸಿರಿ, ಆದರೆ ನಿರಪರಾಧಿಗಳನ್ನು ಬೆದರಿಸಿ, ಅಂಜಿದವರ ಮೇಲೆ ಕಪ್ಪೆಯನ್ನೊಗೆಯುವದು ಮುತ್ಸದ್ಧಿತನವೂ ಅಲ್ಲ, ಬುದ್ಧಿವಂತಿಕೆಯ ಲಕ್ಷಣವೂ ಅಲ್ಲ. ಎಂದು ಟೀಕಿಸಿದರು (ಕೇಸರಿ ೬-೭-೧೮೯೭)

ಮುಂದಿನ ಸಂಚಿಕೆಯಲ್ಲಿ "ರಾಜ್ಯವಾಳುವದೆಂದರೆ ಸೇಡುತೀರಿಸಿ ಕೊಳ್ಳುವದಲ್ಲ" ಎಂದು ಬರೆದು ಸರಕಾರವನ್ನು ಎಚ್ಚರಿಸಿದರು. "ರಾಜ್ಯವಾಳುವದೆಂದರೆ ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಜನರನ್ನು ಬೆದರಿಸುವದಲ್ಲ. ತಮ್ಮ ಶಕ್ತಿಯನ್ನು ದುಷ್ಟರ ನಿಗ್ರಹಕ್ಕಾಗಿ ಶಿಷ್ಟರ ರಕ್ಷಣೆಗಾಗಿ, ಮಾಡಬೇಕು. ಕೊಲೆ ಕಳವುಗಳು ಸಾಮಾನ್ಯ ಜೀವನದಲ್ಲಿಯೂ ನಡೆಯುತ್ತವೆ. ಅವುಗಳನ್ನು ನಿಗ್ರಹಿಸಬೇಕು. ನಿಗ್ರಹಿಸುವ ಶಕ್ತಿಯಿಲ್ಲದವನು ರಾಜ್ಯವಾಳಲು ಅಯೋಗ್ಯನು. ಕೊಲೆಯಾದೊಡನೆ ಸೈನಿಕರನ್ನು ಕರೆಯಿಸುವದು ನ್ಯಾಯವಲ್ಲ. ರಾಜನೀತಿಯಲ್ಲ." ಎಂದು ಉಗ್ರವಾಗಿ ಟೀಕಿಸಿದರು. ಪಾರ್ಲಿಮೆಂಟಿನಲ್ಲಿ ಒಬ್ಬ ಸದಸ್ಯನು 'ಟಿಳಕರ ಭಾಷಣಗಳಲ್ಲಿ ರಾಜದ್ರೋಹವಿರುವದೇ', ಎಂದು ಸ್ಟೇಟ ಸೆಕ್ರೆಟರಿಗೆ ಕೇಳಿದನು. ಇದು ಕಾಯದೆಯ ಪ್ರಶ್ನೆಯಿದ್ದು ಮುಂಬಯಿ ಸರಕಾರವು ಇನ್ನೂ ನಿರ್ಣಯಿಸಿಲ್ಲವೆಂದು ಉತ್ತರ ಕೊಟ್ಟನು. ಇದರಿಂದ ಟಿಳಕರ ಮೇಲೆ ಖಟ್ಲೆಯಾಗುವದೆಂದು ಸ್ಪಷ್ಟವಾಯಿತು.

**ಬೆಳೆಯುತ್ತಿರುವ ಟಿಳಕರು**

ಸಾರ್ವಜನಿಕ ಜೀವನದಲ್ಲಿ ಕಾಲಿಟ್ಟ ಟಿಳಕರಿಗೂ ಈಗಿರುವ ಟಿಳಕರಿಗೂ ಅಜಗಜಾಂತರ ವಿದ್ದಿತು. ಮೊದಲು ಸುಧಾರಕರ ಪ್ರತಿಸ್ಪರ್ಧಿಗಳೂ ಪ್ರಾಚೀನ ಸಂಸ್ಕೃತಿಯ ಪುರಸ್ಕರ್ತರೂ ಎಂದು ಪ್ರಸಿದ್ಧರಾದರು. ೧೮೯೩ ರ ನಂತರ ಹಿಂದೂ ಮುಸ್ಲೀಮರ ದಂಗೆ, ಬರಗಾಲ, ಪ್ಲೇಗಿನ ಹಾವಳಿಗಳಲ್ಲಿ ಅವರು ಮಾಡಿದ ಉಗ್ರ ಟೀಕೆಗಳಿಂದ ಸರಕಾರವನ್ನು ನಿರ್ಭಿಡೆಯಿಂದ ಟೀಕಿಸುವ ಟೀಕಾಕಾರರು, ಜನಬಲವನ್ನು ಬೆಳೆಯಿಸುವ ಕುಶಲ ಧನ್ವಂತ್ರಿಗಳು ಎಂದು ಹೆಸರು ಪಡೆದರು. ಸರಕಾರವು ಪ್ರಬಲ

ಶತ್ರು ಒಬ್ಬನು ನಿರ್ಮಾಣವಾಗುತ್ತಿದ್ದಾನೆಂದೂ ತಮ್ಮ ಮರ್ಮಕ್ಕೆ ಬಲವಾದ ಪೆಟ್ಟು ಹಾಕುವ ಶಕ್ತಿಯುಳ್ಳವನೆಂದೂ ಮನಗಂಡರು. ತಮ್ಮ ಚಿತ್ರಗುಪ್ತರ ಯಾದಿಯಲ್ಲಿ ಟಿಳಕರಿಗೆ ಸ್ಥಾನಕೊಟ್ಟರು. ವಿಶ್ವವಿದ್ಯಾಲಯ, ಕಾಯದೆ ಕೌನ್ಸಿಲ್‌ಗಳಲ್ಲಿ ಬಹುಮತದಿಂದ ಆರಿಸಿ ಬಂದುದರಿಂದ ಅವರ ಲೋಕಪ್ರಿಯತೆಯು ಸರಕಾರದ ಕಣ್ಣಲ್ಲಿ ಉಕ್ಕಿತು. ಇವರನ್ನು ಹೀಗಿಯೇ ಬೆಳೆಯಗೊಟ್ಟರೆ ತಮಗೇ ಭಾರವಾಗುವರೆಂದು ೧೮೯೫ ರಲ್ಲಿಯೇ ಸರಕಾರಕ್ಕೆ ಕಂಡು ಬಂದಿತ್ತು. ಬರಗಾಲ ಹಾಗೂ ಪ್ಲೇಗಗಳಲ್ಲಿ ಅವರು ಮಾಡಿದ ಅಪೂರ್ವ ಸೇವೆಯಿಂದ ಅವರ ಮುಂದಾಳುತನವು ರಾಷ್ಟ್ರದ ಅಂತಃಕರಣ ದಲ್ಲಿ ದೃಡವಾಗಿ ಬೇರೂರಿತು. ರಾಜಕೀಯ ಕ್ಷಿತಿಜದ ಮೇಲೆ ಉದಯೋ ನ್ಮುಖ ತಾರೆಯಂತೆ ಟಿಳಕರು ಪ್ರಕಾಶಿಸಹತ್ತಿದರು.

ಟಿಳಕರು ಅಸಂತುಷ್ಟ ಜನರ ಮುಂದಾಳುಗಳಾಗಿದ್ದರೂ ಅಸಂತೋ ಷಕ್ಕೆ ಅವರು ಕಾರಣರಿರಲಿಲ್ಲ, ಅದಕ್ಕೆ ಅಧಿಕಾರಿಗಳ ಅನ್ಯಾಯದ ಆಳಿ ಕೆಯೇ ಕಾರಣವಾಗಿದ್ದಿತು, ರ್‍ಯಾಂಡ ಸಾಹೇಬರ ಕೊಲೆಗೂ ಇದೇ ಕಾರಣವು. ಎಂಬ ಮಾತು ಯಾರಿಗೂ ಹೊಳೆಯುವಂತಹದು. ಆಂಗ್ಲೋ ಇಂಡಿಯನ್ ವೃತ್ತಪತ್ರಗಳು ಸುಮ್ಮ ಸುಮ್ಮನೆ ಟಿಳಕರ ಹೆಸರಿನಲ್ಲಿ ಕಲ್ಲೊಡೆಯುತ್ತಿದ್ದವು. ಈ ಕೊಲೆಯ ಹಿಂದೆ ಪುಣೆಯ ಬ್ರಾಹ್ಮಣರ ಗುಪ್ತ ಕಾರಸ್ಥಾನವಿದೆ. ಟಿಳಕರು ಅದರ ಮುಂದಾಳುಗಳು ಎಂದು ತಲೆಯಲ್ಲಿ ತುಂಬಿ ಕೊಂಡು ಅದನ್ನೇ ಬಿಂಬಿಸಲು ಪ್ರಯತ್ನಿಸುತ್ತಿದ್ದವು. ಮುಂಬಯಿ ಟಾಯಿಮ್ಸ ಪತ್ರಿಕೆಯು ಇದರಲ್ಲಿ ಮುಂದಾಳಾಗಿದ್ದಿತು. ಇದರಿಂದ ಯುರೋಪಿಯನ್ನರ ಮನಸ್ಸು ಹಿಂದುಗಳೊಡನೆ ಮಾತನಾಡದಷ್ಟು ಕಲುಷಿತವಾಯಿತು. ರ್‍ಯಾಂಡ ಸಾಹೇಬನ ಸ್ಮಶಾನ ಯಾತ್ರೆಗೆ ಹೋದ ಭಂಡಾರಕರರಂಥವರಿಗೂ ಕೂಡ ಅಪಮಾನಮಾಡಲ್ಪಟ್ಟಿತು.

ವೃತ್ತಪತ್ರಗಳ ಕೂಗಾಟವನ್ನು ಲಕ್ಷಿಸಿ, ಟಿಳಕರು ಗಂಭೀರವಾದ ಎಚ್ಚರಿಕೆಯನ್ನು ಕೊಟ್ಟರು "ವೃತ್ತಪತ್ರಗಳ ಸಂಪಾದಕರು ಸಿಟ್ಟಿನ ಭರದಲ್ಲಿ ಬಡಬಡಿಸಹತ್ತಿದ್ದಾರೆ. ಪ್ಲೇಗ ನಿವಾರಕ ಕಮಿಟಿಗೆ ಸ್ವಕೀಯರ ವಿರೋಧ ವನ್ನು ಲೆಕ್ಕಿಸದೆ, ಸಹಾಯವನ್ನು ಮಾಡಿದವರು ಪುಣೆಯ ಬ್ರಾಹ್ಮಣ ಮುಖಂಡರು, ಇದರ ಯೋಗ್ಯ ವಿಚಾರ ಮಾಡುವಷ್ಟು ತಾಳ್ಮೆಯೇ ಅವರಲ್ಲಿ

ಉಳಿದಿಲ್ಲ. ಸಂಕಟ ಸಮಯದಲ್ಲಿ ಪುಣೆಯ ನಾಗರಿಕರು ತೋರಿಸಿದ ಸಂಯಮದ ನೆನಪನ್ನು ಒಬ್ಬ ತಲೆತಿರುಕನ ಕೃತ್ಯದಿಂದ ಸರಕಾರವು ಮರೆತುದು ಕರುಣಾಸ್ಪದವಾಗಿದೆ. ಯಾರನ್ನಾದರೂ ದೋಷಿಗಳನ್ನು ಮಾಡುವದಾದರೆ, ಪ್ರಜರ ದುಃಖಗಳನ್ನು ದುರ್ಲಕ್ಷಿಸಿದ ಸರಕಾರದ ಅಧಿಕಾರಿಗಳನ್ನೇ ಮಾಡಬೇಕಾಗುವದು. ಎಲ್ಲ ವೃತ್ತಪತ್ರಗಳು ರಾಜದ್ರೋಹಿಯೆಂದು ಮುದ್ರೆ ಒತ್ತುವದೆಂದರೆ ತಮ್ಮ ಹೊಣೆ ಹಾರಿಸಿಕೊಂಡು ಎರಡನೆಯವರ ಮೇಲೆ ದೋಷಹೊರಿಸಿದಂತೆಯೇ ಸರಿ. ಇದು ತೀರ ಅನ್ಯಾಯವು" ಎಂದು ಬರೆದರು.

ಸರಕಾರವು ದೇಶಭಕ್ತ ಸಂಪಾದಕರ ಮೇಲೆ ಕೊಲೆಯ ಹೊಣೆಯನ್ನು ಹೊರಿಸುತ್ತಿದ್ದರೆ, ಟಿಳಕರು, ಸರಕಾರವೇ ಇದಕ್ಕೆ ಹೊಣೆಗಾರವಾಗುವದೆಂದು ನಿರ್ಭಯವಾಗಿ ಪ್ರತಿಪಾದಿಸಲು ಪ್ರಾರಂಭಿಸಿದರು. "ದೇಶಭಕ್ತರಾದ ಸಂಪಾದಕರು ಸರಕಾರದ ದಬ್ಬಾಳಿಕೆಯನ್ನು ಬಯಲಿಗೆಳೆಯುವದಲ್ಲದೆ ಅದನ್ನು ಎದುರಿಸುವ ಕಾಯಸೇಬದ್ಧವಾದ ಮಾರ್ಗ ಹಾಗೂ ಸಾಧನಗಳನ್ನು ಸೂಚಿಸುವದೂ ಅವರ ಕರ್ತವ್ಯವಾಗಿದೆ. ಪರಕೀಯ ಸತ್ತೆಯನ್ನು ವಿರೋಧಿಸುವದು ಮತ್ತು ವಿರೋಧಿಸಲು ಜನರನ್ನು ಪ್ರೋತ್ಸಾಹಿಸುವದು ರಾಜದ್ರೋಹವಲ್ಲ. ತಮ್ಮ ತೊಂದರೆಗಳನ್ನು ನಿವಾರಿಸಿಕೊಳ್ಳಲು ಇಲ್ಲವೆ ಸ್ವಾತಂತ್ರ್ಯವನ್ನು ಸಂಪಾದಿಸಲು ಸಶಸ್ತ್ರ ಬಂಡನ್ನು ಎಬ್ಬಿಸುವದು ಮಾತ್ರ ರಾಜದ್ರೋಹ. ಯಾರಾದರು ಪ್ರತ್ಯಕ್ಷವಾಗಿ ಹಿಂಸಾತ್ಮಕ ಕೃತಿಗೆ ಪ್ರಚೋದಿಸುತ್ತಿದ್ದರೆ ಅದು ರಾಜದ್ರೋಹ. ಅಂತಹರನ್ನು ಶಿಕ್ಷಿಸುವದು ಸರಕಾರದ ಕರ್ತವ್ಯವು; ಸರಕಾರವು ಕಾಯಿದೆಯಂತೆ ನಡೆಯುತ್ತ ಶಾಂತವಾಗಿದ್ದರೆ ಜನರೂ ಶಾಂತರಾಗಿರುವರು. ಸಶಸ್ತ್ರ ರಾಜ್ಯಕ್ರಾಂತಿಯನ್ನು ತಪ್ಪಿಸುವ ಹೊಣೆಯು ಮುಖಂಡರ ಮೇಲೆ ಇರುವಂತೆ ಸರಕಾರಿ ನವಕರರ ಮೇಲೆಯೂ ಇದೆ. ಅಧಿಕಾರಿಗಳು ಕರ್ತವ್ಯಚ್ಯುತರಾಗಿ ಅದರ ಪರಿಣಾಮದಿಂದ ಹಿಂಸಾತ್ಮಕ ಕೃತಿಗಳು ನಡೆದರೆ ಅದರ ದೋಷವು ಮುಖಂಡರ ಮೇಲೆ ಬರುವದಿಲ್ಲ. ದೇಶಭಕ್ತಿ, ಧರ್ಮಶ್ರದ್ಧೆ ಅನ್ಯಾಯಗಳ ಪ್ರತಿಕಾರ ಮಾಡುವ ಉಪದೇಶವನ್ನು ಮುಖಂಡರು ಮಾಡುತ್ತಾರೆ. ಆದ್ದರಿಂದ ಹಿಂಸಾತ್ಮಕ ಕೃತಿಗಳ ಹೊಣೆ ಅವರ ಮೇಲೆ ಹೊರಿಸುವದು ಅನ್ಯಾಯ. ಯಾವ ಲೇಖವು ರಾಜ್ಯ

ಕ್ರಾಂತಿಗೆ ಕಾರಣವಾಗುವದೋ ಅದು ರಾಜ್ಯದ್ರೋಹ ಮತ್ತು ರಾಜ್ಯಕಾರ ಭಾರದಲ್ಲಿಯ ತಪ್ಪುಗಳನ್ನು ಮತ್ತು ಅನ್ಯಾಯಗಳನ್ನು ಎತ್ತಿತೋರಿಸುವದು ರಾಜ್ಯದ್ರೋಹವಲ್ಲವೆಂದು ಕಾಯದೆಯಲ್ಲಿದೆ. ಆದುದರಿಂದ ಸರಕಾರಿ ಅನ್ಯಾಯದ ಕೃತ್ಯಗಳನ್ನು ಉಗ್ರವಾಗಿ ಟೀಕಿಸುವದನ್ನು ನಾವೇಕೆ ಬಿಡ ಬೇಕೆಂಬುದೇ ಅರ್ಥವಾಗುವದಿಲ್ಲ" ಎಂದು ಪ್ರಶ್ನಿಸಿದರು.

ಇದರಿಂದ ಆಂಗ್ಲೋ ಇಂಡಿಯನ್ ಪತ್ರಿಕೆಗಳ ತಾಳವೇ ಉಳಿಯ ಲಿಲ್ಲ. ಟಿಳಕರ ಮೇಲೆ ರಾಜದ್ರೋಹದ ಖಟ್ಲೆಯನ್ನು ಹಾಕಿರಿ. ಅವರ ಬರೆಹಗಳೇ ರ್‍ಯಾಂಡರ ಕೊಲೆಗೆ ಕಾರಣ ಎಂದು ರಂಭಾಟವನ್ನೆಬ್ಬಿಸಿದವು. ನೀವು ಖಟ್ಲೆಯನ್ನು ಹಾಕದಿದ್ದರೆ ನಿಮಗೂ ಲಾರ್ಡ ಡಫರಿನ್‌ರಂತೆ ಬಹಿ ಷ್ಕಾರ ಬರುವದು, ಎಂದು ಯುರೋಪಿಯನ್ನರಿಂದಲೂ ಆಂಗ್ಲೋ ಇಂಡಿ ಯನ್ನರಿಂದಲೂ ಗವ್ಹರ್ನರರಿಗೆ ಬೆದರಿಕೆ ಹಾಕಲ್ಪಟ್ಟಿತು.

**ತೆರೆಯ ಮರೆಯಲ್ಲಿ**

ಸರಕಾರವು ಈ ವಿಷಯವಾಗಿ ತೆರೆಯಮರೆಯಲ್ಲಿ ನಡೆಸಿದ ವರದಿಯು ಮನೋರಂಜಕವಾಗಿದೆ. ಪೋಲೀಸ ಸುಪರಿಂಟೆಂಡರು, ಸಿಟಿ ಮ್ಯಾಜಿಸ್ಟ್ರೇಟರು ಸರಕಾರದ ವಿರೋಧವಾಗಿರುವ ೧೭ ಜನರ ಯಾದಿಯನ್ನು ಸಿದ್ಧಪಡಿಸಿದರು. ಅವರಲ್ಲಿ ಟಿಳಕರು ನಾತು ಬಂಧುಗಳೂ ಇದ್ದರು. ಸರಕಾರದ ಗೃಹಶಾಖೆಯ ಸಚಿವರು ಈ ವಿಷಯವಾಗಿ ವಿಶೇಷ ಪರಿಶೀಲನೆಯನ್ನು ನಡೆಸಲು ಸೆಂಟ್ರಲ್ ಡಿವ್ಹಿಜನ್ನಿನ ಕಮಿಶನ್‌ರನ್ನು ಪ್ರತ್ಯೇಕವಾಗಿ ನೇಮಿಸಿದರು. ಈ ಕಮಿ ಶನ್‌ರು ದೇಶೀ ವೃತ್ತಪತ್ರಗಳ ಬಗ್ಗೆ ಈ ರೀತಿಯಾಗಿ ಹೇಳಿದ್ದಾರೆ.

"ದೇಶಿ ವೃತ್ತ ಪತ್ರಗಳು ಅನೇಕ ದಿನಗಳಿಂದ ಸರಕಾರದ ಹಾಗೂ ಅದರ ಕೃತಿಗಳ ಬಗ್ಗೆ ವಿರೋಧ ಮಾಡುತ್ತಲಿವೆ. ಮತ್ತು ಬಲ ಪ್ರಯೋಗದಿಂದ ಇವುಗಳನ್ನೆದುರಿಸಲು ಬಹಿರಂಗವಾಗಿ ಪ್ರಚೋದಿ ಸುತ್ತಲಿವೆ."

ಆಕಾಲದ ಸ್ಥಿತಿಯನ್ನು ಕೆಳಗಿನಂತೆ ವರ್ಣಿಸಿದ್ದಾರೆ. ''ಪುಣೆಯಲ್ಲಿ ಸರಕಾರಕ್ಕೆ ವಿರೋಧಿಯಾದ ಪಂಗಡ ಒಂದು ಇದ್ದು, ಅದರಲ್ಲಿ ಹೆಚ್ಚಾಗಿ ಬ್ರಾಹ್ಮಣರೇ ಇರುತ್ತಾರೆ. ಇವರ ಕೈಯಲ್ಲಿ ಅನೇಕ ವೃತ್ತಪತ್ರಗಳಿವೆ. ಪ್ರಮುಖ ಸದಸ್ಯರೆಲ್ಲ ಹೆಸರಾಗಿದ್ದಾರೆ. ಇವರು ಸರಕಾರವನ್ನು ತೊಡಕಿ

ನಲ್ಲಿ ಸಿಗಿಸಲು ಕೈಕೊಂಡ ಮೊದಲನೆಯ ಕಾರ್ಯವೆಂದರೆ ಗೋಹತ್ಯೆಯ ವಿರುದ್ಧ ಚಳವಳಿ. ಇದರಿಂದ ಹಿಂದೂ ಮುಸಲ್ಮಾನರ ದಂಗೆಗಳು ಪ್ರಾರಂಭವಾದವು. ಈ ಚಳವಳಿಯು ಯಶಸ್ವಿಯಾಗದ್ದನ್ನು ಕಂಡು, ಗಜಾನನ ಉತ್ಸವವನ್ನು ಹೊಸ ಪದ್ಧತಿಯಿಂದ ಪ್ರಾರಂಭಿಸಿದರು. ಮಸೀದಿಗಳ ಮುಂದೆ ವಾದ್ಯ ಸಹಿತ ಮೆರವಣಿಗೆ ತೆಗೆಯುವದು ಅವುಗಳಲ್ಲೊಂದು ಕಾರ್ಯಕ್ರಮವಾಗಿದ್ದಿತು. ಇದರಿಂದ ಪುನಃ ಹಿಂದೂ ಮುಸ್ಲಿಂ ದಂಗೆಗಳು ತಲೆಯೆತ್ತಿದವು. ವಾದ್ಯಗಳ ವಿಷಯದಲ್ಲಿಯೂ ನಿರ್ಬಂಧ ಹಾಕಲಾಯಿತು. ಈ ನಿರ್ಬಂಧಗಳವಿರುದ್ಧ ಪ್ರಚೋದಿಸುವದು ಸಾಧ್ಯವಾಗಲಿಲ್ಲ. ಆದರೆ ಅಷ್ಟರಲ್ಲಿ ಬರಗಾಲ ಬಿದ್ದಿತು. ಚಳವಳಿಗಾರರೂ ಫ್ಯಾಮಿನ್ ಕೋಡಿನ ಬಗ್ಗೆ ತಪ್ಪು ತಿಳುವಳಿಕೆಯನ್ನು ಮಾಡಿ ಬರಗಾಲದ ಕೆಲಸಗಾರರನ್ನು ನೇಮಿಸಿಕೊಳ್ಳುವ ಬಗ್ಗೆಯೂ ಮತ್ತು ಭೂ ಕಂದಾಯದ ಬಗ್ಗೆಯೂ ಜನರನ್ನು ಪ್ರಚೋದಿಸಹತ್ತಿದರು. ಇದೇ ಸಮಯದಲ್ಲಿ ಶಿವಾಜಿಯ ಉತ್ಸವವನ್ನು ಪ್ರಾರಂಭಿಸಿ, ಪ್ರಚೋದನೆಯ ಕಾರ್ಯವನ್ನು ಮುಂದರಿಸಿದರು. ಅಫಜೂಲ್‌ಖಾನನ ಕೊಲೆಯನ್ನು ಹೊಗಳಿ ಜನರನ್ನು ಹಿಂಸಾಚಾರಕ್ಕೆ ಪ್ರಚೋದಿಸಿದರು. ಅಷ್ಟರಲ್ಲಿ ಪ್ಲೇಗವು ಬಂದಿತು. ಸರಕಾರವು ಕೈಕೊಂಡ ನಿವಾರಣೋಪಾಯಗಳನ್ನು ತೀವ್ರವಾಗಿ ಖಂಡಿಸಿ ಸರಕಾರವನ್ನು ಕೀಳುಗಳೆಯಲು ಅವರಿಗೆ ಮತ್ತೊಂದು ಅವಕಾಶ ದೊರೆಯಿತು. ಈ ಅವಧಿಯಲ್ಲಿ ವೃತ್ತಪತ್ರಿಕೆಗಳು ಹಿಂದೆ ಎಂದೂ ಮಾಡದಷ್ಟು ಸರಕಾರವನ್ನು ಕಟುವಾಗಿ ಟೀಕಿಸಿದವು. ಪ್ಲೇಗ ಕಡಿಮೆಯಾದ ನಂತರ ಕೆಲವು ದಿನಗಳ ವರೆಗೆ ಟೀಕೆಯು ಕಡಿಮೆಯಾಯಿತು ಆದರೆ ಪ್ಲೇಗ ನಿವಾರಣೆಯನ್ನು ಕೈಕೊಂಡ ಅಧಿಕಾರಿಗಳ ಅಮಾನುಷಕೊಲೆ ಮಾಡುವ ರಾಕ್ಷಸೀ ಯೋಜನೆಯನ್ನು ಕಾರ್ಯಗತ ಮಾಡಲು ಮಹಾರಾಣಿಯವರ ವಜ್ರ ಮಹೋತ್ಸವದ ದಿನವನ್ನು ನಿಶ್ಚಯಿಸಲಾಗಿತ್ತು. ಅಂದಿನಿಂದಲೂ ನಾತು ಬಂಧುಗಳೇ ಕೊಲೆಮಾಡಿರಬೇಕೆಂದು ದಟ್ಟವಾರ್ತೆಯಿದೆ. ನಾತು ಕುಟುಂಬದ ಇಬ್ಬರು ಸರಕಾರೀ ವಿರೋಧಿ ಪಂಗಡದಲ್ಲಿರುವರೆಂದು ಹೇಳಲಾಗುತ್ತಿದೆ. ಇವರಲ್ಲಿ ಒಬ್ಬರಿಗೆ ಪ್ಲೇಗ ನಿವಾರಕ ಕ್ರಮಗಳ ಬಗ್ಗೆ ದ್ವೇಷವಿದ್ದುದು ಪ್ರಸಿದ್ಧವಿದೆ. ಮತ್ತು ಅವರು ಆಡಳಿತೆಗಾರರ ಮೇಲೆ

ಸೇಡು ತೀರಿಸಿಕೊಳ್ಳುವ ಮಾತನ್ನು ಆಡುತ್ತಿದ್ದರೆಂದು ಹೇಳಲಾಗುತ್ತಿದೆ. ಇವರನ್ನು ಜೂನ ೧೮ಕ್ಕೆ ಕ್ವಾರಂಟಾಯಿನ್‌ದಿಂದ ಬಿಡಲಾಗಿದ್ದು ೨೨ ಕ್ಕೆ ರ್‍ಯಾಂಡರವರ ಕೊಲೆಯಾಗಿದೆ. ರಾಜದ್ರೋಹಿ ಬ್ರಾಹ್ಮಣರ ಪಂಗಡವು ಈ ಕೊಲೆಯಲ್ಲಿ ಸೇರಿದೆಯೆಂಬುದಕ್ಕೆ ಇದೇ ಸಾಕ್ಷಿ''.

ಪೋಲೀಸ ಪಡೆಯ ಅಧಿಕಾರಿಗಳಾದ ಬ್ರುಯಿನ್‌ರವರು ಈ ವಿಚಾರ ಸರಣಿಯನ್ನು ಮುಂದರಿಸಿ ಟಿಳಕ ಮತ್ತು ನಾತು ಬಂಧುಗಳನ್ನು ಸೆರೆಹಿಡಿದರೆ, ಕೊಲೆಯ ಬಗ್ಗೆ ವಿಶೇಷ ಸಂಗತಿಗಳು ಮತ್ತು ಸಾಕ್ಷಿಗಳು ದೊರೆಯುವವೆಂದು ಅಭಿಪ್ರಾಯ ಪಟ್ಟರು. ಡಿ. ಎಸ್, ಪಿ. ಯವರೂ ಯಾದಿಯಲ್ಲಿ ಸೂಚಿಸಿದ ೧೨ ಜನರನ್ನು ಬಂಧಿಸಿದರೆ ಊರು ಕೆಲವು ವರ್ಷಗಳವರೆಗಾದರೂ ಶಾಂತವಾಗುವದೆಂದು ಅಭಿಪ್ರಾಯ ವ್ಯಕ್ತಮಾಡಿದ್ದರು. ಪೋಲೀಸ ಅಧಿಕಾರಿಗಳು ಟಿಳಕರ ವಿರೋಧಿ ಗುಂಪಿನೊಂದಿಗೆ ನಡೆಯಿಸಿದ ಮಾತುಕತೆಗಳ ವರದಿ ಮತ್ತು ಕಮೀಶನರರ ವರದಿಗಳು ಸರಕಾರದ ಗ್ರಹಶಾಖೆಯ ಕಾರ್ಯದರ್ಶಿಗಳಿಗೆ ಕಳಿಸಲ್ಪಟ್ಟವು. (ಪೋಲೀಸರ ಈ ಸಂಭಾಷಣೆಯಲ್ಲಿ ಟಿಳಕ ಮತ್ತು ಅವರ ಪಂಗಡದ ಸಂಬಂಧವು ಈ ಕೊಲೆಯಲ್ಲಿ ಯಾವುದಾದರೂ ರೀತಿಯಲ್ಲಿರಬೇಕೆಂಬ ಅಭಿಪ್ರಾಯವು ವ್ಯಕ್ತಪಡಿಸಲ್ಪಟ್ಟಿತ್ತು.) ಗ್ರಹಶಾಖೆಯ ಕಾರ್ಯದರ್ಶಿಗಳು ಈ ಎಲ್ಲ ವಿಷಯಗಳನ್ನು ನಿರೀಕ್ಷಿಸಿ, ಇದಕ್ಕೆ ರಾಜಕೀಯ ಕಾರಣವಿದೆ ಎಂದು ನಿರ್ಧರಿಸಿ, ಈ ಕೆಳಗಿನ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

''ಕೊಲೆಗಳು ನಡೆದ ರೀತಿಯನ್ನು ನೋಡಿದರೆ, ಇದನ್ನು ಸಾಧಿಸಲು ಒಳ್ಳೇ ದಕ್ಷತೆಯ ಪೂರ್ವಯೋಜನೆ ಮಾಡಿದ್ದರೆಂದು ಕಂಡುಬರುವದು. ಮತ್ತು ಇದರ ಹಿಂದೆ ಗುಪ್ತ ಕಾರಸ್ಥಾನವೂ ಕಾಣುತ್ತದೆ. ಪುಣೆಯಲ್ಲಿ ಇಂತಹ ದುರ್ಬುದ್ಧಿಯ ಜನರ ಗುಂಪು ಇರುತ್ತಿದ್ದು, ನಾತು ಹಾಗು ಟಿಳಕರ ಗುಂಪೇ ಮೂಲ ಪ್ರವರ್ತಕರೆಂದು ದಟ್ಟವಾದ ಸುದ್ದಿಯಿದೆ. ಈ ಕಾಲದ ವೃತ್ತ ಪತ್ರಗಳ ಲೇಖನಗಳನ್ನು ಪರಿಶೀಲಿಸಿದರೆ, ಅವುಗಳಿಂದ ಟಿಳಕರ ಮತ್ತು ಉಳಿದ ಕೆಲವರ ಮೇಲೆ, ೧೨೪ನೇ ಅ. ಕಲಮಿನ ಪ್ರಕಾರ ಯಶಸ್ವಿಯಾಗಿ ಖಟ್ಲೆ ಹಾಕಲು ಬರುವದೆಂದು ಕಾಣುತ್ತದೆ. ಉಳಿದ ಪ್ರೊಫೆಸರ ಮತ್ತು ಶೈಕ್ಷಣಿಕ ಸಂಸ್ಥೆಗಳ ಬಗ್ಗೆ ಶಿಕ್ಷಣ ಖಾತೆಯು ವಿಚಾರ ನಡೆಯಿಸಿದೆ.

ಟಿಳಕರ ಬಗ್ಗೆ ಅವರು ಹೀಗೆ ಬರೆದಿರುತ್ತಾರೆ.

"ನಾನು ಕಳೆದ ವರ್ಷವೇ ಮೊದಲು ಬಾರೆ ಲೇಜಿಸ್‌ಲೇಟಿವ್ಹ ಕೌನ್ಸಿಲ್ಲಿದ ಸದಸ್ಯರೆಂದು ಅವರ ಬಗ್ಗೆ ಕೇಳಿದೆ. ಅವರು ಒಳ್ಳೇ ಯೋಗ್ಯತೆ ಉಳ್ಳವರೆಂದೂ ದುಷ್ಟಸ್ವಭಾವದವರೆಂದೂ ಮತ್ತು ಶಿವಾಜಿ ಉತ್ಸವದ ಪ್ರವ ರ್ತಕರೆಂದೂ ತಿಳಿದಿದ್ದೆ. ಇತ್ತೀಚೆಗೆ ಅವರು ಅತೃಪ್ತ ಮತ್ತು ಅಸಮಾಧಾನ ಗಳನ್ನು ಉತ್ತೇಜಿಸುವ ಕಿಡಿಗೇಡಿ ವೃತ್ತ ಪತ್ರದ ಸಂಪಾದಕರೆಂದೂ ತಿಳಿದು ಬಂದಿದೆ. ಆದರೆ ಟಿಳಕರ ಪ್ರಸಿದ್ಧ ಶಿಷ್ಯನಾದ ನಾತುನ ಹೆಸರನ್ನು ಮಾತ್ರ ನಾನು ಎಂದೂ ಕೇಳಿರಲಿಲ್ಲ."

ಅವರು ಕಾಗದ ಪತ್ರಗಳನ್ನು ನೋಡಿ ತಮ್ಮ ಅಭಿಪ್ರಾಯವನ್ನು ಹೀಗೆ ಬರೆದಿದ್ದಾರೆ.

"೨೨ ನೇ ಜೂನಕ್ಕೆ ನಡೆದ ಕೊಲೆಯ ಪೂರ್ವದ ಮತ್ತು ನಂತರದ ಪರಿಸ್ಥಿತಿಯನ್ನನುಲಕ್ಷಿಸಿ ಇಂಥ ದುರ್ಘಟನೆಗಳನ್ನು ಹತ್ತಿಕ್ಕಲು ಸರಕಾರವು ನಿರ್ಧರಿಸಿದೆ, ಮತ್ತು ಇಂತಹ ಘಟನೆಗಳ ಬಗ್ಗೆ ಸಹಾನುಭೂತಿಯನ್ನು ತೋರುವ ಇಲ್ಲವೆ ಸಹಾನುಭೂತಿಯನ್ನು ತಳೆಯುವ ಸಮಾಜ ಅಥವಾ ಗುಂಪು ಅದರ ಫಲಭೋಗ ಉಣ್ಣಬೇಕಾಗುವದೆಂಬುದನ್ನು ಜನತೆಗೆ ತೋರಿಸಿ ಕೊಡುವ ನಿಶ್ಚಯವನ್ನೂ ಮಾಡಿದೆ"

ಕೆಲವೊಂದು ಜನರನ್ನು ಬಂಧಿಸುವದರಿಂದ ಪುಣೆ ನಗರ ಅಥವಾ ಮುಂಬಯಿ ಪ್ರಾಂತದಲ್ಲಿ ಶಾಂತತೆ ಉಂಟಾಗುವದೆಂದೆನಿಸಿದರೆ, ಅಂಥ ಕೆಲಸವನ್ನು ಮಾಡಬಹುದೆಂದು ಅಭಿಪ್ರಾಯಪಟ್ಟರು.

"ಶಾಂತತಾ ಭಂಗವನ್ನುಂಟು ಮಾಡುವ ಚಳವಳಿಯಲ್ಲಿ ಮಿ. ಟಿಳಕ ಮತ್ತು ನಾತು ಬಂಧುಗಳು ಪ್ರಮುಖರಿರುವರೆಂಬ ಈಗಿನ ಅಭಿಪ್ರಾಯಕ್ಕೆ ಈ ಹಿಂದೆ ಬಂದ ವರದಿಗಳು ಪುಷ್ಟಿ ಕೊಡುತ್ತವೆ" ಎಂದು ಬರೆದು, ಕೊನೆಯು ದಾಗಿ ಅವರು ಹೀಗೆ ಬರೆದಿದ್ದಾರೆ.

"ಈಗಿನ ಮಟ್ಟಿಗೆ ರಾಜದ್ರೋಹದ ಬಗ್ಗೆ ಟಿಳಕರ ಮೇಲೆ ಕ್ರಮ ತೆಗೆದುಕೊಳ್ಳಬಹುದು. ಮತ್ತು ನಾತು ಬಂಧುಗಳನ್ನು ಬಂಧಿಸಿಡಬಹುದು. ಉಳಿದವರ ಬಗ್ಗೆ ಹೆಚ್ಚೆಚ್ಚು ಸಂಗತಿಗಳು ತಿಳಿದಾಗ ಅವರ ಮೇಲೆ ಕ್ರಮ ತೆಗೆದುಕೊಳ್ಳಬಹುದು."

ಇವರ ಇನ್ನೊಬ್ಬ ಸಹೋದ್ಯೋಗಿ ಮಿ. ನ್ಯೂಜೆಂಟರವರು ಮಾತ್ರ 'ತೆಗೆದುಕೊಳ್ಳಲು ಈಗಲೇ ತಡವಾಗಿದೆಯೆಂದು' ಅಭಿಪ್ರಾಯಪಟ್ಟರು. ಇದರ ಬಗ್ಗೆ ಅವರು ಹೇಳಿರುವದೇನಂದರೆ

"ಅನೇಕ ದಿನಗಳಿಂದ ರಾಜದ್ರೋಹ, ಸರಕಾರದ ವಿರೋಧ, ಹಿಂಸಾತ್ಮಕ ಕೃತಿ ಮತ್ತು ಬಂಡು ಹೂಡುವದು ಇವುಗಳನ್ನು ಪ್ರಚೋದಿಸುವ ರಾಜದ್ರೋಹಿಯಾದ ಮತ್ತು ಯಾವುದಕ್ಕೂ ಹೇಸದ ಬ್ರಾಹ್ಮಣರ ಪಂಗಡ ವೊಂದಿದೆ ಎಂಬುದು ಜೂನ ೨೨ ರ ಮೊದಲೇ ಸಂಪೂರ್ಣವಾಗಿ ತಿಳಿದು ಬಂದಿತ್ತು. ಈ ಜನರು ಮಿ. ರ್ಯಾಂಡರನ್ನು ಕಟುವಾಗಿ ಟೀಕಿಸುತ್ತಿದ್ದರೆನ್ನು ವದೂ ತಿಳಿದಿತ್ತು. ಆದ್ದರಿಂದ ಈ ಅತ್ಯಾಚಾರದ ಬಗ್ಗೆ ಸಂಶಯ ಬಂದವರ ನ್ನೆಲ್ಲ ಕೂಡಲೇ ಬಂದಿಸಬಹುದು. ಕೊಲೆಯ ನಂತರವೇ ಹೀಗೆ ಮಾಡಬಹು ದಾಗಿತ್ತು ಆದರೆ ಇಲ್ಲಿಯವರೆಗೂ ಯಾರನ್ನೂ ಬಂಧಿಸಲಾಗಿಲ್ಲ" ಕೊಲೆ ಗಡಕರನ್ನು ಶೋಧಿಸುವ ಕುರಿತು ಅವರು ಹೀಗೆ ಬರೆದಿರುತ್ತಾರೆ.

''ನೀವು ಸಾವಧಾನದಿಂದ ಸಾಕ್ಷಿ ಪುರಾವೆಗಳು ಸಿಗುವ ದಾರಿ ಕಾಯುತ್ತ ಕುಳಿತರೆ, ಗಂಗಾಪ್ರವಾಹದಲ್ಲಿ ತೇಲಿಬಂದ ವಸ್ತುಗಳು ತೀವ್ರ ವಾಗಿ ಸಮುದ್ರವನ್ನು ಕಾಣುವಂತೆ ಕಾಲಪ್ರವಾಹವು ಸತ್ಯ ಸಂಗತಿಗಳನ್ನು ಆ ಅವಧಿಯಲ್ಲಿ ಮರೆಮಾಚಿಸಬಹುದು. ಒಳಸಂಚಿನ ಮುಂದಾಳುಗಳಾದ ಟಿಳಕ ಮತ್ತು ನಾತು ಬಂಧುಗಳನ್ನು ಬಂಧಿಸುವ ವರೆಗೆ ಯಾವ ಸಂಗತಿಗಳೂ ದೊರೆಯದಿರುವಾಗ ಅವರನ್ನು ಕೂಡಲೇ ಬಂಧಿಸಿ, ಅಪೇಕ್ಷಿತ ಹಾಗೂ ಧೈರ್ಯದ ಹೆಜ್ಜೆಯನ್ನು ಹಾಕಿ, ಜನತೆಯಲ್ಲಿ ಭೀತಿಯನ್ನುಂಟು ಮಾಡಬೇಕು. ಏಶಿಯನ್ನರೊಡನೆ ವ್ಯವಹರಿಸುವಾಗ ಅದು ಯುದ್ಧವೇ ಇರಲಿ, ಇಲ್ಲವೆ ಸಂಕಟ ಸಮಯವೇ ಇರಲಿ, ನಾವೇ ಮೊದಲು ಅವರ ಮೇಲೆ ಏರಿ ಹೋಗ ಬೇಕು. ಸಂಚಿನ ಜನರಲ್ಲಿ ಭಯ ಹುಟ್ಟಿಸಬೇಕು. ಅಂದರೆ ಅವರಲ್ಲಿ ಒಡಕು ಹುಟ್ಟಿ, ಸಾಕ್ಷಿದಾರರು ಮುಂದೆ ಬರುವರು"

ಟಿಳಕರ ಬಗ್ಗೆ ಅವರ ಹೇಳಿಕೆ

''ಕಳೆದ ಕೆಲವು ತಿಂಗಳಿಂದ ಟಿಳಕರು ಸರಕಾರ ಮತ್ತು ಆಡಳಿತೆ ಹಾಗು ವ್ಹಾಯಿಸ್ರಾಯರನ್ನು ಹಿಡಿದು ಎಲ್ಲ ಅಧಿಕಾರಿಗಳನ್ನು ಟೀಕಿಸುತ್ತ ಲಿದ್ದಾರೆ. ಇವರ ಟೀಕೆ ಅಳತೆಗೆಟ್ಟಿದೆ. ದುಷ್ಟ ಪ್ರವೃತ್ತಿಯನ್ನು ಉತ್ತೇಜಿಸು

ತ್ತದೆ. ಈ ಪರಮ ನೀಚನ (Scoundrel) ಹಾಗೂ ಅವನ ಸಂಗಡದ ಜನರ ಬರೆಹಗಳಲ್ಲಿ ಆಕ್ಷೇಪಾರ್ಹವಾದವುಗಳನ್ನು ಹುಡುಕಲು ಮೂರು ದಿನಗಳೇಕೆ ಬೇಕೋ ನನಗೆ ತಿಳಿಯದು, ಕೂಡಲೆ ದೃಢ ನಿರ್ಧಾರದಿಂದ ಕ್ರಮ ತೆಗೆದುಕೊಳ್ಳುವದಾಗಿ ನಂಬಿದ್ದೇನೆ."

ಗವ್ಹರ್ನರರು ಗೃಹಶಾಖೆಯ ಕಾರ್ಯದರ್ಶಿಗಳ ಅಭಿಪ್ರಾಯಕ್ಕೆ ತಮ್ಮ ಸಮ್ಮತಿಯನ್ನು ಕೊಟ್ಟು, ಕ್ರಮ ತೆಗೆದುಕೊಳ್ಳಲು ತಡವಾಗಿದೆಯೆಂಬುದನ್ನು ಒಪ್ಪಲಿಲ್ಲ. "ಆಕ್ಷೇಪಗಳು ವ್ಯಸ್ಥಿವಾಗುವತನಕ ನಾನು ಬಂಧನಗಳಿಗೆ ಸಮ್ಮತಿಸಲಾರೆ'' ಎಂದು ಗವ್ಹರ್ನರರು ಬರೆದರು.

ಕೊನೆಗೆ ೧೮೧೮ನೇ ಕಾಯದೆಯ ೩ನೇ ಕಲಮಿನ ಪ್ರಕಾರ ನಾತು ಬಂಧುಗಳನ್ನು ದೇಶದಿಂದ ಹೊರಗೆ ಹಾಕಬೇಕೆಂದೂ ಟಿಳಕರ ಮೇಲೆ ಖಟ್ಲೆ ಹಾಕಬೇಕೆಂದೂ ನಿರ್ಧರಿಸಲಾಯಿತು.*

## ಖಟ್ಲೆಯ ವಿಚಾರಣೆ

ಕೊಲೆಯಾಗಿ ಸುಮಾರು ತಿಂಗಳಾಗುತ್ತ ಬಂದಿದ್ದಿತು. ಟಿಳಕರ ಮೇಲೆ ಖಟ್ಲೆ ಹಾಕುವರೆಂಬ ದಟ್ಟವಾರ್ತೆ ಹಬ್ಬಿತು. ಅದರಲ್ಲಿ ತಥ್ಯಾಂಶವೆಷ್ಟಿದೆ? ಎಂಬುದನ್ನು ತಿಳಿದುಕೊಳ್ಳಲು ಜುಲೈ ೨೭ಕ್ಕೆ ಮುಂಬಯಿಗೆ ಟಿಳಕರು ಬಂದರು. ಗೆಳೆಯರಾದ ಖರೆಯವರ ಮನೆಯಲ್ಲಿ ಉಳಿದುಕೊಂಡಿದ್ದರು. ಅಂದೇ ಸರಕಾರದ ಕಾಯದೆ ಸಲಹೆಗಾರರಾದ ನಿಕಲಸನರು, ಭಾಷಾಂತರ ಕಾರರಾದ ಮಿರ್ಝಾ ಅಬಾಸ ಅಲ್ಲಿಬೇಗರಿಂದ ೧೨೪ನೇ ಅ ಕಲಮಿನಂತೆ ಫಿರ್ಯಾದಿಯನ್ನು ಮುಂಬಯಿಯ ಚೀಫ ಮ್ಯಾಜಿಸ್ಟ್ರೇಟರಾದ ಮಿ. ಸ್ಲೇಟರ ಕಡೆಗೆ ಕೊಟ್ಟಿದ್ದರು. ಮತ್ತು ಬಂಧಿಸುವ, ಝಡತಿ ಮಾಡುವ ಅಧಿಕಾರವನ್ನು ಪಡೆದಿದ್ದರು. ಟಿಳಕ ಹಾಗೂ ಆರ್ಯಭೂಷಣ ಮುದ್ರಾಲಯದ ವ್ಯವಸ್ಥಾಪಕರಾದ ಬಾಳ ಮತ್ತು ಒಡೆಯರಾದ ಹರಿ ನಾರಾಯಣ ಗೋಖಲೆ ಇವರನ್ನು ಬಂಧಿಸಲು ಅಪ್ಪಣೆಯಿದ್ದಿತು ಎಲ್ಲವೂ ಗುಪ್ತವಾಗಿದ್ದಿತು.

---

* ಶ್ರೀ ಡಿ. ಪಿ. ಕರಮರಕರರು ಬರೆದ ಬಾಲಗಂಗಾಧರ ಟಿಳಕ ಎಂಬ ಗ್ರಂಥದ ಆಧಾರದಿಂದ. ಅವರು ಸರಕಾರಿ ಕಾಗದ ಪತ್ರಗಳ ಆಧಾರದಿಂದ ಇದನ್ನು ಬರೆದಿದ್ದಾರೆ.

ಟಿಳಕರು ತಾವಾಗಿಯೇ ಮುಂಬಯಿಗೆ ಬಂದಿದ್ದರು. ಎಂತಹ ಯೋಗಾಯೋಗವಿದು! ಟಿಳಕರು ರಾತ್ರಿ ಊಟಮಾಡಿ ಮಿತ್ರರೊಡನೆ ಹರಟೆಹೊಡೆಯುತ್ತಿದ್ದರು. ಆಗ ಯುರೋಪಿಯನ್ ಪೋಲೀಸ ಅಧಿಕಾರಿಯು ಬಂದು ಟಿಳಕರಿಗೆ ವಾರಂಟನ್ನು ತೋರಿಸಿದನು. ಕ್ಷಣಾರ್ಧದಲ್ಲಿ ಟಿಳಕರಿಗೆ ಅರ್ಥವಾಯಿತು. ಕೂಡಲೇ ಟಿಳಕರು ಆಳಿಗೆ ಹಾಸಿಗೆ ಕಟ್ಟಲು ತಿಳಿಸಿದರು. ಖರೆಯುವರನ್ನು ಕರೆದು ಜಾಮೀನಿನ ಮೇಲೆ ಬಿಡುವರೇನೋ ನೋಡಿರಿ ಎಂದು ಹೇಳಿ ಗಾಡಿಯಲ್ಲಿ ಕುಳಿತರು. ಕಮಿಶನರ ಆಫೀಸಿನ ಒಂದು ಕೋಣೆಯು ಟಿಳಕರ ವಾಸಸ್ಥಳವಾಯಿತು. ಖರೆಯುವರು ಸ್ಲೇಟ ಸಾಹೇಬರ ಕಡೆಗೆ ಹೋಗಿ ವಿಚಾರಿಸಿದರು. ಜಾಮೀನಿನ ಮೇಲೆ ಬಿಡಲು ಸಾಧ್ಯವಿಲ್ಲೆಂದನು. ರಾತ್ರಿ ೧೧॥ ಗಂಟೆಗೆ ಟಿಳಕರಿದ್ದಲ್ಲಿಗೆ ಬಂದು ನೋಡುತ್ತಾರೆ, ಸ್ವಾರಿಯು ನಿದ್ದೆ ಹೊಡೆಯುತ್ತಿತ್ತು. ಎಬ್ಬಿಸಿ ಎಲ್ಲ ಸಂಗತಿಯನ್ನು ಹೇಳಿದರು. ನಿಮಗೆ ಯೋಗ್ಯವೆನಿಸಿದ್ದನ್ನು ಮಾಡಿರಿ ಎಂದು ಹೇಳಿ ಖರೆಯುವರನ್ನು ಬೀಳ್ಕೊಟ್ಟರು.

ಅತ್ತ ಪುಣೆಯಲ್ಲಿ ಮ್ಯಾನೇಜರರಾದ ಬಾಳರನ್ನು ಬಂಧಿಸಿ, ಆರ್ಯಭೂಷಣ ಮುದ್ರಣಾಲಯವನ್ನು ಶೋಧಿಸಿ, ಕೆಲವು ಕಾಗದ ಪತ್ರಗಳನ್ನು ಜಪ್ತ ಮಾಡಿದರು. ಗೋಖಲೆಯವರು ಊರಲ್ಲಿಯೇ ಇರಲಿಲ್ಲ. ಬಾಳರು ಮುಂಬೈಗೆ ತರಲ್ಪಟ್ಟರು. ೨೮ ಹಾಗೂ ೩೦ನೇ ತಾರೀಖುಗಳಲ್ಲಿ ನ್ಯಾ. ಸ್ಲೇಟರ ಎದುರಿನಲ್ಲಿ ಪ್ರಾಥಮಿಕ ವಿಚಾರಣೆಯಾಗಿ ೨ನೇ ತಾರೀಖಿನ ದಿವಸ ಸೆಶೆನ್ ಕಮಿಟ್ ಮಾಡಲ್ಪಟ್ಟಿತು. ೪ನೇ ತಾರೀಖಿನ ದಿವಸ ಟಿಳಕರ ಬ್ಯಾರಿಸ್ಟರರಾದ ಡಾವರವರು ಹಾಯಕೋರ್ಟ ನ್ಯಾಯಾಧೀಶರಾದ ತಯ್ಯುಬಜಿಯವರಿಗೆ ಟಿಳಕರನ್ನು ಜಾಮೀನಿನ ಮೇಲೆ ಬಿಡಬೇಕೆಂದೂ ಟಿಳಕರಿಗೆ ತಮ್ಮ ಡಿಫೆನ್ಸ ಸಿದ್ಧಪಡಿಸಲು ಅನುಕೂಲವಾಗುವದೆಂದೂ ಅರ್ಜಿ ಕೊಟ್ಟರು. ನ್ಯಾಯಾಧೀಶರು ಜಾಮೀನು ಎಷ್ಟು ಕೊಡುವಿರಿ? ಎಂದು ಕೇಳಿದರು. ಕೂಡಲೇ ಡಾವರವರು ತಾವು ಕೇಳಿದಷ್ಟು ಎಂದು ಉತ್ತರಿಸಿದರು. ೨೫೦೦೦ ರೂಪಾಯಿಗಳ ಎರಡು ಜಾಮೀನು ಮತ್ತು ೫೦ ಸಾವಿರ ರೂಪಾಯಿಯ ಸ್ವಂತ ಮುಚ್ಚಳಿಕೆ ತೆಗೆದುಕೊಂಡು ಟಿಳಕರನ್ನು ಬಿಡಬೇಕೆಂದು ಕೋರ್ಟು ನಿರ್ಣಯ ಕೊಟ್ಟಿತು. ಅದನ್ನು ಜನತೆಯು ಸ್ವಾಗತಿ

ಸಿತು. ಕೋರ್ಟಿನ ಪ್ರಾಕಾರದಲ್ಲಿ ನಿಂತ ೫ ಸಾವಿರ ಜನ ಪ್ರಚಂಡ ಜಯ ಘೋಷ ಮಾಡಿತು. ಟಿಳಕರು ಜಾಮೀನಿನ ಮೇಲೆ ಮುಕ್ತರಾದರು

ಟಿಳಕರು ಹೊರಗೆ ಬರುವಷ್ಟರಲ್ಲಿ ಅವರು ಮತ್ತೊಂದು ವಿಪತ್ತನ್ನು ಎದುರಿಸಬೇಕಾಯಿತು ಅವರ ಪರಮ ಮಿತ್ರರಾದ ಬಾಬಾ ಮಹಾರಾಜರಿಗೆ ಕಾಲರಾ ಬಂದಿತು. ಅವರ ಶುಶ್ರೂಷೆಗಾಗಿ ಧಾವಿಸಿದರು. ಅವರ ಆಸ್ತಿಯು ದೊಡ್ಡದು, ಮೇಲಾಗಿ ಹೆಂಡತಿ ಚಿಕ್ಕವಳು. ಅಲ್ಲದೆ ಗರ್ಭಿಣಿಯಿದ್ದರು. ಈ ಎಲ್ಲ ಸಂಗತಿಗಳನ್ನು ವಿಚಾರಮಾಡಿ ಟಿಳಕರು ಮೊದಲಿನಿಂದಲೇ ಎಚ್ಚರ ತೆಗೆದುಕೊಂಡರು. ೪ ಜನ ಡಾಕ್ಟರರಿಂದ ಔಷಧೋಪಚಾರ ನಡೆಸಿದ್ದರು. ಅದರಲ್ಲಿ ಡಾ. ಮ್ಯಕ್ಯಾನಿಕಿಯವರು ಸಿವ್ಹಿಲ್ ಸರ್ಜನ್‌ರಿದ್ದರು ಒಂದು ಮೃತ್ಯುಪತ್ರವನ್ನು ಬರೆಯಿಸಿದರು. ಅದರ ವ್ಯವಸ್ಥೆಗಾಗಿ ತಮಗೆ ಯೋಗ್ಯ ವೆನಿಸಿದ ನಾಲ್ಕು ಜನರನ್ನು ವಿಶ್ವಸ್ಥರೆಂದು ಸೇರಿಸಿದ್ದರು. ಆದರೆ ಬಾಬಾ ಮಹಾರಾಜರು ಟಿಳಕರೂ ಇರಬೇಕೆಂದು ಹಟಹಿಡಿದ ಮೂಲಕ ಅನಿ ವಾರ್ಯವಾಗಿ ಅವರು ಒಪ್ಪಿಕೊಳ್ಳಬೇಕಾಯಿತು. ಬಾಬಾ ಮಹಾರಾಜರು ಮೃತರಾದರು. ಟಿಳಕರು ಜೇಲಿನಿಂದ ಬರುವದು ಎರಡು ದಿನ ತಡ ವಾಗಿದ್ದರೆ, ಭೆಟ್ಟಿಯೇ ಆಗುತ್ತಿರಲಿಲ್ಲ.

ಮಿತ್ರರ ಕಾರ್ಯವನ್ನು ಮುಗಿಸಿ, ಟಿಳಕರು ಖಟ್ಲೆಯ ಕೆಲಸಕ್ಕೆ ತೊಡಗಿದರು. ಅರ್ಥಾತ್ ಅವರ ಕಣ್ಣೆದುರಿಗೆ ಕೋರ್ಟ ಖರ್ಚಿನ ದೊಡ್ಡ ಪ್ರಶ್ನೆಯಿದ್ದಿತು. ಕೇಸರಿಯು ಅದನ್ನು ಪೂರೈಸುವದು ಶಕ್ಯವಿರಲಿಲ್ಲ. ಉಳಿದ ಸಾಧನಗಳಂತೂ ಇರಲೇ ಇಲ್ಲ. ಸರ್ವರ ಸಂರಕ್ಷಕನಾದ ಪರಮಾತ್ಮನು ಅವರ ಕೈ ಹಿಡಿದನು

ಈ ಖಟ್ಲೆಯು ಬ್ರಿಟಿಶ ಸರಕಾರ ಹಾಗೂ ಜನತೆಯ ನಡುವಿನ ಯುದ್ಧ ವೆಂಬ ರಾಷ್ಟ್ರೀಯ ಸ್ವರೂಪವನ್ನು ತಾಳಿತು. ಇದೇ ಕಲ್ಪನೆಯಿಂದಲೇ ಟಿಳಕರ ಮಿತ್ರರು ಅವರು ಜೇಲಿನಿಂದ ಹೊರಬರುವ ಪೂರ್ವದಲ್ಲಿಯೇ 'ಸಂರಕ್ಷಕ ನಿಧಿಗಾಗಿ' ಸಾರ್ವಜನಿಕರನ್ನು ಬಿನ್ನವಿಸಿದ್ದರು. ಈ ಕರೆಗೆ ಜನತೆ ಮನ್ನಣೆ ಕೊಟ್ಟಿತು. ಈ ಪ್ರಶ್ನೆಯು ಭಾರತೀಯವಾಯಿತು. ಇಡೀ ದೇಶದಿಂದ ಸಹಾಯ ದೊರೆಯಿತು. ಬಂಗಾಲ, ಮಹಾರಾಷ್ಟ್ರಗಳ ಸಂಬಂಧವೇನಿದೆಯೋ ದೇವರೇ ಬಲ್ಲ. ಎಲ್ಲಕ್ಕೂ ಹೆಚ್ಚಿನ ಸಹಾಯವು ಬಂಗಾಲದಿಂದ ಬಂದಿತು.

ಕಾಂಗ್ರೆಸ್ಸಿನ ಅಧ್ಯಕ್ಷರಾದ ಸುರೇಂದ್ರನಾಥ ಬ್ಯಾನರ್ಜಿಯವರೂ ಅಮೃತ ಬಝಾರ ಪತ್ರಿಕೆಯ ಸಂಪಾದಕರಾದ ಮೋತಿಲಾಲ ಘೋಷರೂ ರವೀಂದ್ರನಾಥ ಠಾಕೂರರೂ ಮುಂದಾಗಿ ಬಂದು, ನಿಧಿ ಸಮಿತಿಯನ್ನು ನಿರ್ಮಿಸಿದರು. ೧೬೭೭೮ ರೂ ೮ಆಣೆಗಳನ್ನು ಕೂಡಿಸಿ ಕಳಿಸಿದರು. ಇದಲ್ಲದೆ ಪ್ರಖ್ಯಾತರಾದ ಪ್ಯು ಮತ್ತು ಗಾರ್ಥರೆಂಬ ಬ್ಯಾರಿಸ್ಟರರನ್ನು ಟಿಳಕರ ರಕ್ಷಣೆಗಾಗಿ ಕಳಿಸಿಕೊಟ್ಟರು. ಈ ಅಮೌಲ್ಯವಾದ ಬಂಗಾಲದ ಸಹಾಯವು ಚಿರಸ್ಮರಣೀಯುವಾಗಿದೆ. ಟಿಳಕರ ಸಂರಕ್ಷಕ ನಿಧಿಯು ೪೦ ಸಾವಿರ ರೂಪಾಯಿಗಳಷ್ಟಿರಬಹುದೆಂದು ಗುಪ್ತಚಾರರ ವರದಿಯಾಗಿದೆ. ಈ ಸಮಯದಲ್ಲಿ ಟಿಳಕರ ಮೇಲಿರುವ ಅಪಾರ ಪ್ರೇಮವು ವ್ಯಕ್ತವಾಯಿತು. ದೇಶದಲ್ಲಿಯ ನಾನಾ ಭಾಗಗಳಿಂದ ಈ ಖಟ್ಲೆಯಲ್ಲಿ ಹೇಗೆ ಸಂರಕ್ಷಿಸಕೊಳ್ಳಬೇಕೆಂಬ ಬಗ್ಗೆ ಸೂಚನೆಗಳು ಬಂದವು. ಅನೇಕ ಪಂಡಿತರೂ ಬ್ಯಾರಿಸ್ಟರರೂ ತಮ್ಮ ಸಹಾಯದ ಹಸ್ತವನ್ನು ಮುಂದೆ ಚಾಚಿದರು. ಮುಂಬಯಿಯ ಭಾಯಿ ಶಂಕರ ಮೊದಲಾದವರು ತಮ್ಮ ಕಚೇರಿಯನ್ನೇ ಟಿಳಕರ ಸಹಾಯಕ್ಕೆ ನೀಡಿದರು. ಹೀಗೆ ಆಕಸ್ಮಿಕವಾಗಿ ಬಂದ ನೆರವನ್ನು ಕಂಡು, ಅದರ ಉಪಯೋಗವನ್ನು ಯೋಗ್ಯ ರೀತಿಯಿಂದ ಮಾಡಿಕೊಳ್ಳಲಾಗುವದೆಂದೂ ಇದಕ್ಕಾಗಿ ತಾವು ಜನತೆಗೆ ಋಣಿಯಾಗಿರುವೆವೆಂದೂ ಟಿಳಕರು ಕೇಸರಿಯಲ್ಲಿ ಪ್ರಸಿದ್ಧಿಸಿದರು.

ಸಪ್ಟಂಬರ ಮೊದಲನೇ ವಾರದಲ್ಲಿ ಖಟ್ಲೆಯು ಪ್ರಾರಂಭವಾಗುವದೆಂದು ದಟ್ಟವಾರ್ತೆಯು ಹಬ್ಬಿತು. ಈ ವಿಚಾರಣೆಯು ಇನ್ನೂ ಮುಂದಕ್ಕೆ ಹೋಗಬೇಕೆಂದು ಕೆಲವರು ಪ್ರಯತ್ನಿಸಹತ್ತಿದರು. ಜೋತಿಷಿಗಳಾದ ಪ್ರೊ. ಜಿನಸಿವಾಲಾರವರು ಟಿಳಕರ ಕೆಟ್ಟಗ್ರಹಗಳು ಸ್ವಲ್ಪ ದಿನಗಳಲ್ಲಿ ಬದಲಾಗುತ್ತಿದ್ದ ಮೂಲಕ ವಿಚಾರಣೆಯು ೧೫ ದಿನ ಮುಂದೆ ಬಿದ್ದರೆ, ಒಳ್ಳೇಯದೆಂದು ಟಿಳಕರ ಮನ ಒಲಿಸಹತ್ತಿದರು. ಗುಪ್ತ ಪೋಲೀಸ ಪಡೆಯ ಮುಖ್ಯಸ್ಥರಾದ ಬ್ರುಯಿನ್ನರೂ ವಿಚಾರಣೆಯು ಮುಂದೆ ಬೀಳಲು ಪ್ರಯತ್ನಿಸಹತ್ತಿದರು. ಟಿಳಕ ಹಾಗೂ ನಾತುರವರ ಸಂಬಂಧವು ಈ ಕೊಲೆಯಲ್ಲಿ ಇಲ್ಲವೆಂದು ಅವರಿಗೆ ಮನವರಿಕೆಯಾಗಿ ಕೊಲೆಯ ಶೋಧದಲ್ಲಿ ಟಿಳಕರ ಸಹಾಯ ದೊರೆಯಬಹುದೆಂಬ ಆಶೆಯೂ ಅವರಿಗಿದ್ದಿತು. ಆದ್ದರಿಂದ ಅವರು ಟಿಳಕರ ಮನೆಗೆ ಎರಡು ಮೂರು ದಿನಗಳಿಗೊಮ್ಮೆ ಹೋಗಿ

ಮನಸೋಕ್ತ ಹರಟೆ ಹೊಡೆಯುವ ಪರಿಪಾಠವನ್ನು ಇಟ್ಟರು. ಮನೆಗೆ ಬಂದ ಗೃಹಸ್ಥರಿಗೆ ಬರಬೇಡಿರೆಂದು ಹೇಗೆ ಹೇಳಬೇಕು? ಇಬ್ಬರೂ ಧೂರ್ತರು, ಬುದ್ಧಿಶಾಲಿಗಳು, ಇಬ್ಬರೂ ಪರಸ್ಪರರಿಂದ ಲಾಭಪಡೆಯ ಬೇಕೆಂದು ಅಪೇಕ್ಷಿಸುತ್ತಿದ್ದರು. ಕೊಲೆಯ ಸುಳುವು ಏನಾದರೂ ಹತ್ತು ವದೋ ಎಂದು ಬ್ರುಯಿನ್ನರು ನೋಡುತ್ತಿದ್ದರೆ, ಸರಕಾರವು ಇನ್ನೂ ಏನೇನು ಮಾಡಬೇಕೆಂದು ಅಪೇಕ್ಷಿಸುತ್ತದೆ ಎಂಬುದನ್ನು ತಿಳಿದುಕೊಳ್ಳಲು ಟಿಳಕರು ಹವಣಿಸುತ್ತಿದ್ದರು. ಕೊನೆಗೆ ಬ್ರುಯಿನ್ನರು ನಿರಾಶರಾಗಿ, 'ಟಿಳಕರೇ ನೀವು ಮನಸ್ಸು ಮಾಡಿದರೆ, ಈ ಕೊಲೆಯ ಶೋಧದಲಿ ನಮಗೆ ಬಹಳ ಸಹಾಯವಾಗುವದು, ಎಂದು ಸರಳವಾಗಿ ಕೇಳಿಬಿಟ್ಟರು. ಕೂಡಲೆ ಟಿಳಕರು ನನಗೆ ಯಾವ ಸಂಗತಿಗಳೂ ಗೊತ್ತಿರದ ಮೂಲಕ ನಾನೇನು ಸಹಾಯಮಾಡಲಿ. ಒಂದು ವೇಳೆ ಯಾರಿಂದಲಾದರೂ ಏನಾದರೂ ಕಿವಿಗೆ ಬಿದ್ದರೆ, ಅದನ್ನು ನಾನು ನಿಮಗೆ ಹೇಳುವದು ಶಕ್ಯವಿಲ್ಲೆಂಬುದನ್ನು ನೀವು ಲಕ್ಷ್ಯದಲ್ಲಿಡಬೇಕು. ಏಕೆಂದರೆ, ಅಪರಾಧಿಗೆ ಶಿಕ್ಷೆಯಾಗಲೇ ಬೇಕೆಂಬುದು ನ್ಯಾಯವೆಂದು ನನಗೆ ಅನಿಸುತ್ತಿದ್ದರೂ ನಾನು ಯಾರ ಗುಪ್ತ ಚಾರನ ಕೆಲಸವನ್ನು ಮಾಡುವದಿಲ್ಲ. ಇಷ್ಟೇ ಅಲ್ಲ, ಯಾರ ವಿಶ್ವಾಸ ಘಾತವೂ ನನ್ನಿಂದ ಆಗಲಾರದು. ನಿಮ್ಮ ಕಾರ್ಯದಲ್ಲಿ ನಾನೇನೂ ಅಡ್ಡ ಬರುವದಿಲ್ಲ. ಆದರೆ ಈ ಕೊಲೆಯಿಂದ ಪುಣೆಯ ಮೋರೆಗೆ ಮಸಿಹತ್ತಿತು. ಎಂಬ ಲ್ಯಾಬರ ಮಾತನ್ನು ಮಾತ್ರ ನಾನು ಒಪ್ಪಲಾರೆ ಎಂದರು. ಈ ಉತ್ತರದಿಂದ ಬ್ರುಯಿನ್ನ ಸಾಹೇಬರು ನಿರಾಶೆಯಾಗುವದು ಸ್ವಾಭಾವಿಕ ವಿದ್ದಿತು. ಟಿಳಕರ ಚಾರಿತ್ರ್ಯದ ಪ್ರಭಾವವು ಬ್ರುಯಿನ್ನರ ಮೇಲೆ ಬಿದ್ದಿತು. ಸರಕಾರವು ರಾಜಕೀಯ ದೃಷ್ಟಿಯಿಂದ ಕೊಲೆಗೂ ಟಿಳಕರಿಗೂ ಸಂಬಂಧ ವನ್ನು ಜೋಡಿಸಲು ಎಷ್ಟೇ ಪ್ರಯತ್ನಿಸಿದರೂ ನ್ಯಾಯತಃ ಯಾವ ಹೊಣೆಯೂ ಟಿಳಕರ ಕಡೆಗೆ ಬರುವದಿಲ್ಲ. ಟಿಳಕರಿಗೆ ಯಾವ ಸಂಬಂಧವೂ ಹತ್ತುವದಿಲ್ಲವೆಂದು ಅವರಿಗೆ ಮನವರಿಕೆಯಾಗಿತ್ತು. ಕೊಲೆಯ ವಿಚಾ ರಣೆಯು ನಡೆದು ಟಿಳಕರ ಮೇಲಿನ ಸಂಶಯವು ದೂರವಾಗಿ ಟಿಳಕರನ್ನು ಬಿಟ್ಟು ಬಿಡಲಿ, ಇಲ್ಲವೆ ಶಿಕ್ಷೆಯು ಸೌಮ್ಯವಾಗಲಿ ಎಂಬುದೇ ಬ್ರುಯಿನ್ ಸಾಹೇಬನ ಸದಿಚ್ಛೆ.

ಟಿಳಕರು ಮಾಫಿ ಬೇಡಿದರೆ, ಅವರ ಮೇಲಿನ ಖಟ್ಲೆ ಒಂದು ವೇಳೆ ತಿರುಗಿ ತೆಗೆದುಕೊಳ್ಳಬಹುದು. ಎಂಬ ಪ್ರಯತ್ನವೂ ಅವರ ಸ್ನೇಹಿತರ ಮಧ್ಯಸ್ಥಿಯಿಂದ ನಡೆದಿದ್ದಿತು. ಅಮೃತ ಬಝಾರ ಪತ್ರಿಕೆಯ ಸಂಪಾದಕರಾದ ಮೋತೀಲಾಲ ಘೋಷರಿಂದ ಈ ಸೂಚನೆಯು ಬಂದಿದ್ದಿತು. ಆದರೆ ಟಿಳಕರು ಕ್ಷಮಾಯಾಚನೆಯನ್ನು ಧಿಕ್ಕರಿಸಿ, 'ನಮ್ಮ ಚಾರಿತ್ರ್ಯವೇ ನಮ್ಮ ಸಾರ್ವಜನಿಕ ಜೀವನದ ಬಂಡಲವಾಗಿದೆ. ಕ್ಷಮೆ ಕೇಳಿ ನಾನು ಪುಣೆಯಲ್ಲಿದ್ದರೂ ಅಂದಮಾನದಲ್ಲಿದ್ದಂತೆಯೇ,! ಎಂದು ಉತ್ತರ ಕೊಟ್ಟರು. ಅದರಲ್ಲಿಯ ಇನ್ನೊಂದು ಮಹತ್ವದ ವಾಕ್ಯವೆಂದರೆ, "ಪ್ರೊ. ಗೋಖಲೆ ಅಥವಾ ಜ್ಞಾನ ಪ್ರಕಾಶದ ಸಂಪಾದಕರಂತೆ ನನ್ನ ಲೆಕ್ಕಣಿಕೆಯೇನು ಹೇಡಿಯಲ್ಲ" ಎಂಬ ವಾಕ್ಯವಿದ್ದಿತು. ಈ ಸಂಗತಿಯು ಪ್ರಸಿದ್ಧವಾದೊಡನೆ, ಟಿಳಕರ ಧೈರ್ಯವನ್ನು ಜನ ಕೊಂಡಾಡಿ, ಅವರ ಬಗ್ಗೆ ಅತ್ಯಂತ ಆದರ ಭಾವವನ್ನು ತಾಳಿತು.

ಹಾಯಕೋರ್ಟಿನಲ್ಲಿ ಈ ಸುಪ್ರಸಿದ್ಧವಾದ ಖಟ್ಲೆಯು ಸಪ್ಟಂಬರ ೮ನೇ (೧೮೯೭) ತಾರೀಖಿಗೆ ನ್ಯಾ. ಸ್ಟ್ರಚಿಯವರ ಎದುರಿನಲ್ಲಿ ನಡೆಯಿತು. ಇವರು ತರುಣರಿದ್ದು ಪಿತೃ ಪ್ರಖ್ಯಾತರಿದ್ದರು. ಈ ಖಟ್ಲೆಯಲ್ಲಿ ೬ ಜನ ಯುರೋಪಿಯನ್ನರು, ೩ ಜನ ಹಿಂದಿಯರು. ಹೀಗೆ ೯ ಜನ ಜ್ಯೂರಿಗಳಿದ್ದರು . ಖಟ್ಲೆಯು ಒಂದೇಸಮನೆ ೬ ದಿನಗಳವರೆಗೆ ನಡೆಯಿತು.

ಟಿಳಕ ಹಾಗೂ ಬಾಳರ ಮೇಲಿನ ಆರೋಪಗಳು ಓದಲ್ಪಟ್ಟವು. ಜ್ಯೂರಿಗಳು ನೇಮಿಸಲ್ಪಟ್ಟರು. ಆರೋಪಿಗಳು ತಪ್ಪಿತಸ್ಥರಲ್ಲವೆಂದು ಹೇಳಿದರು. ಫಿರ್ಯಾದಿಗಳ ವತಿಯಿಂದ ಅಡ್ವೋಕೇಟ ಜನರಲ್ಲರಾದ ಮಿ. ಲ್ಯಾಗರು ಕೇಸರಿಯಲ್ಲಿಯ ಅನೇಕ ಲೇಖಗಳನ್ನು ಓದಿ ತೋರಿಸಿದರು, ಹಾಗೂ ಅವುಗಳನ್ನು ಟೀಕಿಸಿದರು. ಬ್ಯಾ. ಪ್ಯೂರವರು ಅವುಗಳ ಬಗ್ಗೆ ಅನೇಕ ಆಕ್ಷೇಪಗಳನ್ನೆತ್ತಿದರು. ನ್ಯಾಯಮೂರ್ತಿಗಳು ಅವುಗಳನ್ನು ಮನ್ನಿಸಲಿಲ್ಲ. ಅಬಾಸ ಅಲ್ಲಿ ಬೇಗರ ಹೇಳಿಕೆ ಪ್ರಾರಂಭವಾಯಿತು. ಪ್ಯೂರವರು ಮರು ವಿಚಾರಣೆಯಲ್ಲಿ ಶಬ್ದಚ್ಛಲ, ತಪ್ಪು ಭಾಷಾಂತರ, ಶಬ್ದದ ಅರ್ಥ, ವ್ಯಾಕರಣ, ವ್ಯಂಗ್ಯಾರ್ಥ, ಮೊದಲಾದ ಅನೇಕ ವಿಚಾರಗಳ ಮನರಂಜಕವಾದ ಚರ್ಚೆ ನಡೆಯಿಸಿದರು. ಫಿರ್ಯಾದಿಗಳ ಸಾಕ್ಷಿದಾರರಿಂದಲೇ ಟಿಳಕರ ಮೇಲಿನ ಆರೋ

ಪಗಳಿಗೆಲ್ಲ, ಎಷ್ಟು ಜೊಳ್ಳು ಇವೆ ಎಂಬ ಉತ್ತರವನ್ನು ಹೊರಡಿಸಿದರು. ಟಿಳ
ಕರು ಬೇರೆ ಪುರಾವೆ ಕೊಡಲಿಲ್ಲ. ಇದರಿಂದ ಅಡ್ವೋಕೇಟ ಜನರಲ್ಲರೇ
ಮೊದಲು ಮಾತನಾಡಬೇಕಾಯಿತು. ಅವರ ಆಕ್ಷೇಪಗಳಿಗೂ ಉತ್ತರ
ಕೊಡುವ ಸಂಧಿಯು ಬ್ಯಾ. ಪ್ಯೂ ಸಾಹೇಬರಿಗೆ ದೊರೆಯಿತು.

ಅಡ್ವೋಕೇಟ ಜನರಲ್ಲರು ಸರಕಾರವನ್ನು ಸಮರ್ಥಿಸಿಕೊಳ್ಳಲು
ಎದ್ದರು. ಅವರು ಶಾಂತ ಚಿತ್ತರೆಂದು ಹೆಸರಾಗಿದ್ದರೂ ಈ ವಿಷಯದಲ್ಲಿ ಅವರ
ಪ್ರವೃತ್ತಿಯು ಶಾಂತವಾಗಿ ಉಳಿದಂತೆ ಕಾಣಲಿಲ್ಲ. ಅವರ ಸಮರ್ಥನದ
ಸಾರಾಂಶವಿಂತಿದೆ. ''ಕೇಸರಿಯ ಬರೆಹಗಳಿಂದ ಇಂಥ ವ್ಯಕ್ತಿಯಲ್ಲಿ ಪ್ರೀತಿ
ಉತ್ಪನ್ನವಾಯಿತೆಂದು ಹೇಳುವ ಕಾರಣವಿಲ್ಲ. ಅದು ಉತ್ಪನ್ನವಾಗುವ
ಸಂಭವವಿದ್ದರೂ ಸಾಕು. ಸರಕಾರವನ್ನು ಬುಡಮೇಲು ಇಲ್ಲವೆ ಅದರ
ಮಾರ್ಗದಲ್ಲಿ ಅಡ್ಡಗಾಲು ಹೊಡೆಯುವ ಸಂಧಿಯ ದಾರೀಕಾಯಬೇಕೆಂಬ
ಬುದ್ಧಿಯು ವಾಚಕರ ಮನಸ್ಸಿನಲ್ಲಿ ಬಂದರೆ, ಆ ಲೇಖವು ರಾಜದ್ರೋಹ
ವಾಗಬಲ್ಲದು ಟಿಳಕರು ಪದವೀಧರರೂ ನಾಮದಾರರೂ ಇದ್ದು' ಕೇಸರಿಯ
೭ ಸಾವಿರ ಪ್ರತಿಗಳನ್ನು ಹೊರಡಿಸುತ್ತಾರೆ. ಇದರಿಂದ ಈ ಪತ್ರದ ಪ್ರಭಾವವು
ವ್ಯಕ್ತವಾಗುತ್ತದೆ. ಅದರ ಪರಿಣಾಮವು ವಾಚಕರ ಮೇಲೆ ಆಗಲೇಬೇಕು.
ಕೇಸರಿಯು ಈ ಸರಕಾರಕ್ಕೆ ಪರಕೀಯವೆನ್ನುತ್ತಿದ್ದರೆ ಇದರ ಬಂಧುವಾದ
ಮರಾಠಾ ಪತ್ರಿಕೆಯು ಯಾವಾಗಾದರೊಮ್ಮೆ ಶಸ್ತ್ರ ಧರಿಸಬೇಕಾಗುವದೆನ್ನು
ವದು. ಜನರು ದಬ್ಬಾಳಿಕೆಯಿಂದ ಜರ್ಜರಿತರಾಗಿರುವರೋ, ಇಲ್ಲವೋ ಕೇಸರಿ
ಯಂತೂಹಾಗೆ ಅನ್ನುತ್ತದೆ. ಶಿವಾಜಿಯ ಉತ್ಸವದಲ್ಲಿ ತಪ್ಪಿರದಿದ್ದರೂ ಅದಕ್ಕೆ
ರಾಜಕೀಯ ಸ್ವರೂಪ ಕೊಡಲಾಗಿದೆ. ಉತ್ಸವದ ಲಾಭ ಪಡೆದು ಸರಕಾರದ
ಬಗ್ಗೆ ಅಪ್ರೀತಿಯನ್ನುಂಟು ಮಾಡಿದೆ. ಅದರಂತೆ ವಿಭೂತಿ ಪೂಜೆ, ರಾಮಕೃಷ್ಣ
ಜಯಂತಿ ಮೊದಲಾದವುಗಳು. ಶಬ್ದದ ಪ್ರಶ್ನೆಯಿಲ್ಲ. ಎಲ್ಲ ಲೇಖಗಳ ಧ್ವನಿ
ಏನೆಂಬುದನ್ನು ನೋಡಬೇಕು. ದಾರಿದ್ರ್ಯದೊಂದಿಗೆ ಧರ್ಮ ಛಲದ ತಕರಾ
ರನ್ನು ಮಾಡಲಾಗಿದೆ. ಈ ರಾಜ್ಯದಲ್ಲಿ ಸ್ತ್ರೀಯರ ಅವಮರ್ಯಾದೆಯಾಗುವ
ದೆಂದು ಹೇಳಲಾಗಿದೆ. ಅಫಜೂಲಖಾನನ ವಧೆಯು ಐತಿಹಾಸಿಕವಾಗಲು
ಶಕ್ಯವಿದ್ದರೂ ಸರಕಾರದ ಸಂಬಂಧವನ್ನು ಜೋಡಿಸಿದ್ದರಿಂದ ರಾಜಕೀಯ
ಸ್ವರೂಪ ಪ್ರಾಪ್ತವಾಗುತ್ತದೆ. 'ರಾಷ್ಟ್ರವನ್ನು ಹತ್ತಿಕ್ಕುವವರನ್ನು ಕತ್ತರಿಸಿ

ಒಗೆಯಿರಿ' ಎಂಬಲ್ಲಿ ಕತ್ತರಿಸಿ ಒಗೆಯಿರಿ ಎಂಬುದಕ್ಕೆ ಸೌಮ್ಯ ಅರ್ಥವಿದ್ದರೆ, ಪ್ರೊ. ಭಾನುರವರೇ ಬಂದು ಹೇಳಲಿ, ಮನೆ ಹೊಕ್ಕ ಕಳ್ಳನನ್ನು ಒಳಗೇ ಹಾಕಿ ಮನೆಗೆ ಬೆಂಕಿ ಹಚ್ಚಿರಿ ಇದರ ಅರ್ಥವೇನು? ಪ್ಲೇಂಧರಿಗೆ ತಾವ್ರುಪಟ ಕೊಟ್ಟಿಲ್ಲ. ಇದರ ಅರ್ಥವು ಮೇಲೆಯೇ ಇದೆ. ಸಾರಾಂಶ ಅನೇಕ ಶಬ್ದಗಳು ಐತಿಹಾಸಿಕವಿಲ್ಲ. ಅನೇಕ ಶಬ್ದಗಳು ಕೇವಲ ಅಸಮ್ಮತಿಯನ್ನು ವ್ಯಕ್ತಪಡಿಸದೆ ಅದಕ್ಕಿಂತಲೂ ಮುಂದೆ ಹೋಗಿವೆ. ಆದುದರಿಂದ ೧೨೪ ನೇ ಅ. ಕಲಮಿನಲ್ಲಿಯ ವಿವರಣೆಯ ಲಾಭವು ಕೂಡ ಆರೋಪಿಗೆ ದೊರೆಯಲಾರದು''

ಟಿಳಕರನ್ನು ಸಂರಕ್ಷಿಸುವ ಬ್ಯಾ. ಪ್ಯು ಸಾಹೇಬರ ಭಾಷಣವು ಕೆಳಗಿನಂತೆ ಇದೆ.

''ಅಫಜೂಲ್‌ಖಾನನ ವಧೆಯ ವಿಷಯವು ಕೇವಲ ನೈತಿಕ ದೃಷ್ಟಿಯಿಂದ ಚರ್ಚಿಸಲ್ಪಟ್ಟಿದೆ. ಸಾಮಾನ್ಯ ನಿಯಮಗಳು ಸಾಮಾನ್ಯ ಜನರಿಗಾಗಿ ಇದ್ದು, ಉಚ್ಚಮಟ್ಟದಲ್ಲಿರುವ ಶಿವಾಜಿ, ಕ್ರಾಮವೆಲ್ಲರಂಥವರಿಗೆ ಅವು ಅನ್ವಯಿಸುವದಿಲ್ಲೆಂದು ಟಿಳಕರ ಅಭಿಪ್ರಾಯವಿದ್ದಿತು. ವಿಭೂತಿ ಪೂಜೆಯ ಬರೆಹವು ಕಾರ್ಲಾಇಲ್ಲರ ಒಂದು ನಿಬಂಧದ ಆಧಾರದಿಂದ ಬರೆಯಲ್ಪಟ್ಟಿದೆ. ಅಫಜೂಲ್‌ಖಾನನ ವಧೆಯ ಸಮರ್ಥನೆ ಮಾಡಿದಾಕ್ಷಣ ರ್‍ಯಾಂಡ ಸಾಹೇಬನ ಕೊಲೆಗೆ ಉತ್ತೇಜನ ಕೊಟ್ಟರೆಂದು ಹೇಳಲು ಬರುವದಿಲ್ಲ. ಈ ಚರ್ಚೆಯನ್ನು ಹಿಂದೆ ಅನೇಕರು ಮಾಡಿದ್ದಾರೆ. ಪ್ಲೇಗ ಪೂರ್ವದಲ್ಲಿಯೂ ಈ ಚರ್ಚೆ ನಡೆದಿದ್ದಿತು. ಕೆಲವು ಆರೋಪಗಳು ಕವಿತೆಗಳ ಬಗ್ಗೆ ಇದ್ದು, ಕವಿತೆಯಲ್ಲಿ ಅಲಂಕಾರ ಮೊದಲಾದವುಗಳ ಉಪಯೋಗವಾಗುವದು ಸ್ವಾಭಾವಿಕ. ಅಲಂಕಾರದ ಭಾಷೆಗೆ ಶಬ್ದಗಳ ಅರ್ಥವನ್ನು ಮಾಡಿದರೆ ಹೇಗೆ ನಡೆಯಬೇಕು? ರಾಜದ್ರೋಹದ ಅರ್ಥವನ್ನು ಇಂಗ್ಲಂಡದಲ್ಲಿ ಹೇಗೆ ಮಾಡಲ್ಪಡುತ್ತಿದೆಯೋ ಹಾಗೆಯೇ ಇಲ್ಲಿಯೂ ಮಾಡಬೇಕು. ಪ್ರಜರ ದುಃಖಗಳನ್ನು ಉಪ್ಪು ಖಾರ ಹಚ್ಚಿ ವರ್ಣಿಸಿ, ಅಸಂತೋಷ ಉತ್ಪನ್ನ ಮಾಡಿದರೆ ಅದು ರಾಜದ್ರೋಹವಲ್ಲ. ಒಂದು ಕೊಲೆಯಾದರೆ ಅದರಿಂದ ಬ್ರಿಟಿಶರ ರಾಜ್ಯವೇ ಮುಳುಗುವದಿಲ್ಲ. ಕೊಲೆಯ ಕಾರಸ್ಥಾನವೇ ಸಿಗದಿರುವಾಗ, ರಾಜ್ಯವನ್ನೇ ಒಡುಮೇಲು ಮಾಡುವ ಕಾರಸ್ಥಾನವೆಲ್ಲಿ ಸಿಗಬೇಕು? ವಜ್ರಮಹೋತ್ಸವ ಕಾಲದ ಕೇಸರಿಯ ಬರೆಹಗಳನ್ನು ನೋಡಿದರೆ, ಅವರ ರಾಜನಿಷ್ಠೆಯನ್ನು ಸಿದ್ಧ ಮಾಡಲು

ಬರುವದು. ರಾಜ್ಯಕ್ರಾಂತಿಯನ್ನೇ ಮಾಡುವದಿದ್ದರೆ ಪ್ಲೇಗಿನಕಾಲವು ಉತ್ಕೃಷ್ಟ ಸಮಯವಿದ್ದಿತು. ಆದರೆ ಅವರು ಬಂಡನ್ನು ಹೂಡದೆ ಪ್ಲೇಗ ನಿವಾರಕ ದವಾಖಾನೆಯನ್ನು ತೆಗೆದರು. ಹೀಗೆ ಎಲ್ಲ ಆಕ್ಷೇಪಗಳಿಗೆ ಪ್ಯೂರವರು ಉತ್ತರಕೊಟ್ಟು ಕೊನೆಗೆ ೧೨೪ ನೇ ಅ. ಕಲಮಿನ ಅರ್ಥ, ಇತಿಹಾಸವನ್ನು ವಿವರಿಸಿ, ಟಿಳಕರ ನಿರ್ದೋಷತ್ವವನ್ನು ಸಮರ್ಥನ ಮಾಡಿದರು.

ನ್ಯಾ. ಸ್ಟ್ರಚಿಯುವರ ಸಮಾರೋಪವು ವಿಚಿತ್ರವಾಗಿದ್ದಿತು. ಜ್ಯೂರಿಗಳನ್ನುದ್ದೇಶಿಸಿ ಭಾಷಣ ಮಾಡುವಾಗ ಟಿಳಕರ ಪ್ರತಿಯೊಂದು ಶಬ್ದವನ್ನು ಹಿಂಡಿ ಹಿಂಡಿ ಅರ್ಥವನ್ನು ತೆಗೆದರು. ಮನೆ ಹೊಕ್ಕ ಕಳ್ಳನ ಉದಾಹರಣೆ ಎತ್ತಿಕೊಂಡರು. "ಕಳ್ಳರನ್ನು ಹೊರಗೆ ಹಾಕುವ ಸಾಮರ್ಥ್ಯವಿಲ್ಲದಿದ್ದರೆ ಅವನನ್ನು ಒಳಗೆ ಹಾಕಿ ಮನೆ ಸುಟ್ಟುಬಿಡಿರಿ' ಅದರಂತೆ 'ನಮ್ಮ ದೇಶವನ್ನು ವಶಪಡಿಸಿಕೊಂಡ ಪರಕೀಯರನ್ನು ತೆಗೆದೊಗೆಯಿರಿ' ಈ ವಾಕ್ಯಗಳು ವರ್ತಮಾನಕಾಲದವಿದ್ದು, ಮೇಲಿನ ಪರಿಸ್ಥಿತಿಯಲ್ಲಿ ವಿಶಿಷ್ಟ ಪ್ರಕಾರದ ಮಾರ್ಗಗಳು ನ್ಯಾಯವೆಂದು ಸಮರ್ಥಿಸಿವೆ." ಎಂದು ಜ್ಯೂರಿಗಳಿಗೆ ಬಿಂಬಿಸುವಂತೆ ಹೇಳಿದರು. ಇದು ಒಂದು ಬಗೆಯ ಆಜ್ಞೆಯಂತೆಯೇ ಇದ್ದಿತು. ರ್‍ಯಾಂಡಸಾಹೇಬನ ಕೊಲೆಗೂ ಟಿಳಕರ ಲೇಖಗಳಿಗೂ ಕಾರ್ಯ ಕಾರಣ ಸಂಬಂಧವಿದೆಯೆಂದು ನನಗೆ ಅನಿಸುವದಿಲ್ಲ. ಅಡ್ವೋಕೇಟ ಜನರಲ್ಲರಿಗೂ ಇದನ್ನು ಸಿದ್ಧಮಾಡಲು ಆಗಲಿಲ್ಲ" ಎಂದು ಒಪ್ಪಿಕೊಂಡರು. "ಭಿನ್ನ ಭಿನ್ನಬರಹಗಳನ್ನು ಬರೆಯುವದರಲ್ಲಿ ಕಾಯದೆಯಿಂದ ಪ್ರಸ್ಥಾಪಿತವಾದ ಸರಕಾರದ ಬಗ್ಗೆ ದ್ವೇಷ ಮತ್ತು ವೈರವನ್ನು ಹುಟ್ಟಿಸಿ ಜನರನ್ನು ಎಬ್ಬಿಸುವದೇ ಟಿಳಕರ ಉದ್ದೇಶವಿದ್ದಿತು." ಎಂದು ಒತ್ತಿ ಹೇಳಿದರು; ಇಷ್ಟೇ ಅಲ್ಲ, ೧೨೪ ನೇ ಕಲಮಿನ ಅರ್ಥವನ್ನೇ ಅನರ್ಥಮಾಡಿದರು. ಕಲಮಿನಲ್ಲಿಯ (dis affection) ಶಬ್ದಕ್ಕೆ ಸರಕಾರದ ಬಗೆಗೆ ಪ್ರೇಮಭಾವವಿರದಿರುವದೇ ದ್ವೇಷಭಾವ ಎಂದು ಅರ್ಥ ಮಾಡಿದರು ಈ ಶಬ್ದದ ಅರ್ಥ, ill will (ದ್ವೇಷ) dislike (ಸೇರದ) ಮತ್ತು (Enimity) (ಶತ್ರುತ್ವ) ಎಂದು ಇದೆ ಎಂದು ಏಕಪಕ್ಷೀಯ ವಿವರಣೆ ಕೊಟ್ಟರು. ಇದನ್ನು ಕೇಳಿ ಜ್ಯೂರಿಗಳಲ್ಲಿಯ ೬ ಜನ ಯುರೋಪಿಯನ್ನರು ಟಿಳಕರು ದೋಷಿಗಳೆಂದು ನಿರ್ಣಯಕೊಟ್ಟರು. ೩ ಜನ ಹಿಂದೀಯರು ಟಿಳಕರು ನಿರ್ದೋಷಿಗಳೆಂದು ಅಭಿಪ್ರಾಯಪಟ್ಟರು. ನ್ಯಾಯಾಧೀಶರು

ಬಹುಮತದ ನಿರ್ಣಯ ಸ್ವೀಕರಿಸಿದರು. ಕೂಡಲೇ ಕ್ಲಾರ್ಕ ಆಫ್ ದಿ ಕ್ರೌನರು ನಿಮ್ಮ ಮೇಲಿನ ಆರೋಪವು ಸಿದ್ಧವಾಗಿದೆ. ನಿಮಗೆ ಶಿಕ್ಷೆಯಾಗ ಬಾರದೆಂದು ಏನಾದರೂ ಹೇಳುವದಿದೆಯೇ? ಎಂದು ವಿಚಾರಿಸಿದರು. ಟಿಳಕರು "ಜ್ಯೂರಿಗಳಿಗೆ ನಾನು ಅಪರಾಧಿ ಎನಿಸಿರಬಹುದು. ಆದರೆ ನಾನು ನಿರಪರಾಧಿ ಇರುವೆನು. ರಾಜದ್ರೋಹದ ಉದ್ದೇಶದಿಂದ ಈ ಬರಹವು ಬರೆಯಲ್ಪಟ್ಟಿಲ್ಲ. ಮತ್ತು ಅದರ ಪರಿಣಾಮವೂ ರಾಜದ್ರೋಹವನ್ನುಂಟು ಮಾಡುವದೆಂದು ನನಗನಿಸುವದಿಲ್ಲ" ಎಂದು ಹೇಳಿದರು. ಅರ್ಥಾತ್ ಟಿಳಕರ ಈ ಮಾತುಗಳು ನ್ಯಾಯಮೂರ್ತಿಗಳಿಗೆ ಒಪ್ಪಿಗೆಯಾಗುವದು ಶಕ್ಯವಿರಲಿಲ್ಲ. ಅವರು ಟಿಳಕರಿಗೆ ೧೮ ತಿಂಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು. ಬಾಳರನ್ನು ಬಿಡುಗಡೆ ಮಾಡಿದರು. ಪೋಲೀಸರು ಕೂಡಲೇ ಟಿಳಕರನ್ನು ಜೇಲಿಗೆ ಕಳಿಸಿ ದರು.

ಈ ಸುದ್ದಿಯು ಹಾ ಹಾ ಅನ್ನುವಷ್ಟರಲ್ಲಿಯೇ ರಾಷ್ಟ್ರದ ತುಂಬ ಹಬ್ಬಿತು. ವಿದ್ಯಾರ್ಥಿಗಳು ಶಾಲೆಕಾಲೇಜುಗಳಿಗೆ ಹೋಗಲಿಲ್ಲ. ಅನೇಕ ಜನರು ಕರೆ ಬಟ್ಟೆಗಳನ್ನು ತಲೆಗೆ ಸುತ್ತಿಕೊಂಡು ಬೀದಿಯಲ್ಲಿ ತಿರುಗಾಡಿ ದರು. ಎಲ್ಲ ದೇಶೀ ವೃತ್ತಪತ್ರಗಳು ಟಿಳಕರ ಶಿಕ್ಷೆಯನ್ನು ನಿಷೇಧಿಸಿದವು. ಅಮೃತ ಬಝಾರ, ಹಿಂದೂ ಮೊದಲಾದ ಪ್ರಮುಖ ಪತ್ರಿಕೆಗಳು ಕಪ್ಪಾದ ದಪ್ಪಗೆರೆಗಳನ್ನು ಹಾಕಿ ಮುದ್ರಣ ಸ್ವಾತಂತ್ರ್ಯವು ನಷ್ಟವಾಯಿತೆಂದು ಬರೆದವು. ಕೂಲಿಕಾರರೆಲ್ಲರೂ ತಮ್ಮ ಕೈವಾರಿಯು ಸಂಕಟಕ್ಕೊಳಗಾದ ನೆಂದು ಉಪವಾಸಗೈದರು. ಇಂಗ್ಲೀಷರೆಲ್ಲರೂ ಯೋಗ್ಯ ಶಿಕ್ಷೆಯಾಯಿ ತೆಂದು ಮೃಷ್ಟಾನ್ನವನ್ನುಂಡರು. ಆಂಗ್ಲೋ ಇಂಡಿಯನ್ ಪತ್ರಿಕೆಗಳಿಗೆ 'ಕ್ರಿಸ್‌ಮಸ್' ಆಗಲೇ ಬಂದಿತು.

ಈ ಶಿಕ್ಷೆಯಿಂದ ಬ್ರಿಟಿಶ ನ್ಯಾಯದೇವತೆಯು ಬತ್ತಲೆಯಾದಳು. ಬ್ರಿಟಿಶರ ರಾಜ್ಯದಲ್ಲಿ ನ್ಯಾಯವಿಲ್ಲ, ರಾವಣನ ದರ್ಬಾರು ನಡೆದಿದೆ, ಬ್ರಿಟಿಶ ರಾಜ್ಯವನ್ನು, ಅವರ ನ್ಯಾಯದೇವತೆಯನ್ನು ಉಧೋ ಉಧೋ ಎಂದು ಹೊಗಳುವ ಜನರು ಢೋಂಗಿಗಳು ಎಂಬುದನ್ನೇ ಬರಹಗಳ ಮೂಲಕ ಟಿಳಕ ರಿಗೆ ಸಿದ್ಧಮಾಡುವದಿದ್ದಿತು. ಅವರಿಗೆ ಆದ ಶಿಕ್ಷೆಯಿಂದ ಆ ಕಾರ್ಯವು ತನ್ನಷ್ಟಕ್ಕೆ ತಾನೇ ಸಾಧಿಸಿತು.

ಟಿಳಕರ ಶಿಕ್ಷೆಯ ಪರಿಣಾಮಗಳು ಜನತೆಯ ಮೇಲೆ ಏನಾಗುವದೆಂಬುದನ್ನು ನೋಡಲು, ಕೆಲವು ಜನರನ್ನು ಬುದ್ಧಿಪೂರ್ವಕವಾಗಿ ಸರಕಾರದವರು ನಿಯಮಿಸಿದ್ದರು. ಅವರು ಕೆಳಗಿನಂತೆ ವರದಿಯನ್ನು ಮಾಡಿದ್ದಾರೆ.

"ಟಿಳಕರನ್ನು ಹಿಡಿದ ಕೂಡಲೇ ದೇಶದಲ್ಲೆಲ್ಲ ಹಾಹಾಕಾರವೆದ್ದಿತು. ಈ ಖಟ್ಲೆಯಷ್ಟು ಬೇರೆ ಯಾವ ಖಟ್ಲೆಯೂ ಈ ಮುನ್ನ ಜನರ ಮನಸ್ಸನ್ನು ಸೆಳೆದಿದ್ದಿಲ್ಲ. ಟಿಳಕರ ಬಗ್ಗೆ ಸಹಾನುಭೂತಿಯನ್ನು ವ್ಯಕ್ತಪಡಿಸುವದಕ್ಕಾಗಿ ಜನರು ೪೦ ಸಾವಿರ ರೂಪಾಯಿಗಳನ್ನು ಅವರ ಸಂರಕ್ಷಣೆಗಾಗಿ ಕೂಡಿಸಿಕೊಟ್ಟರು. ದೇಶದ ಎಲ್ಲ ಭಾಗಗಳಿಂದಲೂ ಈ ಹಣ ಬಂದಿದ್ದಿತು" ಎಂದು ಉಲ್ಲೇಖಿಸಿ, ಖಟ್ಲೆಯಿಂದ ಜನರಲ್ಲಿ ಏನು ಪ್ರತಿಕ್ರಿಯೆಯಾಗಿದೆ ಎಂಬುದನ್ನು ವರ್ಣಿಸಿದ್ದಾರೆ. "ಟಿಳಕರಿಗೆ ಕಾಯದೆಯಂತೆ ಶಿಕ್ಷೆಯಾಗಿದ್ದರೂ ನೈತಿಕ ದೃಷ್ಟಿಯಿಂದ ಅವರು ನಿರ್ದೋಷಿಗಳಿರುವರು. ಕೋರ್ಟಿನಲ್ಲಿ ಅವರು ತೋರಿಸಿದ ಧೈರ್ಯದಿಂದ ಜನರಲ್ಲಿ ಅವರ ಬೆಲೆಯು ಹತ್ತುಪಟ್ಟು ಬೆಳೆದಿದೆ. ಬ್ರಿಟಿಶ್ ಜ್ಯೂರಿಗಳು ಅವರನ್ನು ಅಪರಾಧಿಗಳೆಂದು ನಿರ್ಣಯಿಸಿದರೂ ತಾವು ನಿರಪರಾಧಿಗಳೆಂದು ಕೋರ್ಟಿಗೆ ಮೇಲಿಂದ ಮೇಲೆ ಎಚ್ಚರಿಕೆ ಕೊಡುತ್ತಿದ್ದರು. ಎಂತಹ ಭವ್ಯವಾದ ದೃಶ್ಯವಿದು! ಶುದ್ಧ ಅಂತಃಕರಣ, ಹಾಗು ದೃಢಶ್ರದ್ಧೆಯ ಮೂಲಕ, ಆ ವೇಳೆಯಲ್ಲಿ ಅವರಲ್ಲಿ ದಿವ್ಯ ಸ್ಫೂರ್ತಿಯು ಸಂಚಾರವಾಗಿತ್ತು. ಮತ್ತು ರಾಷ್ಟ್ರದ ಉದ್ಧಾರಾರ್ಥವಾಗಿ ಹೋರಾಡುವ ಲೋಕ ಧುರೀಣರೆಂದು ಜನತೆ ಮನಗಂಡಿತ್ತು."

ಬ್ರಿಟಿಶ ಸಾಮ್ರಾಜ್ಯದೊಡನೆ ಶಡ್ಡು ಹೊಡೆದು ನಿಂತ, ಟಿಳಕರ ಮೇಲಿನ ಮೊದಲನೆಯ ರಾಜದ್ರೋಹಿ ಖಟ್ಲೆಯಿದು. ಭಾರತದಲ್ಲಿ ಮೊದಲನೆಯ ವೀರರೂ ಇವರೇ!

ಟಿಳಕರ ಮಿತ್ರರಿಗೆ ಪ್ರಿವ್ಹಿಕೌನ್ಸಿಲ್ಲಿನಲ್ಲಿಯಾದರೂ ನ್ಯಾಯಸಿಗುವದೆಂಬ ಆಶೆಯು ಇನ್ನೂ ಇದ್ದಿತು, ಪ್ರಿವ್ಹಿಕೌನ್ಸಿಲ್ಲಿಗೆ ಹೋಗಲು ಹೈಕೋರ್ಟಿನ ಅಪ್ಪಣೆ, ಇಲ್ಲವೆ ನಿರಾಕರಣೆಯು ಅವಶ್ಯವಿದ್ದಿತು. ಅರ್ಜಿಕೊಡಲಾಯಿತು. ಅದು ನಿರಾಕರಿಸಲ್ಪಟ್ಟಿತು. ಪ್ರಿವ್ಹಿಕೌನ್ಸಿಲ್ಲಿಗೆ ಒಯ್ದರು. ಬ್ಯಾ. ಆಸ್ಕ್ವಿಥರು ಒಳ್ಳೇ ಬುದ್ಧಿವಂತಿಕೆಯಿಂದ ತಮ್ಮ ಪಕ್ಷವನ್ನು ಮಂಡಿಸಿದರು. ಆದರೆ ಎಲ್ಲವೂ ವ್ಯರ್ಥವಾಯಿತು. ಖಟ್ಲೆಯು ಕಿತ್ತಿ ಹಾಕಲ್ಪಟ್ಟಿತು.

---

# ಶೆರೆಮನೆವಾಸ

೧೮೯೭ ನೇ ಇಸ್ವಿಯ ಶೆರೆಮನೆಯ ಕಲ್ಪನೆಯು ಸ್ವತಂತ್ರ ಭಾರತೀಯ ರಿಗೆ ಹೇಗ ಬರಬಲ್ಲದು? ೧೯೩೦ ರಲ್ಲಿ ಶೆರೆಮನೆ ಕಂಡವರಿಗೆ ಅದರ ಕಲ್ಪನೆ ಅಲ್ಪಸ್ವಲ್ಪ ಆಗಬಹುದು. ಶೆರೆಮನೆಯ ಅನುಭವವು ಈಗ ಲಕ್ಷಾಂತರ ಜನರಿಗೆ ಬಂದಿರುವದರಿಂದ ಅದರ ಮಹತ್ವ ಈಗ ಉಳಿದಿಲ್ಲ. ಇರಲಿ, ಟಿಳಕರು ಮಧ್ಯಮ ವರ್ಗದವರು. ಆ ಕಾಲದ ಶೆರೆಮನೆಯ ಅನ್ನ ಅವರಿಗೆ ಹೇಗೆ ಸೇರ ಬೇಕು? ಅಂಗೈದಪ್ಪ ಭಕ್ಕರಿ, ಉರುಳೀಗಡ್ಡಿ, ಬೆಳ್ಳುಳ್ಳಿ ಬೆರೆಸಿದ ಹೊಟ್ಟಿ ಯಲ್ಲಿ ಬೆಂಕಿಬೀಳುವ ಚಟ್ನಿ. ಆದರೆ ಬೆಳ್ಳುಳ್ಳಿ ಉರುಳೀಗಡ್ಡಿಗಳೆಂದರೆ ಟಿಳಕರಿಗೆ ಆಗುತ್ತಿದ್ದಿಲ್ಲ ಅಂದ ಮೇಲೆ ಪಾಪ ಅವರು ಏನು ತಿನ್ನಬೇಕು! ಒಣಭಕ್ಕರಿಯನ್ನೇ ನೀರಲ್ಲಿ ಕಲೆಸಿ ನಾಲ್ಕಾರು ತುತ್ತು ಉಣ್ಣಬೇಕು. ಇದೇ ರೀತಿಯಾಗಿ ಎರಡು ತಿಂಗಳು ಕಳೆದರು. ಅವರ ತೂಕವು ಈ ಅವಧಿಯಲ್ಲಿ ೧೩೫ ರಿಂದ ೧೧೦ ಕ್ಕೆ ಇಳಿಯಿತು. ಅವರ ಭೆಟ್ಟಿಗೆ ಹೋಗುತ್ತಿದ್ದ ವಿದ್ವಾಂಸ ರಿಗೆ ಟಿಳಕರು ದಿನ ದಿನಕ್ಕೆ ಒಣಗುತ್ತ ನಡೆದಿರುವದು ಕಂಡು ಬಂದಿತು. ಅವರ ಮಿತ್ರರಿಗೆಲ್ಲ ಟಿಳಕರು ಶೆರೆಮನೆಯಿಂದ ಜೀವಂತರಾಗಿ ಮರಳುವರೆ? ಎಂಬ ಭೀತಿಯುಂಟಾಯಿತು.

ಆ ಕಾಲದಲ್ಲಿ ರಾಜಕೀಯ ಕೈದಿ ಎಂಬ ಭೇದವಿರಲಿಲ್ಲ, ವರ್ಗಗಳಿರ ಲಿಲ್ಲ. ಇನ್ನೇನು ಜೇಲಿನ ಡಾಕ್ಟರರೇ ಸಹಾಯ ನೀಡಲು ಶಕ್ಯವಿದ್ದಿತು. ಆದರೆ ಸರಕಾರದ ರೋಷದ ಮುಂದೆ ಅವರಾದರೂ ಏನು ಮಾಡಬಲ್ಲರು? ರಾಜದ್ರೋಹದ ಅಪರಾಧಕ್ಕೇ ನೈತಿಕ ಅಧಃಪತನದ ಸ್ವರೂಪಕೊಡಲು ಸರಕಾರ ಯತ್ನಿಸುತ್ತಿದ್ದಿತು. ಕ್ಷಣ ಕ್ಷಣಕ್ಕೆ ಅವರ ಮಾನಭಂಗ ಮಾಡುವ ಸೇಡಿನ ಬುದ್ಧಿಯುಳ್ಳದ್ದಾಗಿತ್ತು. ಟಿಳಕರ ಫೆಲೋಶಿಪ್ಪನ್ನು ಸರಕಾರವು ರದ್ದುಮಾಡಿತು. ಇಂತಹ ಸರಕಾರ ಅವರ ಯೋಗಕ್ಷೇಮ ನೋಡುವದೆ! ಆದರೆ ಕೆಳತರಗತಿಯ ದೇಶಿಯ ಅಧಿಕಾರಿಗಳಿಗೂ ವಾರ್ಡರ, ವಾಚ ಮನ್ನರಿಗೂ ಸಹಾನುಭೂತಿಯಿರುವದು, ಸ್ವಾಭಾವಿಕವಿದ್ದಿತು. ಪ್ರಸಂಗದಲ್ಲಿ

ಅವರೇ ನೆರವಾಗುತ್ತಿದ್ದರು. ಟಿಳಕರನ್ನು ಡೋಂಗರಿ ಜೇಲಿನಲ್ಲಿ ಮೊದಲು ಇಡಲಾಗಿತ್ತು. ಸ್ವಲ್ಪ ದಿನಗಳಲ್ಲಿ ಅವರನ್ನು ಬಾಯಖಳಾಕ್ಕೆ ಕಳಿಸಲಾಯಿತು. ಟಿಳಕರ ತೂಕವು ಕಡಿಮೆಯಾಗಹತ್ತಿತು. ತುಟಿಗಳು ಕಪ್ಪಾದವು. ಮೋರೆ ಕಳೆಗುಂದಿತು. ಮಾತನಾಡಲು ಕೂಡ ಸಾಮರ್ಥ್ಯವಿಲ್ಲದಾಯಿತು. ಶೆರೆಮನೆಯ ಅಧಿಕಾರಿಗಳೇ ಭೀತಿಗೊಂಡು ಅವರನ್ನು ಯರವಡಾಕ್ಕೆ ಕಳಿಸುವ ಭಾಗಬಿದ್ದಿತು.

ಇತ್ತ ಎಲ್ಲ ವೃತ್ತ ಪತ್ರಗಳೂ ಟಿಳಕರ ಬಗ್ಗೆ ಕೂಗನ್ನೆಬ್ಬಿಸಿದವು. ಅವರ ಪ್ರಕೃರ್ತಿಯ ಬಗ್ಗೆ ಚಿಂತೆಯನ್ನು ವ್ಯಕ್ತಮಾಡಿದವು. ಇದೇ ಸಮಯಕ್ಕೆ ಉಮರಾವತಿಯಲ್ಲಿ ಕಾಂಗ್ರೆಸ್ ನೆರೆದಿದ್ದಿತು. ಅಲ್ಲಿಗೆ ಈ ವರ್ತಮಾನ ಬಂದು ಎಲ್ಲರೂ ಚಿಂತಾಕ್ರಾಂತರಾದರು. ಕಾಂಗ್ರೆಸ್ಸಿನ ಅಧ್ಯಕ್ಷರಾದ ಶಂಕರ ನಾಯರರು ತಮ್ಮ ಭಾಷಣದಲ್ಲಿ ಟಿಳಕರಿಗೆ ಹಿಂದೀ ಜ್ಯೂರಿಗಳು ದೊರೆಯಲಿಲ್ಲವೆಂಬುದನ್ನು ಎತ್ತಿತೋರಿಸಿ, ಟಿಳಕರನ್ನು ರಾಜಕೀಯ ಕೈದಿಗಳಂತೆಯೇ ಇಂಗ್ಲಂಡದಲ್ಲಿ ನಡೆಯಿಸಿಕೊಳ್ಳುತ್ತಿದ್ದರೆಂದು ಪ್ರತಿಪಾದಿಸಿದರು. ಸುರೇಂದ್ರನಾಥ ಬ್ಯಾನರ್ಜಿಯವರು ಮಾತನಾಡುತ್ತ "ಟಿಳಕರು ನಿಜವಾಗಿಯೂ ನಿರಪರಾಧಿಗಳಿದ್ದಾರೆ. ಸಶರೀರವಾಗಿ ನನಗೆ ಟಿಳಕರ ಕತ್ತಲೆ ಕೋಣೆಯಲ್ಲಿ ಹೋಗಿ ಬರಲು ಬರದಿದ್ದರೂ ನನ್ನ ಆತ್ಮವು ಮಾತ್ರ ಅವರೊಡನೆಯೇ ಇರುವದೆಂಬುದನ್ನು ಮರೆಯಬೇಡಿರಿ. ಅವರಿಗೆ ನಿಜವಾದ ನ್ಯಾಯವು ಸಿಕ್ಕಲಿಲ್ಲ. ಈಗ ಕೊಟ್ಟ ತೀರ್ಪಿನಲ್ಲಿಯೂ ಹೆಸರಿಡುವಂಥ ಅನೇಕ ಮಾತುಗಳಿವೆ'' ಎಂದು ಹೇಳಿದರು. ಉಮೇಶಚಂದ್ರ ಬ್ಯಾನರ್ಜಿಯವರು ಟಿಳಕರ ಹೆಸರನ್ನೆತ್ತಿ 'ಸ್ಟ್ರಚಿ ಸಾಹೇಬರ ಅರ್ಥವು ದೇಶದಲ್ಲಿಯ ಯಾವ ವ್ಯಕ್ತಿಗೂ ಮಾನ್ಯವಾಗಿಲ್ಲ. ಮತ್ತು ಕಾಯದೆಯನ್ನೇ ಹಾಳುಮಾಡಿ ದೊಡ್ಡ ಅನರ್ಥವನ್ನೇ ಮಾಡಿದ್ದಾರೆಂದು' ಉದ್ಗಾರ ತೆಗೆದರು. ಸುರೇಂದ್ರನಾಥರು ಮಾತನಾಡುವ ಮುಂದೆ ಟಿಳಕರ ಹೆಸರನ್ನು ಉಚ್ಚರಿಸಿದ ಕೂಡಲೆ ಇಡೀ ಸಭೆಯೇ ಎದ್ದು ನಿಂತಿತು. ಎಷ್ಟೋ ಸಮಯದವರೆಗೆ ಟಿಳಕರ ಜಯ ಜಯಕಾರ ನಾಡಿತು. ಚಪ್ಪಾಳೆಯ ಸಪ್ಪಳದಲ್ಲಿ ಸುರೇಂದ್ರನಾಥರ ಧ್ವನಿಯು ಅಡಗಿಹೋಯಿತು. ಸರಕಾರವು ಟಿಳಕರನ್ನು ಯಾವುದೇ ದೃಷ್ಟಿಯಿಂದ ನೋಡಲಿ, ರಾಷ್ಟ್ರವಂತೂ ಮನ್ನಣೆಯನ್ನಿತ್ತಿತು. ಟಿಳಕರು

ಜನರ ಅಂತಃಕರಣದ ಗದ್ದುಗೆಯನ್ನೇರಿದ್ದರು. ಟಿಳಕರ ಬಗ್ಗೆ ಸ್ವಲ್ಪ ಸಹಾನುಭೂತಿಯನ್ನು ತೋರಿಸಿದರೆ ತೀರಿತು, ಮೇಲಧಿಕಾರಿಗಳು ನಿಮಗೆ ಟಿಳಕ ರಾಜನು ಬೇಕೋ ? ವ್ಹಿಕ್ಟೋರಿಯಾ ರಾಣಿ ಬೇಕೊ ? ಎಂದು ಗದ್ದರಿಸಿ ನವಕರಿಯಿಂದ ಮನೆಗೆ ಕಳಿಸುತ್ತಿದ್ದರು. ಇದರಿಂದ ಅವರ ರಾಜಪದವನ್ನು ಒಂದು ರೀತಿಯಿಂದ ಸರಕಾರವೂ ಒಪ್ಪಿಕೊಂಡಿತು, ಎಂದು ಹೇಳಲಡ್ಡಿಯಿಲ್ಲ. ಆದರೆ ಈ ರಾಜ್ಯಪದದಿಂದ ಟಿಳಕರ ಉಳ್ಳೀಗಡ್ಡಿ ಭಕ್ಕರಿಗಳು ಮಾತ್ರ ತಪ್ಪಲಿಲ್ಲ. ಮಲಗಲು ಕಂಬಳಿ ಬಿಡಲಿಲ್ಲ.

ಟಿಳಕರ ಮಿತ್ರರಾದ ಸೆಟ್ಲೂರರವರು ಜೇಲಿನಲ್ಲಿಯ ಟಿಳಕರ ಪ್ರಕೃತಿಯು ಪರಿಸ್ಥಿತಿಯನ್ನೆಲ್ಲ ವಿವರಿಸಿ, ಲಂಡನ್ನಿನಲ್ಲಿಯ ಹಾವರ್ಡ ಲೀಗಿಗೆ ಪತ್ರ ಬರೆದರು. ಲೀಗಿನ ಕಾರ್ಯದರ್ಶಿಗಳಾದ ವುಯಿಲ್ಯಂ ತಲ್ಲಕರವರು ತಾವೂ ಒಂದು ಪತ್ರ ಬರೆದು, ಭಾರತದ ಮಂತ್ರಿಗಳಾದ ಲಾರ್ಡ ಜಾರ್ಜ ಹ್ಯಾಮಿಲ್ಟರನ್ನರ ಕಡೆಗೆ ಕಳಿಸಿದರು. 'ಸೆಟ್ಲೂರರವರ ಅನೇಕ ವಿಧಾನಗಳು ತಪ್ಪುಯಿದ್ದು ನಿರಾಧಾರವಿವೆ. ಟಿಳಕರನ್ನು ಜೇಲಿನ ನಿಯಮದಂತೆಯೇ ನಡೆಸಿಕೊಳ್ಳಲಾಗುತ್ತದೆ. ಬೇಕಾದರೆ ಸೆಟ್ಲೂರರವರು ಸರಕಾರದ ಕಡೆಗೆ ಅರ್ಜಿ ಮಾಡಬಹುದೆಂದು'' ಲಾರ್ಡ ಜಾರ್ಜ ಹ್ಯಾಮಿಲ್ಟನ್ನರು ಉತ್ತರ ಕೊಟ್ಟರು.

ಈ ಉತ್ತರದಿಂದ ಹಾವರ್ಡಲೀಗಿಗೆ ಸಮಾಧಾನವಾಗದೆ ಮಿ. ತಲ್ಲಕರರವರು ಮತ್ತೊಂದು ಪತ್ರ ಬರೆದು 'ಒಂದು ವೇಳೆ ಜೇಲಿನಲ್ಲಿಯೇ ಟಿಳಕರು ಮರಣ ಹೊಂದಿದರೆ ಭಾರತದ ಜೇಲಿನ ಆಡಳಿತದ ಬಗ್ಗೆ ಎಲ್ಲ ಕಡೆಗೂ ಟೀಕೆಯ ಮಳೆಗರೆದೀತು ? ಸರಕಾರದ ದೃಷ್ಟಿಯಿಂದ ಇದು ಒಳ್ಳೆಯದಲ್ಲ' ಎಂದು ಎಚ್ಚರಿಸಿದರು. ಮೇಲೆ ಮೇಲೆ ಕಾರ್ಯದರ್ಶಿಗಳು ದರ್ಪ ತೋರಿಸಿದರೂ ಒಳಗೊಳಗೆ ಮುಂಬಯಿ ಸರಕಾರಕ್ಕೆ ಟಿಳಕರ ಬಗ್ಗೆ ಸೂಚನೆಗಳನ್ನು ಕೊಟ್ಟಿರಬೇಕು ಎಂದು ತೋರುವದು.

ಟಿಳಕರ ಈ ಸುದ್ದಿಯ ಮೂಲಕ ಭಾರತದ ಜೇಲಿನಲ್ಲಿ ಕೈದಿಗಳನ್ನು ನಿರ್ದಯತನದಿಂದ ನಡೆಸಿಕೊಳ್ಳುತ್ತಿರುವರೆಂಬ ಸಂಗತಿಯು ಲೀಗಿಗೆ ಗೊತ್ತಾಯಿತು. ಲೀಗು ಈ ಕುರಿತು ಕೆಳಗಿನ ಗೊತ್ತುವಳಿಗಳನ್ನು ಸ್ವೀಕರಿಸಿತು.

''ಭಾರತದಲ್ಲಿಯ ವೃತ್ತಪತ್ರಗಳು ಕಾಯದೇ ಭಂಗ ಮಾಡಿದ್ದಕ್ಕಾಗಿ ಇಲ್ಲವೆ ಭಂಗ ಮಾಡಿರುವವೆಂಬ ಆರೋಪಕ್ಕಾಗಿ, ಸದ್ಯಕ್ಕೆ ಯಾವ ಶಿಕ್ಷೆ

ಭೋಗಿಸಬೇಕಾಗುತ್ತದೆಯೋ ಅಥವಾ ಮುಂದೆ ಭೋಗಿಸಬೇಕಾಗುವದೋ ಆ ಬಗ್ಗೆ ನಮ್ಮ ಲೀಗಿಗೆ ಅನೇಕ ಅರ್ಜಿಗಳು ಬಂಧಿದ್ದು, ಇಂತಹ ಅಪರಾಧಗಳು ರಾಜಕೀಯವೆಂದು ತಿಳಿದು, ಇತರ ಅಪರಾಧಗಳಿಂದ ಇವುಗಳನ್ನು ಬೇರ್ಪಡಿಸಬೇಕೆಂದು ಈ ಸಭೆಯು ಅಭಿಪ್ರಾಯುವಿದೆ. ಮತ್ತು ಶಿಕ್ಷೆಯಲ್ಲಿಯೂ ಬದಲಾವಣೆಯಾಗಬೇಕೆಂದು ಅಪೇಕ್ಷಿಸುತ್ತದೆ'' ಈ ಸೂಚನೆಯು ಭಾರತ ಸರಕಾರದಲ್ಲಿ ಮಾನ್ಯವಾಗಲು ೨೦ ವರ್ಷಗಳು ಹಿಡಿದವು.

ಒಟ್ಟಿನಲ್ಲಿ ಇದರ ಪರಿಣಾಮವಾಗದೇ ಹೋಗಲಿಲ್ಲ. ಮುಂಬಯಿಯಲ್ಲಿ ಪ್ಲೇಗವೂ ಪ್ರಾರಂಭವಾಯಿತು. ಅದೇ ನೆವವನ್ನು ಮುಂದೆ ಮಾಡಿ, ಯರವಡಾ ಜೇಲಿಗೆ ಟಿಳಕರನ್ನು ತಂದರು. ದಿನಾಲು ಅವರಿಗೆ ಹಾಲು ತುಪ್ಪಗಳು ದೊರೆಯಹತ್ತಿದವು. ಆದರಿಂದ ಅವರ ಪ್ರಕೃತಿಯು ಮೆಲ್ಲ ಮೆಲ್ಲನೆ ಸುಧಾರಿಸಹತ್ತಿತು. ಬಣ್ಣವೆದ್ದುವ ಕೆಲಸವನ್ನು ಅವರಿಗೆ ಕೊಟ್ಟಿದ್ದರು. ಕೌನ್ಸಿನಲ್ಲಿ ಸಭಾಸದರಾದ ನ್ಯೂಜೆಂಟರು ಜೇಲಿಗೆ ಭೆಟ್ಟಿಕೊಟ್ಟಾಗ ಟಿಳಕರು ಬಣ್ಣ ಎದ್ದುತ್ತಿದ್ದರು. ನ್ಯೂಜಂಟರು ಅದನ್ನು ಕಂಡು 'ಏನು ನಿಮಗೆ ಈ ಕೆಲಸ ರುಚಿಸುವದೋ?' ಎಂದು ಪ್ರಶ್ನಿಸಲು, ಟಿಳಕರು 'ಇದ್ದ ಸ್ಥಿತಿಯಲ್ಲಿ ಈ ಕೆಲಸವು ಚೆನ್ನಾಗಿಯೇ ಇದೆ' ಎಂದು ಉತ್ತರಿಸಿದರು.

ತಾತ್ಯಾಸಾಹೇಬ ನಾತುರವರೂ ಅದೇ ಜೇಲಿನಲ್ಲಿ ಇದ್ದರು. ಅವರಿಗೆ ಮನೆಯಿಂದ ಊಟ ಬರುತ್ತಿದ್ದಿತು. ಅದರ ಸ್ವಲ್ಪ ಭಾಗವು ಟಿಳಕರ ಕೈಗೆ ಕೈದಿಗಳ ಮುಖಾಂತರ ಆಗೀಗ ದೊರೆಯುತ್ತಿದ್ದಿತು. ಇದರಿಂದ ನಾತುರವರ ಹಸಿವೆಯೂ ಹೆಚ್ಚಾಯಿತು.

ಒಂದು ವಿಚಿತ್ರ ಸಂಗತಿಯು ಘಟಿಸಿತು. ಅದೇ ಜೇಲಿನಲ್ಲಿದ್ದ ದಾಮೋದರ ಚಾಫೇಕರರಿಗೆ ಟಿಳಕರು ಯರವಡಾಕ್ಕೆ ಬಂದ ಸುದ್ದಿ ಹತ್ತಿತು. ಆಗ ಅವರು 'ಟಿಳಕರಿಂದ ಅರ್ಜಿ ಬರೆಯಿಸಿಕೊಳ್ಳುವೆ, ಅವರ ಭೆಟ್ಟಿ ಮಾಡಿಸಿರಿ' ಎಂದು ಜೇಲಿನ ಅಧಿಕಾರಿಗಳ ಕಡೆಗೆ ಅರ್ಜಿಯನ್ನು ಮಾಡಿದರು. ಟಿಳಕರಿಗೂ ರ್‍ಯಾಂಡಸಾಹೇಬನ ಕೊಲೆಗೂ ಯಾವ ಸಂಬಂಧವೂ ಇಲ್ಲೆಂಬುದು ತಿಳಿದು ಬಂದಿದ್ದರೂ ಸಂಶಯಗ್ರಸ್ತವಾದ ಸರಕಾರವು ಈ ಭೆಟ್ಟಿಯಲ್ಲಿ ಆ ಸಂಬಂಧದ ಮಾತುಗಳೇನಾದರೂ ಹೊರಬೀಳುವವೇನೋ? ನೋಡಬೇಕೆಂಬ ಬುದ್ಧಿಯಿಂದ ಅರ್ಜಿಗೆ ಮನ್ನಣೆ ಕೊಟ್ಟಿತು. ಟಿಳಕರೂ ಅರ್ಜಿ ಬರೆದುಕೊಟ್ಟರು.

ಟಿಳಕರ ಬಿಡುಗಡೆಯಾಗಬೇಕೆಂದು ಹಿಂದೀ ಬ್ರಿಟಿಶ ಮಿತ್ರರು ಪ್ರಯತ್ನಿಸುತ್ತಲೇ ಇದ್ದರು. ವುಯಿಲ್ಯಂ ಹಂಟರರಂತೂ ಪಾರ್ಲಿಮೆಂಟಿನಲ್ಲಿ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತ್ತಿದ್ದರು. ಉತ್ತರ ಕೊಡಲು ಸರಕಾರಕ್ಕೆ ಸಾಕುಬೇಕಾಯಿತು. ಟಿಳಕರು ಜೇಲಿನಲ್ಲಿ ಕೊಳೆಯುತ್ತಿರುವ ಸುದ್ದಿಯು ಯುರೋಪಿಯನ್ ವಿದ್ವಾಂಸರಲ್ಲಿ ಕಳವಳವನ್ನುಂಟು ಮಾಡಿತು. ಪ್ರಸಿದ್ಧ ವಿದ್ವಾಂಸರಾದ ಮ್ಯಾಕ್ಸಮುಲ್ಲರರು ಈ ಬಗ್ಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು. ಓರಾಯಿನ್ ಗ್ರಂಥದ ವಿಷಯದಲ್ಲಿ ಇಬ್ಬರಲ್ಲಿಯೂ ಪತ್ರ ವ್ಯವಹಾರ ನಡೆದು ಟಿಳಕರ ಯೋಗ್ಯತೆಯನ್ನು ಚೆನ್ನಾಗಿ ಅರಿತಿದ್ದರು. ವುಯಿಲ್ಯಂ ಹಂಟರ, ಕೇನ ಮೊದಲಾದವರ ಸಹಾಯದಿಂದ ಒಂದು ಅರ್ಜಿಯನ್ನು ಸಿದ್ಧಪಡಿಸಿ, ಸದ್ಗೃಹಸ್ಥರ ಅಂಕಿತ ತೆಗೆದುಕೊಂಡು ಮ್ಯಾಕ್ಸಮುಲ್ಲರರು 'ಓರಾಯಿನ್ ಗ್ರಂಥಕರ್ತರಾದ ಟಿಳಕರನ್ನು ಬಿಡುಗಡೆಮಾಡಬೇಕು' ಎಂದು ರಾಣೀ ಸರಕಾರಕ್ಕೆ ಅರ್ಜಿ ಕಳಿಸಿಕೊಟ್ಟರು. ಮತ್ತು ಋಗ್ವೇದದ ಪ್ರತಿಗಳನ್ನು ಟಿಳಕರಿಗೆ ಮುಟ್ಟುವಂತೆ ಮಾಡಿದರು.

ಟಿಳಕರು "ತಾವು ಪ್ರೇಮಪೂರ್ವಕವಾಗಿ ಕಳುಹಿದ ಋಗ್ವೇದ ಸಂಹಿತೆಗಳು ಜೇಲಿನ ಅಧಿಕಾರಿಗಳಿಂದ ಮುಟ್ಟಿದವು. ನನ್ನ ಬಿಡುಗಡೆಯಾಗಬೇಕೆಂಬ ಅರ್ಜಿಗೆ ತಾವು ಅಂಕಿತ ಹಾಕಿರುವಿರಿ ಎಂಬ ಸಂಗತಿಯು ತಿಳಿಯಿತ. ಅರ್ಜಿಯು ವಿಚಾರವಾಗಲಿ ಬಿಡಲಿ, ತಾವು ಮಾತ್ರ ಎಂದೂ ಮರೆಯದ ಉಪಕಾರ ಮಾಡಿರುವಿರಿ ತಮ್ಮ ಈ ಉಪಕಾರವನ್ನು ಯಾವ ಶಬ್ದಗಳಿಂದ ಮನ್ನಿಸಬೇಕೋ ತಿಳಿಯದಾಗಿದೆ" ಎಂದು ಉತ್ತರ ಕಳಿಸಿದರು. ಆ ಕಾಲದ ಜೇಲಿನ ಮುಖ್ಯಾಧಿಕಾರಿಯಾದ ಸಾಲೋಮನ್ನರ ಮೇಲೆ ಇದರ ಪ್ರಭಾವವು ಬಹಳವಾಯಿತು. ಟಿಳಕರಂಥ ವಿದ್ವಾಂಸರು ತನ್ನ ಜೇಲಿನಲ್ಲಿ ಇರುವರೆಂದು ಧನ್ಯತೆ ಎನಿಸಿತು. ಟಿಳಕರಿಗೆ ಓದಲು ಬರೆಯಲು ಅನುಕೂಲತೆಗಳನ್ನು ಅಂದಿನಿಂದ ಒದಗಿಸಿಕೊಟ್ಟರು. ಪುಸ್ತಕಗಳನ್ನು ತರಿಸಿಕೊಳ್ಳಲು ಅನುಮತಿಯಿತ್ತರು. ದವಾಖಾನೆಯಲ್ಲಿಯೇ ಊಟದ ವ್ಯವಸ್ಥೆ ಮಾಡಿದರು. ಟಿಳಕರು 'ದಿ ಆರ್ಕಟಿಕ್ ಹೋಮ ಇನ್ ದಿ ವೇದಾಜ' ಎಂಬ ಪ್ರಖ್ಯಾತವಾದ ಪ್ರಬಂಧವನ್ನು ಅಲ್ಲಿಯೇ ಬರೆದರು.

ಟಿಳಕರ ಬಿಡುಗಡೆಯ ಪ್ರಯತ್ನಗಳೂ ಪಾರ್ಲಿಮೆಂಟಿನಲ್ಲಿಯ ಪ್ರಶ್ನೆಗಳೂ ಸರಕಾರಕ್ಕೆ ತಲೆಶೂಲೆ ಎಬ್ಬಿಸಿದವು. ಆದುದರಿಂದ ತಾವಾಗಿಯೇ

ಬಿಟ್ಟರೆ ಸರಕಾರದ ಮರ್ಯಾದೆ ಹೋಗುವದು, ಟಿಳಕರಿಂದ ಅರ್ಜಿ ಬಂದರೆ ಒಳ್ಳೇಯದು. ಎಂಬ ಅಭಿಪ್ರಾಯ ವ್ಯಕ್ತಪಡಿಸಿತು. ಟಿಳಕರು 'ನನಗೆ ಶಿಕ್ಷೆಯಾದ ನಂತರ ಅನೇಕ ಸಂಗತಿಗಳು ಬಯಲಿಗೆ ಬಂದಿದ್ದು, ಕೊಲೆಗೂ ನನ್ನ ಲೇಖನಗಳಿಗೂ ಏನೂ ಸಂಬಂಧವಿಲ್ಲವೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ನನ್ನ ಬಿಡುಗಡೆಯಾಗಬೇಕೆಂದು ಅರ್ಜಿ ಕಳಿಸಿದರು. ಸಾಧಿಸಿದರೆ ಇನ್ನು ಮುಂದೆ ಎಂದೂ ರಾಜಕಾರಣದಲ್ಲಿ ಬೀಳುವದಿಲ್ಲೆಂದು ಬರೆಯಿಸಿ ಕೊಳ್ಳಬೇಕೆಂದು ಹವಣಿಸುತ್ತಿದ್ದ ಸರಕಾರವನ್ನು ತಮ್ಮ ಈ ಅರ್ಜಿಯಿಂದ ಪೇಚಿನಲ್ಲಿಯೇ ಕೆಡವಿದರು. ಅದಕ್ಕೆ ಏನು ಮಾಡಬೇಕೆಂಬುದು ಹೊಳೆಯದಾಯಿತು. ಬ್ರುಯಿನ್ನರು ಈ ಪ್ರಯತ್ನಕ್ಕೆ ಕೈಹಾಕಿದರು. ಖರೆಯುವ ರನ್ನು ಸರಕಾರವು ಕರೆಯಿಸಿಕೊಂಡಿತು. ಎಲ್ಲರೂ ಕೈಊರಿದರು. ಕೊನೆಗೆ ಟಿಳಕ ಹಾಗೂ ಖರೆಯುವರು ವಿಚಾರ ಮಾಡಿ "ಪುನಃ ಟಿಳಕರ ಮೇಲೆ ರಾಜದ್ರೋಹದ ಖಟ್ಲೆಯಾಗಿ ಅದು ಸಿದ್ಧವಾದರೆ, ಈಗ ಉಳಿದ ೬ ತಿಂಗಳ ಶಿಕ್ಷೆಯನ್ನು ಟಿಳಕರು ಆಗ ಅನುಭವಿಸಬೇಕು" ಎಂದು ತಾವೇ ಸೂಚಿಸಿ ದರು. ಈ ಸೂಚನೆಯು ಬ್ರುಯಿನ್ನರಿಗೆ ಯೋಗ್ಯವೆನಿಸಿತು. ಇದನ್ನು ಅವರು ಸರಕಾರದ ಮುಂದೆ ಇಟ್ಟರು. ಕೊನೆಗೆ ಸರಕಾರವು "(೧) ಅವರನ್ನು ಮುಕ್ತಮಾಡಿದ್ದಕ್ಕಾಗಿ ಇಲ್ಲವೆ ಶಿಕ್ಷೆಯಾದುದಕ್ಕಾಗಿ ಜನರು ನಡೆಸುವ ಸಮಾರಂಭದಲ್ಲಿ ಟಿಳಕರು ಭಾಗವಹಿಸಬಾರದು. (೨) ಮುಂದೆ ರಾಜದ್ರೋಹದ ಖಟ್ಲೆಯಾಗಿ ಅದು ಸಿದ್ಧವಾಗಿ ಶಿಕ್ಷೆ ವಿಧಿಸಲ್ಪಟ್ಟರೆ, ಈ ಆರು ತಿಂಗಳವನ್ನು ಆಗ ಅನುಭವಿಸಬೇಕು" ಎಂಬ ಕರಾರುಗಳನ್ನು ಹಾಕಿ ೬ನೇ ಸಪ್ಟಂಬರ ೧೮೯೮ ರ ರಾತ್ರಿ ಟಿಳಕರನ್ನು ಸರಕಾರವು ಜೇಲಿನಿಂದ ಮುಕ್ತಮಾಡಿತು.

ಟಿಳಕರಂತೂ ಮಾನಕ್ಕಾಗಿ ಹಪಾಪಿಸಿರಲಿಲ್ಲ. ಟಿಳಕರು ಉಪಸ್ಥಿತರಿರ ದಿದ್ದರೂ ಸಮಾರಂಭಗಳು ಸಾಂಗವಾದವು. ಎರಡನೆಯ ನಿಯಮವನ್ನಂತೂ ತಾವೇ ಸೂಚಿಸಿದ್ದರು. ಹಾ ಹಾ ಅನ್ನುವಷ್ಟರಲ್ಲಿ ಟಿಳಕರ ಬಿಡುಗಡೆಯ ಸುದ್ದಿಯು ದೇಶದಲ್ಲೆಲ್ಲ ಹಬ್ಬಿತು. ದೇಶ ಪರದೇಶಗಳಿಂದ ಅಭಿನಂದನಪರ ತಂತಿಗಳ, ಪತ್ರಗಳ ಸುರಿಮಳೆಯಾಯಿತು. ಮರುದಿನ ಸಾಯಂಕಾಲದೊಳ ಗಾಗಿ ೧೦ ಸಾವಿರಕ್ಕೆ ಮೇಲ್ಪಟ್ಟು ಜನರು ಬಂದು ಟಿಳಕರ ಭೆಟ್ಟಿಯನ್ನು

ತೆಗೆದುಕೊಂಡರು. ಟಿಳಕರು ವೃತ್ತಪತ್ರದ ಮುಖಾಂತರ ಸರ್ವರ ಆಭಾರ ವನ್ನು ಮನ್ನಿಸಿದರು.

ರಮೇಶಚಂದ್ರ ದತ್ತರು ಲಂಡನ್ನಿನಿಂದ ಬರೆದ ಪತ್ರದಲ್ಲಿ (೧೩-೧೦-೧೮೯೮) " ತಾವು ತೋರಿಸಿದ ಧೈರ್ಯ, ಕಷ್ಟ ಸಹಿಷ್ಣುತೆಗಳು ಅವರ್ಣನೀಯ ವಿವೆ. ಇಂತಹ ಗುಣಗಳಿದ್ದು, ಯಾವ ರಾಷ್ಟ್ರದ ಜನರು ದುಃಖಗಳನ್ನು ಸಹನ ಮಾಡುವರೋ ಆ ರಾಷ್ಟ್ರವೇ ಉದಯೋನ್ಮುಖವಾಗುವದು. ನಿಮ್ಮ ಉದಾಹರಣೆಯ ಸುಪರಿಣಾಮವು ನಮ್ಮ ರಾಷ್ಟ್ರದ ಮೇಲೆ ಖಂಡಿತವಾಗಿ ಆಗುವದು. ನಿಮ್ಮ ಶ್ರಮವು ಎಂದೂ ವ್ಯರ್ಥ ಹೋಗುವದಿಲ್ಲ. ಅದು ಒಳ್ಳೇ ಫಲವೀಯುವದು. ನಿಮ್ಮ ಬಗ್ಗೆ ರಾಷ್ಟ್ರದಲ್ಲಿ ಉಂಟಾದ ಸಹಾನುಭೂತಿ, ಆದರಬುದ್ಧಿ ಹಾಗೂ ಮಾನ್ಯತೆಗಳನ್ನು ಕಂಡು ನಿಮ್ಮಂತೆ ನನಗೂ ಧನ್ಯತೆ ಎನಿಸುತ್ತದೆ. ನಿಮ್ಮ ಕಷ್ಟ ಸಹಿಷ್ಣುತೆಯಿಂದ ರಾಷ್ಟ್ರಕ್ಕೆ ಯಶ ದೊರೆಯುತ್ತಿ ರುವುದನ್ನು ನೋಡಿ ಮನಸ್ಸು ಆನಂದ ಸಾಗರದಲ್ಲಿ ಮುಳುಗುತ್ತದೆ"

ವಿಲಿಯಂ ಕೇನರು "ನಿಮ್ಮ ಮನಸ್ಸಿನ ಧಾರ್ಮಿಕ ಪ್ರವೃತ್ತಿಯನ್ನು ಅರಿತ ನಾನು,ದುಃಖ ಹಾಗೂ ಕಷ್ಟಗಳು ಮಾನವನನ್ನು ಪೂರ್ಣತೆಗೊಯ್ಯುವ ಸಾಧನಗಳೆಂದು ಹೇಳಿದರೆ, ತಾವು ನನ್ನ ಮಾತನ್ನು ಅಲ್ಲಗಳೆಯಲಿಕ್ಕಿಲ್ಲ. ಅಗ್ನಿ ದಿವ್ಯದಿಂದ ಪರಿಶುದ್ಧರಾಗಿ, ಉದಾತ್ತರಾಗಿ, ತಾವು ಹೊರಬೀಳುತ್ತಿರುವಿರಿ. ಭಾರತದ ಇಂದಿನ ಪರಿಸ್ಥಿತಿಯನ್ನು ನೋಡಿದರೆ, ಇಂತಹ ಸಂಕಟ ಸಮಯ ದಲ್ಲಿ ಯಾರಾದರೊಬ್ಬ ದೊಡ್ಡ ಮನುಷ್ಯರು ಸರಕಾರದ ರೋಷಕ್ಕೆ ಬಲಿ ಯಾಗುವದು ಅಪರಿಹಾರ್ಯವಿದ್ದಿತು. ಆ ಮಾನವು ತಮಗೆ ದೊರೆತದ್ದು ಭೂಷ ಣವೇ. ಭಾರತದ ಈ ಕಾಲದ ಇತಿಹಾಸ ಬರೆಯುವವರು ನಿಮ್ಮ ಯೋಗ್ಯತೆ ಯನ್ನು ಚಿತ್ರಿಸಲೇಬೇಕು. ಮತ್ತು ರಾಜಕೀಯ ಸ್ವಾತಂತ್ರ್ಯಕ್ಕಾಗಿ ತಾವು ಸಹಿಸಿದ ಕಷ್ಟಕ್ಕಾಗಿ ನಿಮ್ಮ ಮುಂದಿನ ಪೀಳಿಗೆಯು ನಿಮ್ಮ ಬಗ್ಗೆ ಅಭಿಮಾನ ತಾಳುವದರಲ್ಲಿ ಸಂಶಯವಿಲ್ಲ; ಮತ್ತು ಅದು ಯೋಗ್ಯವೇ ಇದೆ" ಎಂದು ಬರೆ ದಿದ್ದರು (೩-೧೧-೧೮೯೮)

---

# ವಿಶ್ರಾಂತಿ

ಒಂದು ವರ್ಷದ ಶೆರೆಮನೆಯ ವಾಸದಿಂದ ಟಿಳಕರ ಪ್ರಕೃತಿಯು ತೀರ ಕೆಟ್ಟಿತು. ಮೊದಲಿನ ಸಶಕ್ತ ಶರೀರ, ಸಿಂಹದಂತಹ ಮುಖ ಮಾಯವಾಗಿದ್ದವು. ಕಣ್ಣುಗಳು ಒಳಸಟ್ಟಿದ್ದವು ತುಟಿಗಳು ಕಪ್ಪಿಟ್ಟಿದ್ದವು. ಮಾಂಸವೆಲ್ಲ ಮಾಯವಾಗಿ ಕೇವಲ ಎಲುವಿನ ಹಂದರ ಮಾತ್ರ ಕಾಣಿಸುತ್ತಿದ್ದಿತು. ಸ್ವಲ್ಪೇ ನಡೆದರೂ ಆಯಾಸವಾಗುತ್ತಿದ್ದಿತು. ಮೇಲೆ ದರ್ಶನಾಕಾಂಕ್ಷಿಗಳ ಆತುರತೆ. ಈಗ ಅವರ ಪ್ರಕೃತಿಯ ಸುಧಾರಣೆಯೇ ಮುಖ್ಯವಾದ ಮೊದಲನೇ ಕೆಲಸವಾಗಿದ್ದಿತು. ಅವರ ಮಿತ್ರರೆಲ್ಲರೂ ಸಿಂಹಗಡದಲ್ಲಿ ಒಂದು ತಿಂಗಳು ವಿಶ್ರಾಂತಿ ಪಡೆಯಲು ಸಲಹೆಯನ್ನಿತ್ತರು.

ವಿಶ್ರಾಂತಿಗಾಗಿ ಟಿಳಕರು ಕುಟುಂಬ ಸಮೇತರಾಗಿ ಸಿಂಹಗಡಕ್ಕೆ ಹೋದರು. ಅಲ್ಲಿಯ ಶಾಂತ, ನಿರಾಮಯ ವಾತಾವರಣವು ಅವರಿಗೆ ಚೆನ್ನಾಗಿ ಮಾನಿಸಿತು. ಯಾವ ತೊಂದರೆಗಳೂ ಇರಲಿಲ್ಲ, ಕಾರ್ಯದ ಕಟಕಟಿಯೂ ಇರಲಿಲ್ಲ. ನಯನ ಮನೋಹರವಾದ ಸೃಷ್ಟಿಸೌಂದರ್ಯ, ಸೂರ್ಯೋದಯ, ಸೂರ್ಯಾಸ್ತಗಳ ರಮ್ಯನೋಟ, ಮಕ್ಕಳೊಡನೆ ಆಟಪಾಟ, ಗೆಳೆಯರೊಡನೆ ಹರಟೆ, ಇಚ್ಛಿತ ವಿಷಯಗಳ ವಾಚನ, ಹೊತ್ತಿಗೆ ಊಟ, ಶುದ್ಧ ಹಾಗೂ ಪಾಚಕವಾದ ನೀರು, ಒಳ್ಳೇ ಹವೆ ಇವುಗಳಿಂದ ಅವರ ಪ್ರಕೃತಿಯು ತೀವ್ರಗತಿಯಿಂದ ಸುಧಾರಿಸಹತ್ತಿತು. ಗೆಳೆಯರು ತಾವಾಗಿಯೇ ಬಂದು, ಒಂದೆರಡು ದಿನಗಳಿದ್ದು ಹೋಗುತ್ತಿದ್ದರು. ತಮಗೆ ಬೇಕಾದವರನ್ನು ಕರೆಯಿಸಿಕೊಳ್ಳುತ್ತಿದ್ದರು. ತಿಂಗಳೊಪ್ಪತ್ತಿನಲ್ಲಿಯೇ ಕಿಲ್ಲೆಯ ಅರ್ಧ ಪಾವುಟಗೆಗಳನ್ನು ಏರಿಳಿಯುವ ಶಕ್ತಿ ಬಂದಿತು. ಮುಂದೆ ಒಂದು ತಿಂಗಳೆನ್ನುವದರ ಒಳಗಾಗಿ ಪ್ರಕೃತಿಯು ಪೂರ್ಣ ಸುಧಾರಿಸಿತು.

ಮೆಲ್ಲಮೆಲ್ಲನೆ ಅವರ ಮನಸ್ಸು ಕಾರ್ಯಗಳ ಕಡೆಗೆ ಹೊರಳಿತು. ಡಿಸೆಂಬರದಲ್ಲಿ ಮದ್ರಾಸಿನಲ್ಲಿ ಕಾಂಗ್ರೆಸ್ಸಿನ ಅಧಿವೇಶನವು ನಡೆಯಲಿದ್ದಿತು. ಅದಕೆ ಟಿಳಕರಿಗೆ ಆಮಂತ್ರಣವೂ ಬಂದಿತು. ಪ್ರತಿನಿಧಿಗಳಾಗಿ ಹೋದರು. ವಿಷಯ

ನಿಯಾಮಕ ಕಮಿಟಿಗೂ ಆರಿಸಲ್ಪಟ್ಟರು. ಎಂದಿನಂತೆ ಅವರು ಸಭೆಯಲ್ಲಿ ಭಾಷಣ ಮಾಡಲಿಲ್ಲ. ಅವರ ಪ್ರತಿಸ್ಪರ್ಧಿಗಳು ಅದಕ್ಕೆ ವಿಪರೀತ ಅರ್ಥ ಹಚ್ಚಿದರು. ಸರಕಾರದ ದಬ್ಬಾಳಿಕೆಗೆ ಟಿಳಕರು ಬೆದರಿರಬೇಕು. ಇಲ್ಲವೆ, ಸರಕಾರಕ್ಕೆ ಹಾಗೆ ಬರೆದು ಕೊಟ್ಟಿರಬೇಕು. ಎಂದು ತಮ್ಮ ತಮ್ಮಲ್ಲಿ ಗುಣಗುಟ್ಟಹತ್ತಿದರು. ಆದರೆ ಇದೆಲ್ಲವೂ ಶುಷ್ಕತರ್ಕವಿದ್ದಿತು. ಅವರವರ ಲ್ಲಿಯೇ ಉತ್ತರಗಳೂ ದೊರೆಯುತ್ತಿದ್ದವು. ಕಾಂಗ್ರೆಸ್ ಮುಗಿದೊಡನೆ ಟಿಳಕರು ರಾಮೇಶ್ವರ ಯಾತ್ರೆಗೆ ಹೊರಟರು. ಇದಾವುದೂ ಅವರ ಕಿವಿಯ ಮೇಲೆ ಬಿದ್ದಿರಲಿಲ್ಲ. ಮಧ್ಯದಲ್ಲಿ ಸೌಥ ಇಂಡಿಯನ್ ಪೋಷ್ಟದ ಸುದ್ದಿಗಾರನು ಟಿಳಕರಿಗೆ ಭೆಟ್ಟಿಯಾಗಿ, ಈ ಸಂಗತಿಗಳನ್ನೆಲ್ಲ ತಿಳಿಸಿ, ನಿಜವಾದ ಸಂಗತಿ ಏನೆಂದು ಕೇಳಿದನು. ಇದು ಒಳ್ಳೆಯ ಸಂಧಿ ಎಂದು ಬಗೆದು ಟಿಳಕರು 'ನನಗೆ ಮಾತನಾಡಲು ಯಾರೂ ಪ್ರತಿಬಂಧಿಸಿಲ್ಲ. ಮಾತನಾಡಲು ಆಗ್ರಹವೂ ಮಾಡಲ್ಪಟ್ಟಿದೆ. ಆದರೆ ಒಮ್ಮೆ ನಾನು ಮಾತನಾಡಿದರೆ ವ್ಯಾಖ್ಯಾನಕ್ಕೆ ಆಮಂತ್ರಣಗಳ ಸುರಿಮಳೆಯಾಗುವದು. ನನ್ನ ಪ್ರಕೃತಿಯು ಸೂಕ್ಷ್ಮವಾಗಿದ್ದು ವ್ಯಾಖ್ಯಾನಕೊಟ್ಟು ತಾಳಿಕೊಳ್ಳುವಷ್ಟು ಸಾಮರ್ಥ್ಯವಿಲ್ಲ. ಸಭೆಗಳಲ್ಲಿ ಮಾತನಾಡುವದಿಲ್ಲೆಂದು ನಾನೇನು ವಚನಬದ್ಧನಾಗಿಲ್ಲ' ಎಂದು ಸ್ಪಷ್ಟೀಕರಿಸಿದರು. ಕೊನೆಗೆ 'ತಾವು ಮುಂದೆ ಏನು ಮಾಡುವಿರಿ?' ಎಂದು ಪ್ರಶ್ನಿಸಲು ಟಿಳಕರು 'ನಾನು ಇಲ್ಲಿಯವರೆಗೆ ಏನು ಮಾಡುತ್ತ ಬಂದಿರುವೆನೋ ಅದನ್ನೇ ಮುಂದೂ ಮಾಡುವೆನು' ಎಂದು ಸ್ವಲ್ಪದರಲ್ಲಿಯೇ ಸಮರ್ಪಕ ಉತ್ತರಕೊಟ್ಟರು.

ಕಾಂಗ್ರೆಸ್ಸಿಗಾಗಿ ಟಿಳಕರು ಮದ್ರಾಸಿಗೆ ಬರುವರೆಂಬ ಸುದ್ದಿಯನ್ನು ಕೇಳಿ, ಹಿಂದೂ ಮತ್ತು ಮದ್ರಾಸ ಸ್ಟ್ಯಾಂಡರ್ಡ ಪತ್ರಿಕೆಗಳು ಆನಂದವನ್ನು ವ್ಯಕ್ತ ಮಾಡಿದವು. ಅವರಿಗೆ ಇಳಿಯಲು ಕರ್ನಲ ಕಸಲ ಎಂಬ ಬಂಗ್ಲೆಯಲ್ಲಿ ವ್ಯವಸ್ಥೆಮಾಡಲಾಗಿದ್ದಿತು. ಸುಪ್ರಸಿದ್ಧ ಸಾಲಿಸಿಟರರಾದ ಬಿಲಗಿರಿ ಅಯಂಗಾರರ ಅತಿಥಿಗಳಾಗಿದ್ದರು. ಮದ್ರಾಸಿನ ಅನೇಕ ಪ್ರಮುಖರು ಟಿಳಕರಿಗಾಗಿ ಸತ್ಕಾರ ಸಮಾರಂಭಗಳನ್ನು ಏರ್ಪಡಿಸಿದರು. ರಾಜಾ ಸರ್, ಟಿ. ಮಾಧವ ರಾಯರ ಮನೆಯಲ್ಲಿ ಹಳೆಯ ಮಹಾರಾಷ್ಟ್ರೀಯರೆಲ್ಲರೂ ಟಿಳಕರಿಗೆ ಸನ್ಮಾನ ಮಾಡಿದರು. ಮಾಧವರಾಯರ ಮಗನು ಬಂಗಾರದ ಸರಪಳಿಯೊಂದನ್ನು

ಟಿಳಕರಿಗೆ ಸಮರ್ಪಿಸಿದನು. ಟಿಳಕರು ಮದ್ರಾಸನ್ನು ಬಿಡುವ ಮೊದಲು ಅನೇಕ ವೃತ್ತಪತ್ರಕಾರರಿಗೆ, ಪ್ರಮುಖ ವಕೀಲರಿಗೆ, ಪ್ರೊ. ರಂಗಾಚಾರ್ಯ ರಂಥ ವಿದ್ವಾಂಸರಿಗೆ, ಕರ್ನಲ ಕಸಲಿನಲ್ಲಿ ಭೋಜನ ಸಮಾರಂಭವನ್ನು ಏರ್ಪಡಿಸಿದರು. ಸಮಾರಂಭದ ನಂತರ ರಾಮೇಶ್ವರ ಯಾತ್ರೆಗೆ ಟಿಳಕರು ಹೊರಟರು.

ಮದ್ರಾಸದಿಂದ ಮಧುರೆಗೆ ಬಂದರು. ಮಧುರೆಯಿಂದ ಎತ್ತಿನ ಬಂಡೆ ಯಲ್ಲಿ ರಾಮೇಶ್ವರಕ್ಕೆ ಹೋದರು. ಅಲ್ಲಿಯ ಕಾರ್ಯವನ್ನು ಮುಗಿಸಿಕೊಂಡ ನಂತರ, ಸಿಂಹಳಕ್ಕೆ ಹೋಗುವ ನಿಶ್ಚಯ ಮಾಡಿದರು. ಸಿಂಹಳದ ಪ್ರಾಚೀನ ಸಂಸ್ಕೃತಿಯ ಬಗೆಗೆ ಅವರಿಗೆ ಆತ್ಮೀಯತೆ ಎನಿಸುತ್ತಿದ್ದಿತು. ಅಲ್ಲಿಯ ಬುದ್ಧ ದೇವಾಲಯ ಹಾಗು ಸ್ಮಾರಕ ಸ್ಥಾನಗಳನ್ನು ಸಂದರ್ಶಿಸಿದರು. ಹಸ್ತಲಿಖಿತ ಪ್ರಾಚೀನ ಗ್ರಂಥಗಳನ್ನು ಅವಲೋಕಿಸಿದರು. ಅಲ್ಲಿಯ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಪರಿಸ್ಥಿತಿಯನ್ನು ನಿರೀಕ್ಷಿಸಿದರು. ಅದರಲ್ಲಿ ರಮಮಾಣರಾದರು. ಮುಂದೆ ೧೮೯೯ ರಲ್ಲಿ ಲಖನೌ ಕಾಂಗ್ರೆಸ್ಸಿನ ನಂತರವೂ ಎರಡನೇ ಸಾರೆ ಪ್ರವಾಸವನ್ನು ಕೈಕೊಂಡು, ಬ್ರಹ್ಮದೇಶವನ್ನು ಸಂದರ್ಶಿಸಿದರು. ಬುದ್ಧನ ಭವ್ಯವಾದ ಸುವರ್ಣಮಂದಿರವನ್ನು ಕಂಡು ಹರ್ಷಬಟ್ಟರು. ರಂಗೂನ ಮಂಡಾಲೆಗಳಿಗೆ ಭೆಟ್ಟಿಯಿತ್ತರು. 'ಅಲ್ಲಿಯ ಜನಾಂಗ, ನಡೆ, ನುಡಿ, ಸಂಸ್ಕೃತಿಗಳನ್ನು ಅಭ್ಯಸಿಸಿದರು ಮುಂದೆ ೬ ವರ್ಷ ಇದೇ ಪಟ್ಟಣದ ಜೇಲಿ ನಲ್ಲಿ ಕಾಲಕಳೆಯುವ ಪ್ರಸಂಗವಿದೆ ಎಂಬುದು ಆಗ ಅವರಿಗೇನು ಗೊತ್ತು ? ಟಿಳಕರು ಹೌಸಿನಿಂದ ಪ್ರವಾಸ ಮಾಡಿದ್ದು, ಇದೇ ಎರಡು ಸಲ. ಭಾರತ ದಲ್ಲೆಲ್ಲ ಸಂಚರಿಸಿದ್ದರೂ ಕಾರ್ಯನಿಮಿತ್ತವಾಗಿ ಮಾತ್ರ. ಟಿಳಕರು ತಮ್ಮ ಇವೇ ಎರಡು ಪ್ರವಾಸಗಳನ್ನು ಕುರಿತು, ಪ್ರವಾಸವೃತ್ತವನ್ನು ಬರೆದಿರುವರು. ಇರಲಿ. ಈ ಸುಖ ಪ್ರವಾಸವನ್ನು ಮುಗಿಸಿಕೊಂಡು, ಆರೋಗ್ಯವಂತರಾಗಿ ೧೮೯೯ ನೇ ಫೆಬ್ರುವರಿಯಲ್ಲಿ ಮರಳಿ ಪುಣೆಗೆ ಬಂದರು.

---

ಐದನೆಯ ಘಟ್ಟ

# ಲೋಕಮಾನ್ಯರು

## ೧೮೯೯—೧೯೦೫

## ಪುನಶ್ಚ ಹರಿಃ ಓಂ!

ಟಿಳಕರ ರಾಜದ್ರೋಹದ ಪ್ರಕರಣವು ಅವರ ಕೀರ್ತಿಯನ್ನು ಭಾರತ ದಲ್ಲೆಲ್ಲ ಬೀರಿತು. ಅವರಿಗೆ ಲೋಕಮಾನ್ಯರೆಂಬ ಬಿರುದನ್ನು ತಂದು ಕೊಟ್ಟಿತು. ಇದು ಬ್ರಿಟಿಶರ ಕುತೂಹಲವನ್ನು ಕೆರಳಿಸಿತು. ಅವರ ಕಾರ್ಯಕ್ಷೇತ್ರವೂ ವಿಸ್ತಾರಗೊಂಡಿತು. ಇಂದು ಅವರು ಪುಣೆಯ-ಮಹಾ ರಾಷ್ಟ್ರದ ಮುಖಂಡರಲ್ಲ, ಭಾರತೀಯ ಮುಖಂಡರೆಂದು ಜನತೆಯೂ ಸರ ಕಾರವೂ ಭಾವಿಸಹತ್ತಿತು. ಟಿಳಕರ ಮುಂದಿನ ಚಟುವಟಿಕೆಗಳು ಭಾರತ ವ್ಯಾಪಿಯಾದವುಗಳೆಂದು ಕಂಡು ಬರುವದು. ಮತ್ತು ಮುಂದೆ ಅವರು ಸ್ಥಳೀಯ ಹಾಗೂ ಪ್ರಾದೇಶಿಕ ಪ್ರಶ್ನೆಗಳಿಗಿಂತಲೂ ಹೆಚ್ಚಾಗಿ ಅಖಿಲ ಭಾರತೀಯ ಪ್ರಶ್ನೆಗಳನ್ನು ಬಿಡಿಸುವದರಲ್ಲಿಯೇ ಮಗ್ನರಾದುದು ಗೋಚರ ವಾಗುವದು.

ಸಿಂಹಳದಿಂದ ೧೮೯೯ರ ಫೆಬ್ರುವರಿಯಲ್ಲಿ ಪುಣೆಗೆ ಟಿಳಕರು ಮರಳು ವದಕ್ಕೂ ದ್ರವಿಡ ಬಂಧುಗಳ ಕೊಲೆಯಾಗುವದಕ್ಕೂ ಗಂಟುಬಿದ್ದಿತು. ಆಂಗ್ಲೋ ಇಂಡಿಯನ್ನ ಪತ್ರಗಳು ಆಕ್ರೋಶಮಾಡಿದವು. ಅದಕ್ಕಾಗಿ ಟಿಳಕರು ಉಸುರೊಡೆಯಲಿಲ್ಲ. ಅಷ್ಟರಲ್ಲಿ ಕೊಲೆ ಮಾಡಿದ ವಾಸುದೇವ ಹಾಗೂ ರಾನಡೆ ಎಂಬುವವರು ಸಿಕ್ಕಿದ್ದರಿಂದ ಟಿಳಕರಿಗೂ ಈ ಕೊಲೆಗೂ ಏನೂ ಸಂಬಂಧವಿಲ್ಲೆಂದು ಜನರಿಗೆ ಗೊತ್ತಾಯಿತು. ಅವರ ವಿಚಾರಣೆ ಯಾಗಿ ಫಾಶಿ ಶಿಕ್ಷೆ ವಿಧಿಸಿದೊಡನೆ ವಾಸುದೇವ ಹಾಗೂ ರಾನಡೆಯವರು ಅದನ್ನು ಸ್ವೀಕರಿಸಿದರಲ್ಲದೆ 'ಬೇಕಾದರೆ ಮುಂದಿನ ಜನ್ಮದ ಶಿಕ್ಷೆಯನ್ನು ಈಗಲೇ ಕೊಡಿರಿ' ಎಂದು ಉತ್ತರಕೊಟ್ಟರು. ಮರಾಠಾ ವೃತ್ತಪತ್ರವು

ಇವರಿಗೆ ಧೈರ್ಯ ಶಾಲಿಗಳು ದೊಡ್ಡ ಮನಸ್ಸಿನವರೂ ಎಂದು ವಿಶೇಷಣ ಕೊಟ್ಟಿತ್ತು. ಇದನ್ನೇ ಮುಂದುಮಾಡಿ ಟಿಳಕರು ಬಹಿರಂಗವಾಗಿ ಕೊಲೆ ಗಡಕರ ನಿಷೇಧ ಮಾಡಬೇಕೆಂದು ಮುಂಬೈ ಚಾಂಪಿಯನ್ ಪತ್ರಿಕೆಯು ಗುಲ್ಲೆಬ್ಬಿಸಿತು. ಆದರೆ ಯಾರೂ ಅದಕ್ಕೆ ಲಕ್ಷ್ಯಗೊಡಲಿಲ್ಲ.

ಟಿಳಕರು ಪರಿಸ್ಥಿತಿಯನ್ನು ನಿರೀಕ್ಷಿಸುತ್ತಿದ್ದರು. ಮೆಲ್ಲನೆ ಕೇಸರಿಯ ಸಂಪಾದಕತ್ವವನ್ನು ವಹಿಸುವ ಸಿದ್ಧತೆ ನಡೆಯಿಸಿದರು. ೧೮೯೯ನೇ ಜುಲೈ ೪ ಕ್ಕೆ 'ಪುನಶ್ಚ ಹರಿ : ಓಂ' ಎಂಬ ಅಗ್ರಲೇಖವನ್ನು ಬರೆದು ರಾಜಕೀಯ ರಂಗದಲ್ಲಿ ಕಾಲಿಟ್ಟರು. 'ಪುನಶ್ಚ ಹರಿ : ಓಂ' ಎಂಬ ತಲೆಬರಹವನ್ನು ನೋಡಿದೊಡನೆಯೇ ಟಿಳಕರು ಕೇಸರಿಯನ್ನು ಕೈಯಲ್ಲಿ ತೆಗೆದುಕೊಂಡ ರೆಂದು ಜನರು ಆನಂದದಿಂದ ಕುಣಿದಾಡಿದರು.

ಟಿಳಕರು ಈ ಲೇಖದಲ್ಲಿ ಪುನಃ ಈ ಸುದಿನವನ್ನು ಒದಗಿಸಿಕೊಟ್ಟಿದ್ದ ಕ್ಕಾಗಿ ದೇವರನ್ನು ಎಲ್ಲಕ್ಕೂ ಮೊದಲು ಪ್ರಾರ್ಥಿಸಿದ್ದಾರೆ. ತಮ್ಮ ಸಂಕಟ ಸಮಯದಲ್ಲಿ ಎಲ್ಲ ಬಗೆಯಿಂದ ಸಹಾಯ ನೀಡಿದ ಜನರ ಉಪಕಾರವು ತಾವು ಆಮರಣ ಪರ್ಯಂತವಾಗಿ ಸೇವೆಗೈದರೂ ತೀರದೆಂದೆನಿಸಿ, ತಮ್ಮನ್ನು ಬಿಡಿಸಿದ, ಜಾಮೀನಾದ, ವೃತ್ತಪತ್ರಗಳನ್ನು ಇಲ್ಲಿಯವರೆಗೆ ನಡೆಯಿಸಿ ಕೊಂಡು ಬಂದ, ಸಹಾಯವನ್ನು ಸಲ್ಲಿಸಿದ, ಎಲ್ಲರನ್ನೂ ಅಂತಃಕರಣ ಪೂರ್ವಕವಾಗಿ ಅಭಿನಂದಿಸಿ, 'ನಾನು ಇಲ್ಲಿಯವರೆಗೆ ಯಾವ ಆಯುಷ್ಯ ಕ್ರಮವನ್ನು ಅಂಗೀಕರಿಸಿದ್ದೆನೋ ಅದರಲ್ಲಿಯೇ ನಾನು ಬದ್ಧಕಂಕಣ ನಾಗಿರುವಂತೆ ಮಾಡಿದ ಶ್ರೇಯಸ್ಸೆಲ್ಲವೂ ಜನತೆಗೇ ಇದೆ' ಎಂದು ಜನತೆಯ ಆಭಾರ ಮನ್ನಿಸಿದ್ದಾರೆ. ಕೇಸರಿಯ ಮೇಲೆ ಖಟ್ಲೆ ಮಾಡಿದ ಮೂಲಕ, ಜನ ಜಾಗ್ರತಿಯಾಗಿ, ರಾಷ್ಟ್ರೀಯತ್ವವು ಬೆಳೆದುದರ ಶ್ರೇಯವೆಲ್ಲ ಸರಕಾರ ಕ್ಕೆಂದು ಸರಕಾರದ ಆಭಾರವನ್ನು ಮನ್ನಿಸಿದ್ದಾರೆ.

ತಾವು ಜೋಲಿಗೆ ಹೋದಾಗಿನಿಂದ ಇಲ್ಲಿಯವರೆಗಿನ ಪರಿಸ್ಥಿತಿಯ ಅವಲೋಕನಮಾಡಿ "ಒಟ್ಟಿನಲ್ಲಿ ೧೮೯೭ನೇ ವರ್ಷಕ್ಕಿಂತಲೂ ಈಗ ಪರಿ ಸ್ಥಿತಿಯು ಸುಧಾರಿಸಿದೆ ಎನ್ನಬಹುದು ಇಂತಹ ಬಿರುಗಾಳಿಯಿಂದ ನಾವು ಪಾರಾದುದು ಪರಮೇಶ್ವರನ ಕೃಪೆಯೇ ಸರಿ. ನಿಪುಣ ನಾವಿಕನು ತನ್ನ ನಾವೆಯಲ್ಲಿಯ, ಗಾಳಿಪಟ, ಜೋಲಿಹಿಡಿಯುವ ಕಂಬ, ನಾವು, ಮೊದ

ಲಾದವುಗಳು ಸರಿಯಾಗಿರುವವೋ ಇಲ್ಲವೋ ಎಂಬುದನ್ನು ನೋಡಿಕೊಂಡು ಮುಂದೆಸಾಗುವನು. ನಾವು ಈ ದೃಷ್ಟಿಯಿಂದ ವಿಚಾರಮಾಡಿದರೆ, ಮುದ್ರಣ ಸ್ವಾತಂತ್ರ್ಯಕ್ಕೆ ಈ ಎರಡು ವರ್ಷಗಳಲ್ಲಿ ಬಹಳ ಹಾನಿ ತಟ್ಟಿದೆ. ಖಾಸಗಿ ಶಾಲೆಯ ಶಿಕ್ಷಕರು ಕೂಡ ರಾಜಕಾರಣದಲ್ಲಿ ಸೇರಬಾರದೆಂದು ಪ್ರತಿಬಂಧಿಸಲ್ಪಟ್ಟಿದೆ. ರಾಜದ್ರೋಹದ ಕಲಮಿನ ಕ್ಷೇತ್ರವು ವಿಸ್ತಾರವಾಗಿದೆ ಎಂದು ಕಂಡುಬರುವದು.

ಸರಕಾರವು ರಾಜದ್ರೋಹದ ವ್ಯಾಖ್ಯೆಯನ್ನು ಮೇಲಿಂದಮೇಲೆ ಹೇಗೆ ಬದಲಿಸುತ್ತ ಬಂದಿದೆ ಎಂಬ ವಿವೇಚನೆಯನ್ನು ಮಾಡಿ "ರಾಷ್ಟ್ರದ ವಿಷಯದಲ್ಲಿ ನಮಗೆ ಅನೇಕ ಕರ್ತವ್ಯಗಳಿವೆ. ಅವುಗಳೇನೂ ರಾಜದ್ರೋಹವಲ್ಲ. ಆದರೆ, ಅವುಗಳನ್ನು ಯಾವ ಶಬ್ದಗಳಿಂದ ವ್ಯಕ್ತಪಡಿಸಬೇಕೆಂಬುವದರಲ್ಲಿಯೇ ವಾದವಿದೆ........ಸರಕಾರವು ಮಾತ್ರ ತನ್ನ ವ್ಯಾಪ್ತಿ ಎಷ್ಟೆಂಬುದನ್ನು ನಿಶ್ಚಿತ ಮಾಡಬೇಕು. ಆದರಲ್ಲಿ ಬದಲಾವಣೆಗಳನ್ನು ಮಾಡುವದಿದ್ದರೆ, ಕಾಯದೆ ಯಿಂದ ಮಾಡಬೇಕು. ಬಲಿ ತೆಗೆದುಕೊಂಡ ನಂತರವೇ, ಮಾಡಬೇಡಿರೆಂದು ಸರಕಾರಕ್ಕೆ ನಮ್ಮ ಬಿನ್ನಹವಿದೆ."

ತಾವು ತಮ್ಮ ಧ್ಯೇಯ ಸಾಧನೆಗಾಗಿ. ತಮ್ಮ ಕಾರ್ಯವನ್ನು ಮುಂದುವರಿಸುವ ಧೃಡನಿಶ್ಚಯವನ್ನು ಸಾರಿ, ಈ ಲೇಖದ ಕೊನೆಯಲ್ಲಿ "ನಮ್ಮ ಅಂತಃಕರಣವು ಎಲ್ಲಿಯವರೆಗೆ ಶುದ್ಧವಿರುವದೋ ಅಲ್ಲಿಯ ವರೆಗೂ ಯಾವ ಭಯವೂ ನಮಗಿಲ್ಲ. ಯಾವಾಗಾದರೊಮ್ಮೆ ಹೆಗ್ಗಣದ ಉಪದ್ರವಾಗುವದೆಂದು ಮನೆ ಕಟ್ಟುವದನ್ನೇ ಬಿಡಬೇಕೇ? ಎಂದು ಹೇಳುವ ಶಾಲಾ ಶಿಕ್ಷಕರ ಕಥೆಯು ಪೂರ್ಣಸತ್ಯವಾಗಿದೆ" ಎಂದು ಮುಗಿಸಿದರು.

ಟಿಳಕರು ಉತ್ಸಾಹದಿಂದ ಕಾರ್ಯರಂಗಕ್ಕೆ ಇಳಿದೊಡನೆಯೇ ಸಾರ್ವಜನಿಕ ಜೀವನಕ್ಕೆ ಕಳೆಯೇರಿತು. ಶಿವಾಜಿ, ಗಣಪತಿ ಉತ್ಸವಗಳಿಗೆ ಉಕ್ಕು ಬಂದಿತು. ಈ ಉತ್ಸವಗಳ ಮುಖಾಂತರ ದೇಶದಲ್ಲೆಲ್ಲ ಮತ್ತೆ ರಾಷ್ಟ್ರೀಯ ಜಾಗೃತಿಯ ಕಾರ್ಯವು ಪ್ರಾರಂಭವಾಯಿತು.

ಆಂಗ್ಲೋ ಇಂಡಿಯನ್ ವೃತ್ತಪತ್ರಗಳಿಗೆ ಇದು ಸಹನವಾಗುವ ಬಗೆ ಹೇಗೆ ? ಹೊತ್ತು ಸಾಧಿಸಿ, ಅವು ವಿಷಕಾರುತ್ತಿದ್ದವು. ೧೮೯೯ ರ ಕೊನೆಯ

ಭಾಗಕ್ಕೆ ಮುಂಬಯಿಗೆ ಲಾರ್ಡ ನಾರ್ಥ ಬ್ರೂಕರು ಹೊಸ ಗವ್ಹರ್ನರರಾಗಿ ಬರುವವರಿದ್ದರು. ಈ ಸಂಧಿಯನ್ನು ಸಾಧಿಸಿ, ಗ್ಲೋಬ ಪತ್ರಿಕೆಯು ೨೮ ನೇ ಅಕ್ಟೋಬರ ೧೮೯೯ ಪತ್ರಿಕೆಯಲ್ಲಿ 'ಮುಂಬಯಿಯಲ್ಲಿ ರಾಜದ್ರೋಹಿ ಜನರ ಗುಂಪು ಎಲ್ಲ ಕಡೆಗೂ ಹಬ್ಬಿದೆ. ಅದರ ಮುಂದಾಳುಗಳಾದ ಟಿಳಕರಿಗೆ ಶಿಕ್ಷೆಯಾದಂದಿನಿಂದ ಅದು ಕಡಿಮೆಯಾಗಿದ್ದರೂ ಅದು ಹತ್ತಿಕ್ಕಲ್ಪಟ್ಟಿದೆ. ಒಂದು ವೇಳೆ ಟಿಳಕರೇ ಅದನ್ನು ಪ್ರಾರಂಭಮಾಡಿರದಿದ್ದರೂ ಅವರ ತಂತ್ರದಿಂದ ನಡೆದ ಕೊಲೆಯ ಚಳವಳಿಯು ಈಗ ನಿದರ್ಶನಕ್ಕೆ ಬಂದುದರಿಂದ ಸವಿ ಮಾತನಾಡುವ ಮರಾಠಾ ರಾಜ್ಯವನ್ನು ಪುನಃ ಸ್ಥಾಪಿಸುವ ಕನಸು ಕಾಣುವ, ಬ್ರಾಹ್ಮಣರನ್ನು ಹೊಸ ಗವ್ಹರ್ನರರು ನಂಬಕೂಡದು. ಮತ್ತು ಅವರ ಮೇಲೆ ಯಾವಾಗಲೂ ಕಣ್ಣಿರಲಿ'' ಎಂದು ಉಪದೇಶಿಸಿತು. ಇಂಗ್ಲಂಡದಲ್ಲಿಯ ಜನಾಭಿಪ್ರಾಯವೆಂದು ಮುಂಬಯಿಯ ಟಾಯಿಮ್ಸ ಪತ್ರಿಕೆಯು ಅದನ್ನೇ ಎತ್ತಿ, ಪತ್ರಿಕೆಯಲ್ಲಿ ಕೊಟ್ಟಿತು. ಇದರಿಂದ ಜನರಲ್ಲಿ ಗಡಿಬಿಡಿಯುಂಟಾಯಿತು. ಟಿಳಕರು ಟಾಯಿಮ್ಸ ಪತ್ರಿಕೆಯ ಮೇಲೆ ಮಾನಹಾನಿಯ ಖಟ್ಲೆ ಮಾಡಿದರು. ಈ ಸುದ್ದಿ ಹತ್ತಿದೊಡನೆಯೇ 'ಸಂಪಾದಕರ ಕಣ್ಣು ತಪ್ಪಿ, ಈ ಸುದ್ದಿಯು ಪ್ರಸಿದ್ಧವಾಗಿದೆ, ಗ್ಲೋಬದ ಅಭಿಪ್ರಾಯವು ನಮಗೆ ಮಾನ್ಯವಿಲ್ಲ, ಈ ಸಂಗತಿಯು ನಿರಾಧಾರವಾದದೂ ಅನ್ಯಾಯವಾದದ್ದೂ ಇದ್ದು, ಇದು ಮುದ್ರಿಸಲ್ಪಟ್ಟಿದ್ದಕ್ಕಾಗಿ ನಮಗೆ ಬಹಳ ವಿಷಾದವಾಗಿದೆ' ಎಂದು ಸಂಪಾದಕರು ಕ್ಷಮಾಯಾಚನೆಯನ್ನು ಮಾಡಿದರು. ಟಿಳಕರು ಫಿರ್ಯಾದಿಯನ್ನು ಹಿಂತೆಗೆದುಕೊಂಡರು. ನ್ಯಾಯಾಧೀಶರು ಇಬ್ಬರ ಆಭಾರವನ್ನು ಮನ್ನಿಸಿದರು.

ಗ್ಲೋಬ ಪತ್ರದ ಸಮಾಚಾರವನ್ನು ಹೇಗೆ ತೆಗೆದುಕೊಳ್ಳಬೇಕೆಂಬ ಪ್ರಶ್ನೆ ಎದ್ದಿತು. ಅದು ಇಂಗ್ಲಂಡಿನಲ್ಲಿ. ಅದರೊಡನೆ ಹೋರಾಡಬೇಕೆಂದರೆ ಖರ್ಚಿನ ಪ್ರಶ್ನೆ. ಟಿಳಕರು ವಿಚಾರದಲ್ಲಿ ಬಿದ್ದರು. ಅವರ ಮಿತ್ರರು ಹಿಂದಿನ ಫಂಡಿನ ಹಣವನ್ನು ವಿನಿಯೋಗಿಸಬೇಕೆಂದು ಸೂಚಿಸಿದರು. ಕಮಿಟಿಯು ಒಪ್ಪಿಗೆ ಇತ್ತಿತು. ಮೊದಲು ನೋಟೀಸು ಕೊಟ್ಟರು. ಅದಕ್ಕೆ ಅದು ಕಣ್ಣುತೆಗೆಯಲಿಲ್ಲ. ಕ್ಷಮೆ ಕೇಳಲು ನಿರಾಕರಿಸಿತು. ೨೮ನೇ ಜೂನ ೧೯೦೦ಕ್ಕೆ ಲಂಡನ ಹೈಕೋರ್ಟಿನಲ್ಲಿ ಮಾನಹಾನಿಯ ದಾವೆ

ಮಾಡಿ ೭೫,೦೦೦ ರೂಪಾಯಿಗಳನ್ನು ತುಂಬಿಕೊಡಬೇಕೆಂದರು. ಗ್ಲೋಬ ಪತ್ರಿಕೆಯು ೧೦೦ ಪೌಂಡುಗಳ ಜಾಮೀನನ್ನು ಖರ್ಚಿಗಾಗಿ ಟಿಳಕರಿಂದ ತೆಗೆದುಕೊಳ್ಳಬೇಕೆಂದು ಕೇಳಿತು. ಮತ್ತು ಪುರಾವೆಗಳನ್ನು ಕೂಡಿಸಲು ನವ್ಹಂಬರದ ವರೆಗೆ ಅವಧಿಯನ್ನು ಕೇಳಿತು ಪುರಾವೆಗಳು ಎಲ್ಲಿಂದ ದೊರೆಯಬೇಕು. ಕೊನೆಗೆ ನಿರಾಶೆಯಾಗಿ 'ಖರ್ಚನ್ನು ಕೊಡುವೆ, ಖಟ್ಲೆ ತಿರುಗಿ ತೆಗೆದುಕೊಳ್ಳಿರಿ' ಎಂದಿತು. ನಂತರ 'ಖರ್ಚುಕೊಡುವದಲ್ಲದೆ ೫೦ ಪೌಂಡು ದಂಡವನ್ನೂ ಕೊಡುವೆ, ತಿರುಗಿ ತೆಗೆದುಕೊಳ್ಳಿರಿ' ಎಂದು ಕೇಳಿತು. ಕೊನೆಗೆ, ಪೂರ್ಣ ನಮ್ರವಾಗಿ 'ಖರ್ಚನ್ನೂ ಕೊಡುವೆ, ದಂಡವನ್ನೂ ತೆತ್ತುವೆ, ಕ್ಷಮೆಯನ್ನೂ ಬೇಡುವೆ' ಎಂದು ಬೇಡಿಕೊಂಡಿತು. ಅಂತಃಕರಣಿಗಳಾದ ಟಿಳಕರು 'ಇನ್ನೊಮ್ಮೆ ಭಾರತದ ಬಗ್ಗೆ ಬರೆಯಬೇಕಾದರೆ, ನಿಜವಾದ ಸಂಗತಿಗಳನ್ನು ತಿಳಿದುಕೊಂಡು ಎಚ್ಚರಿಕೆಯಿಂದ ಬರೆಯಬೇಕೆಂದು' ಸೂಚಿಸಿದರು. ಗ್ಲೋಬ ಪತ್ರಿಕೆಯ ಕ್ಷಮಾಪತ್ರವನ್ನು ಟಿಳಕರು ೨೪ನೇ ನವ್ಹಂಬರ (೧೯೦೦) ಸಂಚಿಕೆಯಲ್ಲಿ ಪ್ರಕಟಿಸಿದರು ಈ ಪ್ರಕರಣದಿಂದ ಆಂಗ್ಲೋ ಇಂಡಿಯನ್ನ ವೃತ್ತಪತ್ರಗಳಿಗೆ ಬುದ್ಧಿ ಘಟ್ಟಿಯಾಯಿತು.

ನ್ಯಾಯಮೂರ್ತಿ ರಾನಡೆಯವರು ತಮ್ಮ ಸಂಗಡಿಗರೊಂದಿಗೆ ಮಾತನಾಡುತ್ತ ಕುಳಿತಾಗ, ಗ್ಲೋಬ ಪತ್ರಿಕೆಯ ಕ್ಷಮಾಯಾಚನೆಯ ಸುದ್ದಿಯು ಬಂದಿತು. ಆಗ ರಾನಡೆಯವರು ಸಂಗಡಿಗರನ್ನುದ್ದೇಶಿಸಿ, ''ಟಿಳಕರ ಉದಾರತೆಯನ್ನು ನೋಡಿರಿ, ಅವರ ಸ್ವಭಾವವು ಏನೇ ಇರಲಿ. ಅವರು ಒಂದು ಕಾರ್ಯಕ್ಕೆ ಕೈಹಾಕಿದರೆ ತೀರಿತು. ಅದನ್ನು ಕೊನೆಗಾಣಿಸಿಯೇ ತೀರುವರು. ಈ ಗುಣವು ನಮ್ಮ ಪಕ್ಷದವರಲ್ಲಿಲ್ಲ.'' ಎಂದು ಉದ್ಗಾರ ತೆಗೆದರು.

ಟಿಳಕರಿಗೆ ವಿಶ್ರಾಂತಿಯ ದಿನಗಳೆಂದರೆ ಇದೇ ಒಂದು ವರ್ಷ ಮಾತ್ರ. ೧೯೦೧ ರಿಂದ ಅವರು ತಾಯೀ ಮಹಾರಾಜರ ಪ್ರಕರಣದಲ್ಲಿ ಬೀಳಬೇಕಾಯಿತು ಆಯುಷ್ಯದ ಕೊನೆಯವರೆಗೂ ಅದರೊಡನೆ ಅವರು ಹೋರಾಡಬೇಕಾಯಿತು.

೧೮೯೯ರಿಂದ ಟಿಳಕರ ಜೀವನವು ರಾಷ್ಟ್ರೀಯ ಸ್ವರೂಪ ತಾಳಿತು. ಭಾರತವೇ ಕಾರ್ಯಕ್ಷೇತ್ರವಾಯಿತು. ಸಾಮ್ರಾಜ್ಯವಾದಿಯಾದ ಕರ್ಝನನು

ವ್ಹಾಯಿಸರಾಯನಾಗಿ ಬಂದನು. ಟಿಳಕರು ಅವರನ್ನು ಸ್ವಾಗತಿಸಿದರು. ಗುಣಗಾನಮಾಡಿದರು. ಆದರೆ ಅದು ಬಹುಕಾಲ ಬಾಳಲಿಲ್ಲ. ಈ ಇಬ್ಬರ ಕುಸ್ತಿಯು ಭಾರತದ ಇತಿಹಾಸದಲ್ಲಿಯೇ ಅದ್ವಿತೀಯವಾಗಿದೆ.

---

# ಸರಕಾರದ ಕೃಷ್ಣ ಕಾರಸ್ಥಾನ

**ಅರ್ಥಾತ್**

# ತಾಯೀ ಮಹಾರಾಜರ ಪ್ರಕರಣ

೧೮೯೮ರಲ್ಲಿ ಟಿಳಕರು ಜೇಲಿನಿಂದ ಹೊರಬಿದ್ದೊಡನೆಯೇ ತಮ್ಮ ಪ್ರಕೃತಿಯನ್ನು ಸುಧಾರಿಸಿಕೊಳ್ಳುವದಲ್ಲದೆ, ಬಾಬಾ ಮಹಾರಾಜರ ಆಸ್ತಿಯ ರಕ್ಷಣೆಯ ಬಗ್ಗೆಯೂ ಲಕ್ಷ್ಯ ಪೂರೈಸಬೇಕಾಯಿತು. ಮಿತ್ರರಿಗೆ ಮರಣ ಸಮಯದಲ್ಲಿ ಕೊಟ್ಟ ವಚನ ಪೂರ್ಣ ಮಾಡುವದರಲ್ಲಿ ತಾವು ಅತ್ಯಂತ ಕಷ್ಟಪಡಬೇಕಾದೀತೆಂಬ ಕಲ್ಪನೆಯು, ಆ ಕಾಲದಲ್ಲಿ ಟಿಳಕರಿಗೆ ಹೇಗೆ ಬರಬೇಕು ? ಭವಿಷ್ಯದ ಗರ್ಭವನ್ನು ಆರು ಬಲ್ಲರು ? ಟಿಳಕರ ರಾಜಕೀಯ ಜೀವನದ ಪ್ರಾರಂಭದಲ್ಲಿ ಈ ಪ್ರಕರ್ಣವು ಗಂಟು ಬಿದ್ದಿತು. ಅವರ ಮರಣದ ವರೆಗೂ ಅವರನ್ನು ಬೆನ್ನು ಹತ್ತಿತು. ಟಿಳಕರ ಆಯುಷ್ಯವನ್ನೇ ಕಡಿಮೆ ಮಾಡಿದ, ಅವರ ಚಾರಿತ್ರ್ಯಕ್ಕೆ ಮಶಿ ಬಳಿಯಲು ಹವಣಿಸಿದ, ಅಪಾರ ಆರ್ಥಿಕ ವಿಪತ್ತಿಗೆ ಗುರಿಮಾಡಿದ ಈ ಪ್ರಕರ್ಣವು ೧೮೯೭ರಲ್ಲಿ ಪ್ರಾರಂಭವಾಗಿ ೧೯೨೦ ರಲ್ಲಿ ದೇವರ ದಯೆಯಿಂದ ಆನಂದ ಪರ್ಯವಸಾಯಿಯಾಗಿ ಕೊನೆಗೊಂಡಿತು. ಮೇಲೆ ಮೇಲೆ ನೋಡಲು ಈ ಪ್ರಕರ್ಣವು ಟಿಳಕ ವಿಶ್ವಸ್ಥ ಮಂಡಳ ಹಾಗೂ ತಾಯೀ ಮಹಾರಾಜರ ನಡುವಿನದೆಂದು ಕಂಡರೂ ಸರಕಾರವು ತೆರೆಯ ಮರೆಯಲ್ಲಿ ರಾಜಕೀಯ ಕ್ಷೇತ್ರದಲ್ಲಿ ತೇಜಸ್ವಿಗಳಾಗಿ ಮೆರೆಯುತ್ತಿರುವ ಟಿಳಕರ ಚಾರಿತ್ರ್ಯಕ್ಕೆ ಮಶಿ ಹಚ್ಚುವ ಕೃಷ್ಣ ಕಾರಸ್ಥಾನಕ್ಕೆ ಕೈಹಾಕಿ, ತಾಯೀ ಮಹಾರಾಜರ ಬೆನ್ನು ಕಟ್ಟಿತ್ತು. ನಿಜವಾಗಿಯೂ ಟಿಳಕ ಹಾಗು ಸರಕಾರದ ಹೋರಾಟವೇ ಇದು.

ಟಿಳಕರ ಮಿತ್ರರಲ್ಲೊಬ್ಬರಾದ ಬಾಬಾ ಮಹಾರಾಜರು ೧೮೯೭ನೇ ಇಸ್ವಿ ಅಗಸ್ಟ ತಿಂಗಳ ೭ ನೇ ತಾರೀಖಿಗೆ ಮೃತಪಟ್ಟರು. ಅವರು ಮರಣ ಪೂರ್ವದಲ್ಲಿ ಒಂದು ಮೃತ್ಯುಪತ್ರ ಬರೆದಿಟ್ಟು, ಅದರಲ್ಲಿ ತಮ್ಮ ಆಸ್ತಿಯ

ಮೇಲ್ವಿಚಾರಣೆಗಾಗಿ ೫ ಜನರ ವಿಶ್ವಸ್ಥಮಂಡಲವನ್ನು ನೇಮಿಸಿದ್ದರು. ಈ ವಿಶ್ವಸ್ಥ ಮಂಡಲದವರು ಅವಶ್ಯಬಿದ್ದರೆ, ಬಾಬಾ ಮಹಾರಾಜರ ಪತ್ನಿಯವರಾದ ತಾಯೀ ಮಹಾರಾಜರಿಗೆ ದತ್ತಕವಮಾಡಿಕೊಳ್ಳಲು ಅನುಕೂಲ ಮಾಡಿಕೊಡಬೇಕೆಂದೂ ಮೃತ್ಯುಪತ್ರದಲ್ಲಿ ಬರೆಯಲಾಗಿತ್ತು. ಈ ವಿಶ್ವಸ್ಥ ಮಂಡಲಿಯಲ್ಲಿ ಶ್ರೀ ಟಿಳಕ, ಖಾಪರ್ಡೆ, ಕೇತ್ಕರ, ಕುಂಭೋಜಕರ, ನಾಗಪುರಕರರು ಇದ್ದರು.

ಬಾಬಾ ಮಹಾರಾಜರ ಮರಣಕಾಲದಲ್ಲಿ ತಾಯೀ ಮಹಾರಾಜರು ಗರ್ಭಿಣಿಯಿದ್ದರು. ಮುಂದೆ ಸ್ವಲ್ಪ ದಿನಗಳೊಳಗಾಗಿ ಅವರಿಗೆ ಒಂದು ಮಗು ಹುಟ್ಟಿತು. ಆದರೆ ಅದು ಎರಡೇ ತಿಂಗಳಿಗೆ ಮೃತಪಟ್ಟಿತು. ತಾಯೀ ಮಹಾರಾಜರ ಪ್ರಕೃತಿಯು ಕೆಡುತ್ತ ನಡೆಯಿತು. ಇದೆಲ್ಲವನ್ನು ವಿಚಾರ ಮಾಡಿ, ವಿಶ್ವಸ್ಥ ಮಂಡಲಿಯವರು ತಾಯೀ ಮಹಾರಾಜರಿಗೆ ದತ್ತಕ ತೆಗೆದು ಕೊಳ್ಳಲು ಸಲಹೆ ಇತ್ತರು. ಆದರೆ ಯಾರನ್ನು ದತ್ತಕ ತೆಗೆದುಕೊಳ್ಳಬೇಕೆಂಬ ವಿಷಯದಲ್ಲಿ ವಿಶ್ವಸ್ಥ ಮಂಡಲಿಯಲ್ಲಿ ಭಿನ್ನಾಭಿಪ್ರಾಯವುಂಟಾಯಿತು. ಕೊಲ್ಹಾಪುರದಲ್ಲಿಯ ಹುಡುಗನೋರ್ವನನ್ನು ದತ್ತಕ ತೆಗೆದುಕೊಳ್ಳಬೇಕೆಂದು ನಾಗಪುರಕರರ ಅಭಿಪ್ರಾಯವಿದ್ದಿತು. ಆದರೆ ನಿಜಾಮ ರಾಜ್ಯದಲ್ಲಿಯ ಬಾಬಾ ಮಹಾರಾಜರ ಸಂಬಂಧಿಕರ ಕುಟುಂಬದಲ್ಲಿಯ ಚಿಕ್ಕ ಹುಡುಗನೋರ್ವನನ್ನು ದತ್ತಕ ತೆಗೆದುಕೊಳ್ಳಬೇಕೆಂದು ಟಿಳಕರ ಅಭಿಪ್ರಾಯವಿದ್ದಿತು. ಕೊನೆಗೆ ತಾಯೀ ಮಹಾರಾಜರು ಟಿಳಕರ ಸೂಚನೆಗೆ ಒಪ್ಪಿಕೊಂಡರು. ಮತ್ತು ೧೯೦೧ರ ಜೂನ ೧೮ನೇ ತಾರೀಖಿಗೆ ವಿಶ್ವಸ್ಥ ಮಂಡಲದ ಸಭೆ ಕೂಡಿ, ಶ್ರೀ ಟಿಳಕ, ಖಾಪರ್ಡೆ ಮತ್ತು ತಾಯೀ ಮಹಾರಾಜರು ಔರಂಗಾಬಾದಕ್ಕೆ ಹೋಗಿ, ದತ್ತಕ ವ್ಯವಸ್ಥೆ ಮಾಡಬೇಕೆಂದು ನಿರ್ಣಯಿಸಲಾಯಿತು. ಈ ನಿರ್ಣಯದ ಪ್ರಕಾರ ಜಗನ್ನಾಥ ಎಂಬ ಹುಡುಗನನ್ನು ೧೯೦೧ರ ಜೂನ ೨೭ ಮತ್ತು ೨೮ಕ್ಕೆ ದತ್ತಕ ತೆಗೆದುಕೊಳ್ಳಲಾಯಿತು. ಔಪಚಾರಿಕ ದತ್ತಕ ಪತ್ರವನ್ನು ಮಾಡಲಾಯಿತು. ದತ್ತಕ ಸಮಾರಂಭವನ್ನು ಕೆಲವು ದಿನಗಳನಂತರ ನಡೆಸಬಹುದೆಂದು ನಿರ್ಣಯವಾಯಿತು. ಇಲ್ಲಿಯವರೆಗೆ ಎಲ್ಲವೂ ಸರಿಹೋಯಿತು. ತಾಯೀ ಮಹಾರಾಜರು ಪುಣೆಗೆ ಬಂದೊಡನೆಯೇ ಜನ ಆಕೆಯ ಕಿವಿಯೂದಿದರು. ಆಕೆಗೆ ಮನಸ್ಸಿಗೆ

ಸಮಾಧಾನವಿಲ್ಲದಾಯಿತು. ಚಾಡಿಗಾರರ ತಂತ್ರದಿಂದ ತಾಯೀ ಮಹಾರಾಜರು ಸರದಾರರ ಏಜೆಂಟರೂ ಜಿಲ್ಹಾ ನ್ಯಾಯಾಧೀಶರೂ ಆದ ಆಸ್ಟನ್ನರ ಮೊರೆಹೊಕ್ಕರು. ದತ್ತಕ ಪ್ರಕರಣದ ಎಲ್ಲ ರಗಳೆಯನ್ನು ತೋಡಿಕೊಂಡರು. ಆಸ್ಟನ್ನನು ಟಿಳಕರ ಪರಮ ದ್ವೇಷಿಯು. ಅವನಿಗೆ ಪರಮಾನಂದವಾಯಿತು. ಬೇಟೆಯು ತಾನಾಗಿಯೇ ಬಂದು ಬಲೆಯಲ್ಲಿ ಬಿದ್ದಂತಾಯಿತು. ಟಿಳಕರನ್ನು ಪಾತಾಳಕ್ಕೆ ಮೆಟ್ಟಿ, ಸರಕಾರದ ಕೃಪೆಗೆ ಪಾತ್ರನಾಗಲು ಇದು ಸುವರ್ಣ ಸಂಧಿ ಎಂದು ಯೋಚಿಸಿದನು. ತಾಯೀ ಮಹಾರಾಜರೊಡನೆ ಸಂಚು ನಡೆಯಿಸಿ, ಏನೇನು ಮಾಡಬೇಕೆಂಬ ಬಗ್ಗೆ ಯೋಜನೆಯನ್ನು ಸಿದ್ಧಪಡಿಸಿದರು. ನಾಗಪುರಕರರು ದತ್ತಕದ ಬಗ್ಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರು. ಮತ್ತು ಕೊಲ್ಹಾಪುರದ ಬಾಲ ಮಹಾರಾಜನನ್ನು ತಾಯೀ ಮಹಾರಾಜರಿಗೆ ದತ್ತಕ ಮಾಡಬೇಕೆಂದೂ ಮತ್ತು ಅದಕ್ಕೆ ಬದಲಾಗಿ ಬಾಬಾ ಮಹಾರಾಜರ ಆಸ್ತಿಯೆಲ್ಲವೂ ತಾಯೀ ಮಹಾರಾಜರ ಮರಣ ಪರಿಯಂತ ಅವರ ವಶದಲ್ಲಿಯೇ ಉಳಿಯಬೇಕೆಂದೂ ಬಾಲ ಮಹಾರಾಜರ ತಂದೆಯವರೊಡನೆ ಕರಾರು ಮಾಡಿಕೊಂಡರು. ಬಾಲ ಮಹಾರಾಜರಿಗೆ ಆಸ್ತಿ ವಶಕ್ಕೆ ಬರುವವರೆಗೆ ತಿಂಗಳಿಗೆ ೨೦೦ ರೂಪಾಯಿಗಳನ್ನು ಕೊಡಬೇಕೆಂದೂ ಕರಾರಿನಲ್ಲಿ ಹೇಳಲಾಗಿತ್ತು. ನಾಗಪುರಕರರ ಈ ಉಪದೇಶಕ್ಕೆ ಕಿವಿಗೊಟ್ಟು, ತಾಯೀ ಮಹಾರಾಜರು ೧೯೦೧ರ ಜುಲೈ ೬ ನೇ ತಾರೀಖಿಗೆ ವಿಶ್ವಸ್ಥ ಮಂಡಲಿಗೆ ಒಂದು ನೋಟೀಸನ್ನು ಕೊಟ್ಟರು.

"ಬಾಬಾ ಮಹಾರಾಜರು ತೀರಿಕೊಂಡನಂತರ ಅವರಿಗೆ ಒಬ್ಬ ಮಗನು ಜನಿಸಿದ್ದರಿಂದ ಅವರ ಆಸ್ತಿಗೆ ಆ ಮಗನು ಬಾಧ್ಯಸ್ಥನಾದನು. ಆ ಮಗನ ಮರಣದ ನಂತರ ನ್ಯಾಯವಾಗಿ ಆಸ್ತಿಗೆ ನಾನೇ ಬಾಧ್ಯಸ್ಥಳಾಗಿದ್ದೇನೆ. ಆದ್ದರಿಂದ ಬಾಬಾ ಮಹಾರಾಜರು ಮಾಡಿಟ್ಟಿದ್ದ ಮೃತ್ಯುಪತ್ರ ಮತ್ತು ವಿಶ್ವಸ್ಥ ಮಂಡಲಿಯು ತಾನಾಗಿಯೇ ರದ್ದಾಗಿರುವವು" ಎಂದು ನೋಟೀಸಿನಲ್ಲಿ ತಿಳಿಸಲಾಗಿತ್ತು. ಕೊಲ್ಹಾಪುರ ದರ್ಬಾರದವರು ಜುಲೈ ೧೦ ನೇ ತಾರೀಖಿಗೆ ಹೊಸ ದತ್ತಕ ಮಾಡಿಕೊಳ್ಳಲು ಒಪ್ಪಿಗೆ ಕೊಟ್ಟರು. ಮತ್ತು ಜುಲೈ ೧೩ ಕ್ಕೆ ದತ್ತಕ ನಡೆಯಬೇಕೆಂದು ನಿಶ್ಚಯಿಸಲಾಯಿತು. ಈ ಸುದ್ದಿ ತಿಳಿದ ಕೂಡಲೆ ಟಿಳಕರು ಈ ಎರಡನೆಯ ದತ್ತಕ ನಡೆಯಬಾರದೆಂದು

ವಿರೋಧಿಸಿ, ಕೊಲ್ಹಾಪುರಕ್ಕೆ ತಂತಿ ಕಳಿಸಿದರು. ಇಷ್ಟರಲ್ಲಿ ಬಾಲಮಹಾ ರಾಜರ ಅಣ್ಣನಾದ ಪಂಡಿತ ಮಹಾರಾಜರು ದತ್ತಕ ಕಾರ್ಯದ ಬಗ್ಗೆ ಪುಣೆಗೆ ಬಂದು, ಬಾಬಾ ಮಹಾರಾಜರ ಮನೆಯಲ್ಲಿಯೇ ಇಳಿದು ಕೊಂಡರು. ಟಿಳಕ ಮತ್ತು ಖಾರ್ಪಡೆಯವರು ಈ ಎರಡನೇ ದತ್ತಕದ ವಿರುದ್ಧ ತಾಯೀ ಮಹಾರಾಜರ ಮನವೊಲಿಸಲು ಪ್ರಯತ್ನ ಮಾಡಿದರು. ಆದರೆ ಅವರಿಗೆ ಅದರಲ್ಲಿ ಯಶ ದೊರೆಯಲಿಲ್ಲ. ಆಗ ಅವರು ಪಂಡಿತ ಮಹಾ ರಾಜರನ್ನು ಆ ಮನೆಯಿಂದ ಹೊರಗೆ ಹಾಕಿದರು. ಮತ್ತು ತಾಯೀ ಮಹಾ ರಾಜರ ಮನೆಯ ಮೇಲೆ ಬಲವಾದ ಕಾವಲಿಟ್ಟರು. ತಾಯೀ ಮಹಾರಾಜರಿಗೆ ಮಾತ್ರ ಮನಸ್ಸಿಗೆ ಬಂದಲ್ಲಿ ಹೋಗಿ ಬರುವ ಸ್ವಾತಂತ್ರ್ಯವಿದ್ದಿತು. ಇಷ್ಟರಲ್ಲಿ ತಾಯೀ ಮಹಾರಾಜರನ್ನು ನಿರ್ಬಂಧದಲ್ಲಿಡಲಾಗಿದೆಯೆಂದು ಪಂಡಿತ ಮಹಾ ರಾಜರು ಪೋಲೀಸರಿಗೆ ವರದಿ ಮಾಡಿದರು. ಪೋಲೀಸರು ಇದರ ಬಗ್ಗೆ ವಿಚಾರಣೆ ನಡೆಸಿ, ಇದರಲ್ಲಿ ಯಾವ ತಥ್ಯವೂ ಇಲ್ಲವೆಂದು ಸುಮ್ಮನಾದರು. ಮುಂದೆ ಜುಲೈ ೨೯ ನೇ ತಾರೀಖಿಗೆ ಬಾಬಾ ಮಹಾರಾಜರ ಮೃತ್ಯುಪತ್ರ ವನ್ನು ರದ್ದುಪಡಿಸಬೇಕೆಂದು ಜಿಲ್ಹಾ ನ್ಯಾಯಾಧೀಶರಿಗೆ ತಾಯೀ ಮಹಾ ರಾಜರು ಅರ್ಜಿಮಾಡಿಕೊಂಡರು. ಮತ್ತು ಸ್ವಲ್ಪ ದಿನಗಳಲ್ಲಿಯೇ ಪಂಡಿತ ಮಹಾರಾಜರೊಡನೆ ಕೊಲ್ಹಾಪುರಕ್ಕೆ ಹೋಗಿ, ೧೯೦೧ ರ ಅಗಷ್ಟ ೧೯ ನೇ ತಾರೀಖಿನ ದಿನ, ಬಾಲ ಮಹಾರಾಜರನ್ನು ದತ್ತಕ ತೆಗೆದುಕೊಂಡರು. ಈ ದತ್ತಕ ಸಮಾರಂಭದಲ್ಲಿ ಕೊಲ್ಹಾಪುರ ಮಹಾರಾಜರು ಉಪಸ್ಥಿತರಿದ್ದರು. ಈ ಸುದ್ದಿ ತಿಳಿದ ಕೂಡಲೇ ಟಿಳಕರು ಈ ಎರಡನೇ ದತ್ತಕವನ್ನು ರದ್ದು ಪಡಿಸಬೇಕೆಂದೂ ಮೊದಲನೆಯ ದತ್ತಕವನ್ನು ಸ್ಥಿರಪಡಿಸಬೇಕೆಂದೂ ಕೋರ್ಟಿನಲ್ಲಿ ಅರ್ಜಿಮಾಡಿದರು.

ಮೃತ್ಯುಪತ್ರವನ್ನು ರದ್ದುಪಡಿಸಬೇಕೆಂದು ತಾಯೀ ಮಹಾರಾಜರು ಮಾಡಿದ ಅರ್ಜಿಯ ವಿಚಾರಣೆಯು ಜಿಲ್ಹಾ ನ್ಯಾಯಾಧೀಶರಾದ ಮಿ. ಆಸ್ಟಿನ್‌ರ ಮುಂದೆ ನಡೆಯಿತು.

ತಾಯೀ ಮಹಾರಾಜರಿಗೆ ಆದ ಪುತ್ರ ಜನನದ ಕಾರಣದಿಂದ ಮೃತ್ಯು ಪತ್ರವು ರದ್ದಾಗುವದು ಎಂಬುದೇ ಆಸ್ಟಿನ್ನರ ವಿಚಾರಣೆಯ ಮುಖ್ಯ ವಿಷಯ ವಾಗಿತ್ತು. ಔರಂಗಾಬಾದದಲ್ಲಿ ನಡೆದ ದತ್ತಕದ ಬಗ್ಗೆ ಪ್ರಶ್ನೆ ಕೇಳುವದು

ಸದ್ಯದ ವಿಚಾರಣೆಯಲ್ಲಿ ವಿಷಯಬಾಹಿರವಾಗುವದೆಂದು ಟಿಳಕರು ವಾದಿಸಿದರು. ಅವರ ವಾದವನ್ನು ತಳ್ಳಿ ಹಾಕಿ ಆಸ್ಟಿನ್ನರು ಸ್ವತಃ ಪ್ರಶ್ನೆಗಳನ್ನು ಹಾಕಿ, ಔರಂಗಾಬಾದದಲ್ಲಿ ನಡೆದ ದತ್ತಕದ ಬಗ್ಗೆ ಇವರಿಂದ ಉತ್ತರ ಪಡೆದು ಕೊಂಡರು.

ಟಿಳಕರ ಪರವಾಗಿ ಔರಂಗಾಬಾದದ ಸದ್ಗೃಹಸ್ಥರು ಸಾಕ್ಷಿ ಹೇಳಿದರು. ಅಲ್ಲಿ ನಡೆದ ದತ್ತಕ ಕಾರ್ಯದ ಸತ್ಯತೆಯನ್ನು ಅವರು ಸಮರ್ಥಿಸಿದರು. ಇದೆಲ್ಲ ವಿಚಾರಣೆ ಮುಗಿದ ಮೇಲೆ ಕೊನೆಗೆ ನಿರ್ಣಯಕೊಡುವಾಗ ಮಿ. ಆಸ್ಟಿನ್ನರು ವ್ಯತ್ಯಪತ್ರವನ್ನು ರದ್ದು ಪಡಿಸಿದ್ದಲ್ಲದೆ, ಟಿಳಕರ ಮೇಲೆ ಖೊಟ್ಟಿ ಕಾಗದ ಪತ್ರಗಳನ್ನು ನಿರ್ಮಿಸಿದರೆಂದೂ ಸುಳ್ಳು ಸಾಕ್ಷಿ ಹೇಳಿದರೆಂದೂ, ಸುಳ್ಳು ಖಟ್ಲೆ ಹಾಕಿದರೆಂದೂ ಅಪವಾದ ಹೊರಿಸಿ, ಈ ಅಪವಾದದ ವಿಚಾರಣೆಗಾಗಿ ಎಪ್ರಿಲ್ ೫ ಕ್ಕೆ ಮೊದಲನೆಯ ವರ್ಗದ ನ್ಯಾಯಾಧೀಶರ ಎದುರು ಉಪಸ್ಥಿತರಿರಬೇಕೆಂದೂ ಟಿಳಕರಿಗೆ ಆಜ್ಞೆ ವಿಧಿಸಿದರು. ಮತ್ತು ೧೦೦೦೦ ರೂಪಾಯಿಗಳ ಒಂದು ವೈಯಕ್ತಿಕ ಜಾಮಿನನ್ನು ಮತ್ತು ೫೦೦೦ ರೂಪಾಯಿಗಳ ಎರಡು ಬೇರೆ ಜಾಮೀನುಗಳನ್ನು ಕೊಡಬೇಕೆಂದು ಆಜ್ಞೆಗೈದರು.

ಜಿಲ್ಹಾ ನ್ಯಾಯಾಸ್ಥಾನದಲ್ಲಿ ಸುಳ್ಳು ಸಾಕ್ಷಿ ಹೇಳಿದರೆಂಬ ಆಪಾದನೆಯಲ್ಲಿ ಕೆಳಗಿನ ಎರಡು ಆಪಾದನೆಗಳು ಇದ್ದವು. (೧) ಜಗನ್ನಾಥನ ತಂದೆಯು ಆ ಹುಡುಗನನ್ನು ತಾಯೀ ಮಹಾರಾಜರ ತೊಡೆಯ ಮೇಲೆ ಕೂಡಿಸಿದನು. ನಂತರ ತಾಯೀ ಮಹಾರಾಜರು ಆ ಹುಡುಗನಿಗೆ ಸಿಹಿಯನ್ನು ತಿನ್ನಿಸಿದರು. ಮುಂದೆ ಆ ಹುಡುಗನ ತಂದೆಯು ತಾಯೀ ಮಹಾರಾಜರನ್ನು ಉದ್ದೇಶಿಸಿ "ಇಂದಿನಿಂದ ನೀವು ಈ ಹುಡುಗನನ್ನು ರಕ್ಷಿಸಬೇಕು. ಇವನು ಜಾಣನೇ ಇರಲಿ, ಅಥವಾ ಮೂರ್ಖನೇ ಇರಲಿ, ಇವನು ನಿಮ್ಮ ಪುತ್ರನಾಗಿದ್ದಾನೆ" ಎಂದು ಹೇಳಿದನು. (೨) ನಾವು ತಾಯೀ ಮಹಾರಾಜರನ್ನು ಎಂದೂ ನಿರ್ಬಂಧದಲ್ಲಿ ಇಡಲಿಲ್ಲ ಮತ್ತು ನಿರ್ಬಂಧಿಸುವ ಉದ್ದೇಶವೂ ನಮಗಿರಲಿಲ್ಲ.

ಈ ಆಪಾದನೆಗಳ ವಿಚಾರಣೆ ನಡೆಸುವ ಪೂರ್ವದಲ್ಲಿ ನ್ಯಾಯಾಧೀಶರು ಇದರ ಹೆಚ್ಚಿನ ವಿಚಾರಣೆಗಾಗಿ ಪೋಲೀಸರಿಗೆ ಒಪ್ಪಿಸಿದರು. ಸಾಮಾನ್ಯವಾಗಿ ಜಿಲ್ಹಾ ಪೋಲೀಸ ಅಧಿಕಾರಿಗಳು ಈ ವಿಚಾರಣೆಯನ್ನು ನಡೆಸಬೇಕಾ

ಗಿತ್ತು. ಆದರೆ ಈ ಸಮಯದಲ್ಲಿ ಮುಂಬೈ ಸರಕಾರದವರು ಇದರಲ್ಲಿ ಕೈಹಾಕಿ ಗುಪ್ತಪೋಲೀಸದಳದ ಅಸಿಸ್ಟಂಟ ಇನ್‌ಸ್ಪೆಕ್ಟರ ಜನರಲ್‌ರಾದ ಮಿ. ಬ್ರುಯಿನ್‌ರನ್ನು ಹೆಚ್ಚಿನ ವಿಚಾರಣೆಗೆಂದು ನೇಮಿಸಿದರು. ಮಿ. ಬ್ರುಯಿನ್ನರು ಒಪ್ಪಿಸಿದ ತಮ್ಮ ವರದಿಯಲ್ಲಿ, ಟಿಳಕರು ಸುಳ್ಳುಕಾಗದ ಪತ್ರಗಳನ್ನು ಸೃಷ್ಟಿಸಿದರೆಂಬ ಆಪಾದನೆಯ ವಿಷಯದಲ್ಲಿ ಕೆಳಗಿನಂತೆ ಹೇಳಿರುತ್ತಾರೆ.

"ಈ ಆಪಾದನೆಯು ಸಿದ್ಧವಾಗುವದಿಲ್ಲೆಂದು ನನಗೆ ಅನಿಸುತ್ತದೆ. ಯಾಕಂದರೆ ತಾವು ನಿರಪರಾಧಿಯಿದ್ದ ಬಗ್ಗೆ, ಔರಂಗಾಬಾದದ ಅನೇಕ ಸನ್ಮಾನ್ಯ ನಾಗರಿಕರಿಂದ ಟಿಳಕರು ಸಾಕ್ಷ್ಯವನ್ನು ಕೊಡಿಸಬಲ್ಲರು. ಇದಲ್ಲದೆ ಈ ಕಾಗದ ಪತ್ರಗಳು ಬಾಲಬೋಧ ಲಿಪಿಯಲ್ಲಿ ಬರೆದವುಗಳಿದ್ದು, ತಾಯೀ ಮಹಾರಾಜರು ಅವನ್ನು ಸುಲಭವಾಗಿ ಓದಬಲ್ಲರು. ಸಹಿ ಹಾಕುವ ಪೂರ್ವದಲ್ಲಿ ತಾವು ಅವನ್ನು ಓದಲಿಲ್ಲವೆಂದು ತಾಯೀ ಮಹಾರಾಜರು ಹೇಳುತ್ತಿರುವುದು ನಂಬಲರ್ಹವಾದ ಹೇಳಿಕೆಯಾಗಲಾರದು. ಆದ್ದರಿಂದ ಖೊಟ್ಟಿ ಕಾಗದ ನಿರ್ಮಿಸಿದರೆಂಬ ಆಪಾದನೆಯು ಸಿದ್ಧವಾಗುವುದಿಲ್ಲ" ಮುಂದೆ ಅವರು ತಾಯೀ ಮಹಾರಾಜರ ವಿಷಯದಲ್ಲಿ ಈ ರೀತಿ ವರದಿ ಮಾಡಿರುತ್ತಾರೆ.

"ಕೊಲ್ಹಾಪುರದ ಬಾಲಮಹಾರಾಜರನ್ನು ದತ್ತಕ ತೆಗೆದುಕೊಳ್ಳುವಾಗ, ತಾಯೀ ಮಹಾರಾಜರ ಮರಣ ಪರಿಯಂತ ಆಸ್ತಿಯ ಒಡೆತನವೆಲ್ಲ ತಾಯೀ ಮಹಾರಾಜರಿಗೇ ಇರತಕ್ಕದ್ದೆಂತಲೂ ಬಾಲ ಮಹಾರಾಜರಿಗೆ ತಿಂಗಳಿಗೆ ಕೇವಲ ೨೦೦ ರೂಪಾಯಿ ಮಾತ್ರ ಸಲ್ಲತಕ್ಕದ್ದೆಂತಲೂ ಕರಾರು ಮಾಡಿಕೊಂಡಿರುತ್ತಾರೆ. ಇದರಿಂದ ತಾಯೀ ಮಹಾರಾಜರಿಗೆ ಆಸ್ತಿಯ ಒಡೆತನ ಪಡೆಯಬೇಕೆಂಬ ಸ್ವಾರ್ಥವಿತ್ತೆಂಬುದು ಕಂಡು ಬರುತ್ತದೆ''

ಮಿ. ಬ್ರುಯಿನ್ನರು ಹೀಗೆ ವರದಿ ಮಾಡಿ, ಉಳಿದ ಕೆಲವು ಸಣ್ಣ ಆಪಾದನೆಗಳ ವಿಷಯದಲ್ಲಿ, ಅವು ವೈಯ್ಯಕ್ತಿಕ ವಿಷಯಗಳಿರುವದರಿಂದ ಸರಕಾರವು ತಟಸ್ಥ ನೀತಿಯನ್ನು ಅನುಸರಿಸಬೇಕೆಂದು ತಿಳಿಸಿದರು. ಸರಕಾರದ ಕಾಯದೆ ಸಲಹೆಗಾರರು ಮುಖ್ಯ ಆಪಾದನೆಗಳ ಬಗ್ಗೆ, ಖಟ್ಲೆ ಹಾಕುವದರಿಂದ ಯಾವ ಲಾಭವೂ ಇಲ್ಲವೆಂದೂ ಸಣ್ಣ ಆಪಾದನೆಗಳ ಬಗ್ಗೆ

ಖಟ್ಲೆ ಹಾಕುವದಾದರೂ ಉಪಯುಕ್ತವಾಗುವದೋ ಹೇಗೆಂಬುದನ್ನೂ ಗಂಭೀರವಾಗಿ ವಿಚಾರಿಸಬೇಕೆಂದೂ ಅಭಿಪ್ರಾಯಪಟ್ಟರು. ಮತ್ತು,

"ಈ ವಿಷಯದಲ್ಲಿ ನಾನು ಸಲಹೆ ಕೊಡುವದಾದರೆ, ಜಿಲ್ಹಾ ನ್ಯಾಯಾಧೀಶರ ಆಜ್ಞೆಯ ಮೇರೆಗೆ ನಡೆದ ವಿಚಾರಣೆಯು ಹಾಗೆಯೇ ಮುಂದುವರಿಯಬೇಕು. ಸರಕಾರದವರಾಗಲೀ ಪೋಲೀಸರಾಗಲೀ ಅದರಲ್ಲಿ ಕೈಹಾಕಕೂಡದು. ಜಿಲ್ಹಾ ಪೋಲೀಸ ಪ್ರೊಸಿಕ್ಯೂಟರ ಅವರು ಖಟ್ಲೆ ನಡೆಸಬೇಕು. ಆಸ್ಟನ್ನರು ಕೊಟ್ಟ ನಿರ್ಣಯ ಮತ್ತು ಆಜ್ಞೆಗೆ ಕಾರಣ ವಾದ ಎಲ್ಲ ಕಾಗದ ಪತ್ರಗಳನ್ನು ಮತ್ತು ಸಾಕ್ಷಿಗಳನ್ನು ಸುವ್ಯವಸ್ಥಿತವಾಗಿ ಕೋರ್ಟಿನ ಮುಂದಿಡುವದಕ್ಕೆ ಮಾತ್ರ ಪೋಲೀಸ ಪ್ರೊಸಿಕ್ಯೂಟರರನ್ನು ನೇಮಿಸಬೇಕೇ ಹೊರತು, ಕೋರ್ಟಿನ ನಿರ್ಣಯವನ್ನು ಯಾವುದೊಂದು ಪಕ್ಷಕ್ಕೆ ಅನುಕೂಲವಾಗುವಂತೆ ಮಾಡುವದಕ್ಕಲ್ಲ. ಮಿ. ಬ್ರುಯಿನ್ನರು ವ್ಯಕ್ತ ಪಡಿಸಿದ ಅಭಿಪ್ರಾಯಗಳ ಮೇಲಿಂದ ಅವರನ್ನು ಈ ಕೆಲಸಕ್ಕೆ ಹಚ್ಚುವದು ಯೋಗ್ಯವಾಗಲಾರದೆಂದು ನನಗೆ ಅನಿಸುತ್ತದೆ."

ಕೊನೆಗೆ ಮುಂಬಯಿ ಸರಕಾರದವರು ಈ ವಿಷಯದ ಎಲ್ಲ ಕಾಗದ ಪತ್ರಗಳನ್ನು ವ್ಯವಸ್ಥಿತವಾಗಿ ಕೋರ್ಟಿನ ಮುಂದೆ ಇಡಲು, ಪಬ್ಲಿಕ್ ಪ್ರೊಸಿಕ್ಯೂಟರವರಿಗೆ ತಿಳಿಸಿ ಸಣ್ಣ ಆಪಾದನೆಗಳ ಬಗ್ಗೆ ಪೋಲೀಸರು ಕಾಯದೇ ಪ್ರಕಾರ ಕ್ರಮತೆಗೆದುಕೊಳ್ಳಬೇಕೆಂದು ತಿಳಿಸಿದರು.

ಈ ವಿಚಾರಣೆಯ ಕೆಲಸವನ್ನು ಕೂಡ ಸರಕಾರದವರು ಮಾಡುವ ಅವಶ್ಯವಿಲ್ಲದಿದ್ದರೂ ಸ್ಪೇಶಲ್ ಮ್ಯಾಜಿಸ್ಟ್ರೇಟರನ್ನು ನೇಮಿಸಿ ಅವರ ಕಡೆಗೆ ವಿಚಾರಣೆಗೆ ಕಳಿಸಿದರು. ಆಸ್ಟನ್ನರು ಟಿಳಕರ ಮೇಲೆ ಹೊರಿಸಿದ ಆಪಾದನೆ ಗಳು ಈ ರೀತಿ ಇದ್ದವು. (೧) ನಾಗಪುರಕರರ ವಶಕ್ಕೆ ಕೊಟ್ಟ ಆಭರಣ ಗಳ ಬಗ್ಗೆ, ಅವರು ವಚನ ಭ್ರಷ್ಟರಂತೆ ನಡೆದುಕೊಂಡರೆಂದು ನಾಗಪುರಕರರ ಮೇಲೆ, ಟಿಳಕರು ಸುಳ್ಳು ಆಪಾದನೆ ಮಾಡಿದರು. (೨) ಔರಂಗಾಬಾದ ಪ್ರಯಾಣದ ಖರ್ಚಿನ ವಿಷಯದಲ್ಲಿದ್ದ ಲೆಕ್ಕ ಪತ್ರಗಳನ್ನು ಟಿಳಕರು ತಿದ್ದಿ ಸುಳ್ಳು ಸಾಕ್ಷಿ ನಿರ್ಮಿಸಿದರು. (೩) ತಾಯೀ ಮಹಾರಾಜರು ಜಗನ್ನಾಥ ನನ್ನು ದತ್ತಕ ತೆಗೆದುಕೊಳ್ಳಲು ಒಪ್ಪಿದ್ದಾರೆನ್ನುವದನ್ನು ಸಿದ್ಧ ಮಾಡಲು, ಟಿಳಕರು ತಾಯೀ ಮಹಾರಾಜರು ಸಹಿ ಮಾಡಿದರೆಂದು ಹೇಳುವ ಖೊಟ್ಟಿ

ಕಾಗದವನ್ನು ತೋರಿಸಿ, ಸುಳ್ಳು ಸಾಕ್ಷಿ ನಿರ್ಮಿಸಿದರು. (೪) ೧೯೦೧ ರ ೧೧೨ನೇ ಅರ್ಜಿಯಲ್ಲಿಯು ಸಂಗತಿಗಳು ಸುಳ್ಳು ಇರುತ್ತವೆ.

ಇದರ ವಿಚಾರಣೆಯು ನಡೆದು, ಸ್ಪೇಶಲ್ ನ್ಯಾಯಾಧೀಶರಾದ ಮಿ. ಕ್ಲೆಮೆಂಟ್ಸರವರು ಟಿಳಕರಿಗೆ ಸುಳ್ಳು ಸಾಕ್ಷಿ ಹೇಳಿದರೆಂಬ ಆರೋಪ ವನ್ನು ಹೊರಿಸಿ, ೧೮ ತಿಂಗಳ ಸಶ್ರಮ ಶಿಕ್ಷೆ ಹಾಗೂ ೧೦೦೦ ದಂಡ, ತಪ್ಪಿದರೆ ಮತ್ತೆ ಎರಡು ತಿಂಗಳ ಸಶ್ರಮ ಶಿಕ್ಷೆ ಎಂದು ತೀರ್ಮಾನವಿತ್ತರು.

ಈ ನಿರ್ಣಯದ ದಿವಸ ಕೋರ್ಟಿನಲ್ಲಿ ಕುದುರೆ ಸ್ವಾರರ, ಬಿಚ್ಚು ಗತ್ತಿಯ ಪೋಲೀಸರ, ಬಲವಾದ ಕಾವಲಿದ್ದಿತು. ಮಹಾಯುದ್ಧವು ಪ್ರಾರಂಭವಾಗುವದೆಂದು ಸರಕಾರವು ತಿಳಿದಿತ್ತೋ ಏನೋ ? ತೀರ್ಪನ್ನು ಹೇಳಿದೊಡನೆ ಟಿಳಕರನ್ನು ಯುರವಡಾಕ್ಕೆ ಕಳಿಸಿದರು. ಜೇಲಿಗೆ ಕಳಿಸು ವಾಗ ಕಳ್ಳ-ಕಾಕರಂತೆ ಟಿಳಕರ ಕೈಯಲ್ಲಿ ಬೇಡಿಗಳನ್ನು ಹಾಕಿದರು. ಇದ ರಿಂದ ಜನರ ಅಂತಃಕರಣಕ್ಕೆ ಬರೆಕೊಟ್ಟಂತಾಯಿತು. ಎಲ್ಲ ವೃತ್ತಪತ್ರಗಳೂ ಈ ಕೃತಿಯನ್ನು ನಿಷೇಧಿಸಿದವು. ಟ್ರಿಬ್ಯೂನ ಪತ್ರವಂತೂ ಟಿಳಕರ ಯೋಗ್ಯತೆಯು ಜನತೆಗೆ ಗೊತ್ತಿದೆ. ಅದು ನ್ಯಾಯಮೂರ್ತಿಗಳ ತೀರ್ಪನ್ನು ಅವಲಂಬಿಸಿಲ್ಲವೆಂದು ಗರ್ಜಿಸಿತು. ಕೋರ್ಟಿನ ನಿರ್ಣಯವೇನಾಗುವ ದೆಂಬುದು ಟಿಳಕರಿಗೆ ಮೊದಲೇ ಗೊತ್ತಿದ್ದುದರಿಂದ ಸೆಶೆನ್ಸ ಕೋರ್ಟಿಗೆ ಅಪೀಲ ಮಾಡಲು, ಅವರು ಎಲ್ಲ ಸಿದ್ಧತೆ ಮಾಡಿದ್ದರು. ಮತ್ತು ಅಂದಿನ ದಿನವೇ ಜಾಮೀನಿನ ಮೇಲೆ ಬಿಡುಗಡೆಯಾದರು. ಅಪೀಲಿನ ವಿಚಾರಣೆಯು ಸೆಶೆನ್ ನ್ಯಾಯಾಧೀಶರಾದ ಮಿ. ಲ್ಯುಕ್ಸರರ ಮುಂದೆ ನಡೆದು, ೧೮ ತಿಂಗಳ ಸಶ್ರಮ ಶಿಕ್ಷೆಯನ್ನು ೬ ತಿಂಗಳಿಗೆ ಇಳಿಸಿದರು.

ಈ ನಿರ್ಣಯದ ವಿರುದ್ಧ ಟಿಳಕರು ಹಾಯಕೋರ್ಟಿಗೆ ಅಪೀಲು ಮಾಡಿದರು. ಮುಖ್ಯ ನ್ಯಾಯಾಧೀಶರಾದ ಸರ್ ಲಾರೆನ್ಸ ಜೆಂಕಿನ್ಸ ಮತ್ತು ಜಸ್ಟಿಸ್ ಬ್ಯಾಟಿ ಅವರು ಈ ಅಪೀಲಿನ ವಿಚಾರಣೆ ನಡೆಸಿ ಟಿಳಕರು ಸಂಪೂರ್ಣ ನಿರ್ದೋಷಿಗಳೆಂದು ನಿರ್ಣಯ ಇತ್ತರು. ಅವರು ತಮ್ಮ ನಿರ್ಣಯದಲ್ಲಿ ಜಿಲ್ಲಾ ನ್ಯಾಯಾಧೀಶರ ಮತ್ತು ಸ್ಪೆಶಲ್ ನ್ಯಾಯಾಧೀಶರ ನಿರ್ಣಯದಲ್ಲಿಯ ತಪ್ಪುಗಳನ್ನು ಎತ್ತಿ ತೋರಿಸಿದರು. ಆಪಾದಿತನ ಕಡೆಯ ಸಾಕ್ಷಿಗಳನ್ನು ಕೇಳಿಕೊಳ್ಳದೆ ಇದ್ದುದಕ್ಕಾಗಿ, ನ್ಯಾಯಾಧೀಶರನ್ನು ಕಟುವಾಗಿ

ಟೀಕಿಸಿದರು. ಈ ಖಟ್ಲೆಯಲ್ಲಿ ಹೊರಬಿದ್ದಿರುವ ಸಂಗತಿಗಳು ಟಿಳಕರಿಗೇ ಹೆಚ್ಚು ಅನುಕೂಲವಾಗಿವೆ. ಎಂದು ಅಭಿಪ್ರಾಯಪಟ್ಟರು. ಈ ರೀತಿ ೧೯೦೨ ರಲ್ಲಿ ಪ್ರಾರಂಭವಾದ ಖಟ್ಲೆಯು ೨ ವರ್ಷಗಳ ನಂತರ ೧೯೦೪ ರ ಮಾರ್ಚ ೪ ನೇ ತಾರೀಖಿಗೆ, ಟಿಳಕರು ನಿರ್ದೋಷಿಗಳೆಂದು ಸಾರಲ್ಪಟ್ಟು ಕೊನೆಗೊಂಡಿತು. ಟಿಳಕರ ಚಾರಿತ್ರ್ಯಕ್ಕೆ ಮಶಿ ಬಳೆಯಲು ಪ್ರಯತ್ನಿಸಿದ ಸರಕಾರದ ಮೋರೆಗೇ ಇದರಿಂದ ಮಶಿ ಹತ್ತಿತು.

ಟಿಳಕರು ನಿರ್ದೋಷಿಗಳೆಂದು ಸಾರಲ್ಪಟ್ಟ ಮೇಲೆ, ಟಿಳಕರು ಈ ಎಲ್ಲ ಖಟ್ಲೆಯ ಬಗ್ಗೆ ತಮಗೆ ೩೦೦೦೦ ರೂಪಾಯಿಗಳು ಖರ್ಚಾಗಿವೆಯೆಂದೂ ಅವುಗಳನ್ನು ಭಾರತ ಸರಕಾರವು ತಮಗೆ ಕೊಡಬೇಕೆಂದೂ ಕೇಳಿದರು. ಆದರೆ ಈ ಬೇಡಿಕೆಗೆ ಮನ್ನಣೆ ದೊರೆಯಲಿಲ್ಲ. ಮುಂದೆ ಅವರು ೧೯೦೪ ರ ಜುಲೈ ೩೦ ನೇ ತಾರೀಖಿಗೆ ಸ್ಟೇಟ ಸೆಕ್ರೆಟರಿಯ ಕಡೆಗೆ ಅಪೀಲು ಮಾಡಿಕೊಂಡರು. ಅವರು ಈ ಅಪೀಲಿನಲ್ಲಿ ಈ ರೀತಿ ಹೇಳಿದ್ದರು.

"ಮುಂಬಯಿ ಸರಕಾರವು ಈ ಖಟ್ಲೆಯಲ್ಲಿ ಕೈಹಾಕಿ, ಈ ಖಟ್ಲೆ ತಮ್ಮದೊಂದೇ ಭಾವಿಸಿ, ನನ್ನ ವಿರುದ್ಧ ೬೦-೭೦ ಸಾವಿರ ರೂಪಾಯಿಗಳನ್ನು ಖರ್ಚು ಮಾಡಿತು. ಇದರಿಂದ ನನ್ನ ವಿರೋಧೀ ಪಕ್ಷವು ಅಸಮಾನ ಬಲಶಾಲಿಯಾಗಿ ನನಗೆ ಹೆಚ್ಚಿನ ತೊಂದರೆಯಾಯಿತು ಇದಲ್ಲದೆ ಈ ಖಟ್ಲೆಯು ಹೆಚ್ಚಿನ ಮಾನಸಿಕ ಚಿಂತೆಯನ್ನು ಉಂಟುಮಾಡಿತು........... ಕಾಯದೇಶೀರ ನಡೆದ ಈ ವ್ಯವಹಾರದಲ್ಲಿ ಸರಕಾರದವರು ಕೈಹಾಕಿರದಿದ್ದರೆ, ಆ ಮಾತೇ ಬೇರೆಯಾಗುತ್ತಿದ್ದಿತು. ಸರಕಾರವು ಹೀಗೆ ಕೈಹಾಕಿದ್ದುದು ಕಾಯದೇದೃಷ್ಟಿಯಿಂದ ಅಥವಾ ನ್ಯಾಯದೃಷ್ಟಿಯಿಂದ ಅಸಮರ್ಥನೀಯವಿದೆ. ಹೀಗೆ ವಿಶೇಷ ಆಸ್ಥೆವಹಿಸಿ ಖಟ್ಲೆಗೆ ಕೈಹಾಕಿದ್ದರೂ ೨ ವರ್ಷಗಳ ವರೆಗೆ ನಡೆದ ಈ ಖಟ್ಲೆಯಲ್ಲಿ ಅಪಾದಿತನಿಗೆ ತಗಲಿದ ಹಾನಿಯೆಲ್ಲಕ್ಕೂ ಮಿ. ಆಸ್ಟನ್ನರು ಕಾರಣರೇ ಹೊರತು, ಸರಕಾರವು ಹೊಣೆಯಿಲ್ಲವೆಂದು ಹೇಳಲು, ಸರಕಾರಕ್ಕೆ ಹೇಗೆ ಬಾಯಿ ಬರುವದೋ ತಿಳಿಯದು. ಆದರೆ ಸ್ವರ್ಗಸ್ಥನಾದ ನನ್ನ ಮಿತ್ರನ ಬಗ್ಗೆ ಮಾಡಬೇಕಾದ ಕರ್ತವ್ಯ ನಿರ್ವಹಣೆಯಲ್ಲಿ ನಿಸ್ವಾರ್ಥಬುದ್ಧಿಯಿಂದ ನಡೆದುಕೊಂಡದ್ದಕ್ಕಾಗಿ ಸರಕಾರವು ಇಷ್ಟು ತೊಂದರೆ ಕೊಟ್ಟಿತು. ಸ್ಥಾನಿಕ ಸರಕಾರವು ತನ್ನ ಎಲ್ಲ ಶಕ್ತಿಗಳನ್ನು ಉಪಯೋಗಿಸಿ

ನನ್ನ ವಿರೋಧಿಯನ್ನು ಬೆಂಬಲಿಸಿತು. ಇದರ ಪರಿಣಾಮವಾಗಿ ನಾನು ೩೦೦೦೦ ಸಾವಿರ ರೂಪಾಯಿಗಳನ್ನು ಖರ್ಚುಮಾಡಬೇಕಾಯಿತು. ದೀರ್ಘ ಸಮಯದ ವರೆಗೆ ನಡೆದ ಈ ಖಟ್ಲೆಯಲ್ಲಿ ಉಂಟಾದ ಅಪರಿಮಿತ ಮಾನಸಿಕ ತೊಂದರೆಯಲ್ಲದೆ, ಇಷ್ಟು ದೊಡ್ಡ ಪ್ರಮಾಣದ ಆರ್ಥಿಕ ವೆಚ್ಚವು ನನ್ನ ಸ್ಥಾನಮಾನದಲ್ಲಿದ್ದ ವ್ಯಕ್ತಿಗೆ ಬಹಳ ದೊಡ್ಡ ಭಾರವೆನ್ನುವದು ಸ್ಪಷ್ಟವಿದೆ"

ಮೇಲೆ ವಿವರಿಸಿದಂತೆ ಕಾಯದೇ ದೃಷ್ಟಿಯಿಂದ ತಮ್ಮ ನ್ಯಾಯವಾದ ಬೇಡಿಕೆಯನ್ನು ಸಮರ್ಥಿಸಿದ್ದಲ್ಲದೆ, ಟಿಳಕರು ಈ ಪ್ರಶ್ನೆಯನ್ನು ವಿಶಾಲ ದೃಷ್ಟಿಯಿಂದ ಪರಿಶೀಲಿಸಬೇಕೆಂದು ತಿಳಿಸುತ್ತಾ, ಈ ರೀತಿಯಾಗಿ ಹೇಳಿದ್ದಾರೆ.

"ಮಿತ್ರನ ಬಗ್ಗೆ ಮಾಡಬೇಕಾದ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿರ್ವಹಿಸಿದ್ದ ತಪ್ಪಿಗಾಗಿ, ಬ್ರಿಟಿಶ್ ಸರಕಾರದ ಪ್ರಜೆಯೋರ್ವನಿಗೆ ಅತ್ಯಂತ ಅನ್ಯಾಯನ್ನೆಸಗಲಾಗಿದೆ. ಸರಕಾರದ ನೌಕರನು ಸಾರ್ವಜನಿಕ ಖಜಾನೆಯಿಂದ ೬೦ ಸಾವಿರ ರೂಪಾಯಿಗಳನ್ನು ಖರ್ಚುಮಾಡಿ, ಸುದೀರ್ಘ ಅವಧಿಯವರೆಗೆ ಈ ಪ್ರಜೆಯ ಮೇಲೆ ಕೋರ್ಟಿನಲ್ಲಿ ಖಟ್ಲೆ ಮಾಡಿದ್ದಾನೆ. ಈ ಖಟ್ಲೆ ಅನ್ಯಾಯದ್ದೆಂದು ಹಾಯಕೋರ್ಟು ನಿರ್ಣಯ ಕೊಟ್ಟಿರುತ್ತದೆ. ಸ್ವಾರ್ಥೀ ಜನರು ಸರಕಾರಕ್ಕೆ ತಪ್ಪು ಮಾಹಿತಿ ಕೊಟ್ಟು ಅಡ್ಡದಾರಿ ಹಿಡಿಸಿರಬಹುದು. ಆದರೆ ಇಷ್ಟರವರೆಗೆ ನಡೆದದ್ದೆಲ್ಲ ಮಹಾಪರಾಧವೆಂದು ಕಂಡು ಬಂದಿದ್ದರೆ, ಇದಕ್ಕೆ ಬಲಿಯಾಗಿ ತೊಂದರೆಗೆ ಒಳಪಟ್ಟಿದ್ದ ವ್ಯಕ್ತಿಗೆ, ಆದ ಹಾನಿಯನ್ನು ತುಂಬಿಕೊಡಲು ಸರಕಾರವು ನಿರಾಕರಿಸಿದುದಾದರೆ, ಅದು ನಿರ್ದಯ ಮತ್ತು ಅನ್ಯಾಯದ ಕೃತಿಯಾಗುವದೆನ್ನುವದು ತಮಗೆಲ್ಲ ಸ್ಪಷ್ಟವಿದೆ. ಈ ವಿಷಯದಲ್ಲಿ ಸರಕಾರದ ಪ್ರತಿಷ್ಠೆಗೆ ಧಕ್ಕೆ ಬರದಂತೆ ನೋಡಿಕೊಳ್ಳಬೇಕಾದಲ್ಲಿ ಉದಾರ ಬುದ್ಧಿಯಿಂದ ಈ ವಿಷಯವನ್ನು ಪರಿಶೀಲಿಸುವದು ಅವಶ್ಯವಿದೆ. ತಮ್ಮ ಸರಕಾರವು ಈ ರೀತಿಯ ಉದಾರತೆಯನ್ನು ಅನೇಕಸಾರೆ ತೋರಿಸಿರುತ್ತದೆ.''

ಈ ರೀತಿ ಟಿಳಕರು ತಮಗಾದ ಹಾನಿಯನ್ನು ತುಂಬಿಕೊಡಲು ಎಷ್ಟು ಪ್ರಯತ್ನಿಸಿದರೂ ಅವರ ಬೇಡಿಕೆಯನ್ನು ಸರಕಾರವು ಮನ್ನಿಸಿರಲಿಲ್ಲ. ಆದರೆ ಈ ಖಟ್ಲೆಯಲ್ಲಿ ಜಯಪಡೆದ ಈ ವೀರನಿಗೆ ಜನತೆ ಮಾತ್ರ ಹೆಚು ಹೆಚ್ಚು ಬೆಂಬಲ ನೀಡಹತ್ತಿತು.

ಟಿಳಕರು ಈ ಪ್ರಕರಣದಿಂದ ಇನ್ನೂ ಮುಕ್ತರಾಗ್ಗಿದಿಲ್ಲ. ದಿವಾಣಿ ಪ್ರಕರಣವು ಹಾಗೆಯೇ ಉಳಿದಿದ್ದಿತು. ೧೯೦೪ರ ಮಧ್ಯದಲ್ಲಿ ವಿಚಾರಣೆಗೆ ಬಂದು ೧೯೦೬ ಜುಲೈಯಲ್ಲಿ ಟಿಳಕರಂತೆಯೇ ನಿರ್ಣಯವಾಯಿತು. ಆದರೆ ಪ್ರತಿಪಕ್ಷಿಗಳು, ಹೈಕೋರ್ಟಿಗೆ ಅಪೀಲ ಮಾಡಿದರು. ನ್ಯಾ ಚಂದಾವರಕರ ನ್ಯಾ. ಹೀಟನ ಇವರ ಮುಂದೆ ವಿಚಾರಣೆ ನಡೆದು, ಟಿಳಕರ ವಿರುದ್ಧ ತೀರ್ಪು ಕೊಟ್ಟರು ಆಗ ಟಿಳಕರು ಮಂಡಾಲೆ ಜೇಲಿನಲ್ಲಿದ್ದರು. ಅವರ ವತಿ ಯಿಂದ ಪ್ರಿವ್ಹಿಕೌನ್ಸಿಲ್ಗೆ ಅಪೀಲು ಮಾಡಲ್ಪಟ್ಟಿತು. ಪ್ರಿವ್ಹಿಕೌನ್ಸಿಲ್ಲು ಟಿಳಕರಂತೆ ನಿರ್ಣಯ ಕೊಟ್ಟು ಈ ಪ್ರಕರ್ಣವನ್ನು ಒಮ್ಮೆ ಮುಗಿಸಿತು.

ಈ ಎಲ್ಲ ಪ್ರಕರ್ಣಗಳು ಕೊನೆಗೊಂಡನಂತರ ಕೊನೆಗೆ ಸತ್ಯವೇ ಗೆದ್ದಿತ್ತು ಎಂದು ಟಿಳಕರು ಉದ್ಗಾರತೆಗೆದರು. "ಸಾರ್ವಜನಿಕ ಕಾರ್ಯ ಗಳಲ್ಲಿ ಮುಂದಾಳುಗಳಾಗುವ ಜನರ ನೀತಿಯು ಚೆನ್ನಾಗಿರುವದಿಲ್ಲೆಂಬು ದನ್ನು ಸಿದ್ಧಪಡಿಸಬೇಕೆಂದಿದ್ದ ಸರಕಾರದ ಮನೋರಥವು ಭಗ್ನವಾಯಿತು. ತದ್ವಿರುದ್ಧವಾಗಿ, ಸರಕಾರವೇ ಒಮ್ಮೊಮ್ಮೆ ಲಫಂಗ ಜನರನ್ನು ಕಟ್ಟಿಕೊಂಡು ಸಾರ್ವಜನಿಕ ಮುಂದಾಳುಗಳನ್ನು ವಿನಾಕಾರಣವಾಗಿ ಅನ್ಯಾಯವಾಗಿ ಪೀಡಿಸುತ್ತಾರೆಂದು ಈ ಪ್ರಕರಣದಿಂದ ಸಿದ್ಧವಾಗಿದೆ. ಒಂದು ಬಗೆಯಿಂದ ಸಾರ್ವಜನಿಕರಿಗೆ ಲಾಭವೇ ಆಯಿತು" ಎಂದು ಇದರ ಮೀಮಾಂಸೆಯನ್ನು ಮಾಡಿದ್ದಾರೆ.

ಈ ಪ್ರಕರ್ಣವು ಟಿಳಕರನ್ನು ಹಣ್ಣುಮಾಡಿತು. ಅವರ ಆಯುಷ್ಯ ದಲ್ಲಿ ೫ ವರ್ಷಗಳಾದರೂ ಕಡಿಮೆಯಾದವು. ಬ್ರಿಟಿಶರ ಕುಟಿಲ ನೀತಿಯೂ ಅನ್ಯಾಯವೂ ಬಯಲಿಗೆ ಬಂದಿತು. ದೊಡ್ಡವರಿದ್ದ ಟಿಳಕರು ಮತ್ತಿಷ್ಟು ದೊಡ್ಡವರಾದರು. ಟಿಳಕರ ಚಾರಿತ್ರ್ಯಕ್ಕೆ ಕಲಂಕ ಹಚ್ಚಬೇಕೆಂಬ ಕುಟಿಲ ನೀತಿಯು ಫಲಿಸದೆ, ಬ್ರಿಟಿಶರ ಆಳಿಕೆಗೂ ಬ್ರಿ. ಜನಾಂಗಕ್ಕೂ ಮಾತ್ರ ಮಶಿ ಹತ್ತಿತು. ಗ್ರಹಣದಿಂದ ಮುಕ್ತನಾದ ಸೂರ್ಯನಂತೆ ರಾಜಕೀಯ ರಂಗದಲ್ಲಿ ಟಿಳಕರು ಹೆಚ್ಚು ಹೆಚ್ಚು ಪ್ರಕಾಶಿಸಹತ್ತಿದರು.

---

# ಟಿಳಕರ ಅದ್ಭುತ ಚೈತನ್ಯಶಕ್ತಿ

ಟಿಳಕರು ಪುನಶ್ಚ ಹರಿಃ ಓಂ, ಎಂದು ಕಾರ್ಯರಂಗಕ್ಕೆ ಇಳಿದರಷ್ಟೆ! ಸಾರ್ವಜನಿಕ ಜೀವನವು ಅವರ ಸ್ಫೂರ್ತಿಯಿಂದ ಚೈತನ್ಯಮಯವಾಗ ಹತ್ತಿತು. ೧೯೦೦ ರಲ್ಲಿ ನಾನಾಫಡನೀಸರ ಶತಸಾಂವತ್ಸರಿಕ ಉತ್ಸವವು ಬಂದಿತು. ಕೇಸರಿಯು ಈ ಉತ್ಸವವು ದೊಡ್ಡ ಪ್ರಮಾಣದಿಂದ ನಡೆಯ ಬೇಕೆಂದು ಸೂಚಿಸಿತು, ಟಿಳಕರು ನಾನಾಫಡನೀಸರನ್ನು ಕುರಿತು ಒಂದು ವಿಸ್ತೃತ ಪ್ರಬಂಧವನ್ನು ಬರೆಯಿಸಿ ಕೇಸರಿಯಲ್ಲಿ ಪ್ರಸಿದ್ಧಿಸಿದರು.

ಲಾರ್ಡ ಸ್ಯಾಂಡರ್ಸ್ಟನ ಆಳಿಕೆಯು ಜನರಿಗೆ ಅತ್ಯಂತ ಅಪ್ರಿಯವಾಗಿ ದ್ದಿತು, ಮುಂಬಯಿಯಲ್ಲಿಯ ಕೆಲವು ಸ್ವಾರ್ಥಸಾಧಕರು ಅವರ ಸ್ಮಾರಕದ ಹೂಲಿ ಎಬ್ಬಿಸಿದರು. ಗವ್ಹರ್ನರರ ಸ್ಮಾರಕಕ್ಕೆ ಬೇಡಿಸ್ಸುವ ಧೈರ್ಯವು ಸಾಮಾನ್ಯ ಜನರಿಗೆ ಹೇಗಾಗಬೇಕು? ಜನ ಒಳಗೊಳಗೆ ಕುದಿಯುಹತ್ತಿದರು. ಟಿಳಕರು ಕತ್ತಿಯನ್ನು ಹಿರಿದರು. ಕೇಸರಿಯಲ್ಲಿ ಲೇಖ ಮಾಲೆಯನ್ನೇ ಪ್ರಾರಂಭಿಸಿ ದರು. ಈ ಗವ್ಹರ್ನರರ ಆಳಿಕೆಯಲ್ಲಿ ಜನತೆಯು ಅತ್ಯಂತ ಕಷ್ಟ ಅನುಭೋಗಿಸ ಬೇಕಾಯಿತೆಂದು ಉಲ್ಲೇಖಿಸಿದರು. ಕಾಂಗ್ರೆಸ್ಸಿನ ಮಂಡಪದಲ್ಲಿ ಲಾರ್ಡ ಸ್ಯಾಂಡರ್ಸ್ಟರ ದುಷ್ಕೃತ್ಯಗಳನ್ನು ನಿಂದಿಸಿ, ಅವರ ಸ್ಮಾರಕಕ್ಕೆ ಸಹಾನು ಭೂತಿಯನ್ನು ವ್ಯಕ್ತಪಡಿಸುವದೆಂದರೆ, ಕಾಂಗ್ರೆಸ್ಸಿನ ಬಗ್ಗೆ ಅವಿಶ್ವಾಸವನ್ನುಂಟು ಮಾಡಿದಂತೆಯೇ ಸರಿ, ಎಂದು ಮುಖಂಡರನ್ನು ಎಚ್ಚರಿಸಿದರು. ಸಾತಾರೆ ಯಲ್ಲಿ ಪ್ರಾಂತಿಕ ಪರಿಷತ್ತು ಕೂಡುವದಿದ್ದಿತು. 'ಮುನಸೀಪಾಲ್ಟಿಯ ಕಾಯದೆ, ಜಮೀನದಾರರ ಹಕ್ಕುಗಳನ್ನು ಕಡಿಮೆಮಾಡುವದು, ಖಾಸಗಿ ಶಿಕ್ಷಣ ಸಂಸ್ಥೆಯ ಚಾಲಕರ ಸ್ವಾತಂತ್ರ್ಯ ಹರಣ, ವೃತ್ತಪತ್ರಗಳ ಮೇಲಾದ ನಿರ್ಬಂಧ ಈ ಎಲ್ಲ ಅನಿಷ್ಟ ಪ್ರಕಾರಗಳು ಈ ಮಹನೀಯರ ಕಾಲದಲ್ಲಿಯೇ ಸಂಭವಿ ಸಿವೆ. ಈ ಪ್ರಶ್ನೆಗಳ ವಿಚಾರವಾಗದಿದ್ದರೆ ಪ್ರಾಂತಿಕ ಪರಿಷತ್ತು ಕರ್ತವ್ಯ ವನ್ನು ಮಾಡಿದಂತಾಗುವದಿಲ್ಲ. ಅಧಿಕಾರಿಗಳು ಕ್ಷುದ್ರರಾಗುವರು ಎಂದು ಬೆದರಿ, ನಮಗೆ ಯೋಗ್ಯ ಅಯೋಗ್ಯವೆನಿಸುವ ಸಂಗತಿಗಳ ಉಚ್ಚಾರ ಮಾಡುವ

ಹಕ್ಕನ್ನು ಕೂಡ ತಾವು ಕಾಯ್ದುಕೊಳ್ಳದಿದ್ದರೆ, ನಮ್ಮ ರಾಜಕೀಯ ಉನ್ನತಿಯ ಆಸೆಯನ್ನೇ ಬಿಟ್ಟು ಬಿಡಬೇಕು, ಎಂದು ಜನರನ್ನು ಎಚ್ಚರಿಸಿದರು. ಈ ಪ್ರಶ್ನೆಯು ಪರಿಷತ್ತಿನಲ್ಲಿ ದೊಡ್ಡ ಗೊಂದಲವನ್ನೇ ಎಬ್ಬಿಸಿತು. ಟಿಳಕಪಕ್ಷ ಮತ್ತು ಮೇಥಾಪಕ್ಷಗಳ ನಡುವೆ ದ್ವಂದ್ವವೇ ನಡೆಯಿತು. ಅಧ್ಯಕ್ಷರ ಬಿನ್ನಹದ ಮೇರೆಗೆ ಟಿಳಕರೇ ಪ್ರಶ್ನೆಯನ್ನು ಬಗೆಹರಿಸಿ, ವಿಜಯಿಗಳಾದರು.

ಪಂಚಾಂಗ ಸಂಶೋಧನೆ, ಜ್ಞಾನೇಶ್ವರರು ಒಬ್ಬರೋ ಇಬ್ಬರೋ? ಶಿವಾಜಿ ಜನ್ಮತಿಥಿಯ ನಿರ್ಣಯ ಈ ಎಲ್ಲ ವಿಷಯಗಳ ಮೇಲೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ, ವಿಚಾರಕ್ರಾಂತಿಯನ್ನುಂಟು ಮಾಡಿದರು. ರಾಯಗಡದಲ್ಲಿ ಶಿವಾಜಿ ಸ್ಮಾರಕೋತ್ಸವವನ್ನು ಪುನಃ ಜರುಗಿಸಿ ಮತ್ತೆ ಆ ಉತ್ಸವಕ್ಕೆ ಚಾಲನೆಯನ್ನು ಕೊಟ್ಟರು. ೧೯೦೦ ನವ್ಹೆಂಬರದಲ್ಲಿ ಮ್ಯಾಕ್ಸಮುಲ್ಲರು ಮರಣಹೊಂದಲು, ಅವರ ಬಗ್ಗೆ ಅತ್ಯಂತ ಉದಾತ್ತ ಕಲ್ಪನೆಗಳನ್ನು ವ್ಯಕ್ತಪಡಿಸಿದರು. 'ಪ್ರಾಚ್ಯಭಾಷೆಯ ಅಥವಾ ಧರ್ಮಗ್ರಂಥಗಳ ಸೂಕ್ಷ್ಮ ಅಭ್ಯಾಸವನ್ನು ಯಾರಿಗಾದರೂ ಮಾಡಬೇಕಿದ್ದರೆ, ಈ ಪಾಶ್ಚಾತ್ಯ ವಿದ್ವಾಂಸರ ಗ್ರಂಥವನ್ನೋದದೆ ಪರಿಪೂರ್ತಿಯಾಗುವದಿಲ್ಲ' ಎಂದು ಧನ್ಯೋದ್ಗಾರಗಳನ್ನು ತೆಗೆದು, ನಮ್ಮ ವಿದ್ವಾಂಸರೂ ಅವರ ಅನುಕರಣ ಮಾಡಬೇಕೆಂದು ಸೂಚಿಸಿದರು.

ಲಾಹೋರ ರಾಷ್ಟ್ರೀಯ ಸಭೆಯು ಬಂದಿತು. (೧೯೦೦) ದಾದಾಭಾಯಿ ನವರೋಜಿ, ಹ್ಯೂಮ, ವೆಡರಬರ್ನ ಈ ಮೂವರ ಸಹಿಯಿಂದ ಇಂಡಿಯಾ, ಪತ್ರದಲ್ಲಿ ರಾಷ್ಟ್ರೀಯ ಸಭೆಯ ರಥವನ್ನು ಇಲ್ಲಿಯವರೆಗೆ ಎಳೆದಿದ್ದೇವೆ, ತರುಣರು ಮುಂದೆ ಬಂದು, ಅದರ ಹೊಣೆಯನ್ನು ಹೊರಬೇಕೆಂದು, ಕಳಕಳಿಯಿಂದ ಉಪದೇಶಿಸಿದ ಒಂದು ಪತ್ರವು ಪ್ರಸಿದ್ಧವಾಯಿತು. ಟಿಳಕರು ಕೂಡಲೇ ಅದನ್ನು ಸ್ವಾಗತಿಸಿದರು. 'ಮುನಿತ್ರಯರ ಮನವಿ' ಎಂದು ಮನ್ನಿಸಿದರು. ಅವರಿಗೆ ಧನ್ಯವಾದಗಳನ್ನು ಅರ್ಪಿಸಿದರು. ನಮ್ಮ ಜನರು ಅವರಿಗೆ ಕೊಡಬೇಕಾದ ಬೆಂಬಲವನ್ನು ಕೊಟ್ಟಿಲ್ಲವೆಂದು ಖೇದವನ್ನು ಪ್ರದರ್ಶಿಸಿ, ತರುಣರು ಹೊಣೆಹೊರಲು ಮುಂದೆ ಬರಬೇಕೆಂಬ ಪಲ್ಲವಿಯನ್ನು ಹಾಡಿದರು. ರಾಷ್ಟ್ರೀಯ ಸಭೆಯಲ್ಲಿ ಟಿಳಕರು ಸಭಾಪೀಠದ

ಮೇಲೆ ಬಂದ ಕೂಡಲೇ ಸರ್ವ ಜನರೂ ಅವರನ್ನು ಅತ್ಯಂತ ಸಂಭ್ರಮ ದಿಂದ ಸ್ವಾಗತಿಸಿದರು. ತಮ್ಮ ಭಕ್ತಿ, ವಿಶ್ವಾಸಗಳನ್ನು ವ್ಯಕ್ತಪಡಿಸಿದರು. ಅವರು ಜಯಜಯಕಾರವನ್ನು ಮಾಡಿದರು. ಅವರ ಶೀಲವನ್ನು ಕೊಂಡಾಡಿ ದರು. ಜನತೆಯ ಪ್ರೀತಿಪಾತ್ರರೆಂದು ರಾಷ್ಟ್ರವು ತೋರಿಸಿತು.

೧೯೦೧ ನೇ ಜನವರಿಯಲ್ಲಿ ನ್ಯಾ. ರಾನಡೆ, ವಿಕ್ಟೋರಿಯಾ ಮಹಾ ರಾಣಿಯವರು ತೀರಿಕೊಂಡರು. ಸುಧಾರಕರ ಬಗ್ಗೆ ಟಿಳಕರಿಗೆ ಆದರಬುದ್ಧಿ ಯಿರದಿದ್ದರೂ ರಾನಡೆಯವರ ಬಗ್ಗೆ ಅತ್ಯಂತ ಪೂಜ್ಯಭಾವವಿದ್ದಿತು. ಅವರಿಗೆ ದುಃಖವಾಯಿತು. ಅದು ಅವರ ಮೃತ್ಯುಲೇಖದಲ್ಲಿ ಕಂಡು ಬರುವದು. 'ರಾನಡೆ ಯವರ ಬುದ್ಧಿ, ಕರ್ತೃತ್ವ ಶಕ್ತಿ, ವಿದ್ವತ್ತೆ, ರಾಷ್ಟ್ರದ ಮುಂದಾಳುತ್ವ, ಈ ಸಂಗ ತಿಗಳು ನೆನಪಾದೊಡನೆ, ಅವರ ಮೃತ್ಯುವಿನಿಂದ ಕ್ಷಣಹೊತ್ತು ಜಗತ್ತು ಶೂನ್ಯದಂತೆ ಭಾಸವಾಗುತ್ತದೆ. ಅವರ ಅಲೌಕಿಕ ಬುದ್ಧಿ, ದೀರ್ಘಸತತ ವ್ಯಾಸಂಗ, ದೇಶಹಿತದ ನಿಜವಾದ ಕಳಕಳಿ, ವಿದ್ಯಾಭ್ಯಾಸದ ವ್ಯಸನ, ಗುರಿತಪ್ಪದ ಕಲ್ಪಕತೆ, ಇವು ರಾನಡೆಯವರ ಮುಖ್ಯ ಗುಣಗಳು. ಮಹಾ ರಾಷ್ಟ್ರೀಯರಿಗೆ ದೀಕ್ಷೆಯನ್ನು ಕೊಟ್ಟವರಲ್ಲಿ ಮೊದಲಿಗರು. ರಾನಡೆ ಯವರಂಥ ಪುರುಷರು ಬ್ರಿಟಿಶ್ ರಾಜ್ಯ ಪ್ರಾರಂಭವಾದಂದಿನಿಂದ ಯಾರೂ ಆಗಿಲ್ಲ. ಅವರ ಸ್ಥಳವನ್ನು ತುಂಬುವವರೂ ಇಲ್ಲ. ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ಎಂಬ ವಚನವು ರಾನಡೆಯವರಿಗೆ ಅನ್ವಯಿ ಸುತ್ತದೆ.' ಎಂದು ವರ್ಣಿಸಿದರು.

ಬ್ರಿಟಿಶ ರಾಜ್ಯದೊಡನೆ ಹೋರಾಡುತ್ತಿದ್ದರೂ ಈ ಸಮಯದಲ್ಲಿ ಅದನ್ನು ನುಂಗಿಕೊಂಡರು. 'ಮಹಾರಾಣಿಯವರು ಮನಸ್ಸಿನಿಂದ ಕೋಮ ಲರೂ ಸದಾಚಾರಿಗಳೂ ಪ್ರಜೆಗಳ ವಿಷಯದಲ್ಲಿ ಪ್ರೇಮಾದರ ಉಳ್ಳವರೂ ಲೋಕ ಪ್ರಿಯರೂ ಆಗಿದ್ದರೆಂದು ವರ್ಣಿಸಿ, ಅವರ ಜಾಹೀರನಾಮೆಯು ಭಾರತಕ್ಕೆ ಅವರು ಹಾಕಿಕೊಟ್ಟ ತಾಮ್ರಪಟವಾಗಿದೆ' ಎಂದು ಬರೆದರು.

೧೮೯೬ ರಿಂದ ೧೯೦೦ ರ ವರೆಗೆ ಬಿದ್ದ ಬರಗಾಲಗಳಿಂದ ರೈತರ ಶಕ್ತಿ ಯೆಲ್ಲವೂ ಆರ್ಥಿಕ ದೃಷ್ಟಿಯಿಂದ ಕುಗ್ಗಿಹೋಯಿತು. ಅವರ ಭೂಮಿ ಕಾಣಿಕೆ ಗಳೆಲ್ಲ ಸಾವುಕಾರರ ವಶವಾಗಹತ್ತಿದವು. ಇಲ್ಲವೆ ತಗಾಯಿ ವಸೂಲಿಗೆಂದು ಸರಕಾರಕ್ಕೆ ಜಮಾ ಆಗಹತ್ತಿದವು. ರೈತರಿದ್ದರೆ ರಾಜ್ಯ ಎಂದು ವಿಚಾರಮಾಡಿ

ರೈತರಿಂದ ಭೂಮಿಗಳು ಕೈಬಿಡದಂತೆ ಮಾಡಬೇಕಾದರೆ, ರೈತರ ಹೊಲ ಮಾರುವ ಹಕ್ಕನ್ನು ನಷ್ಟಪಡಿಸಬೇಕು ಎಂಬ ವಿಚಾರದಿಂದ ಹೊಸ ಕಾಯಿದೆಗೆ ಸರಕಾರವು ಕೈಹಾಕಿತು. ಈ ಉಪಾಯವು ಭಯಂಕರವಾಗಿದ್ದಿತು. ಟಿಳಕರು ಇದರ ವಿರುದ್ಧವಾಗಿ ರೈತರನ್ನು ಎತ್ತಿ ಹಿಡಿದರು. "ಭೂಮಿಯ ಒಡೆತನ ಮುಣುಗಿತು. ಸಾವುಕಾರನೂ ಸತ್ತ, ರೈತನೂ ಸತ್ತ, ಈ ಬಿಲ್ಲಿನ ತತ್ವವು ನಮಗೆ ಮಾನ್ಯವಿಲ್ಲ" ಎಂದು ಅಗ್ರಲೇಖ ಬರೆದು, ದೇಶದಲ್ಲಿ ಬಿರುಗಾಳಿಯನ್ನೆಬ್ಬಿಸಿದರು.

೧೯೦೧ ರ ಸಪ್ಟೆಂಬರ ತಿಂಗಳಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತು ಮುಂಬಯಿಯಲ್ಲಿ ಜರುಗಿತು. ಲ್ಯಾಂಡ ರೆವ್ಹಿನ್ಯೂ ಬಿಲ್ಲಿನ ಚರ್ಚೆಯಾಯಿತು. ಬರಗಾಲದ ಸಂಬಂಧದ ಗೊತ್ತುವಳಿಯನ್ನು ಗೋಕುಲದಾಸ ಪರೇಖರು ಮಂಡಿಸಿದರು. ಟಿಳಕರು ಅನುಮೋದನವಿತ್ತರು. ೧೯೦೧ರ ಕಾಂಗ್ರೆಸ್ಸು ಕಲಕತ್ತೆಯಲ್ಲಿ ಜರುಗಿತು. ದೀನಶಹಾ ವಾಚ್ಛಾರವರು ಅಧ್ಯಕ್ಷತೆ ವಹಿಸಿದ್ದರು. ಪಂ. ಮದನ ಮೋಹನ ಮಾಲವೀಯವರು, ಶಿಕ್ಷಣ ಕಮಿಶನ್ನಿನ ವಿಷಯವಾಗಿ ಗೊತ್ತುವಳಿಯನ್ನು ಮಂಡಿಸಿದರು. ಅದಕ್ಕೆ ಟಿಳಕರು ಅನುಮೋದನ ಕೊಡುತ್ತ, ಭಾರತ ಹಾಗು ಜಪಾನದೇಶಗಳ ಶಿಕ್ಷಣ ಪದ್ಧತಿಯ ತುಲನೆಯನ್ನು ಮಾಡಿತೋರಿಸಿದರು. ಕಲಕತ್ತೆಯಿಂದ ಮರಳುವಾಗ ನಾಗಪೂರದಲ್ಲಿ ಇಳಿದರು. ಮ್ಯಾರೀಸ ಕಾಲೇಜ ವಿದ್ಯಾರ್ಥಿಗಳು ಟಿಳಕರಿಗೆ ಮಾನಪತ್ರವನ್ನು ಸಮರ್ಪಿಸಿದರು. 'ಆಧುನಿಕ ದೃಷ್ಟಿಯಿಂದ ಗೀತೆಯನ್ನು ಅಭ್ಯಾಸ ಮಾಡಿದರೆ, ಧರ್ಮಬುದ್ಧಿಯನ್ನು ಜಾಗೃತವಾಗಿಟ್ಟುಕೊಂಡು, ಮನುಷ್ಯನಿಗೆ ಕರ್ತವ್ಯದ ಮಾರ್ಗವನ್ನು ತೋರಿಸುವ ಗ್ರಂಥವಿದೆಂದು ಅನಿಸುತ್ತದೆ' ಎಂಬ ತಮ್ಮ ಕರ್ಮಯೋಗ ಗ್ರಂಥದ ಬೀಜವನ್ನು ಪ್ರಕಟಿಸಿದರು—

೧೯೦೩ ರಲ್ಲಿ ಮಾರ್ಚ ೨೬ಕ್ಕೆ ಧಾರವಾಡದಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತು ಸೇರಿತು. ಪಾಂಡುರಂಗರಾವ ಆಠವಲೆಯವರು ಸ್ವಾಗತಾಧ್ಯಕ್ಷರಿದ್ದರು. ದಾಜೀಸಾಹೇಬ ಖರೆಯವರು ಅಧ್ಯಕ್ಷಸ್ಥಾನ ವಹಿಸಿದ್ದರು. ಈ ಪರಿಷತ್ತಿನಲ್ಲಿ, ಭೂಕಂದಾಯದ ಪ್ರಶ್ನೆಯು ಚರ್ಚೆಯಾಗುವದಿತ್ತೆಂದು ಟಿಳಕರೂ ಬಂದಿದ್ದರು. ಟಿಳಕ ಹಾಗು ಖರೆಯವರು ಕೂಡಿಕೊಂಡೇ ಅಧ್ಯಕ್ಷರ ಭಾಷಣವನ್ನು ಬರೆದಿದ್ದರು. ಭೂಕಂದಾಯವು ಪ್ರಾರಂಭವಾದಾಗ

೧ ಕೋಟಿ ೪೦ ಲಕ್ಷ ರೂ. ಇದ್ದಿತು. ಅದು ಏರುತ್ತ, ಏರುತ್ತ ೧೯೦೨ ನೇ ಇಸ್ವಿಗೆ ೩ ಕೋಟಿ ೧೦ ಲಕ್ಷಕ್ಕೆ ಹೇಗೆಮುಟ್ಟಿದೆ ಎಂಬುದನ್ನು ಸಪ್ರಮಾಣ ವಾಗಿ ಸಿದ್ಧಮಾಡಿ ತೋರಿಸಿದ್ದರು. ಪ್ರಾಂತಿಕ ಪರಿಷತ್ತಿನೊಡನೆ, ಸಾಮಾಜಿಕ ಪರಿಷತ್ತೂ ಕೂಡಿತ್ತು.

೧೯೦೩ರ ೧ನೇ ಜನವರಿ ದಿವಸ ದಿಲ್ಲೀದರ್ಬಾರ ನಡೆಯಿತು. ಇಂತಹ ವೈಭವಪೂರ್ಣ ದರ್ಬಾರವು ಈ ಮೊದಲು ಜರುಗಿರಲಿಲ್ಲ. ಮೆರವಣಿಗೆ ಜಾಹೀರನಾಮೆ, ಸುಗ್ರಾಸಭೋಜನ, ಯತೇಷ್ಟ ಮದ್ಯಪಾನ, ಪರೇಡ ಪ್ರಾರ್ಥನಾ ಮೊದಲಾದವುಗಳು ನಡೆದ ರೀತಿಯನ್ನು ನೋಡಿದರೆ, ಭಾರತದ ಸಂಪತ್ತು, ಶೋಭೆ, ಐಶ್ವರ್ಯಗಳು ಒಂದೆಡೆ ಸಮ್ಮಿಳಿತವಾದಂತೆ ಕಾಣುತ್ತಿದ್ದಿತು. ಬಾದಶಹನ ಪ್ರತಿನಿಧಿ ಎಂದು ಕರೆಯಿಸಿದ ರಾಜಪುತ್ರನಿಗಿಂತಲೂ ಲಾರ್ಡ ಕರ್ಝನನ ಸನ್ಮಾನವೇ ಹೆಚ್ಚಿನದೆಂದು ಅಲ್ಲಿ ಕಾಣುತ್ತಿದ್ದಿತು. ಈ ಸಮಾರಂಭಕ್ಕೆ ಪ್ರೇಕ್ಷಕರೆಂದು ಎಲ್ಲ ರಾಜ ಮಹಾರಾಜರನ್ನು ಕರಿಸಿದ್ದರು. ಬ್ರಿಟಿಶ ಸಾಮ್ರಾಜ್ಯದ ಮುದ್ರೆಯನ್ನು ಭಾರತೀಯರ ಮೇಲೆ ಒತ್ತುವುದೇ ಕರ್ಝನನ ಉದ್ದೇಶವಿದ್ದಿತು. ತಾವು ಹೆಚ್ಚಿನವರು, ಸುಸಂಸ್ಕೃತರು, ಬಲಾಢ್ಯರು ಎಂಬುದನ್ನು ಬಿಂಬಿಸುವದೇ ಈ ದರ್ಬಾರಿನ ಮೂಲ ಉದ್ದೇಶ. ಸ್ವಾಭಿಮಾನಿ ಗಳಾದ ಉದೇಪುರದ ಮಹಾರಾಣಾರಂಥವರು ನೆವ ತೋರಿಸಿ, ತಪ್ಪಿಸಿ ದರು. ಮೇಲ್ತೋರಿಕೆಗೆ, ಬಾದಶಹರ ಭಾಷಣವು ಹೇಗೆ, ತಾಯಿಯು ಅನುಕರಣ ಮಾಡುವೆನೆಂದಿದ್ದಿತೋ ಹಾಗೆಯೇ ಟಿಳಕರೂ ದರಬಾರದ ಅಭಿ ನಂದನೆ ಮಾಡಿದರು. ದರ್ಬಾರಕ್ಕೆ ಕೋಟ್ಯಾವಧಿ ರೂಪಾಯಿಗಳು ಹಾರಿ ಹೋದವು. ಆದರೆ ಪ್ರಜೆಗಳಿಗೆ ಎಳ್ಳಷ್ಟೂ ಲಾಭವಾಗಲಿಲ್ಲ. ದಿಲ್ಲಿ, ದರ್ಬಾರವೆಂದರೆ ಲಾರ್ಡ ಕರ್ಝನನ ಅಹಂಕಾರದ ಪುಂಡುಗಾರಿಕೆಯ ಆಟವಾಗಿದೆ, ಎಂಬ ಮಾತನ್ನು ವಾಚಕರಿಗೆ ಮನಗಾಣಿಸಿಕೊಟ್ಟರು. ಪಕ್ವಾನ್ನಗಳನ್ನು ಹೊಡೆದ, ಬೆಲೆಬಾಳುವ ಮದಿರೆಯನ್ನು ಸೇವಿಸಿದ, ರಾಜ ಪ್ರತಿನಿಧಿಗಳು ಕುತುಬಮೀನಾರವನ್ನು ಹತ್ತಿ ಸುತ್ತುಕಡೆಗೆ ದೃಷ್ಟಿಯನ್ನು ಹೊರಳಿಸಬೇಕು. ಅಂದರೆ ದಿಲ್ಲಿಯಲ್ಲಿಯ ಹಳೆಯ ಏಳು ರಾಜಧಾನಿಗಳ ಗತಿ ಏನಾಗಿದೆ ಎಂಬುದು ತಿಳಿಯುವದು. ಎಂದು ಅಧಿಕಾರಿಗಳನ್ನು ಎಚ್ಚರಿಸಿ ದರು. ಸ್ವರಾಜ್ಯದ ಅನುಭವವನ್ನು ಪಡೆದ ಪ್ರಜೆಗಳ ಪ್ರೇಮವು ಇಂಥ

ಮೋಹಕ ದರ್ಬಾರಗಳಿಂದ ಹೊರಳುವದು ಎಂದು ತಿಳಿಯುವದು ವ್ಯರ್ಥ ವೆಂದು ಹೇಳಿದರು. ಸಂಸ್ಥಾನಿಕರು ಸಾಮ್ರಾಜ್ಯದ ಕೈಗೊಂಬೆಗಳೆಂದು ಈ ದರ್ಬಾರವು ತೋರಿಸಿತೆಂದು ಸಂಸ್ಥಾನಿಕರಿಗೆ ಏಟುಕೊಟ್ಟರು.

೧೯೦೩ ರಲ್ಲಿ ಮದ್ರಾಸದಲ್ಲಿ ರಾಷ್ಟ್ರೀಯ ಸಭೆ ಜರುಗಿತು. ಅಧ್ಯಕ್ಷರಾದ ಲಾಲಮೋಹನಘೋಷರು ದಿಲ್ಲಿದರ್ಬಾರದ ದುಂದುಗಾರಿಕೆಯನ್ನು ಕಟು ವಾಗಿ ಖಂಡಿಸಿದರು. ಈ ಸಭೆಗೆ ಹ್ಯೂಮ ಸಾಹೇಬರು ನಿಮ್ಮ ಚಳವಳಿಯು ಯೋಗ್ಯದಿಶೆಯಿಂದ, ಕಳಕಳಿಯಿಂದ ಸಾಗಿದೆ ಎಂದು ನನಗೆ ಮನವರಿಕೆ ಯಾದರೆ ನಾನು ಆನಂದದಿಂದ ಪ್ರಾಣಬಿಡುವೆನು, ಎಂದು ಪತ್ರಬರೆದಿದ್ದರು. ಇದನ್ನುದ್ದೇಶಿಸಿ ಟಿಳಕರು 'ರಾಷ್ಟ್ರೀಯ ಸಭೆಯು ೧೮ ವರ್ಷ ಪ್ರಯತ್ನಿಸಿ ಎಲ್ಲ ನ್ಯಾಯವಾದ ಬೇಡಿಕೆಗಳನ್ನು ಸರಕಾರದ ಮುಂದೆ ಇಟ್ಟಿತು. ಮೊದ ಮೊದಲು ಸರಕಾರಕ್ಕೆ ಸ್ವಲ್ಪ ಅಂಜಿಕೆಯಾದರೂಇದ್ದಿತು. ಆದರೆ ಈಗ ಆ ಭೀತಿಯೂ ಹಾರಿಹೋಗಿದೆ. ಇದನ್ನು ವಿಚಾರಮಾಡಿದರೆ ನಾವೆಲ್ಲಿಯೋ ತಪ್ಪುತ್ತೇವೆ ಎಂಬುದು ಸಹಜವಾಗಿ ಹೊಳೆಯುವದು. ಕಾಯದೆ ಬದ್ಧ ವಾದ ಮಾರ್ಗವೇ ರಾಷ್ಟ್ರೋನ್ನತಿಯ ಮಾರ್ಗವಾಗಿದ್ದಲ್ಲಿ ಅದು ನಮಗೇಕೆ ಫಲಕಾರಿಯಾಗಿಲ್ಲ ? ಈ ಮಾರ್ಗವು ನಿಜವಾಗಿರದಿದ್ದರೆ ಇದಕ್ಕಿಂತಲೂ ಶ್ರೇಯಸ್ಕರವಾದ ಬೇರೆ ಮಾರ್ಗವನ್ನೇಕೆ ಹಿಡಿಯಬಾರದು ? ಎಂದು ಪ್ರಶ್ನಿಸಿದರು.

೧೯೦೪ ರಲ್ಲಿ ಮುಂಬಯಿಯಲ್ಲಿ ರಾಷ್ಟ್ರೀಯ ಸಭೆಯು ಜರುಗುವದಿದ್ದಿತು. ವುಯಿಲ್ಯಂ ಡಿಗ್ಬಿಯವರು ವರ್ಷವೆಲ್ಲ ಕಾರ್ಯಸಾಗುವಂತೆ ಒಂದು ಯೋಜನೆಯನ್ನೂ ಸಿದ್ಧಪಡಿಸಿದ್ದರು. ಭಾರತೀಯರು ಸತತ ಪ್ರಯತ್ನಿಸಿದರೆ, ಫಿಲಘಾಯನದಂತೆ, ಸ್ವರಾಜ್ಯವನ್ನು ಪಡೆಯಬಹುದೆಂದು ಸೂಚಿಸಿದ್ದರು. ಕಾರ್ಯಮಾಡಲು ಯಾರೂ ಸಿದ್ಧರಿರಲಿಲ್ಲ. ತದ್ವಿರುದ್ಧವಾಗಿ ಚಂದಾವರಕರ, ತಯ್ಯಬಜಿ, ಸುಬ್ರಮ್ಹಣ್ಯಯ್ಯರ ಮೊದಲಾದವರು ಸರಕಾರಿ ನೌಕರಿಯನ್ನು ಹಿಡಿದರು. ಹಳೆಯ ಮುಖಂಡರಿಗೆ ಅಂದರೆ ಮೆಥಾ ಮೊದಲಾದವರಿಗೆ ಹ್ಯೂಮ್ ಮೊದಲಾದವರು ಹೆಸರಿಡಹತ್ತಿದ್ದರು. ಇದೇ ಸಮಯದಲ್ಲಿ ದಾದಾಭಾಯಿಯವರು, ಅಮಸ್ಟರ್ಡಾಮದಲ್ಲಿ (೧೯೦೪ ಸಪ್ಟಂಬರ) ಸೇರಿದ ಸೋಶಿಯಾಲಿಸ್ಟರ ಸಭೆಗೆ ಹೋದರು. ಭಾರತದ

ಭವಣೆಯನ್ನೆಲ್ಲ ವರ್ಣಿಸಿ, ಅದರ ನಿವಾರಣೋಪಾಯವನ್ನು ಸೂಚಿಸಿದರು. ಅವರ ಭಾಷಣವು ಅತ್ಯಂತ ತೀಕ್ಷ್ಣವಾಯಿತು. ಸರ್ವ ರಾಷ್ಟ್ರಗಳ ಪ್ರತಿನಿಧಿಗಳು ಅವರ ಜಯಘೋಷ ಮಾಡಿದರು. ಇದು ಕೆಲವರ ಮನಸ್ಸಿಗೆ ಬರಲಿಲ್ಲ. ಹ್ಯೂಮ, ವೆಡರಬರ್ನರ ಮಾತುಗಳು ಮೆಥಾದಿಗಳಿಗೆ ರುಚಿಸದಿರುವಂತೆ ನವರೋಜಿಯವರ ಈ ಉಗ್ರತೆಯು ಕೆಲವರಿಗೆ ಸೇರಲಿಲ್ಲ.

ವೆಡರಬರ್ನರು ರಾಷ್ಟ್ರೀಯ ಸಭೆಯನ್ನು ಉದ್ದೇಶಿಸಿ ಒಂದು ಪತ್ರವನ್ನು ಬರೆದರು. ‘ರಾಷ್ಟ್ರೀಯ ಸಭೆಯು ತನ್ನ ಕಾರ್ಯದ ಬಗೆಗೆ ಹೊಸ ಮಾರ್ಗವನ್ನು ಹುಡುಕದೆ ಗತ್ಯಂತರವಿಲ್ಲ, ಎಂಬುದೇ ಆ ಪತ್ರ. ರಾಷ್ಟ್ರೀಯ ಸಭೆಯ ಗೊತ್ತುವಳಿಗಳೆಂದರೆ ರೋಗದ ನಿದಾನದಂತೆ, ಆದರೆ ಔಷಧವು ಬೇರೆಯಿರುತ್ತದೆ. ವಿಲಾಯತಿಯಲ್ಲಿಯ ಜನರ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವಾಗಿರದಿದ್ದರೆ ಎಲ್ಲವೂ ವ್ಯರ್ಥ, ಎಂದು ಟಿಳಕರು ಭಾಷಣ ಮಾಡಿದರು. ಮತ್ತು ‘ಸತತ ಪ್ರಯತ್ನ ಹಾಗು ಸ್ವಾವಲಂಬನಗಳನ್ನು ಉಪಯೋಗಿಸಲು ಯಾವಾಗ ಮನುಷ್ಯನು ಪ್ರವೃತ್ತನಾಗುವನೋ ಆಗಲೇ ಸಿದ್ಧಿಯಾಗುವದು ಎಂದು, ಮಾರ್ಗದರ್ಶನ ಮಾಡಿದರು.

‘ಇದೇ ಸಮಯದಲ್ಲಿ ಸ್ಫೂರ್ತಿದಾಯಕ ಅಗ್ರಲೇಖ ಬರೆದು, ‘ನೀವು ಮಾಡುವದನ್ನು ಮನಃಪೂರ್ವಕವಾಗಿ ಸತತ ಹುರುಪಿನಿಂದ ಮಾಡಿರಿ’ ಎಂದು ಉಪದೇಶಮಾಡಿದರು. ಕಾಂಗ್ರೆಸ್ಸಿನ ಕಾರ್ಯಕರ್ತರು ಅಧಿಕಾರದ ಸ್ಥಾನಗಳನ್ನು ಹಿಡಿದು ಕುಳಿತು ಕಾರ್ಯಮಾಡುವದಿಲ್ಲೆಂಬುದೇ ಅವರ ಆರೋಪ. ರಾಷ್ಟ್ರೀಯ ಸಭೆಯು ಸರ ಹೇನ್ರಿಕಾಟನ್ನರ ಅಧ್ಯಕ್ಷತೆಯಲ್ಲಿ ಜರುಗಿತು. ಟಿಳಕರು ಹೇನ್ರಿಕಾಟನ್, ವೆಡರಬರ್ನ ಇಬ್ಬರೊಡನೆಯೂ ಇಂಗ್ಲಂಡದಲ್ಲಿಯೂ ಭಾರತದಲ್ಲಿಯೂ ಚಳವಳಿಯನ್ನು ಹೇಗೆ ನಡೆಯಿಸಬೇಕೆಂಬ ಬಗ್ಗೆ ವಿಚಾರ ವಿನಿಮಯಮಾಡಿದರು. ಬಹಿರಂಗವಾಗಿ ಯಾವ ಮತಭೇದವೂ ಹೊರಬರಲಿಲ್ಲ. ಟಿಳಕರು ಸ್ವಾಗತಮಂಟಪದಲ್ಲಿ ಬಂದೊಡನೆಯೇ ಅವರ ಸ್ವಾಗತವನ್ನು ಒಳ್ಳೇ ಸಂಭ್ರಮದಿಂದ ಜನ ಮಾಡಿತು. ಅಲ್ಲಿ ಮುಹಮ್ಮದ ಭಿಮಜಿ ಎಂಬ ಮುಸಲ್ಮಾನ ಕಾಂಗ್ರೆಸ ಭಕ್ತರು, ಟಿಳಕರ ಜಯಜಯಕಾರ ಮಾಡುವದರಲ್ಲಿ ಅಗ್ರಸ್ಥಾನದಲ್ಲಿದ್ದರು.

---

## ಆರನೆಯ ಘಟ್ಟ

# ಟಿಳಕರ ಜೀವನದಲ್ಲಿಯ ಸುವರ್ಣಯುಗ

## ೧೯೦೫-೧೯೦೮

## ವಂಗ ಭಂಗ

೧೯೦೫ ರಿಂದ ೧೯೦೮ರ ವರೆಗಿನ ಕಾಲವು ಭಾರತದ ಇತಿಹಾಸದಲ್ಲಿ ಅಪೂರ್ವವಾದ ಕಾಲವೆಂದು ಹೇಳಬಹುದು. ಭಾರತದ ಪುನರುತ್ಥಾನ ವಾದುದು ಈ ಕಾಲದಲ್ಲಿಯೇ! ಈ ಕಾಲದ ಲೋಕಮಾನ್ಯರ ಜೀವನವು ಅದ್ಭುತರಮ್ಯವಾದ ರೋಮಾಂಚಕಾರಿ ಘಟನೆಗಳಿಂದ ತುಂಬಿಹೋಗಿದೆ. ವಿಲಕ್ಷಣವಾದ ಚೈತನ್ಯದಿಂದ ತುಂಬಿ ತುಳುಕುತ್ತಿದೆ. ಅವರು ರಾಷ್ಟ್ರದಲ್ಲಿ ನವ ಉತ್ಸಾಹವನ್ನುಂಟುಮಾಡಿದರು. ತರುಣರನ್ನು ಬಡಿದೆಬ್ಬಿಸಿದರು. ಹೋರಾಟಕ್ಕಾಗಿ ಹುರಿದುಂಬಿಸಿದರು. ಕುಶಲ ಸೇನಾಪತಿಯಂತೆ ರಾಷ್ಟ್ರ ವನ್ನು ಮುನ್ನಡೆಸಿದರು. ರಾಷ್ಟ್ರವನ್ನು ಕುಣಿಸಿದರು. ತಾವೂ ಕುಣಿದರು. ಭಾರತದ ರಾಜಕಾರಣದ ದಿಶೆಯನ್ನೇ ಬದಲಿಸಿಬಿಟ್ಟರು.

ಲಾರ್ಡ ಕರ್ಝನರ ದುರ್ದಮನೀಯವಾದ ಆಳಿಕೆಯು ಜನರನ್ನು ಕೆರಳಿಸುತ್ತ ನಡೆದಿದ್ದಿತು. ಟಿಳಕರು ಮೊದಲಿಗೇ 'ಭಾರತೀಯರ ಧನ ಹಾಗು ರಕ್ತವನ್ನು ಶೋಷಿಸಿ ಸಾಮ್ರಾಜ್ಯವನ್ನು ಬಲಪಡಿಸಲು ಕರ್ಝನರು ಬಂದಿರುವರೆಂದು' ಭವಿಷ್ಯ ನುಡಿದಿದ್ದರು. ಅವನ ಅಪರಾಧಗಳೂ ಮಿತಿ ಮೀರಿದ್ದವು. ವಂಗಭಂಗದಿಂದ ಅವನ ಉನ್ಮತ್ತತೆಯು ಶಿಖರಕ್ಕೆ ಮುಟ್ಟಿತು. ಬಂಗಾಲವನ್ನು ಇಭ್ಭಾಗಿಸಿ, ಬಂಗಾಲಿಯರ ಮರ್ಮಕ್ಕೆ ಪೆಟ್ಟುಕೊಟ್ಟನು.

ಆಡಳತೆಯ ದೃಷ್ಟಿಯಿಂದ ಬಂಗಾಲ ಪ್ರಾಂತವು ಬಹಳೇ ದೊಡ್ಡ ದೆಂದು ೧೮೭೪ರಲ್ಲಿ ಸಿಲ್ಹೆಟ, ಕಚಾರಾ, ಮತ್ತು ಗೋಪಾಲಪೂರ ಈ

ಮೂರು ಬಂಗಾಲಿ ಜಿಲ್ಹೆಗಳನ್ನೊಳಗೊಂಡ ಆಸಾಮುಪ್ರಾಂತವನ್ನು ನಿರ್ಮಿಸಿದರು. ಆದರೆ ಆ ಕಾಲಕ್ಕೆ ಜನರು ಜಾಗೃತವಿರದ ಮೂಲಕ ಚಳವಳಿಯಾಗಲಿಲ್ಲ. ಆಸಾಮುಪ್ರಾಂತವು ಆಯ್. ಸಿ. ಎಸ್. ನವಕರರ ದೃಷ್ಟಿಯಿಂದ ಪರಿಪೂರ್ಣವಾಗಬೇಕಾಗಿದ್ದರೆ ಇನ್ನೂ ದೊಡ್ಡದಾಗ ಬೇಕೆಂದು ಅನಿಸುತ್ತಿತ್ತು. ಆದುದರಿಂದ ಬಂಗಾಲದಲ್ಲಿಯ ಚಿತಗಾಂಗ, ನವಾಖಾಲಿ, ಟಿಪಾರಾ ಜಿಲ್ಹೆಗಳನ್ನು ಆಸಾಮುಕ್ಕೆ ಜೋಡಿಸಬೇಕೆಂಬ ಸೂಚನೆಯು ಮುಂದೆ ಬಂದಿತು ಕೌನ್ಸಿಲ್ಲಿನಲ್ಲಿಯೂ ಹೊರಗೂ ಜನರು ಅದನ್ನು ವಿರೋಧಿಸಿದರು. ಆ ಪ್ರಶ್ನೆಯು ಅಷ್ಟಕ್ಕೆ ನಿಂತಿತು. ಲಾರ್ಡ ಕರ್ಝನರು ವ್ಹಾಯಿಸರಾಯರಾಗಿ ಬಂದ ಮೇಲೆ ಈ ಪ್ರಶ್ನೆಗೆ ಮತ್ತೆ ಜೀವಬಂದಿತು. ಕರ್ಝನರ ರೀತಿಯೇ ಬೇರೆ. ಮನಸಿಗೆ ಬಂದರೆ ಮಾಡೇಬಿಡುವವರು. ಯಾರನ್ನೂ ಕೇಳುವವರಲ್ಲ. ಮುಂದಾಳುಗಳೊಡನೆ ಅಧಿಕಾರಿಗಳು ಈ ಬಗ್ಗೆ ಮಾತುಕತೆ ನಡೆಸಿದರು. ಬಂಗಾಲದೊಳಗಿನ ಯಾವ ಜಿಲ್ಹೆಯನ್ನೂ ಒಡೆಯಲು ಜನ ಸಮ್ಮತಿಸಲಿಲ್ಲ. ಲಾರ್ಡ ಕರ್ಝನರು ಸ್ವತಃ ಪೂರ್ವ ಬಂಗಾಲಕ್ಕೆ ಬಂದು ಜನರ ಮನವಲಿಸಲು ಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಇಷ್ಟೇ ಅಲ್ಲ, ಇವರನ್ನು ಮನೆಯಲ್ಲಿ ಇಳಿಸಿ ಕೊಂಡು ಆತಿಥ್ಯ ಮಾಡಿದ ಮೈಮನಸಿಂಗದ ಮಹಾರಾಜರಾದ ಸೂರ್ಯಕಾಂತ ಆಚಾರ್ಯರೂ ಕೂಡ ಈ ಸೂಚನೆಯನ್ನು ವಿರೋಧಿಸಿದರು. ಈ ವಿರೋಧವನ್ನು ಲೆಕ್ಕಿಸದೆ, ಕರ್ಝನರು ಒಳಗೊಳಗೆ ಕಾರಸ್ಥಾನವನ್ನು ನಡೆಯಿಸಿ, ಬಂಗಾಲದ ಇಡೀ ಉತ್ತರ ಭಾಗವನ್ನೂ ಫರೀದಪೂರ ಮತ್ತು ಬಾರೀಸಾಲ ಜಿಲ್ಹೆಗಳನ್ನು ಆಸಾಮುಪ್ರಾಂತಕ್ಕೆ ಜೋಡಿಸಿಬೇಕೆಂಬ ಅಪ್ಪಣೆಯನ್ನು ೨೦ನೇ ಜುಲೈ ೧೯೦೫ನೇ ದಿವಸ ಹೊರಗೆಡವಿದರು. ಈ ನಿರ್ಣಯದಿಂದ ಬಂಗಾಲ ಪ್ರಾಂತಕ್ಕೆ ಸಿಡಿಲು ಬಡಿದಂತಾಯಿತು. ಛಿನ್ನ ಭಿನ್ನವಾದ ಬಂಗಾಲವನ್ನು ಕಂಡು ಅವರು ಕಕ್ಕಾವಿಕ್ಕಿಯಾದರು. ಆ ಕಾಲದ ವರ್ಣನೆಯನ್ನು ಸುರೇಂದ್ರನಾಥ ಬ್ಯಾನರ್ಜಿಯವರು ಒಳ್ಳೇ ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ.

‘‘ನಮ್ಮ ಅಪಮಾನವಾಯಿತು. ನಮ್ಮ ಮಾನ ಖಂಡನವಾಯಿತು. ನಮ್ಮನ್ನು ಸರಕಾರದವರು ಪೂರ್ಣವೋಸಗೊಳಿಸಿದರೆಂದು ನಮ್ಮ ಭಾವನೆ

ಯಾಯಿತು. ನಮ್ಮ ಪ್ರಾಂತದ ಭಾವೀ ಸುಖಕ್ಕೆ ಸಂಕಟ ಉಂಟಾಯಿ ತೆಂದು ಭಾಸವಾಯಿತು. ಬಂಗಾಲಿ ಮಾತನಾಡುವ ಜನರಲ್ಲಿ ಬೆಳೆಯುತ್ತಿ ರುವ ರಾಷ್ಟ್ರೀಯತೆಯನ್ನೂ ಒಕ್ಕಟ್ಟನ್ನೂ ಅಳಿಸಿಬಿಡಬೇಕೆಂಬ ಬುದ್ಧಿ ಯಿಂದಲೇ ಈ ಹೊಸಯೋಜನೆಯು ಬಂದಿತೆಂದು ನಮಗನಿಸಿತು. ಕೇವಲ ಆಡಳಿತೆಯ ಅನುಕೂಲತೆಗಾಗಿಯೇ ಈ ಸೂಚನೆಯು ಬಂದಿರಬಹುದು. ಆದರೆ ಈಗ ಅದಕ್ಕೆ ರಾಜಕೀಯ ಬಣ್ಣವು ಬಳಿಯಲ್ಪಟ್ಟಿತು. ಈ ಯೋಜನೆ ಯನ್ನು ವಿರೋಧಿಸದೆಬಿಟ್ಟರೆ, ಅದರಿಂದ ನಮ್ಮ ರಾಜಕೀಯ ಉನ್ನತಿಗೂ ಹಿಂದೂ ಮುಸ್ಲೀಮರ ಒಕ್ಕಟ್ಟಿಗೂ ಧಕ್ಕೆ ಬರುವದೆಂದು ನಮಗೆ ಮನವರಿಕೆ ಯಾಯಿತು. ಇದೂ ಅಲ್ಲದೆ ಆಸಾಮು ಪ್ರಾಂತವು ಮುಸಲ್ಮಾನೀ ಪ್ರಾಂತ ವಾಗುವದೆಂದೂ ಹೊಸ ಪ್ರಾಂತದಲ್ಲಿ ಮುಸಲ್ಮಾನರಿಗೆ ಹೆಚ್ಚು ಆನುಕೂಲತೆ ಗಳು ಕೊಡಲ್ಪಡುವವೆಂದೂ ಸರಕಾರವು ಪ್ರಸಿದ್ಧಿಸಿತು."

ವಂಗ ಭಂಗದಿಂದ ಭಾರತದ ಅರ್ವಾಚೀನ ಇತಿಹಾಸದಲ್ಲಿ ಒಂದು ಹೊಸ ಪ್ರಕರ್ಣವೇ ಪ್ರಾರಂಭವಾಯಿತು. ಸರಕಾರವು ಜನರನ್ನು ಲಕ್ಷಿಸದೆ ಅವರ ಭಾವನೆಗಳೆಲ್ಲ ಹಾಳಾಗುವಂತೆ ಬಂಗಾಲಪ್ರಾಂತವನ್ನು ಒಡೆದದ್ದರ ವಿರುದ್ಧವಾಗಿ ಚಳವಳಿಯನ್ನು ಹೂಡಲು ಇಡೀ ಬಂಗಾಲವೇ ಎದ್ದಿತು. ಮಹಾರಾಜಾ ಜೋತೀಂದ್ರ ಮೋಹನ ಟಾಗೋರರ ಮನೆಯಲ್ಲಿ ಖಾಸಗೀ ಚರ್ಚೆಯಾಯಿತು. ಹೆನ್ರಿ ಕಾಟನ್ನರೂ ಸಭೆಗೆ ಬಂದಿದ್ದರು. ಆಂಗ್ಲೋ ಇಂಡಿಯನ್ ವೃತ್ತಪತ್ರಗಳೂ ಬಂಗಾಲಿಗಳಿಗೆ ಸಹಾನುಭೂತಿ ಯನ್ನು ತೋರಿಸಿದವು ಜೋತೀಂದ್ರರು ಪ್ರಾಂತವನ್ನು ಒಡೆಯುವದೇ ಆದರೆ, ಬಂಗಾಲಿಭಾಷೆಮಾತಾಡುವವರನ್ನೆಲ್ಲ ಒಂದೆಡೆ ಇರುವಂತೆ ಮಾಡ ಬೇಕೆಂದು ತಂತಿ ಕೊಟ್ಟರು. ಅಸಂಖ್ಯ ನಿಷೇಧಪರ ಸಭೆಗಳಾದವು. ೭ನೇ ಆಗಸ್ಟಕ್ಕೆ ದೊಡ್ಡ ನಿಷೇಧದ ಸಭೆ ಸೇರಿಸಬೇಕೆಂದು ಗೊತ್ತಾಯಿತು. ಕೇವಲ ಸಭೆಯಿಂದ ಏನು ಪ್ರಯೋಜನ? ಎಂಬ ಪ್ರಶ್ನೆಯು ಉದ್ಭವಿಸಿ, ಪ್ರತ್ಯಕ್ಷ ಕೃತಿಯ ಸೂಚನೆಗಳು ಬಂದವು. ಆನರರಿ ಮ್ಯಾಜಿಸ್ಟ್ರೇಟರು ರಾಜೀನಾಮೆ ಕೊಡಬೇಕೆಂಬ ಸೂಚನೆಯೂ ಬಂದಿತು. ಕೊನೆಗೆ ಸರಕಾ ರದ ನಿರ್ಣಯದ ವಿರುದ್ಧವಾಗಿ, ವಂಗ ಭಂಗವು ಅಮಲಿನಲ್ಲಿ ಇರುವವರೆಗೆ ಬ್ರಿಟಿಶ ಮಾಲಿಗೆ ಬಹಿಷ್ಕಾರ ಹಾಕಬೇಕೆಂದು ನಿರ್ಣಯವಾಯಿತು. ಇದಕ್ಕೆ ಇಂಗ್ಲಿಷ ಮಿತ್ರರೂ ಸಮ್ಮತಿಕೊಟ್ಟರು.

೭ನೇ ಆಗಷ್ಟ ದಿನವು ಅಪೂರ್ವವಾಗಿ ಆಚರಿಸಲ್ಪಟ್ಟಿತು. ಸಭಾ ಸ್ಥಾನವು ಸಾಲದೆ, ೪ ಕಡೆಗೆ ಸಭೆಗಳನ್ನು ಏರ್ಪಡಿಸಬೇಕಾಯಿತು. ಕೂಲಿ ಕಾರರಿಂದ ಮೊದಲುಮಾಡಿ ರಾಜ ಮಹಾರಾಜರವರೆಗೆ ಎಲ್ಲ ವರ್ಗಗಳ ಜನರು ಭಾಗವಹಿಸಿದ್ದರು. ಈ ಪ್ರಚಂಡ ಸಭೆಗಳು ವಂಗ ಭಂಗವನ್ನು ನಿಷೇಧಿಸಿದ್ದಲ್ಲದೆ, ಕೆಳಗಿನ ಬಹಿಷ್ಕಾರದ ಗೊತ್ತುವಳಿಯನ್ನು ಒಮ್ಮತದಿಂದ ಘೋಷಿಸಿದವು.

"ಬ್ರಿಟಿಶ ಜನತೆಯು ಭಾರತದ ಬಗ್ಗೆ ತೋರುತ್ತಿರುವ ಅನಾಸ್ಥೆಯನ್ನೂ ಈ ಅನಾಸ್ಥೆಯ ಮೂಲಕ ಭಾರತ ಸರಕಾರವು ಭಾರತದ ಸಾರ್ವಜನಿಕ ಮತವನ್ನು ಧಿಕ್ಕರಿಸುತ್ತಿರುವದನ್ನು ನಿಷೇಧಿಸಬೇಕೆಂದೂ ವಂಗ ಭಂಗವು ರದ್ದಾಗುವವರೆಗೆ ಬ್ರಿಟಿಶ ಮಾಲನ್ನು ಬಹಿಷ್ಕರಿಸಬೇಕೆಂದೂ ಈ ಮೊದಲೇ ಅನೇಕ ಸಭೆಗಳಲ್ಲಿ ನಿರ್ಣಯವಾಗಿದೆ. ಅದಕ್ಕೆ ಈ ಸಭೆಯು ತನ್ನ ಸಂಪೂರ್ಣ ಬೆಂಬಲವನ್ನು ಕೊಡುತ್ತದೆ."

ನ. ಚಿ. ಕೇಳಕರರು ಈ ಚಳವಳಿಯನ್ನು ಒಳ್ಳೇ ಮನೋವೇಧಕ ವಾಗಿ ವರ್ಣಿಸಿದ್ದಾರೆ. "ಈ ಚಳವಳಿಯಲ್ಲಿ ಮುಂದೆ ಬಂದಷ್ಟು ಮುಖಂಡರೂ ಕಾರ್ಯಕರ್ತರೂ ಈ ಮೊದಲು ಎಂದೂ ಬಂದಿರಲಿಲ್ಲ. ಎತ್ತರವಾದ ಗುಡ್ಡದ ಮೇಲೆ ದೊಡ್ಡ ಮಳೆಯಾದರೆ, ಎಲ್ಲ ನೀರು ಹರಿದುಹೋಗುವದಿಲ್ಲ. ಆ ನೀರು ಕೊಳ್ಳಗಳಲ್ಲಿಯೂ ಗುಡ್ಡದ ಕೆಲವು ಮೂಲೆಗಳಲ್ಲಿಯೂ ನಿಂತು ಮುಂದೆ ಸೆಲೆಯೊಡೆಯುತ್ತವೆ. ರಾಷ್ಟ್ರೀಯ ಭಾವನೆಯ ಮಾತೂ ಹೀಗೆಯೆ. ಚಳವಳಿಯು ವಂಗ ಭಂಗದ ವಿರುದ್ಧ ಪ್ರಾರಂಭವಾದರೂ ಅದರಿಂದುಂಟಾದ ರಾಷ್ಟ್ರೀಯ ಭಾವನೆಯ ಸೆಲೆಗಳು ತಮ್ಮ ತಮ್ಮ ರೀತಿಯಿಂದ ಬೇರೆ ಬೇರೆ ದಿಕ್ಕುಗಳಲ್ಲಿ ಹರಿಯಹತ್ತಿದವು. ವೃತ್ತಪತ್ರಕಾರರು ಸಾಹಸದ ಬರೆಹ ಗಳನ್ನು ಬರೆಯಹತ್ತಿದರು. ಮೂಕರಂತಿದ್ದವರು ತೇಜಸ್ವಿಯಾದ ಭಾಷಣ ಗಳನ್ನು ಮಾಡಹತ್ತಿದರು. ಬುದ್ಧಿ ಇದ್ದರೂ ಸೋಮಾರಿಗಳಾಗಿದ್ದವರಿಗೆ ಸರಸ್ವತಿಯು ತನ್ನ ನವಿಲು ಗರಿಗಳಿಂದ ಮೆಲ್ಲನೆ ಎಬ್ಬಿಸಿ, ಲೇಖನ ಕಲೆಯ ಅಭ್ಯಾಸವನ್ನು ಮಾಡಿಸಿದಳು. ಕವಿಗಳಿಗೆ ದಿವ್ಯವಾದ ಪ್ರತಿಭೆಯು ಬರಹತ್ತಿತು. ಬರಹದಲ್ಲಿಯೂ ಮಾತಿನಲ್ಲಿಯೂ ವಕ್ರೋಕ್ತಿ, ವ್ಯಾಜೋಕ್ತಿಗಳು ಸುಳಿದಾಡ ಹತ್ತಿದವು. ಲೆಕ್ಕಣಿಕೆಯಂತೆ ಕಲಾವಂತರ ಕುಂಚುಗಳಿಗೆ ಹೊಸ ಕಳೆ

ಏರಿದಂತಾಯಿತು. ಸಂಘ ಶಕ್ತಿಯು ಬೆಳೆಯಹತ್ತಿತು. ಚೈನಿ ಜನರು ತಮ್ಮ ವಿಲಾಸಗಳಿಗೆ ತಾವೇ ನಾಚಿದರು. ಧನಿಕರ ಧನವು ಪರೋಪಕಾರದ ದಾರಿಯನ್ನು ಹಿಡಿಯಿತು. ಪುಕ್ಕರು ವೀರರಾದರು. ಮೀಶಿ ಒಡೆಯದ ಎಳೆಯರು ಹಿರಿಯರಿಗಿಂತ ಕರ್ತೃತ್ವಶಾಲಿಗಳಾದರು. ಸರಕಾರದ ಪ್ರತಿಕಾರವನ್ನು ಮಾಡಲು ಭುಜಗಳು ಸ್ಫುರಣಗೊಳ್ಳಹತ್ತಿದವು. 'ಕಾಯದೆ ಬದ್ಧ, ಶಾಸನಾನುಗುಣವಾಗಿ' ಎಂಬ ಶಬ್ದಗಳು ಮಾಯವಾಗಿ ಪರಾಕ್ರಮದ ಧ್ವನಿಯು ಕೇಳಬರಹತ್ತಿತು. ತ್ಯಾಗ ಮಾಡಲು, ಕಷ್ಟ ಸಹಿಸಲು ತರುಣರು ಮುಂದೆ ಬಂದರು. ವಂಗ ಭಂಗ ಚಳವಳಿಯಲ್ಲಿ ಬಂಗಾಲಿಗಳು ತೋರಿಸಿದ ದೇಶಭಕ್ತಿಯೂ ಸಂಘಶಕ್ತಿಯೂ ಅಭೂತ ಪೂರ್ವವಾದದ್ದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. "

ವಂಗಭಂಗದಿಂದ ಬಂಗಾಲದಲ್ಲಿ ನವರಾಷ್ಟ್ರೀಯ ಭಾವನೆಯು ಪ್ರಜ್ವಲಿಸುತ್ತಿರುವದನ್ನು ಕಂಡು ಟಿಳಕರಿಗೆ ಅತ್ಯಂತ ಆನಂದವಾಯಿತು. ದೇವರು ಭಾರತೀಯರ ಉದ್ಧಾರಕ್ಕಾಗಿಯೇ ವಂಗ ಭಂಗವನ್ನು ಮಾಡಿಸಿದ ನೆಂದು ಅವರಿಗೆ ಅನಿಸಹತ್ತಿತು. ಈ ಸಂಧಿಯ ಸದುಪಯೋಗ ಮಾಡಿ ಕೊಳ್ಳುವ ನಿಶ್ಚಯ ಮಾಡಿದರು. ರಾಷ್ಟ್ರವು ಹಳೆಯ ಹಾದಿಯನ್ನು ಬಿಟ್ಟು, ಹೊಸ ಹಾದಿಯನ್ನು ಹಿಡಿಯಬೇಕೆಂದು ಮೂರು ವರ್ಷಗಳಿಂದ ಟಿಳಕರು ಪ್ರತಿಪಾದಿಸುತ್ತಿದ್ದರು. ಇಂಗ್ಲಂಡದಲ್ಲಿ ಚಳವಳಿ ಹೂಡುವ ಮಾರ್ಗ ವನ್ನು ಈ ಮೊದಲೇ ಹಿಡಿದಿದ್ದರು. ಭಾರತದಲ್ಲಿ ಏನು ಮಾಡಬೇಕೆಂಬುದನ್ನು ಯೋಚಿಸುತ್ತಿದ್ದರು. ಬಂಗಾಲವು ಬಹಿಷ್ಕಾರಾಸ್ತ್ರವನ್ನು ಶೋಧಿಸಿತು. ೧೫ನೇ ಅಗಷ್ಟದಿಂದ ವಂಗಭಂಗದ ವಿರುದ್ಧ ಟಿಳಕರು ಶಸ್ತ್ರವನ್ನು ಎತ್ತಿ ದರು. ಈ ಲೆಕ್ಕಣಿಕೆಯು ಮಂಡಾಲೆಯನ್ನು ಕಾಣುವವರೆಗೆ ಅವ್ಯಾಹತ ವಾಗಿ ನಡೆಯಿತು.

"ಇದು ಜೀವನ ಮರಣದ ಸಮಯವು, ಎಂಬ ಅಗ್ರಲೇಖವನ್ನು ಬರೆದು, ಇಂತಹ ರಾಷ್ಟ್ರದ ಜೀವನ ಮರಣದ ಸಮಯದಲ್ಲಿ ದೇಶದ ಜನರೆಲ್ಲರೂ ಬಂಗಾಲಿ ಬಂಧುಗಳ ದುಃಖದಲ್ಲಿ ಸಹಭಾಗಿಗಳಾಗಿ, ಅವರ ಲ್ಲಿಯ ಒಕ್ಕಟ್ಟನ್ನೂ ರಾಷ್ಟ್ರೀಯತ್ವವನ್ನೂ ರಕ್ಷಿಸುವದು ಕರ್ತವ್ಯವಾಗಿದೆ" ಎಂದು ರಾಷ್ಟ್ರಕ್ಕೆ ಸಂದೇಶವಿತ್ತು, ಬಂಗಾಲದ ಪ್ರಶ್ನೆಯನ್ನು ಭಾರತೀಯ

ಪ್ರಶ್ನೆಯನ್ನಾಗಿ ಮಾಡಿದರು. 'ಸರಕಾರದ ದಬ್ಬಾಳಿಕೆಗೆ ಸೊಪ್ಪುಹಾಕದೆ ಮುಂದೆ ಸಾಗಿರಿ' ಎಂದು ಜನರನ್ನು ಎಬ್ಬಿಸಿದರು. ''ಹಿಂದೆ ನೋಡದೆ ಮುಂದೆ ನಡೆಯಿರಿ' ಈ ಲೇಖದಲ್ಲಿ ಜನತೆಗೆ ಕರೆಕೊಟ್ಟರು. ಯಾವ ಉನ್ಮತ್ತ ಕರ್ಝನನು ವಂಗಭಂಗವನ್ನು ಮಾಡಿ, ಬಂಗಾಲಿಗಳ ಅಪಮಾನವನ್ನು ಮಾಡಿರುವನೋ ಆ ಬಂಗಾಲೀ ಬಂಧುಗಳ ಹೆಗಲಿಗೆ ಹೆಗಲು ಹಚ್ಚಿ ಹೋರಾಡಿರಿ ಎಂದು ಕಾಂಗ್ರೆಸ್ ಮುಂದಾಳುಗಳಿಗೆ ಈ ಲೇಖದಲ್ಲಿ ಆಹ್ವಾನ ವಿದ್ದಿತು. ಮುಂದಿನ ಸಂಚಿಕೆಯಲ್ಲಿಯೇ 'ರಾಷ್ಟ್ರೀಯ ಬಹಿಷ್ಕಾರ' ಎಂಬ ಅಗ್ರಲೇಖವನ್ನು ಬರೆದು, ಬಹಿಷ್ಕಾರದ ವ್ಯಾಪ್ತಿಯನ್ನು ವಿವರಿಸಿದರು. ಈ ಲೇಖಗಳು ರಾಷ್ಟ್ರವನ್ನೇ ಬಡಿದೆಬ್ಬಿಸಿದವು. ಈ ಲೇಖಗಳು ಮಹಾಮಂತ್ರ ಗಳಾಗಿ ಪರಿಣಮಿಸಿದವು. ಕಲಕತ್ತಾ, ಪಾಟಣಾ, ಅಲಹಾಬಾದ, ಮದ್ರಾಸ ಮೊದಲಾದ ಸ್ಥಳಗಳಲ್ಲಿ ಈ ಲೇಖಗಳು ಭಾಷಾಂತರಿಸಲ್ಪಟ್ಟು ಎಲ್ಲ ವೃತ್ತಪತ್ರ ಗಳಲ್ಲಿ ಪ್ರಸಿದ್ಧಿಸಲ್ಪಟ್ಟವು.

ವಂಗಭಂಗದ ವಿರುದ್ಧವಾಗಿ ಎಲ್ಲಕಡೆಗೂ ಕೂಗೆದ್ದಿತು. ಟಿಳಕರು ಇಡೀ ರಾಷ್ಟ್ರದಲ್ಲಿಯೇ ಸ್ವದೇಶಿ ಹಾಗೂ ಬಹಿಷ್ಕಾರಗಳ ಬಿರುಗಾಳಿಯನ್ನೇ ಎಬ್ಬಿಸಿದರು. ಈ ಮಂತ್ರಗಳ ಉಚ್ಚಾರವು ಸರ್ವತ್ರ ಕೇಳಬರಹತ್ತಿತು. ವಂಗಭಂಗವನ್ನು ನಾವೆಂದೂ ಮಾನ್ಯ ಮಾಡುವದಿಲ್ಲೆಂಬ ಘೋಷಣೆಯು ನಾಡಿನಲ್ಲೆಲ್ಲ ದುಮದುಮಿಸಿತು. ಈ ಎಲ್ಲ ಚಳವಳಿಯ ಸೂತ್ರಗಳು ಟಿಳಕರ ಕೈಯಲ್ಲಿದ್ದವು. ಈ ಸಂಧಿಯನ್ನು ಸಾಧಿಸಿ, ಟಿಳಕರು ಹೊಸ ಮುಂದಾಳುಗಳನ್ನು ಮುಂದೆ ತಂದರು. ರಾಷ್ಟ್ರವನ್ನು ಸಂಘಟಿಸಿದರು. ''ಸರಕಾರಕ್ಕೆ ಬಗ್ಗಿ ಶರಣು ಹೊಡೆಯುವ ಹಾದಿಯನ್ನು ಬಿಟ್ಟುಬಿಡಿರಿ, ಭಿಕ್ಷಾಂದೇಹಿ ವೃತ್ತಿಯನ್ನು ತ್ಯಜಿಸಿರಿ, ಚಿಕ್ಕಪುಟ್ಟ ಸುಧಾರಣೆಗಳನ್ನು ಕೇಳುವದಕ್ಕಿಂತ ಸ್ವರಾಜ್ಯವನ್ನು ಕೇಳುವ ಕಾಲವು ಒದಗಿದೆ, ಸದ್ಯದ ರಾಜ್ಯ ಕಾರಭಾರವು ದೇಶಕ್ಕೆ ಅತ್ಯಂತ ವಿಘಾತಕವಿದೆ, ಅದು ಸುಧಾರಣೆ ಯನ್ನಾದರೂ ಹೊಂದಬೇಕು, ಇಲ್ಲವೆ ನಷ್ಟವಾದರೂ ಆಗಬೇಕು" ಎಂದು ಉಪದೇಶಿಸಹತ್ತಿದರು.

ಟಿಳಕರ ಕರೆಗೆ ಅನೇಕರು ಮುಂದೆ ಬಂದರು. ಅವರು ಸಂದೇಶ ವನ್ನು ಬೀರಲು ಅಣಿಯಾದರು. ನ. ಚಿ. ಕೇಳಕರ, ಖಾಡಿಲಕರ, ಗಂಗಾ

ಧೆರರಾವ ದೇಶಪಾಂಡೆ, ಕೌಜಲಗಿ ಶ್ರೀನಿವಾಸರಾವ, ದಾಜಿಭಾಯಿ ಖಾಪರ್ಡೆ, ಡಾ. ಮುಂಜೆ, ಬಾಪೂಜಿ ಆಣೆ ಮೊದಲಾದ ಟಿಳಕರ ಏಕ ನಿಷ್ಠ ಭಕ್ತರು,ಅವರ ಸ್ವದೇಶಿ ಹಾಗೂ ಬಹಿಷ್ಕಾರದ ಸಂದೇಶವನ್ನು ಮೂಲೆ ಮೂಲೆಗೆ ಮುಟ್ಟಿಸಿದರು. ರಾಷ್ಟ್ರದಲ್ಲಿ ಅದ್ಭುತವಾದ ಚೈತನ್ಯವುಂಟಾ ಯಿತು. ಟಿಳಕರ ಈ ಸಂಘಟನೆಯು ಬಂಗಾಲಿಗಳಿಗೆ ದೊಡ್ಡ ಆಧಾರ ವಾಯಿತು. ಸುರೇಂದ್ರನಾಥ ಬ್ಯಾನರ್ಜಿಯವರು ಅವರಿಗೆ 'You are our Saviour, ನೀವೇ ನಮ್ಮ ತಾರಕರು, ಎಂದು ತಂತಿ ಕಳಿಸಿದರು. ಲಾಲಾಲಜಪತರಾಯ, ಬಿಪಿನಚಂದ್ರಪಾಲ, ಬಾಬೂ ಅರವಿಂದ ಘೋಷರು ಟಿಳಕರ ತತ್ವಗಳನ್ನೂ ಚಳವಳಿಯನ್ನೂ ಮನ್ನಿಸಿ ಅವರಿಗೆ ಬಂದು ಕೂಡಿಕೊಂಡರು.

ಪರದೇಶಿ ಬಹಿಷ್ಕಾರ ಚಳವಳಿಗಳು ಲೋಕಪ್ರಿಯವಾದವು. ವಿದ್ಯಾರ್ಥಿ ಗಳಲ್ಲಿ ಕಂಡು ಬಂದ ಜಾಗೃತಿಯು ಅಪೂರ್ವವಾಗಿತ್ತು. ಸುರೇಂದ್ರ ನಾಥರು ಅದನ್ನು ಹೀಗೆ ವರ್ಣಿಸಿದ್ದಾರೆ. "ರಿಪನ್ ಕಾಲೇಜಿನಲ್ಲಿ ಒಬ್ಬ ವಿದ್ಯಾರ್ಥಿ ಪರದೇಶಿ ವಸ್ತ್ರವನ್ನುಟ್ಟು ಬಂದಿದ್ದನು. ವಿದ್ಯಾರ್ಥಿಗಳಿಗೆ ಅದು ತಿಳಿದಕೂಡಲೇ ಅವನನ್ನು ಮುತ್ತಿದರು. ಅವನ ಮೈಮೇಲಿನ ಬಟ್ಟೆ ಗಳನ್ನು ಹರಿದು ಚೂರು ಚೂರು ಮಾಡಿದರು. ಅವನು ಜೀವಂತ ಪಾರಾದುದೇ ಸುದೈವ. ಪರೀಕ್ಷೆಯ ಕಾಲಕ್ಕೆ ಪರದೇಶಿ ಕಾಗದಗಳನ್ನು ಕೊಟ್ಟರೆ, ಎಲ್ಲ ವಿದ್ಯಾರ್ಥಿಗಳು ಗುಂಪು ಕೂಡಿಕೊಂಡು ಆ ಕಾಗದಗಳನ್ನು ಮುಟ್ಟುವದಿಲ್ಲೆಂದು ನಿಷ್ಠುರವಾಗಿ ಹೇಳಿಬಿಟ್ಟರು. ಕಾಲೇಜಿನ ಅಧಿಕಾರಿ ಗಳು ದೇಶಿ ಕಾಗದಗಳನ್ನು ತಂದು ಕೊಡಬೇಕಾಯಿತು. ವಿದ್ಯಾರ್ಥಿಗಳ ಈ ಉತ್ಸಾಹದ ಸೋಂಕು ಬಂಗಾಲದ ಇಡೀ ಸಮಾಜಕ್ಕೇ ಅಂಟಿಕೊಂಡಿತ್ತು. ಮನೆಯಲ್ಲಿ ಹೆಂಗಸರು ಗಂಡಸರಿಗಿಂತ ಹೆಚ್ಚು ಉತ್ಸಾಹಪೂರ್ಣರಾಗಿದ್ದರು. ಮದುವೆಯ ಕಾಲಕ್ಕೆ ಮದುಮಗನು ಪರದೇಶಿ ವಸ್ತ್ರಗಳನ್ನು ನಿರಾಕರಿಸುತ್ತಿ ದ್ದನು. ಬ್ಯಾನರ್ಜಿಯವರ ೫ ವರ್ಷದ ಮೊಮ್ಮಗಳು ಆಪ್ತನು ಕಳಿಸಿಕೊಟ್ಟ ಸ್ಲೀಪರುಗಳನ್ನು ಪರದೇಶಿ ಎಂದು ತಿರುಗಿ ಕಳುಹಿಸಿದಳು. ಆರು ವರ್ಷದ ಇನ್ನೊಬ್ಬ ಬಾಲಿಕೆಯು ಜಡ್ಡಿನಿಂದ ಸಾವಿನ ಬಾಯಿಗೆ ತುತ್ತಾಗಿರು ವಾಗ ನಾನು ಪರದೇಶಿ ಔಷಧಗಳನ್ನು ತಕ್ಕೊಳ್ಳುವದಿಲ್ಲೆಂದು ಬಡಬಡಿಸ ಹತ್ತಿದಳಂತೆ."

ಬಹಿಷ್ಕಾರದ ಚಳವಳಿಯ ಪರಿಣಾಮವಾಗಿ, ೧೯೦೫ರಲ್ಲಿ ಕಲಕತ್ತೆಯಿಂದ ಮ್ಯಾಂಚೆಸ್ಟರ ಅರಿವೆಗಾಗಿ ಬೇಡಿಕೆಯೇ ಹೋಗಲಿಲ್ಲ. ಇಂಗ್ಲಿಷಮನ್ ಪತ್ರಿಕೆಯು ಈ ಮಾತನ್ನು ಒಪ್ಪಿಕೊಂಡಿತು. 'ಕಲಕತ್ತೆಯಲ್ಲಿ ಪರದೇಶಿ ಅರಿವೆಯು ಮಾರಾಟವಾಗದೆ ಹಾಗೇ ಬಿದ್ದಿದೆ. ಅನೇಕ ಮಾರವಾಡಿಗಳು ಪೂರ್ಣ ದಿವಾಳಿತೆಗೆದರು. ಬ್ರಿಟಿಶ್ ಕಂಪನಿಗಳು ವ್ಯಾಪಾರವನ್ನೇ ನಿಲ್ಲಿಸಿವೆ. ಬ್ರಿಟಿಶ್ ಮಾಲಿಗೆ ಬೇಡಿಕೆಯಿಲ್ಲ. ಆದುದರಿಂದ ಮಾಲು ಕಳಿಸಬೇಡಿರೆಂದು ವ್ಯಾಪಾರಿಗಳು ಹೇಳಹತ್ತಿದ್ದಾರೆ. ಬಹಿಷ್ಕಾರದಿಂದ ಇಂಗ್ಲಂಡಿಗೆ ಅಪಾರ ಹಾನಿಯಾಗಿದೆ. ಇದನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ' ಎಂದು ಬರೆಯಿತು.

ಸರಕಾರವು ದಬ್ಬಾಳಿಕೆಯನ್ನು ಪ್ರಾರಂಭಿಸಿತು. ವಿದ್ಯಾರ್ಥಿಗಳು ಸಭೆ, ಮೆರವಣಿಗೆಯಲ್ಲಿ ಭಾಗವಹಿಸಬಾರದೆಂದು ಅಪ್ಪಣೆಕೊಟ್ಟಿತು. ಆದರೆ ಅಪ್ಪಣೆಯು ಕಸದ ಬುಟ್ಟಿಗೆ ಎಸೆಯಲ್ಪಟ್ಟಿತು. ಅದರಂತೆಯೇ 'ವಂದೇ ಮಾತರಂ, ಗೀತೆಯನ್ನು ಅನ್ನುವದು ಅಪರಾಧವೆಂದು ಸಾರಿದರು. ಅದನ್ನು ಮುರಿದೇ ತೀರಬೇಕೆಂದು ಜನ ಹಟತೊಟ್ಟಿತು. ಆ ಹಾಡಿಗೆ ರಾಷ್ಟ್ರಗೀತದ ಸ್ವರೂಪ ಬಂದಿತು. ಅದು ಸ್ವಾತಂತ್ರ್ಯದ ವಿಜಯೀ ಮಂತ್ರವಾಯಿತು. ಭಾರತದೇಶವೆಲ್ಲ ವಂದೇ ಮಾತರಂ ಎಂದು ಗರ್ಜಿಸಹತ್ತಿತು. ಎಲ್ಲಿ ನೋಡಿದಲ್ಲಿ ಪರದೇಶಿ ಅಂಗಡಿಗಳ ಮುಂದೆ ಪಿಕೇಟಿಂಗ, ಪರದೇಶಿ ವಸ್ತ್ರಗಳ ಹೋಳಿಗಳು ಪ್ರಾರಂಭವಾದವು.

ವಂಗ ಭಂಗವು ೧೯೦೫ನೇ ಅಕ್ಟೋಬರ ೧೬ ಕ್ಕೆ ಅಮಲಿನಲ್ಲಿ ಬರುವದಿತ್ತು. ಅಂದಿನ ದಿನವನ್ನು ಸೂತಕದ ದಿನವೆಂದು ಪಾಲಿಸಬೇಕೆಂದು ಗೊತ್ತಾಗಿತ್ತು. ರಕ್ಷಾಬಂಧನ, ನದಿಯ ಸ್ನಾನ, ಉಪವಾಸಗಳು ಅಂದಿನ ಕಾರ್ಯಕ್ರಮಗಳಾಗಿದ್ದವು. ದಂಗೆಯಾಗಕೂಡದೆಂದು ಸರಕಾರವು ಅಲ್ಲಲ್ಲಿ ಪೋಲೀಸರನ್ನು ನಿಲ್ಲಿಸಿತ್ತು. ಸುರೇಂದ್ರನಾಥರು ಈ ದಿನವನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ. ''ಬೆಳಗಿನ ಜಾವದಿಂದ ಕಲಕತ್ತೆಯ ಬೀದಿಗಳು, ವಂದೇ ಮಾತರಂ ಜಯ ಘೋಷದಿಂದ ದುಮಿದುಮಿಸಿದವು. ಮುದುಕರು, ಮಕ್ಕಳು ಸಹ ವಂದೇ ಮಾತರಂ ಗೀತವನ್ನು ಹಾಡುತ್ತ ನದಿಗೆ ನಡೆದಿದ್ದರು. ನದಿಯ ದಂಡೆಯು ಜನರಿಂದ ಕಿಕ್ಕಿರಿದು ತುಂಬಿ

ಹೋಯಿತು........ಅಸಂಖ್ಯ ಯುವಕರು ನನ್ನ ಪಾದದಮೇಲೆ ಬಿದ್ದು, ನನ್ನನ್ನು ಅಪ್ಪಿಕೊಂಡರು. ನನ್ನ ತೋಳುಗಳೆಲ್ಲ ರಾಖಿಗಳಿಂದ ಕೆಂಪು ಕೆಂಪಾಗಿಕಾಣುತ್ತಿದ್ದವು. ಜೀವನದಲ್ಲಿ ಒಮ್ಮೆಯೇ ಬರಬಹುದಾದ ದಿನವು ಅದು. ಆ ಒಂದೇ ದಿನದಿಂದ ಜೀವನ ಸಾಫಲ್ಯವಾಗುವಂತಿತ್ತು."

ಬಾರಿಸಾಲಿನಲ್ಲಿ ನಡೆದ ಪರಿಷತ್ತಿನ ಕಾಲಕ್ಕೆ ದಬ್ಬಾಳಿಕೆಯು ಶಿಖರಕ್ಕೆ ಮುಟ್ಟಿತು. ಬೀದಿಗಳಲ್ಲಿ ಒಂದೇ ಮಾತರಂ ಅನ್ನಕೂಡದೆಂದು ಸರಕಾರವು ಮೊದಲೇ ಅಪ್ಪಣೆ ವಿಧಿಸಿತ್ತು. ಪರಿಷತ್ತು ನಡೆಯಬೇಕೆಂಬ ದೃಷ್ಟಿಯಿಂದ ಬೀದಿಯಲ್ಲಿ ನಾವು ಒಂದೇಮಾತರಂ ಪದವನ್ನು ಅನ್ನುವದಿಲ್ಲೆಂದು ಅಧಿಕಾರಿಗಳೊಡನೆ ಮುಖಂಡರು ಕರಾರು ಮಾಡಿಕೊಂಡಿದ್ದರು. ಸ್ವಾಗತದ ಕಾಲಕ್ಕೆ ಬೇಕಾದರೆ ನೀವು ಅನ್ನಬೇಡಿರಿ. ನಾವು ರಸ್ತೆಯಲ್ಲಿ ಹೋಗುವಾಗ ಅನ್ನುವವರೇ. ಅದರ ಪರಿಣಾಮನ್ನು ನಾವು ಸಹಿಸುವೆವು. ಎಂದು ಪ್ರತಿನಿಧಿಗಳು ಹಟಹಿಡಿದರು. ಆದರೆ ದಂಗೆಯನ್ನು ಮಾತ್ರ ಮಾಡಕೂಡದೆಂದು ಗೊತ್ತುಮಾಡಿದ್ದರು. ಮೆರವಣಿಗೆಯು ಹೊರಟಿತು. ಅದರಲ್ಲಿ ಎಲ್ಲ ಮುಖಂಡರು ಇದ್ದರು. ಪೋಲೀಸರಿಗೆ ಭೂತ ಸಂಚಾರವಾಯಿತು. ಲಾಠಿಯಪೆಟ್ಟುಹಾಕಿದರು. ವಂದೇ ಮಾತರಂ ಬ್ಯಾಚುಗಳನ್ನು ಕಿತ್ತುಕೊಂಡರು. ಒಬ್ಬನನ್ನು ಕೆರೆಯಲ್ಲಿ ಬೀಸಾಡಿದರು. ತಲೆಗಳು ಒಡೆದವು. ವಂದೇಮಾತರಂ ಜಯಘೋಷಮಾತ್ರ ನಿಲ್ಲಲಿಲ್ಲ. ಅದು ವಾತಾವರಣವನ್ನೆಲ್ಲ ವ್ಯಾಪಿಸಿ ಇಡೀ ದಿನವೆಲ್ಲ ನಡೆಯಿತು. ಸುರೇಂದ್ರನಾಥರು ಬಂಧಿಸಲ್ಪಟ್ಟರು. ನ್ಯಾಯಾಧೀಶರು ಅವರಿಗೆ ೨೦೦ ರೂಪಾಯಿಗಳ ದಂಡ ವಿಧಿಸಿದರು. ದಂಡ ತೆತ್ತು,ಹಾಗೇ ಪರಿಷತ್ತಿಗೆ ಬಂದರು. ಪರಿಷತ್ತೆಲ್ಲವೂ ಗಾಯಾಳುಗಳಿಂದ ತುಂಬಿ ಹೋಗಿತ್ತು. ಮರುದಿನ ಸಭಾಬಂದಿಯ ಆಜ್ಞೆಯನ್ನು ವಿಧಿಸಿ, ಪರಿಷತ್ತನ್ನು ಅಧಿಕಾರಿಗಳು ಮುರಿದರು ಹೀಗೆ ಚಳವಳಿಯು ಗಗನಕ್ಕೆ ಮುಟ್ಟಿತು.

'ರಾಜ್ಯಕ್ರಾಂತಿಯನ್ನು ನಾನು ನೋಡಿಲ್ಲ, ಅದರ ಕಲ್ಪನೆಯನ್ನೂ ನಾನು ಮಾಡಲಾರೆ. ಆದರೆ ರಾಜ್ಯಕ್ರಾಂತಿಯು ಮುಂದೆ ಆಗಬೇಕಿದ್ದರೆ, ಅದರ ಮೊದಲು ಉಂಟಾಗುವ ಸಾರ್ವಜನಿಕ ಕ್ಷೋಭೆಯ ಕಲ್ಪನೆಯು ಮಾತ್ರ ನನಗ ಸ್ವದೇಶಿ ಆಂದೋಲನದ ಕಾಲಕ್ಕೆ ಬಂದಿತು, ಅಭೂತ

ಪೂರ್ವವಾದ ಒಂದು ವಿಲಕ್ಷಣವಾದ ವಾತಾವರಣವು ಉಂಟಾಗುತ್ತದೆ. ಕಲಿತವರು ಕಲಿಯದಿದ್ದವರು. ಎಲ್ಲರಲ್ಲಿಯೂ ಒಂದೇ ಭಾವನೆಯು ಮೂಡುತ್ತದೆ. ಯಾವುದೋ ಶಕ್ತಿಯು ಎಲ್ಲರನ್ನೂ ಕುಣಿಸುತ್ತದೆ. ಬುದ್ಧಿಯ ತರ್ಕವಿತರ್ಕಗಳು ಮಾಯವಾಗುತ್ತವೆ. ಒಂದೇ ಒಂದು ಭಾವನೆಯು ಎಲ್ಲರನ್ನೂ ತನ್ನ ಶೆಳೆತದಲ್ಲಿ ಎಳೆದುಕೊಂಡು ಹೋಗುತ್ತದೆ.''

ಟಿಳಕರು ಈ ದಬ್ಬಾಳಿಕೆಯನ್ನು ನಿಷೇಧಿಸಿ ಜನರಿಗೆ ಮುನ್ನಡೆಯಲು ಹುರಿದುಂಬಿಸಿದರು. ಜನರು ಧೈರ್ಯದಿಂದ ಪ್ರತಿಕಾರ ಮಾಡುತ್ತಿರುವದನ್ನು ಕಂಡು ಅವರಿಗೆ ಆನಂದವಾಯಿತು. ಅವರು ಬಂಗಾಲಿಗಳ ಡುಬ್ಬ ಛಪ್ಪರಿಸಿದರು.

ಇತ್ತ ಇಂಗ್ಲಂಡದಲ್ಲಿ ಭಾರತೀಯ ಶಿಷ್ಟ ಮಂಡಳಕ್ಕೆ ಬಂಗಾಲದ ದಬ್ಬಾಳಿಕೆಯ ಸುದ್ದಿ ಹತ್ತಿದ್ದಿತು. ಗೋಖಲೆಯವರು ಯಾವ ಮುಚ್ಚುಮರೆಯಿಲ್ಲದೆ ಕರ್ಝನ್ನನ ದಬ್ಬಾಳಿಕೆಯನ್ನು ಕಟುವಾಗಿ ಖಂಡಿಸಿದರು. ಬಂಗಾಲಿಗಳ ಬಹಿಷ್ಕಾರವನ್ನು ಸಮರ್ಥಿಸಿದರು. ನಿಮಗೆ ಇದರಿಂದ ಸಿಟ್ಟುಬರಬಹುದು ಅದು ನಿಮಗೆ ಬರಬೇಕೆಂದೇ ನನ್ನ ಇಚ್ಛೆಯಿದೆ........ ಹಿಂದೀ ಜನರು ರಾಷ್ಟ್ರೀಯ ಭಾವನೆಯಿಂದ ಒಂದಾಗುವವರಿದ್ದಾರೆ. ಸರಕಾರದ ಸಮಾಚಾರ ತೆಗೆದುಕೊಳ್ಳಲು ಸಿದ್ಧತೆ ನಡೆಸಿರುವರು. ನ್ಯಾಯದಿಂದ ಸ್ವರಾಜ್ಯ ಕೊಡದಿದ್ದರೆ, ಹಿಂದೂ ಜನರು ದಬ್ಬಾಳಿಕೆಗೆ ರೊಚ್ಚಿಗೆದ್ದು ಬಲದಿಂದ ತೆಗೆದುಕೊಳ್ಳಲು ಪ್ರಯತ್ನಿಸಬಹುದು. ಅದರ ಪ್ರತಿಕಾರಕ್ಕೆಂದು ಇಲ್ಲಿಂದ ಸೈನ್ಯ ಮಾತ್ರ ಕಳಿಸದಿರುವ ಎಚ್ಚರಿಕೆ ತೆಗೆದುಕೊಂಡರೆ ಸಾಕೆಂದರು. ಗೋಖಲೆಯುವರ ಈ ಉದ್ಗಾರಗಳಿಂದ ಟಿಳಕರು ಆನಂದದಿಂದ ಕುಣಿದಾಡಿದರು. ಅವರು ಮರಳಿ ಬಂದೊಡನೆಯೇ ಟಿಳಕರು ಅವರನ್ನು ಅಪ್ಪಿಕೊಂಡು ಅಭಿನಂದಿಸಿದರು.

ಕಾಶಿಯಲ್ಲಿ ಕಾಂಗ್ರೆಸ್ಸು ಸೇರುವದಿತ್ತು. ಗೋಖಲೆಯವರೇ ಅಧ್ಯಕ್ಷರಾಗಿ ಆರಿಸಲ್ಪಟ್ಟಿದ್ದರು. ಕಾಂಗ್ರೆಸ್ಸಿನ ಹಳೆಯ ಧೋರಣೆಗೆ ಬೇಸತ್ತ ಟಿಳಕರು ಕಾಂಗ್ರೆಸ್ಸಿನ ಧೋರಣವನ್ನು ಬದಲಿಸಬೇಕೆಂಬ ದೃಷ್ಟಿಯಿಂದಲೂ ಬಹಿಷ್ಕಾರಕ್ಕೆ ರಾಷ್ಟ್ರದ ಸಮ್ಮತಿ ಪಡೆಯಬೇಕೆಂಬ ದೃಷ್ಟಿಯಿಂದಲೂ ತಮ್ಮ ಪಕ್ಷದೊಂದಿಗೆ ಕಾಶಿಯಲ್ಲಿ ಹೋಗಿ ತಳವೂರಿದರು

---

## ಲಾಲ-ಬಾಲ-ಪಾಲರು

ರಾಷ್ಟ್ರದ ಮುಖಂಡರು (೧೯೦೫)



# ರಾಷ್ಟ್ರೀಯ ಪಕ್ಷದ ಉದಯ

ಲೋಕಮಾನ್ಯರು ತಮ್ಮ ಅನುಯಾಯಿಗಳೊಡನೆ ಬನಾರಸಕ್ಕೆ ಹೊರಟರಷ್ಟೇ! ಸ್ಟೇಶನ್ನಿನಲ್ಲಿ ಅವರ ಸ್ವಾಗತಕ್ಕಾಗಿ ೧೦ ಸಾವಿರ ಜನರು ಕಾದಿದ್ದರು. ಟಿಳಕರು ಗಾಡಿಯಿಂದ ಇಳಿದೊಡನೆ ಅವರ ಹೆಸರಿನಿಂದ ಪ್ರಚಂಡ ಜಯಘೋಷವಾಯಿತು. ಅವರೊಡನೆ ಗೋಪಾಲಕೃಷ್ಣ ಗೋಖಲೆಯವರೂ ಇದ್ದರು. ಜನ ಹೂಮಳೆಗರೆದರು. ಹೂಮಾಲೆಗಳಲ್ಲಿ ಟಿಳಕರು ಮುಚ್ಚಿಹೋದರು. ಟಿಳಕರು ಕ್ಷಣಹೊತ್ತು ವಿಸ್ಮಿತರಾದರು. 'Militancy Not Mendicancy' ಎಂಬ ಜಯಘೋಷ ಮಾಡಲು ಹೇಳಿದರು. ಭಿಕ್ಷಾಂದೇಹಿ ವೃತ್ತಿ ಬೇಡವಾಗಿದ್ದಿತು. ಸ್ವದೇಶಿ ಹಾಗು ಬಹಿಷ್ಕಾರಗಳೆಂಬ ಎರಡಸ್ತ್ರಗಳು ಅವರಿಗೆ ಬೇಕಾಗಿದ್ದವು. ಜನತೆಯು ಈ ಘೋಷಮಾಡುತ್ತ ಬೀದಿಬೀದಿಗಳಲ್ಲಿ ಸಂಚರಿಸಿತು.

ವಂಗಭಂಗದಿಂದ ರಾಷ್ಟ್ರಕ್ಕೆ ಅಪಮಾನವಾಗಿದ್ದಿತು. ಈ ವಿಷಯದಲ್ಲಿ ಕಾಂಗ್ರೆಸ್ಸಿನ ಮಾರ್ಗದರ್ಶನವನ್ನು ಜನ ನಿರೀಕ್ಷಿಸುತ್ತಿದ್ದಿತು. ಲಾಲ-ಬಾಲ-ಪಾಲರನ್ನು ನೋಡಬೇಕೆಂಬ ಕುತೂಹಲದಿಂದ ಸಭಾಮಂಟಪವು ಕಿಕ್ಕಿರಿದು ತುಂಬಿದ್ದಿತು. ಲೋಕಮಾನ್ಯರು ತಮ್ಮ ಅನುಯಾಯಿಗಳೊಡನೆ ಸಭಾಮಂಟಪವನ್ನು ಪ್ರವೇಶಿಸಿದ ಕೂಡಲೆ, ಪ್ರಚಂಡವಾದ ಜಯಘೋಷವಾಯಿತು. ಲಾಲಾಲಜಪತರಾಯರ ನೇತೃತ್ವದಲ್ಲಿ ಪಂಜಾಬಿಗಳ ತಂಡ ಬಂದು ತಳ ಊರಿತ್ತು. ಬಿಪಿನಚಂದ್ರ ಪಾಲರೂ ಬಂಗಾಲಿಗಳಿಂದೊಡಗೂಡಿ ಕುಳಿತಿದ್ದರು. ಈ ಎರಡೂ ಗುಂಪುಗಳು ಟಿಳಕರ ಧ್ಯೇಯ-ಧೋರಣೆಗಳಿಗೆ ತಮ್ಮ ಪೂರ್ಣ ಬೆಂಬಲವಿರುವದೆಂದು ಸಾರಿದವು.

ಗೋಪಾಲ ಕೃಷ್ಣ ಗೋಖಲೆಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ರಾಷ್ಟ್ರದಲ್ಲಿ ಪಸರಿಸಿದ ಅಸಂತೋಷವನ್ನು ಚೆನ್ನಾಗಿಯೇ ಚಿತ್ರಿಸಿದ್ದರು. "ಲಾರ್ಡ ಕರ್ಝನನ ಆಳಿಕೆಯನ್ನು ಹೋಲಿಸಬೇಕಾದರೆ, ಔರಂಗಜೇಬನ

ಕಾಲದ ಇತಿಹಾಸವನ್ನೇ ನಾವು ಓದಬೇಕು. ಹಿಂದುಸ್ತಾನವೆಂದರೆ ಇಂಗ್ಲಿಷರಿಗಾಗಿ ಕಾದಿಟ್ಟ ಭೂಮಿ. ಪರರಿಂದ ಆಳಿಸಿಕೊಳ್ಳುವದೇ ಭಾರತೀಯರ ಕೆಲಸವೆಂದು ಅವರ ಭಾವನೆಯಿದ್ದಿತು. ಒಂದೇ ವ್ಯಕ್ತಿಯ ಕೈಯಲ್ಲಿ ಎಲ್ಲ ಅಧಿಕಾರವನ್ನಿಟ್ಟುಕೊಳ್ಳುವ ಜನರಲ್ಲಿ, ಅವಿಶ್ವಾಸವನ್ನು ಮಾಡಿ ಅವರನ್ನು ಹತ್ತಿಕ್ಕುವ ಸತತ ಪ್ರಯತ್ನಗಳು ಈ ಎರಡೂ ಆಳಿಕೆಗಳಲ್ಲಿ ಒಂದೇ ಬಗೆಯಾಗಿ ದೃಷ್ಟಿಗೆ ಬೀಳುವವು" ಎಂದರು. ವಂಗಭಂಗ ಚಳವಳಿಯನ್ನು ಸಮರ್ಥಿಸಿದರು. "ಈ ಚಳವಳಿಯು ರಾಷ್ಟ್ರದ ಇತಿಹಾಸವನ್ನೇ ಬದಲು ಮಾಡಿದೆ. ಈ ಚಳವಳಿಯಿಂದ ರಾಷ್ಟ್ರದಲ್ಲಿ ಎಂದೂ ಇಲ್ಲದ ಐಕ್ಯವು ಉಂಟಾಗಿದೆ. ಇಂತಹ ಪ್ರಚಂಡ ಪ್ರವಾಹದಲ್ಲಿ ಅಲ್ಪಸ್ವಲ್ಪ ಮರ್ಯಾದೆಯ ಉಲ್ಲಂಘನವಾಗತಕ್ಕದ್ದೆ. ಬಂಗಾಲಿಗಳಿಗೆ ಆದ ಅಪಮಾನ ನಮ್ಮ ಅಪಮಾನವೆಂಬ ಭಾವನೆಯಿಂದ ನಾವು ಸಹಾಯ ಮಾಡೋಣ. ಬ್ರಿಟಿಶರ ಲಕ್ಷ್ಯವನ್ನು ಸೆಳೆಯುವ ವಿನಿಕ್ಷಿತ ಉದ್ದೇಶದಿಂದ ಉಪಯೋಗಿಸಲ್ಪಟ್ಟ ಬಹಿಷ್ಕಾರ ಅಸ್ತ್ರವು ಯೋಗ್ಯವಿದ್ದು, ಅದರ ಪರಿಣಾಮವು ಇಂಗ್ಲಂಡದ ಮೇಲೆ ಚೆನ್ನಾಗಿ ಆಗಿದೆ. ಸ್ವದೇಶಕ್ಕಾಗಿ ಬಂದ ಕಷ್ಟಗಳನ್ನು ಅನುಭೋಗಿಸಲು ನಾವು ಸಿದ್ಧರಿರಬೇಕು. ಭಾರತಕ್ಕೆ ವಸಾಹತು ಸ್ವರಾಜ್ಯವು ಸಿಗಲೇಬೇಕು" ಎಂಬ ಮಾತುಗಳು ಅವರ ಭಾಷಣದಲ್ಲಿ ಮುಖ್ಯವಾಗಿದ್ದವು. ಗೋಖಲೆಯವರ ಭಾಷಣ ಅತ್ಯಂತ ಪರಿಣಾಮಕಾರಿಯಾಯಿತು. ಟಿಳಕರು ಹಿರಿ ಹಿರಿ ಹಿಗ್ಗಿದರು. ಗೋಖಲೆಯವರು ಮುಂದಿನ ಧೋರಣವನ್ನು ತ್ಯಜಿಸಿದ್ದಕ್ಕಾಗಿ ಟಾಯಿಮ್ಸ ಪತ್ರಿಕೆಯು ವಿಷಾದವನ್ನು ವ್ಯಕ್ತಪಡಿಸಿತು.

ಲೋಕಮಾನ್ಯರು ಸ್ವದೇಶಿ ಪುರಸ್ಕಾರ ಹಾಗೂ ಪರದೇಶಿ ಬಹಿಷ್ಕಾರ ತತ್ವಗಳಿಗೆ ಕಾಂಗ್ರೆಸ್ಸು ತನ್ನ ಸಮ್ಮತಿಯ ಮುದ್ರೆಯನ್ನೊತ್ತಬೇಕೆಂದೂ, ಕಾಂಗ್ರೆಸ್ಸು ಈ ವಿಷಯದಲ್ಲಿ ಮುಂದಾಳುತನ ವಹಿಸಬೇಕೆಂದೂ, ಅಪೇಕ್ಷಿಸುತ್ತಿದ್ದರು. ಆದರೆ ಪ್ರತ್ಯಕ್ಷ ಗೊತ್ತುವಳಿಗಳನ್ನು ಮಾಡುವ ಪ್ರಸಂಗ ಬಂದೊಡನೆ ಗೋಖಲೆ ಪಕ್ಷವು ಹಿಂಜರಿಯಿತು.

ಯುವರಾಜರು ಭಾರತಕ್ಕೆ ಬಂದಿದ್ದರು. ವಿಷಯ ನಿಯಾಮಕ ಕಮಿಟಿಯಲ್ಲಿ ಅವರಿಗೆ ಸ್ವಾಗತವನ್ನೀಯುವ ಗೊತ್ತುವಳಿಯು ಬಂದಿತು. ಟಿಳಕ ಹಾಗು ಲಜಪತರಾಯರು ಅದನ್ನು ವಿರೋಧಿಸಿದರು. ಯುವರಾಜರು

ಭಾರತಕ್ಕೆ ಬಂದು ಬಿಟ್ಟಿದ್ದಾರೆ. ಮುಂಬಯಿ ಮುನಸಿಪಾಲ್ಟಿಯು ಸ್ವಾಗತ ಗೈದಿದೆ, ಇನ್ನು ಅದರ ಆವಶ್ಯಕತೆಯಿಲ್ಲವೆಂದರು. ಬಂಗಾಲಿಗಳಿಗೆ ಇದು ಸರಿಯೆನಿಸಿತು. ಆದರೆ ಮುಂದಪಕ್ಷೀಯರು ಆಗ್ರಹ ತೊಟ್ಟರು. ಗೊತ್ತುವಳಿಯು ಪಾಸಾಗುವ ಲಕ್ಷಣಗಳು ತೋರಹತ್ತಿದವು. ಆಗ ಸಂದೇಶ ವನ್ನು ಕಳಿಸುವದೇ ಆದರೆ, ಅದರಲ್ಲಿ 'ಭಾರತದ ರಾಜ್ಯಭಾರವು ರಾಣೀ ಜಾಹೀರನಾಮೆಯಂತೆ ನಡೆಯುವದಿಲ್ಲವೆಂಬ ಸುದ್ದಿಯನ್ನು ತಮ್ಮ ತಂದೆಯ ವರಿಗೆ ತಿಳಿಸಬೇಕು.' ಎಂಬ ಮಾತನ್ನು ಸೇರಿಸಬೇಕೆಂದು ಟಿಳಕರು ಸೂಚಿಸಿದರು. ಅದು ಪಾಸೂ ಆಯಿತು. ಬಂಗಾಲಿಗಳು ಸ್ವಾಗತಕ್ಕೆ ವಿರುದ್ಧರಿದ್ದರು. ಈ ಗೊತ್ತುವಳಿಯ ಸಮಯದಲ್ಲಿ ನೀವು ಉಪಸ್ಥಿತರಿರ ಬೇಡಿರೆಂದು ಟಿಳಕರು ಸಲಹೆ ಕೊಟ್ಟು ಅವರನ್ನು ಸಮಾಧಾನಪಡಿಸಿದರು.

ಬಹಿಷ್ಕಾರ, ಸ್ವದೇಶಿ ಹಾಗು ರಾಷ್ಟ್ರೀಯ ಶಿಕ್ಷಣದ ಗೊತ್ತುವಳಿಗಳು ವಿಷಯ ನಿಯಾಮಕ ಕಮಿಟಿಯಲ್ಲಿ ಬಂದೊಡನೆಯೇ ಅಧ್ಯಕ್ಷ ಹಾಗೂ ಬಂಗಾಲಿ ತರುಣರ ನಡುವೆ ಯುದ್ಧವೇ ಪ್ರಾರಂಭವಾಯಿತು. ಅದು ನಿಕರಕ್ಕೆ ಬಂದಿತು. ಟಿಳಕರು ನಡುವೆಬಿದ್ದು ಸರಿಪಡಿಸಿದರು.

ಕಾಂಗ್ರೆಸ ಮಂಡಪದಲ್ಲಿಯ ಈ ಪರಿಸ್ಥಿತಿಯನ್ನು ನೋಡಿದರೆ, ಮಂದಪಕ್ಷದ ಮುಂದಾಳುಗಳಿಗೂ ನವತರುಣರಿಗೂ ಬಗೆಹರಿಯುವ ದಿಲ್ಲೆಂಬುದು ಸ್ಪಷ್ಟವಾಗಿ ಕಂಡು ಬಂದಿತು. ವಂಗಭಂಗದಿಂದ ರಾಷ್ಟ್ರದಲ್ಲಿ ಉಂಟಾದ ಶಕ್ತಿಯನ್ನು ಉಪಯೋಗಿಸಿಕೊಳ್ಳಲು ಗೋಖಲೆ, ಮೇಥಾ ಮುಂತಾದ ಮುಂದಾಳುಗಳು ಸಮರ್ಥರಾಗಲಿಲ್ಲ. ಬಿನ್ನಹ ಬೇಡಿಕೆಗಳಿಗೆ ಬೇಸತ್ತು, ದಬ್ಬಾಳಿಕೆಯಿಂದ ವ್ಯಾಕುಲವಾದ ಕೆಲವು ತರುಣ ಹೃದಯಗಳು ಕ್ರಾಂತಿಯನ್ನು ಸ್ವಾಗತಿಸಿದವು. ಇವರ ಭಾವಾವೇಶವೂ ಉಜ್ವಲವಾದ ದೇಶಭಕ್ತಿಯೂ ಆತ್ಮಬಲಿದಾನಗಳೂ ಹೊಗಳತಕ್ಕಂಥವು ನಿಜ. ಉಗ್ರವಾದ ಕಾರ್ಯಕ್ರಮಗಳುಳ್ಳ ಈ ಜನರ ಬೆನ್ನು ಹತ್ತುವರಾರು? ಈ ಎರಡೂ ಪಕ್ಷಗಳ ಗುಣಗಳ ಮಿಶ್ರಣವುಳ್ಳ ರಾಷ್ಟ್ರದ ಆಕಾಂಕ್ಷೆಗಳನ್ನರಿತುಕೊಂಡು ರಾಷ್ಟ್ರದ ಶಕ್ತಿಯನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳುವ, ಸಮರ್ಥ ರೀತಿಯಿಂದ ರಾಷ್ಟ್ರವನ್ನು ಮುನ್ನಡೆಸುವ, ಒಂದು ಪಕ್ಷದ ಆವಶ್ಯಕತೆಯು ರಾಷ್ಟ್ರಕ್ಕೆ ಇದ್ದಿತು.

ಇಂತಹ ಪ್ರಯತ್ನವೊಂದು ಈ ಕಾಂಗ್ರೆಸ್ಸಿನ ಸಮಯದಲ್ಲಿ ನಡೆಯಿತು. ಬಿನ್ನಹ ಬೇಡಿಕೆಗಳಿಗೆ ಬೇಸತ್ತು, ಹೊಸಮಾರ್ಗವನ್ನು ನಿರೀಕ್ಷಿಸುತ್ತಿರುವ ಜನರೆಲ್ಲರೂ ಒಂದು ಸಭೆಯನ್ನು ಏರ್ಪಡಿಸುವ ಪ್ರಯತ್ನ ಮಾಡಿದರು. ಅದಕ್ಕೆ ಲಜಪತರಾಯರೇ ಮುಂದಾಳುಗಳಾಗಿ ನಿಂತರು. ತರುಣರೆಲ್ಲರೂ ಈ ಸಭೆಗೆ ಲೋ. ಟಿಳಕರೇ ಅಧ್ಯಕ್ಷರಾಗಬೇಕೆಂದು ಬಿನ್ನವಿಸಿಕೊಂಡರು. ಈ ಪ್ರಸಂಗವನ್ನು ಕುರಿತು ಲಜಪತರಾಯರು 'ಯಂಗ ಇಂಡಿಯಾ' ಎಂಬ ಗ್ರಂಥದಲ್ಲಿ ಕೆಳಗಿನಂತೆ ಉಲ್ಲೇಖಿಸಿದ್ದಾರೆ.

''ಲೋಕಮಾನ್ಯ ಟಿಳಕರು ಶಾಂತತಾಮಯ ಪ್ರತಿಕಾರದ ಕಲ್ಪನೆಯನ್ನು ಮೊದಲು ರಾಷ್ಟ್ರದ ಮುಂದಿಟ್ಟರು. ಈ ಕಲ್ಪನೆಯು ನ್ಯಾಯಪೂರ್ಣವಿದ್ದಿತು. ಅಲ್ಲದೆ ಧೈರ್ಯದ ಹಾಗು ಸ್ಫೂರ್ತಿಯ ಹೆಜ್ಜೆಯಾಗಿದ್ದಿತು. ಈ ಶಾಂತತಾಮಯ ಪ್ರತಿಕಾರದ ಚಳವಳಿಯು ಮುಪ್ಪುರಿಯಾಗಿದ್ದಿತು. (೧) ಬ್ರಿಟಿಶರ ಶಕ್ತಿ ಸಾಮರ್ಥ್ಯಗಳ ಮುಂದೆ ನಮ್ಮದೇನೂ ನಡೆಯುವದಿಲ್ಲೆಂಬ ಹಾಗು ಅವರೇ ತಮ್ಮ ತಾರಕರೆಂಬ ಕಲ್ಪನೆಯನ್ನು ಕಿತ್ತೊಗೆದು ಭಾರತೀಯರಲ್ಲಿ ಆತ್ಮ ವಿಶ್ವಾಸವನ್ನುಂಟುಮಾಡುವದು. (೨) ಜನರಲ್ಲಿ ಸ್ವಾತಂತ್ರ್ಯ ಪ್ರೀತಿಯನ್ನು ಹುಟ್ಟಿಸಿ, ದೇಶದ ಸ್ವಾತಂತ್ರ್ಯಕ್ಕಾಗಿ ಬೇಕಾದ ತ್ಯಾಗವನ್ನು ಮಾಡಲು ಅಣಿಗೊಳಿಸುವದು (೩) ರಾಷ್ಟ್ರವನ್ನು ಸ್ವತಂತ್ರಗೊಳಿಸುವದು. ಇದೇ ಶಾಂತತಾಮಯ ಪ್ರತಿಕಾರದ ಚಳವಳಿಯ ರಹಸ್ಯವಾಗಿದ್ದಿತು. ಟಿಳಕರು ತಮ್ಮ ಭಾಷಣದಿಂದ ತರುಣರ ಅಂತಃಕರಣವನ್ನು ಸೂರೆಗೊಂಡರು. ರಾಷ್ಟ್ರದ ಅಂತಃಕರಣವನ್ನು ಅರಿತು ತರುಣರ ಶಕ್ತಿಯನ್ನು ಉಪಯೋಗಿಸಿಕೊಳ್ಳುವ ಕುಶಲರಾದ ವೀರರು ರಾಷ್ಟ್ರದಲ್ಲಿ ಒಬ್ಬರೇ ಇದ್ದರು. ಅವರೇ ಲೋ. ಟಿಳಕರು."

ಲಾಲಾಲಜಪತರಾಯರ ವರ್ಣನೆಯು ಯತಾರ್ಥವಾಗಿದ್ದಿತು. ಲೋಕಮಾನ್ಯರ ನಾಯಕತ್ವದಲ್ಲಿ ನವರಾಷ್ಟ್ರೀಯ ಪಕ್ಷವು ಉದಯವಾಯಿತು. ಲಾಲ-ಬಾಲ-ಪಾಲರು, ಅರವಿಂದಘೋಷರು, ಶಶಿರಕುಮಾರ ಘೋಷರು ಈ ಪಕ್ಷದ ಮುಂದಾಳುಗಳಾದರು.

ಲೋಕಮಾನ್ಯರು ತಮ್ಮ ಭಾಷಣದಲ್ಲಿ "ನಮ್ಮ ಕೈಯಲ್ಲಿ ಶಸ್ತ್ರಗಳಿಲ್ಲ, ಆದರೆ ನಮಗೆ ಶಸ್ತ್ರಗಳ ಅವಶ್ಯಕತೆಯೂ ಇಲ್ಲ. ಅದಕ್ಕಿಂತಲೂ ಬಲಿಷ್ಠವಾದ ರಾಜಕೀಯ ಅಸ್ತ್ರವೊಂದಿದೆ. ಅದೇ ಬಹಿಷ್ಕಾರ! ಬೆರಳಿನಮೇಲೆ

ಎಣಿಸುವಷ್ಟು ಬ್ರಿಟಿಶರು ನಮ್ಮ ಸಹಾಯದಿಂದಲೇ ನಮ್ಮನ್ನಾಳುತ್ತಾರೆಂಬು ಸಂಗತಿಯನ್ನು ಎಲ್ಲರೂ ಲಕ್ಷದಲ್ಲಿಡಬೇಕು. ದೊಡ್ಡ ಹುದ್ದೆಗಳೆಲ್ಲ ಅವರಿಗೆ, ಕಸಗೂಡಿಸುವ ಕೆಲಸ ಮಾತ್ರ ನಮಗೆ. ನಮ್ಮ ಸಹಾಯದ ಬಲದಿಂದಲೇ ರಾಜ್ಯವಾಳುತ್ತಿದ್ದರೂ ನಮ್ಮ ನಮ್ಮಲ್ಲಿ ಸಹಕಾರದಿಂದ, ಒಕ್ಕಟ್ಟಿನಿಂದ ಉಂಟಾಗುವ ಬಲದ ಅರಿವು ನಮಗಾಗದಂತೆ ನೋಡಿಕೊಳ್ಳುತ್ತಿರುವರು. ನಮ್ಮಲ್ಲಿ ಅರಿವು ಉಂಟಾದರೆ ನಮ್ಮ ರಾಜ್ಯ, ನಾವೇ ನಡೆಯಿಸಬಹುದು. ನಮ್ಮ ರಾಜ್ಯದ ಕಾರಭಾರವನ್ನು ನಮ್ಮ ಕೈಯಲ್ಲಿ ತೆಗೆದುಕೊಳ್ಳುವದೇ ಮಹತ್ವದ ಪ್ರಶ್ನೆಯಾಗಿದೆ. ಭಾರತದಲ್ಲಿ ತಮ್ಮ ಜನ ತೀರ ಸ್ವಲ್ಪವೆಂಬ ಕಲ್ಪನೆ ಬ್ರಿಟಿಶರಿಗೆ ಚೆನ್ನಾಗಿ ಇದೆ. ಆದುದರಿಂದಲೇ ನೀವು ದುರ್ಬಲರು, ನಾವು ಪ್ರಬಲರು, ಎಂಬ ಕಲ್ಪನೆಯನ್ನು ನಮ್ಮ ತಲೆಯಲ್ಲಿ ತುಂಬುತ್ತಾರೆ. ಇದೇ ರಾಜಕಾರಣವು. ಇಲ್ಲಿಯ ವರೆಗೆ ಈ ರಾಜಕಾರಣಕ್ಕೆ ನಾವು ಮೋಸಹೋಗಿದ್ದೇವೆ. ನಿಮ್ಮ ಭವಿಷ್ಯವು ನಿಮ್ಮ ಕೈಯಲ್ಲಿದೆ. ಎಂಬುದನ್ನು ತಿಳಿಸಿಕೊಡುವದೇ ಈ ಹೊಸ ಪಕ್ಷದ ಧ್ಯೇಯವು. ನೀವು ಸ್ವತಂತ್ರರಾಗಲು ಅಪೇಕ್ಷಿಸುತ್ತಿದ್ದರೆ, ಸ್ವತಂತ್ರರಾಗಲು ಶಕ್ಯವಿದೆ. ಇಲ್ಲದಿದ್ದರೆ ಕೊನೆಯ ವರೆಗೂ ಹೀಗೆ ಕೊಳೆಯುವಿರಿ. ಪ್ರತಿಕಾರ ಮಾಡುವ ಶಕ್ತಿಯು ನಿಮ್ಮಲ್ಲಿಲ್ಲ ದಿದ್ದರೆ, ರಾಜ್ಯ ಕಾರಭಾರದಲ್ಲಿ ಸಹಾಯಮಾಡದೆ ಸುಮ್ಮನಿರಲೂ ನಿಮ್ಮ ಕೈಯಲ್ಲಿಲ್ಲವೇ ? ಇದಕ್ಕೇ ನಾನು ಬಹಿಷ್ಕಾರವೆನ್ನುತ್ತೇನೆ. ಬಹಿಷ್ಕಾರವು ಒಂದು ರಾಜಕೀಯ ಅಸ್ತ್ರವು ಎಂಬುದರ ಅರ್ಥವೂ ಇದೇ ಆಗಿದೆ. ಧನ ಧಾನ್ಯ ಸಂಗ್ರಹ ಮಾಡಲು ನಾವು ಸಹಕರಿಸುವದಿಲ್ಲ. ಶಾಂತತೆಯನ್ನು ಕಾಪಾಡಲು ನಾವು ಸಹಾಯಮಾಡುವದಿಲ್ಲ. ಹೊರದೇಶಗಳಲ್ಲಿ ನಡೆಯುವ ಯಾವುದೇ ಯುದ್ಧಕ್ಕೆ ನಾವು ನೆರವಾಗುವದಿಲ್ಲ. ಪ್ರಸಂಗಬಂದರೆ ಯಾವ ಕರವನ್ನೂ ನಾವು ಕೊಡುವದಿಲ್ಲವೆಂಬಮಾತನ್ನು ನೀವು ಸಾಂಘಿಕ ಶಕ್ತಿ ಯಿಂದ ಸಾಧಿಸಲು ಶಕ್ಯವಿಲ್ಲವೇ? ಈ ಸಂಗತಿಗಳನ್ನು ನೀವು ಆಚರಣೆಯಲ್ಲಿ ತಂದರೆ ಖಂಡಿತವಾಗಿಯೂ ಸ್ವತಂತ್ರರಾಗುವಿರಿ. ಈ ದೃಷ್ಟಿಯಿಂದ ನೀವು ವಿಚಾರಮಾಡಿರಿ. ಭಾವನಾ ಪರವಶನಾಗಿ ಈ ಮಾತುಗಳನ್ನು ನಾನು ಹೇಳುತ್ತಿರುವದಿಲ್ಲ. ಅನೇಕ ದಿನಗಳ ವಿಚಾರಗಳ ಫಲವಿದು. ಇದನ್ನು ಚನ್ನಾಗಿ ತಿಳಿಸುಕೊಳ್ಳಿರಿ. ತರ್ಕಶುದ್ಧ ಬುದ್ಧಿಯಿಂದ ಈ ವಿಚಾರವನ್ನು

ಬೆಂಬಲಿಸಿರಿ. ವಂಗಭಂಗದಿಂದ ನಾವು ಈ ಹೊಸಪಾಠವನ್ನು ಕಲಿಯು ಬೇಕಾಗಿದೆ."

ಟಿಳಕರು ತಮ್ಮ ಯೋಜನೆಯನ್ನು ಈ ರೀತಿಯಾಗಿ ಸ್ಪಷ್ಟೀಕರಿಸಿ ರಾಷ್ಟ್ರದ ಮುಂದೆ ಇಟ್ಟೊಡನೆಯೆ, ರಾಷ್ಟ್ರದ ಅಂತಃಕರಣವೇ ಆಕರ್ಷಿತ ವಾಯಿತು. ಜನರು ಟಿಳಕರನ್ನು ದೇವರಂತೆ ಭಾವಿಸಹತ್ತಿದರು. ಅವರ ಈ ಲೋಕಪ್ರಿಯತೆಯು ಅವರ ಮರಣದವರೆಗೆ ಬೆಳೆಯುತ್ತಲೇ ನಡೆಯಿತು.

ಈ ಕಾಂಗ್ರೆಸ್ಸಿನಲ್ಲಿ ಟಿಳಕರು ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಗಳಿಗೆ ರಾಷ್ಟ್ರದ ಸಮ್ಮತಿಯನ್ನು ಪಡೆದು, ಕಾಂಗ್ರೆಸ್ಸಿನ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿದರು. ರಾಷ್ಟ್ರವು ಪರೆಯನ್ನು ತೊರೆದ ಹಾವಿನಂತೆ ಹೊಸ ಹುರುಪಿನಿಂದ, ತೀವ್ರಗತಿಯಿಂದ ಮುಂದುವರಿಯಿತು.

ಕಾಶಿಯಲ್ಲಿಯೇ ಕಾರ್ಯಕ್ಕೆ ಪ್ರಾರಂಭವಾಯಿತು. ಪಂ. ಮದನ ಮೋಹನ ಮಾಲವೀಯರು ಸಾರ್ವಜನಿಕಸಭೆಯಲ್ಲಿ ಹಿಂದೂ ವಿದ್ಯಾಪೀಠದ ಕಲ್ಪನೆಯನ್ನು ಜನರೆದುರಿಗೆ ಇಟ್ಟರು. ಸುರೇಂದ್ರನಾಥ ಬ್ಯಾನರ್ಜಿಯವರು ಬೆಂಬಲಕೊಟ್ಟರು ಟಿಳಕರು "ಕಾರ್ಯಮಾಡಲು ಜನರು ಮುಂದೆ ಬಂದರೆ, ಹಣಬೇಕಾದಷ್ಟು ದೊರೆಯುವದು. ಬೇರೆ ಬೇರೆ ಪ್ರಾಂತದವರು ಜನರನ್ನು ಕಳಿಸುವ ಹೊಣೆ ಹೊರಲು ಸಿದ್ಧರಿದ್ದರೆ, ಮಹಾರಾಷ್ಟ್ರದಿಂದ ಒಬ್ಬರನ್ನು ಕಳಿಸುವ ಹೊಣೆಯನ್ನು ನಾನು ಹೊರುತ್ತೇನೆ" ಎಂದು ವಚನ ಕೊಟ್ಟರು. ಪ್ರೊ. ವಿಜಾಪೂರಕರ ಮತ್ತು ಪ್ರೊ. ಭಾನುರವರು ತಾವು ಸ್ವತಃ ವಿಶ್ವ ವಿದ್ಯಾಲಯದ ಕಾರ್ಯ ಕೈಕೊಳ್ಳಲು ಸಿದ್ಧರಿರುವೆವೆಂದು ಸಾರಿದರು. ಹೀಗೆ ರಾಷ್ಟ್ರೀಯ ಶಿಕ್ಷಣದ ಕಾರ್ಯಕ್ಕೆ ಅಂಕುರ ಒಡೆಯಿತು.

ಲೋಕಮಾನ್ಯರು ಹೀಗೆ ವಿಜಯಿಗಳಾಗಿ ಪುಣೆಗೆ ಬಂದರು. ಬಹಿಷ್ಕಾರ ಸ್ವದೇಶಿ, ಹಾಗೂ ರಾಷ್ಟ್ರೀಯ ಶಿಕ್ಷಣಗಳ ಪ್ರಚಾರಕ್ಕೆ ಪ್ರಾರಂಭ ಮಾಡಿ ದರು. ಮಹಾರಾಷ್ಟ್ರಕ್ಕೆ ಸ್ವದೇಶಿ ಚಳವಳಿಯೇನು ಹೊಸದಿರಲಿಲ್ಲ. ಸಾರ್ವ ಜನಿಕ ಸಭೆಯ ಮುಖಾಂತರವಾಗಿ ಸ್ವದೇಶಿ ಚಳವಳಿಯನ್ನು ಗ. ವಾ. ಜೋಶಿ (ಸಾರ್ವಜನಿಕ ಕಾಕಾ) ಯವರು ೧೮೭೫ ರಿಂದಲೇ ಮಾಡುತ್ತ ಬಂದಿದ್ದರು. ಲೋಕಮಾನ್ಯರು ಈ ಚಳವಳಿಯನ್ನು ಎತ್ತಿ ಹಿಡಿದರು. ಸ್ವದೇಶಿ ಪುರಸ್ಕಾರ, ಪರದೇಶಿ ಬಹಿಷ್ಕಾರಗಳ ಬಿರುಗಾಳಿಯನ್ನೆಬ್ಬಿಸಿದರು. ಎಲ್ಲ ವರ್ಗಗಳ ಜನರನ್ನು ಟಿಳಕರು ಉಪಯೋಗಿಸಿದರು. ಉಪನ್ಯಾಸಕರನ್ನು

ವ್ಯಾಖ್ಯಾನಕ್ಕೆಂದು ಹಳ್ಳಿ ಹಳ್ಳಿಗೆ ಕಳಿಸಿದರು. ಕೀರ್ತನಕಾರರನ್ನೂ ಪುರಾಣಿಕರನ್ನೂ ಈ ಕ್ಷೇತ್ರಲ್ಲಿ ಎಳೆದರು. ವ್ಯಾಪಾರಸ್ಥರನ್ನು ಹುರಿದುಂಬಿಸಿ, ಸ್ವದೇಶಿ ವಸ್ತು ಭಾಂಡಾರಗಳನ್ನು ಪ್ರಾರಂಭ ಮಾಡಿಸಿದರು. ನೇಕಾರರಿಗೆ ಸ್ವದೇಶಿ ಮಹತ್ವವನ್ನು ತಿಳಿಸಿ, ಉತ್ತೇಜನವಿತ್ತರು. ಸ್ವದೇಶಿ ಪ್ರತಿಜ್ಞೆಯನ್ನು ತೆಗೆದುಕೊಳ್ಳಲು ರಾಷ್ಟ್ರಕ್ಕೆ ಕರೆಯಿತ್ತರು. ಮಹಾರಾಷ್ಟ್ರ ಕರ್ನಾಟಕ, ಮಧ್ಯಪ್ರಾಂತಗಳಲ್ಲಿ ಈ ಚಳವಳಿಯು ರಭಸದಿಂದ ನಡೆಯಿತು. ಹಳ್ಳಿ ಹಳ್ಳಿಗೂ ಸ್ವದೇಶಿ ಸಂದೇಶವು ಮುಟ್ಟಿ, ಸ್ವದೇಶಿ ಅಂಗಡಿಗಳು ಹೊರಟವು. ೧೯೦೬ ರಲ್ಲಿ ಪಂಢರಪುರದಲ್ಲಿ ಒಂದು ದೊಡ್ಡ ಸ್ವದೇಶಿ ಪ್ರದರ್ಶನ ಏರ್ಪಡಿಸಿದರು. ಧಾರ್ಮಿಕ ಪ್ರವೃತ್ತಿಯ ಜನರಲ್ಲಿ ದೇಶ ಪ್ರೇಮವನ್ನು ಉಂಟುಮಾಡುವದೇ ಅವರ ಮುಖ್ಯೋದ್ದೇಶವಾಗಿದ್ದಿತು. ಮುಂಬಯಿಯಲ್ಲಿ ಸ್ವದೇಶಿ ಕೋ. ಆಪರೇಟಿವ್ಹ ಸ್ಟೋರ್ಸನ್ನು ಪ್ರಾರಂಭಮಾಡಿಸಿದರು. ಸ್ವತಃ ಟಿಳಕರು ಆ ಸಂಸ್ಥೆಯ ಸಂಚಾಲಕರಲ್ಲಿ ಒಬ್ಬರಾದರು. ೧೯೦೬ ರಲ್ಲಿ ಸಾರ್ವಜನಿಕ ಸಭೆಯ ಮುಖಾಂತರ ವಿದ್ಯಾರ್ಥಿಗಳ ಪ್ರಚಂಡ ಸಭೆ ಜರುಗಿತು. ಟಿಳಕರೇ ಅಧ್ಯಕ್ಷರಾಗಿದ್ದರು. ಸಭೆಯಲ್ಲಿ ಸ್ವದೇಶಿ ವಸ್ತ್ರಗಳನ್ನು ಧರಿಸುವ ಪ್ರತಿಜ್ಞೆಮಾಡಲ್ಪಟ್ಟಿತು. ಬಂಗಾಲದಂತೆ ಪರದೇಶಿ ವಸ್ತ್ರಗಳ ಹೋಳಿಯೂ ನಡೆಯಿತು. ಈ ಚಳವಳಿಯಲ್ಲಿಯೇ ವಿದ್ಯಾರ್ಥಿಗಳಾಗಿದ್ದ ಬ್ಯಾ. ಸಾವರಕರರು ಜನರ ಮುಂದೆ ಬಂದರು.

ಬಹಿಷ್ಕಾರವು ಕೇವಲ ಬಟ್ಟೆಗೇ ಉಳಿಯಲಿಲ್ಲ. ಅದಕ್ಕೆ ಬಹಿಷ್ಕಾರ ಯೋಗ ವೆಂಬ ಹೆಸರಿಟ್ಟು ಅದರ ವ್ಯಾಪ್ತಿಯು ಪರದೇಶಿ ವಸ್ತುಗಳನ್ನೂ ಪರದೇಶಿ ರೀತಿ ನೀತಿಗಳನ್ನೂ, ಪರದೇಶಿ ಸರಕಾರವನ್ನೂ ಕೂಡ ವ್ಯಾಪಿಸುವಂತೆ ಹಿಗ್ಗಿಸಿದರು. ಪರದೇಶಿ ಸಕ್ಕರೆಯನ್ನು ಬಹಿಷ್ಕರಿಸಬೇಕೆಂಬ ಆಂದೋಲನವನ್ನು ಹೂಡಿದರು "ಬೆಲ್ಲವೋ ಸಕ್ಕರಿಯೋ" ಎಂಬ ಅಗ್ರಲೇಖದಲ್ಲಿ ಟಿಳಕರು ಪರದೇಶಿ ಸಕ್ಕರೆಯನ್ನು ಮಾಡುವಾಗ ಎಲುವಿನ ಇದ್ದಲಿ ಮತ್ತು ಎತ್ತಿನ ರಕ್ತವು ಉಪಯೋಗಿಸಲ್ಪಡುತ್ತದೆ. ಧಾರ್ಮಿಕರಾದ ನಾವು ಅದನ್ನು ಆನಂದದಿಂದ ತಿನ್ನುತ್ತೇವೆ. ಎಂತಹ ಸ್ಥಿತಿ ಇದು! ಎಂದು ಬರೆದರು. ಟಿಳಕರ ಈ ಮಾರ್ಮಿಕ ಟೀಕೆಯು ಗುರಿಯನ್ನು ಸಾಧಿಸಿತು. ರಾಷ್ಟ್ರದಲ್ಲೆಲ್ಲ ಇದೇ ಪ್ರಶ್ನೆಯ ಚರ್ಚೆನಡೆದು, ಬಹಿಷ್ಕಾರಕ್ಕೆ ಮತ್ತಿಷ್ಟು ಕಳೆಯೇರಿತು.

ಮಂದಗಾಮಿಗಳಿಗೆ ಸ್ವದೇಶಿಯು ಮಾನ್ಯವಿದ್ದರೂ ಬಹಿಷ್ಕಾರದಲ್ಲಿ ರಾಜ ದ್ರೋಹದ ಹೊಗೆಯಿದೆ ಯೆಂದು ಅನಿಸಹತ್ತಿತು. ಇದನ್ನು ಕಂಡು ಟಿಳಕರಿಗೆ ವ್ಯಸನವಾಯಿತು. ಟಿಳಕರು ಶಬ್ದ ಹಾಗೂ ಅದರ ಅರ್ಥವನ್ನು ಹೇಗೆ ಬೇರ್ಪಡಿಸಲು ಬರುವದಿಲ್ಲವೋ ಹಾಗೆಯೇ ಸ್ವದೇಶಿ ಹಾಗು ಬಹಿಷ್ಕಾರ ಗಳನ್ನು ವಿಂಗಡಿಸಲು ಬರುವದಿಲ್ಲೆಂದು ಉತ್ತರಿಸಿದರು.

''ಬಹಿಷ್ಕಾರಕ್ಕೆ ಒಮ್ಮೆ ವ್ಯವಹಾರಿಕ ಶಿಕ್ಷೆಯ ಸ್ವರೂಪ ಬಂದರೆ, ಅದರ ಉಪಯೋಗವನ್ನು ನಮಗೆ ಹಾನಿಯುನ್ನುಂಟುಮಾಡುವ ಕಾರ್ಯಗಳಲ್ಲಿ ಮಾಡಿಕೊಳ್ಳಲಿಕ್ಕೆ ಬರುವದು. ಅಮೇರಿಕನ್ನರು ಚೀನಿಯರನ್ನು ಕೆಟ್ಟರೀತಿ ಯಿಂದ ನಡೆಯಿಸಿಕೊಂಡಾಗ, ಚೀನಿಯರು ಅಮೇರಿಕೆಯ ವಸ್ತು ಗಳಿಗೆ ಬಹಿಷ್ಕಾರವನ್ನು ಹಾಕಿದರು. ಅಮೇರಿಕೆಯೂ ಇಂಗ್ಲಿಷರ ವಸ್ತು ಗಳಿಗೆ ಬಹಿಷ್ಕಾರ ಹಾಕಿತ್ತು. ಇದೇ ಬಹಿಷ್ಕಾರವನ್ನು ಬ್ರಿಟಿಶರ ವಿರುದ್ಧವಾಗಿ ಭಾರತೀಯರು ಏಕೆ ಉಪಯೋಗಿಸಬಾರದು?'' ಎಂದು ಆಹ್ವಾನಿಸಿದರು. 'ಮೊದಲು ದೇಶಿವಸ್ತುಗಳನ್ನು ಸಿದ್ಧಪಡಿಸಿರಿ. ಆ ನಂತರ ಉಪಯೋಗಿಸುವ ವ್ರತ ಸ್ವೀಕರಿಸಿರಿ,' ಎಂದು ಮಂದಗಾಮಿಗಳ ವಾದ. ಪ್ರತಿಜ್ಞೆಮಾಡಿ ಬಟ್ಟೆಯಿಲ್ಲದೆ ಬತ್ತಲೆ ತಿರುಗಬೇಕೆ ? ಎಂಬ ಪ್ರಶ್ನೆಯಿರದೆ, ಬೇಡಿಕೆಯಿಲ್ಲದೆ ಬಟ್ಟೆ ಹುಟ್ಟುದಿಲ್ಲೆಂಬುದನ್ನು ಮರೆಯಬಾರದೆಂದು ಅದಕ್ಕೆ ಟಿಳಕರ ಉತ್ತರ. ''ನಮಗೆ ಬೇಕಾದಷ್ಟು ದೇಶಿವಸ್ತುಗಳು ಸಿಗದಿದ್ದರೆ, ಆಗ ಇಂಗ್ಲಂಡದ ವಸ್ತುಗಳನ್ನು ತೆಗೆದುಕೊಳ್ಳದೆ ಬೇರೆ ದೇಶಗಳ ವಸ್ತುಗಳನ್ನು ತೆಗೆದುಕೊಂಡು, ನಮ್ಮನ್ನು ದುರ್ಲಕ್ಷಿಸುತ್ತಿರುವ ಜನಾಂಗಕ್ಕೆ ನಮ್ಮ ಭಾವನೆಯ ತೀವ್ರತೆಯನ್ನು ಏಕೆ ತೋರಿಸಬಾರದು? ರಾಜ್ಯ ಕರ್ತರ ವಿರುದ್ಧ ಬಂಡು ಹೂಡುವದು ಕಾಯದೆಭಂಗವಾಗಬಹುದು. ಇಲ್ಲವೆ ಅಪರಾಧವಾಗಬಹುದು. ಆದರೆ ಬಹಿಷ್ಕಾರವು ಹಾಗಲ್ಲ. ಬಿನ್ನಹ ಬೇಡಿಕೆಗ ಳಿಂದ ಕಾರ್ಯವಾಗದಿದ್ದಾಗ ಆ ಬೇಡಿಕೆಗೆ ಬಹಿಷ್ಕಾರದ ಬಲವನ್ನು ಜೋಡಿಸಿ, ಸ್ವದೇಶಿ ಹಾಗೂ ಬಹಿಷ್ಕಾರವೆಂಬ ದ್ವಿಮುಖ ತೋಫನ್ನು ಉಪಯೋಗಿಸಿ, ನಮ್ಮ ಉದ್ದೇಶವನ್ನು ಸಾಧಿಸುವಲ್ಲಿ ಯಾವ ಅಪರಾಧ ವೆಂದೇ ಟಿಳಕರಪ್ರಶ್ನೆ. ಬಹಿಷ್ಕಾರವನ್ನು ಭಾರತೀಯರೆಲ್ಲರು ಪುರಸ್ಕರಿಸಿದರೆ ಸಶಸ್ತ್ರ ಕ್ರಾಂತಿಯಿಂದ ಬ್ರಿಟಿಶರಿಗೆ ಆಗುವ ಹಾನಿಗಿಂತಲೂ ಹೆಚ್ಚಾದ

ಹಾಸಿಯು ಸಂಭವಿಸಿ, ಬ್ರಿಟಿಶರು ಭಾರತದ ಬೇಡಿಕೆಗಳನ್ನು ವಿಚಾರಮಾಡ ಬೇಕಾಗುತ್ತದೆ'' ಎಂದು ಉತ್ತರಿಸಿ, ಎಲ್ಲರ ಬಾಯಿಗಳಿಗೂ ಬೀಗ ಹಾಕಿದರು.

ಟಿಳಕರ ಈ ಸಮರ್ಥನೆಯ ಅನುಭವವು ರಾಷ್ಟ್ರಕ್ಕೆ ಕೂಡಲೇ ಬಂದಿತು. ಆಂಗ್ಲೋ ಇಂಡಿಯನ್ ಪಕ್ಷಪಾತಿಯಾದ 'ಇಂಗ್ಲೀಷಮನ್' ಪತ್ರಿಕೆಯು ಈ ಬಹಿಷ್ಕಾರದಿಂದ ಮ್ಯಾಂಚೆಸ್ಟರದ ವ್ಯಾಪಾರವೆಲ್ಲ ಹಾಳಾಗಿ ಹೋಗಿದೆ. ಎಂದು ಬರೆವದ್ದನ್ನು ಹಿಂದೆ ಉಲ್ಲೇಖಿಸಿದ್ದೇವೆ. ಅದು ಹಾಗೆಯೇ ಬರೆಯುತ್ತ ''ಸರಕಾರದ ಶತ್ರುಗಳು ಬಹಿಷ್ಕಾರದ ಬ್ರಹ್ಮಾಸ್ತ್ರವನ್ನು ಹೊರತೆಗೆದು ಬ್ರಿಟಿಶರಿಗೆ ಆಗುವ ಲಾಭವನ್ನು ಪೂರ್ಣ ತಡೆವಿದ್ದಾರೆ. ಎಂಬ ಮಾತು ಬ್ರಿಟಿಶ ಜನಾಂಗಕ್ಕೂ ಭಾರತ ಸರಕಾರಕ್ಕೂ ತಿಳಿಯುವ ಸಮಯವು ಬಂದೊದಗಿದೆ. ಸರಕಾರವು ಬಹಿಷ್ಕಾರದ ವಿಷಯದಲ್ಲಿ ಏನು ಮಾಡುವದು? ಎಂಬುದೇ ನಮ್ಮ ಎದುರಿಗಿರುವ ಪ್ರಶ್ನೆ. ಬಹಿಷ್ಕಾರವನ್ನು ಹೀಗೆಯೇ ನಡೆಯಗೊಡ ವದು ಸಾಧ್ಯವಿಲ್ಲ. ಸಶಸ್ತ್ರ ಬಂಡಾಯಕ್ಕಿಂತಲೂ ಈ ಬಹಿಷ್ಕಾರದ ಶಸ್ತ್ರ ದಿಂದಲೇ ಭಾರತದೊಡನೆ ಇರುವ ಬ್ರಿಟಿಶರ ಸಂಬಂಧವು ಕಡಿದು ಹೋಗು ವದು.'' ಎಂದು ಪ್ರಸಿದ್ಧಿಸಿತು.

ಅತ್ತ ಬಂಗಾಲದಲ್ಲಿ ಅರವಿಂದ ಘೋಷರೂ ಬಿಪಿನಚಂದ್ರಪಾಲರೂ ಮೋತಿಲಾಲ ಘೋಷ ಮೊದಲಾದವರು ಹೋರಾಟ ಹೂಡಿದರು. ರಾಮಸೆ ಮೆಕ್ಡೋನಾಲ್ಡರು 'ನಿಮ್ಮ ಗುರಿಯೇನು ?' ಎಂದು ಅರವಿಂದರನ್ನು ಕೇಳಿದೊಡನೆಯೇ ಅವರು 'ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿ' ಎಂದು ತಟ್ಟನೆ ಹೇಳಿಬಿಟ್ಟರು.

ಸ್ವದೇಶಿ ಹಾಗೂ ಬಹಿಷ್ಕಾರದ ಪರಿಣಾಮವಾಗಿ ಬಂಗಾಲದಲ್ಲಿ ಅನೇಕ ಬಗೆಯ ವಿಧಾಯಕ ಕಾರ್ಯಗಳು ನಡೆದವು. ಸಾಬಾಣದ ಕಾರ್ಖಾನೆಗಳೂ ಕಡ್ಡಿಯ ಪೆಟ್ಟಿಗೆಯ ಕಾರಖಾನೆಗಳೂ ಪ್ರಾರಂಭವಾದವು. ನೇಕಾರರು ಸ್ವದೇಶಿ ಚಳವಳಿಯಿಂದ ತಮಗೆ ಬಹಳ ಲಾಭವಾಗಿದೆ ಎಂದು ಸಾರ್ವಜನಿಕವಾಗಿ ಸಾರಿದರು. ಬಂಗಾಲದ ಮುಖಂಡರೆಲ್ಲರೂ ಪ್ರಯ ತ್ನಿಸಿ ೧೮ ಲಕ್ಷ ರೂಪಾಯಿಗಳನ್ನು ಕೂಡಿಸಿ, ವಂಗಲಕ್ಷ್ಮೀ ಮಿಲ್ಲನ್ನು ಸ್ಥಾಪಿಸಿದರು. ಬಂಗಾಲ ನ್ಯಾಶನಲ್ ಬ್ಯಾಂಕ, ನ್ಯಾಶನಲ್ ಇನ್ಸೂರನ್ಸ ಕಂಪನಿ, ಹಿಂದುಸ್ಥಾನ ಕೋ. ಆಪರೇಟಿವ್ಹ ಇನ್ಸೂರನ್ಸ ಕಂಪನಿಗಳು ಇದೇ

ದಿನಕ್ಕೆ ಬ್ರಿಟಿಶರ ಆಳಿಕೆಯು ಅನುದಾರ ಹಾಗೂ ಜುಲುಮೆಯದಾಗುತ್ತ ನಡೆದಿದೆ. ನಾವು ಅವರ ಮೋಹದ ಮಾತುಗಳಿಗೆ ಮರುಳಾಗದೆ ನಮ್ಮಲ್ಲಿರುವ ಶಕ್ತಿಯನ್ನು ನಾವು ಪ್ರಕಟಮಾಡಬೇಕು. ಔರಂಗಜೇಬನ ಜುಲುಮೆಯು ಹೆಚ್ಚಾಗಲು ರಜಪೂತರು ವಿರೋಧಿಸಿದ್ದನ್ನು ಜನತೆಯು ಮರೆಯಕೂಡದು.' ಎಂದು ಹೇಳಿದರು. ಅದರಂತೆಯೇ ಮರುದಿನ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುವಾಗ, "ಸರಕಾರವು ವಂಗಭಂಗವನ್ನು ಮಾಡಿದ್ದರೂ ಬಂಗಾಲಿಗಳು ಮನಸ್ಸುಮಾಡಿದರೆ ಅದು ಅಭಂಗವಾಗಿಯೇ ಉಳಿಯುವದು" ಎಂದು ಉಪದೇಶಿಸಿದರು. ಕೊನೆಯ ದಿನ ಗಂಗಾಸ್ನಾನದ ನಂತರ ಸಮಾರಂಭವು ಕೊನೆಗೊಂಡಿತು.

ಇತ್ತ ಚಳವಳಿಯು ರಭಸದಿಂದ ನಡೆದಿರಲು ಅತ್ತ ಕಾಂಗ್ರೆಸ್ಸಿನ ಸಿದ್ಧತೆ ನಡೆದಿದ್ದಿತು. ಎಲ್ಲರಲ್ಲಿಯೂ ಮತ್ಸರವನ್ನುಂಟುಮಾಡುವಷ್ಟು ಲೋಕಪ್ರಿಯತೆಯು ಟಿಳಕರಿಗೆ ಲಭಿಸಿದ್ದಿತು. ತರುಣರಿಗೆ, ವಿಶೇಷತಃ ಬಂಗಾಲಿಗಳಿಗೆ ಟಿಳಕರು ಕಲಕತ್ತೆಯ ಅಧಿವೇಶನಕ್ಕೆ ಅಧ್ಯಕ್ಷರಾಗಬೇಕೆಂದು ಅನಿಸುತ್ತಿದ್ದಿತು. ಬಂಗಾಲದ ಮುಂದಾಳುಗಳಾದ ಅರವಿಂದರು ಟಿಳಕರ ಹೆಸರನ್ನು ಅಧ್ಯಕ್ಷ ಸ್ಥಾನಕ್ಕೆ ಸೂಚಿಸಿದರು. ಪಂಜಾಬ, ಮಧ್ಯಪ್ರಾಂತಗಳ ಕಾಂಗ್ರೆಸ್ ಕಮಿಟಿಗಳೂ ಗೊತ್ತುವಳಿಗಳನ್ನು ಮಾಡಿದವು. ಇದೆಲ್ಲವನ್ನು ಕಂಡು ಮಂದಗಾಮಿಗಳು ಕಾಂಗ್ರೆಸ್ಸು ಎಲ್ಲಿ ತಮ್ಮ ಕೈಬಿಡುವದೋ ಎಂದು ಗಾಬರಿಯಾದರು ಟಿಳಕರ ಧೈರ್ಯ, ಸಾಹಸವೃತ್ತಿ, ಕರ್ತೃತ್ವಶಕ್ತಿಗಳು ರಾಷ್ಟ್ರದ ಮನವನ್ನೇ ಸೆಳೆದಿರುವದನ್ನು ಅರಿತಿದ್ದರು. ಆದ್ದರಿಂದ ಕಾಂಗ್ರೆಸ್ಸು ಒಮ್ಮೆ ಅವರ ಕೈಸೇರಿದರೆ ತೀರಿತು, ತಿರುಗಿ ತಮಗೆ ಅದರಲ್ಲಿ ಸ್ಥಾನವಿಲ್ಲೆಂದು ವಿಚಾರಮಾಡಿ, ಅದನ್ನು ತಪ್ಪಿಸಲು ವೃದ್ಧರಾದ ದಾದಾಭಾಯಿ ನವರೋಜಿಯವರನ್ನು ಮೊರೆಹೊಕ್ಕರು. ಅವರು ಅಧ್ಯಕ್ಷ ಪದವನ್ನು ಒಪ್ಪಿಕೊಂಡರು. ಅವರ ಹೆಸರು ಸೂಚಿಸಿದರೆ ಯಾರೂ ವಿರೋಧಿಸುವದಿಲ್ಲೆಂದು ಅವರು ತಿಳಿದಿದ್ದರು. ಅದು ನಿಜವೂ ಇದ್ದಿತು. ಎಲ್ಲರೂ ಒಪ್ಪಿಕೊಂಡರು.

---

## ಸ್ವರಾಜ್ಯದ ಘೋಷಣೆ

ಅಧ್ಯಕ್ಷ ಪದದ ಕುಸ್ತಿಯಲ್ಲಿ ಯುಕ್ತಿಯಿಂದ ಗೆದ್ದೆವೆಂದು ಮೇಥಾ, ಗೋಖಲೆ ಪಕ್ಷದವರು ಒಳಗೊಳಗೆ ಹಿಗ್ಗಿದರು. 'ನಮ್ಮನ್ನು ಒಳ್ಳೇ ಸಂಕಟದಿಂದ ರಕ್ಷಿಸಿದಿರಿ' ಎಂದು ನವರೋಜಿಯವರಿಗೆ ತಂತಿಕೊಟ್ಟು, ಸುರೇಂದ್ರರು ಅದನ್ನು ವ್ಯಕ್ತಪಡಿಸಿದರು. ನವರೋಜಿಯವರು ಟಿಳಕ ಪಕ್ಷದ ಉಗ್ರ ಕಾರ್ಯಕ್ರಮದ ಮೇಲೆ ತಣ್ಣೀರೆರಚುವರೆಂದು ಮುಂದಗಾಮಿಗಳು ಭಾವಿಸಿದ್ದರು. ಆದರೆ ಟಿಳಕರು ಮಾತ್ರ ಕಾಂಗ್ರೆಸ್ಸಿಗಿಂತ ೧೦ ದಿನ ಮೊದಲೇ "ಭಾರತೀಯರು ಹೂಡಿದ ಚಳವಳಿಯ ಮೇಲೆ ಕೇವಲ ಮುಂದ ಪಕ್ಷೀಯರನ್ನು ಸಂತುಷ್ಟಗೊಳಿಸುವದಕ್ಕಾಗಿ ದಾದಾಭಾಯಿಯವರು ಎಂದೂ ನೀರು ಸುರುವಲಾರರು. ಮತ್ತು ಅವರು ಉಗ್ರವಾದಿಗಳಿಗಿಂತ ಉಗ್ರವಾದಿಗಳಾಗಿದ್ದಾರೆ" ಎಂದು ಭವಿಷ್ಯ ನುಡಿದಿದ್ದರು.

ಕಾಂಗ್ರೆಸ್ ಅಧಿವೇಶನಕ್ಕೆ ಎಂದೂ ಬಾರದಷ್ಟು ಮಹತ್ವ ಬಂದಿದ್ದಿತು. ಬಹಿಷ್ಕಾರ ಹಾಗು ಸ್ವದೇಶಿಗಳನ್ನು ರಾಜಕೀಯ ಪ್ರತಿಕಾರದ ಅಸ್ತ್ರಗಳೆಂದು ರಾಜಕಾರಣದಲ್ಲಿ ಉಪಯೋಗಿಸಲು ರಾಷ್ಟ್ರೀಯ ಸಭೆಯು ಒಪ್ಪಬೇಕೋ ಬೇಡವೋ ಎಂಬುದೇ ಕಾಂಗ್ರೆಸ್ಸಿನ ಮುಂದಿರುವ ಮಹತ್ವದ ಪ್ರಶ್ನೆಯಾಗಿದ್ದಿತು. ಆದುದರಿಂದ ಸರ್ವಪ್ರಾಂತದ ಮುಖಂಡರು ಆಲಸ್ಯತೊರೆದು ಕಾಂಗ್ರೆಸ್ಸಿಗೆ ಬಂದಿದ್ದರು. ೧೬೦೦ ಜನ ಪ್ರತಿನಿಧಿಗಳು ೨೦೦೦೦ ಪ್ರೇಕ್ಷಕರೂ ರಾಷ್ಟ್ರದ ಭವಿತವ್ಯವನ್ನು ನಿರ್ಧರಿಸಲು ಆತುರರಾಗಿದ್ದರು. ಉಗ್ರ ಮುಂದ ಪಕ್ಷಗಳ ಮುಖಂಡರೆಲ್ಲರೂ ತಮ್ಮ ತಮ್ಮ ಶಸ್ತ್ರಗಳೊಂದಿಗೆ ಸಜ್ಜಾಗಿದ್ದರು.

ವೃದ್ಧ ಪಿತಾಮಹರಾದ ದಾದಾಭಾಯಿಯವರ ಅಧ್ಯಕ್ಷ ಭಾಷಣವು ಅತ್ಯಂತ ಸ್ಫೂರ್ತಿದಾಯಕವೂ ಕ್ರಾಂತಿಕಾರಕವೂ ಆಯಿತು. ಭಾರತದ ಸರ್ವದುಃಖಗಳ ನಿವಾರಣೆಗೆ ಸ್ವರಾಜ್ಯವೊಂದೇ ಉಪಾಯವೆಂದು ಸಾರಿದರು. ಇಷ್ಟೇ ಅಲ್ಲ, ಸ್ವದೇಶಿ, ಬಹಿಷ್ಕಾರ, ರಾಷ್ಟ್ರ ಶಿಕ್ಷಣ ಇವೇ ಮೊದಲಾದ ಸ್ವಾವಲಂಬನದ ಮಾರ್ಗವನ್ನೇ ರಾಷ್ಟ್ರವು ಅಂಗೀಕರಿಸ

ಬೇಕೆಂದು ಘೋಷಿಸಿದರು. "ನಾವು ಭಿಕ್ಷೆಬೇಡುವದಿಲ್ಲ. ನಮಗೆ ನ್ಯಾಯ ಬೇಕಾಗಿದೆ. ನಾವು ಬ್ರಿಟಿಶರ ನಾಗರಿಕರು ಎಂಬ ದೃಷ್ಟಿಯಿಂದ ಬ್ರಿಟಿಶ ನಾಗರಿಕರ ಎಲ್ಲ ಹಕ್ಕಗಳು ನಮಗೆ ಸಲ್ಲಲೇಬೇಕು. ಆ ಹಕ್ಕುಗಳೇನೆಂಬು ದನ್ನು ಒಂದೇ ಶಬ್ದದಲ್ಲಿ ಹೇಳಬೇಕಾದರೆ ಸ್ವರಾಜ್ಯ. ಸ್ವಸತ್ತೆ. ಬ್ರಿಟಿಶ ವಸಾಹತುಗಳಲ್ಲಿ ನಡೆಯುತ್ತಿರುವ ರಾಜ್ಯಪದ್ಧತಿಯೇ ಭಾರತಕ್ಕೂ ಅನ್ವ ಯಿಸಬೇಕು" ಎಂದು ಸ್ವರಾಜ್ಯದ ವಿವರಣೆಯನ್ನು ಕೊಟ್ಟರು.

ಕಾಂಗ್ರೆಸ್ಸಿನ ವ್ಯಾಸಪೀಠದಿಂದ ಸ್ವರಾಜ್ಯದ ಉಚ್ಚಾರವಾದೊಡನೆ ಜನತೆಯಲ್ಲೆಲ್ಲ ನವಶಕ್ತಿಯ ಸಂಚಾರವಾದಂತಾಯಿತು. ಕಾಂಗ್ರೆಸ್ಸು ಈ ಹಾದಿಯನ್ನು ಹಿಡಿಯುವದೆಂದು ಮಂದಪಕ್ಷಿಗಳ ಕನಸು ಮನಸ್ಸಿನಲ್ಲಿ ಕೂಡ ಇರಲಿಲ್ಲ. ಅಕ್ಕಸಾಲಿಗನೇ ಕಿವಿಚುಚ್ಚಿದಂತಾಯಿತು. ರಾಷ್ಟ್ರೀಯ ಸಭೆಗೆ ೨೧ ವರ್ಷಗಳು ಮುಗಿದಿದ್ದವು. ಅದು ವಯಸ್ಸಿಗೆ ಬಂದಿದ್ದಿತು. ಅದು ವಯಸ್ಸಿಗೆ ತಕ್ಕಂತೆ ಹೊಸಹಾದಿಯನ್ನು ಹಿಡಿಯುವದು ಸ್ವಾಭಾವಿಕ ವಿದ್ದಿತು. ರಾಷ್ಟ್ರೀಯ ಸಭೆಗೆ ಸ್ವರಾಜ್ಯದ ವಿವಾಹ ಸಂಬಂಧವನ್ನು ಮಾಡಿ ಅಧ್ಯಕ್ಷರು ಆಶೀರ್ವದಿಸಿದರು. ಈ ರಾಷ್ಟ್ರೀಯ ಸಭೆಯ ಮುಖ್ಯ ಗುರಿಯು ಸ್ವರಾಜ್ಯ ಸಂಪಾದನೆಯೇ ಎಂದು ಮತ್ತೆ ಮತ್ತೆ ಹೇಳಿದರು. ಕೊನೆಯ ಭಾಷಣದಲ್ಲಿ ತರುಣರನ್ನುದ್ದೇಶಿಸಿ, "ಈ ಉದ್ದೇಶವನ್ನು ಕಣ್ಣೆ ದುರಿಗೆ ಇಟ್ಟುಕೊಂಡು ತರುಣರು ಕಾರ್ಯ ಪ್ರವೃತ್ತರಾದರೆ ಹಳೆಯ ಜನರು ಈ ಇಪ್ಪತ್ತು ವರ್ಷ ಪಟ್ಟ ಪರಿಶ್ರಮವು ಸಾರ್ಥಕವಾಯಿತೆಂದೂ ಅದರ ಫಲವು ನಮಗೆ ದೊರಕಿತೆಂದೂ ನಾನು ತಿಳಿಯುವೆ" ಎಂದು ಹೇಳಿದರು.

ದಾದಾಭಾಯಿಯವರ ಸ್ವರಾಜ್ಯ ಘೋಷಣೆಯಿಂದ ಆಂಗ್ಲೋ ಇಂಡಿ ಯನ್ನರ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು. ದಾದಾಭಾಯಿಯವರ ಉಗ್ರವಾದಿಗಳಿಗೆ ಶರಣಾಗತರಾದರೆಂದು ಎಷ್ಟೋ ಪತ್ರಿಕೆಗಳು ಟೀಕಿಸ ಹತ್ತಿದವು. ಟಾಯಿಮ್ಸಪತ್ರಿಕೆಯಂತೂ ವಿಷವನ್ನೇ ಕಾರಿತು. "ಇಂಗ್ಲಂಡದ ನಾಗರಿಕರಂತೆ ಭಾರತೀಯರಿಗೆ ರಾಜಕೀಯ ಹಕ್ಕುಗಳು, ಅನುಕೂಲತೆಗಳು, ಮತದಾನದ ಅಧಿಕಾರಗಳು ದೊರೆಯಬೇಕೆಂದು ಯಾವ ಇತಿಹಾಸದಲ್ಲಿಯೂ ಉಲ್ಲೇಖಿಸಿಲ್ಲ. ಮತ್ತು ಈ ಬೇಡಿಕೆಯು ಕಾಯದೆ

ಬದ್ಧವಾಗಿಯೂ ಇಲ್ಲ. ಭಾರತವನ್ನು ಕತ್ತಿಯಿಂದ ಗೆದ್ದಿದ್ದೇವೆ. ಅದೇ ಬಲದಿಂದ ಆಳುತ್ತಿದ್ದೇವೆ. ಆದುದರಿಂದ ಸ್ವರಾಜ್ಯವನ್ನು ಬೇಡುವ ದಾದಾ ಭಾಯಿಯಂಥವರು ಈ ಮಾತನ್ನು ಮರೆಯಬಾರದು. ಬ್ರಿಟಿಶರ ಹಾಗೂ ಅವರನ್ನು ವಿರೋಧಿಸುವವರ ನಡುವೆ ಈ ಬಿಚ್ಚುಗತ್ತಿಯು ಇರುವದೆಂಬು ದನ್ನು ಲಕ್ಷ್ಯದಲ್ಲಿಡಬೇಕು'' ಎಂದು ಬರೆಯಿತು.

ಮಂದಪಕ್ಷೀಯರು ಸ್ವರಾಜ್ಯದ ಹಾಗೂ ಬಹಿಷ್ಕಾರದ ಗೊತ್ತುವಳಿಗೆ ಕಾಂಗ್ರೆಸ್ಸಿನ ಮುದ್ರೆ ಬಿದ್ದರೆ ಕೂಡಲೆ ಅದು ಕಾರ್ಯಕಾರಿಯಾಗುವದರಿಂದ ಇವುಗಳನ್ನು ವಿರೋಧಿಸಿಯೇ ತೀರಬೇಕೆಂದು ಟೊಂಕಕಟ್ಟಿದರು. ವಿಷಯ ನಿಯಾಮಕ ಕಮೀಟಿಯಲ್ಲಿ ರಾಷ್ಟ್ರೀಯ ಶಿಕ್ಷಣ ಗೊತ್ತುವಳಿಯು ಏನೂ ಅಡೆತಡೆ ಇಲ್ಲದೆ ಪಾಸಾಯಿತು. ಸ್ವದೇಶೀ ಗೊತ್ತುವಳಿಯು ಸ್ವಲ್ಪ ತಿಕ್ಕಾಟದಿಂದ ಪಾಸಾಯಿತು. ''ವಂಗಭಂಗದ ವಿರುದ್ಧವಾಗಿ ಬಂಗಾಲ ದಲ್ಲಿ ಪ್ರಾರಂಭವಾದ ಬಹಿಷ್ಕಾರದ ಚಳವಳಿಯು ಕಾಯದೆಗನುಸರಿಸಿ ಇದ್ದಿತು. ಮತ್ತು ಇದೆ'' ಎಂದು ಕಾಂಗ್ರೆಸ್ಸಿನ ಅಭಿಪ್ರಾಯವಿದೆ, ಎಂಬ ಗೊತ್ತುವಳಿಯ ಮೇಲೆ ತಿಕ್ಕಾಟಕ್ಕೆ ಆರಂಭವಾಯಿತು. ಉಗ್ರವಾದಿಗಳು ಈ ಗೊತ್ತುವಳಿಯು ಇಡೀ ದೇಶಕ್ಕೆ ಅನ್ವಯಿಸುವದೆಂದೂ ಮಂದಪಕ್ಷಿಗಳು ಅದು ಬಂಗಾಲದ ಮಟ್ಟಿಗೆ ಮಾತ್ರ ಮರ್ಯಾದಿತವೆಂದೂ ಪ್ರತಿಪಾದಿಸ ಹತ್ತಿದರು. ಈ ವಾದ ವಿವಾದವು ವಿಕೋಪಕ್ಕೆ ಹೋಯಿತು. ಬಂಗಾಲದ ಮುಂದಾಳುಗಳಾದ ಬಿಪಿನಚಂದ್ರ ಪಾಲ, ಅರವಿಂದ ಘೋಷ ಮೊದಲಾದ ವರು ಸಭೆ ಬಿಟ್ಟು ಎದ್ದು ಹೋದರು. ಖಾಪರ್ಡೆಯವರು ಕೂಡ ಹೊರ ಬಿದ್ದರು. ಕಾಂಗ್ರೆಸ್ಸು ಎಲ್ಲಿ ಮುರಿದು ಹೋಗುವದೋ ಎಂಬ ಭೀತಿ ಯುಂಟಾಯಿತು. ಟಿಳಕರು ನಡುವೆ ಬಿದ್ದು ಎಲ್ಲವನ್ನು ಸರಿಪಡಿಸಿದರು. ಈ ಸಮಯದಲ್ಲಿ ಉಪಸ್ಥಿತರಿದ್ದ ಶ್ರೀ ದುರಾಣಿಯವರು ಕೆಳಗಿನಂತೆ ಈ ಪ್ರಸಂಗವನ್ನು ವರ್ಣಿಸಿದ್ದಾರೆ.

"ತಮ್ಮ ಅನುಯಾಯಿಗಳೆಲ್ಲರೂ ಹೊರಬಿದ್ದುಹೋದರೂ ಟಿಳಕರು ಮಾತ್ರ ಕೊನೆಯವರಿಗೂ ಗಟ್ಟಿಯಾಗಿ ಕುಳಿತಿದ್ದರು. ಬೆಳಗಿನವರೆಗೆ ಚರ್ಚೆ ನಡೆದರೂ ಏನೂ ನಿರ್ಣಯವಾಗಲಿಲ್ಲ. ಆಗ ಟಿಳಕರು ತಮ್ಮ ನಿವಾಸ ಸ್ಥಾನಕ್ಕೆ ಬಂದು ಮುಂದಿನ ದಾರಿಯನ್ನು ಹುಡುಕಹತ್ತಿದರು. ಅವರು ವಿಚಾರಮಾಡಿ ಬಹಿಷ್ಕಾರ ಯೋಗದ ಮೇಲೆ ನಾಲ್ಕು ಉಪಸೂಚನೆ

ಗಳನ್ನು ಸಿದ್ಧಪಡಿಸಿದರು. ತಮ್ಮ ಹೆಸರಿನಲ್ಲಿ ಒಂದು, ಖಾಪರ್ಡೆಯವರ ಹೆಸರಿನಲ್ಲಿ ಇನ್ನೊಂದು. ಎರಡನ್ನೂ ಕಾರ್ಯದರ್ಶಿಗಳಾಗಿದ್ದ ಸುರೇಂದ್ರ ನಾಥ ಬ್ಯಾನರ್ಜಿಯವರಕಡೆಗೆ ಕಳಿಸಿಕೊಟ್ಟರು. ಉಳಿದವೆರಡರಲ್ಲಿ ಬಿಪಿನ ಚಂದ್ರಪಾಲರ ಹೆಸರಿನಲ್ಲಿ ಒಂದು, ಮತ್ತೊಂದು ಅರವಿಂದ ಘೋಷರ ಹೆಸರಿನಲ್ಲಿದ್ದವು. ಅವುಗಳನ್ನು ಕಾಂಗ್ರೆಸ್ಸಿನ ಕಾರ್ಯದರ್ಶಿಗಳಿಗೆ ಕಳಿಸಲು ಅವರಿಗೆ ತಿಳಿಸಿದ್ದರು. ಟಿಳಕರು ಏನು ನಡೆಸಿರುವರೆಂಬುದೇ ಯಾರಿಗೂ ತಿಳಿಯಲಿಲ್ಲ. ಟಿಳಕರು ಖಾಪರ್ಡೆಯವರಿಗೆ 'ನನ್ನ ಹಾಗೂ ಪಾಲರ ಉಪ ಸೂಚನೆಗಳನ್ನು ಬ್ಯಾನರ್ಜಿಯವರು ಸ್ವೀಕರಿಸುವದಿಲ್ಲ. ಆದರೆ ನಿಮ್ಮ ಹಾಗೂ ಘೋಷರ ಸೂಚನೆಗಳು ಖಂಡಿತವಾಗಿ ಮನ್ನಿಸಲ್ಪಡುವವು" ಎಂದು ಹೇಳಿದರು. ಅಷ್ಟರಲ್ಲಿ ಒಬ್ಬ ಸ್ವಯಂಸೇವಕನು ಒಂದು ಪತ್ರವನ್ನು ತಂದು ಟಿಳಕರ ಕಡೆಗೆ ಕೊಟ್ಟನು. ಅದರಲ್ಲಿ ಸುರೇಂದ್ರರು 'ಖಾಪರ್ಡೆ ಹಾಗು ಘೋಷರ ಉಪಸೂಚನೆಗಳು ನಮಗೆ ಮಾನ್ಯವಿವೆ. ನೀವು ನಿಮ್ಮ ಉಪ ಸೂಚನೆಯನ್ನು ದಯವಿಟ್ಟು ತಿರುಗಿ ತಕ್ಕೊಳ್ಳಿರಿ. ಅದರಂತೆ ಪಾಲ ಬಾಬು ಗಳಿಗೂ ತಮ್ಮ ಸೂಚನೆಯನ್ನು ಮರಳಿ ತೆಗೆದುಕೊಳ್ಳಲು ನೀವು ಅವರ ಮನ ಒಲಿಸುವಿರಾ!' ಎಂದು ಬರೆದಿದ್ದರು. ಟಿಳಕರ ಭವಿಷ್ಯವು ನಿಜ ವಾಯಿತು. ಟಿಳಕರು ಬುದ್ಧಿಪುರಸ್ಸರವಾಗಿ ಈ ಸೂಚನೆಗಳನ್ನು ಸಿದ್ಧಪಡಿಸಿ ದ್ದರು. ತಮ್ಮ ಹಾಗೂ ಪಾಲರ ಸೂಚನೆಗಳು ಸರಳವಿದ್ದು ಭಾಷೆಯು ಮಾತ್ರ ಉಗ್ರವಾಗಿ ಇದ್ದಿತು. ಖಾಪರ್ಡೆಯವರ ಸೂಚನೆಯು ಸುಂದರ ಶಬ್ದಗಳಿಂದ ಕೂಡಿದ್ದರೂ ಅರ್ಥವು ಮಾತ್ರ ಉಗ್ರವಾಗಿದ್ದಿತು. ಟಿಳಕರು ಈ ಪ್ರಕಾರವಾಗಿ ಯುಕ್ತಿಯಿಂದ ತಮ್ಮ ಕಾರ್ಯವನ್ನು ಸಾಧಿಸಿಕೊಂಡರು.

ಕಾಂಗ್ರೆಸ್ಸು ಯಾದವೀ ಕಲಹದಿಂದ ಮುರಿದು ಹೋಗುವದೆಂದು ಹಿಗ್ಗಿದ್ದ ಆಂಗ್ಲೋ ಇಂಡಿಯನ್ನರು ಮರುದಿವಸ ಕಾಂಗ್ರೆಸ್ಸ ಅಧಿವೇಶನವು ಯಶಸ್ವಿಯಾಗಿ ಕೊನೆಗೊಂಡುದನ್ನು ಕಂಡು ನಿರಾಶರಾದರು. ಕಾಂಗ್ರೆಸ್ಸು ಸ್ವರಾಜ್ಯ, ರಾಷ್ಟ್ರೀಯ ಶಿಕ್ಷಣ, ಸ್ವದೇಶಿ, ಹಾಗೂ ಬಹಿಷ್ಕಾರದ ಗೊತು ವಳಿಗಳನ್ನು ಸ್ವೀಕರಿಸಿತು.

ಬಿರುಗಾಳಿಗೆ ಸಿಕ್ಕ ಕಾಂಗ್ರೆಸ್ಸನ್ನು ಉಳಿಸಿದ ಶ್ರೇಯಸ್ಸೆಲ್ಲವೂ ಟಿಳಕ ರಿಗೆ ಎಂದು ದುರಾಣಿಯವರು ಉಲ್ಲೇಖಿಸಿದ್ದಾರೆ. ಬ್ರಿಟಿಶ ರಾಜ್ಯಾಧಿಕಾರಿ

ಗಳೊಡನೆ ಹೋರಾಡುವಾಗ ರಾಷ್ಟ್ರದಲ್ಲಿ ಐಕ್ಯವು ಅವಶ್ಯವೆಂಬುದನ್ನೂ ಸಂಯುಕ್ತರಾಗಿಯೇ ಹೋರಾಡಬೇಕೆಂಬುದನ್ನೂ ಅರಿತ ಮುತ್ಸದ್ಧಿಗಳಾದ ಟಿಳಕರು ಕಾಂಗ್ರೆಸ್ಸಿನಲ್ಲಿ ಒಡಕು ಹುಟ್ಟದಂತೆ ಪ್ರಯತ್ನಿಸಿದರು. ಸ್ವದೇಶಿ ಗೊತ್ತುವಳಿಯನ್ನು ಮಂಡಿಸುವಾಗ, ಟಿಳಕರು ಕಾಂಗ್ರೆಸ್ಸು ಸಮಾಧಾನಕರ ವಾದ ನಿರ್ಣಯ ಕೈಕೊಂಡದ್ದಕ್ಕಾಗಿ ಆನಂದವನ್ನು ವ್ಯಕ್ತಪಡಿಸಿದರು. ಕಾಂಗ್ರೆಸ್ಸು ಅಕಾಲ ಮೃತ್ಯುವಿಗೆ ತುತ್ತಾಗುವದೆಂದು ಭವಿಷ್ಯವನ್ನು ನುಡಿದ ಆಂಗ್ಲೋ ಇಂಡಿಯನ್ನರ ಮಾತನ್ನು ಚಾಣಾಕ್ಷರೂ ಅನುಭವಿಕರೂ ಆದ ಅಧ್ಯಕ್ಷರು ಸುಳ್ಳು ಮಾಡಿದರೆಂದು ಹೇಳಿ ನಮ್ಮ ನಮ್ಮಲ್ಲಿಯ ಜಗಳಗಳು ಮುಗಿದು ಉಭಯ ಪಕ್ಷಗಳಲ್ಲಿ ಒಪ್ಪಂದವಾಗಿದೆ, ಎಂದು ಟಿಳಕರು ಸಾರಿದರು.

ಕಲಕತ್ತಾ ಕಾಂಗ್ರೆಸ್ಸಿನಲ್ಲಿ ರಾಷ್ಟ್ರೀಯ ಪಕ್ಷವು ವಿಜಯಿಯಾಯಿತು. ಮಂದಪಕ್ಷೀಯರಿಗೆ ಅಸಮಾಧಾನವಾಗಿದ್ದಿತು. ಮುಂದಿನ ಕಾಂಗ್ರೆಸ್ಸಿನ ಒಳಗಾಗಿಯೇ ಈ ಉಗ್ರಪಕ್ಷದ ಬಂಡನ್ನು ಮುರಿಯುವ ಎಣಿಕೆಯನ್ನು ಮಂದಪಕ್ಷೀಯರು ಹಾಕಹತ್ತಿದರು. ಫಿರೋಜಶಹಾ ಮೆಥಾರವರು ಊರಿಗೆ ಹೊರಟಾಗ ಟಿಳಕ ಹಾಗೂ ಗೋಖಲೆಯವರು ಭೆಟ್ಟಿಗೆ ಹೋಗಿದ್ದರು. ಆಗ ಮೆಥಾರವರು ತಮ್ಮ ಮನಸ್ಸಿನಲ್ಲಿದ್ದ ಸಿಟ್ಟನ್ನು ಹೊರಗೆಡವಿದರು. ಟಿಳಕರಿಗೆ ಮೆಥಾರವರು "ಬಹಿಷ್ಕಾರ ಯೋಗದ ಗೊತ್ತುವಳಿಯನ್ನು ನೀವು ಇಲ್ಲಿ ಪಾಸು ಮಾಡಿಕೊಂಡಿರಿ. ಆದರೆ ಮುಂಬಯಿಯಲ್ಲಿ ಪಾಸು ಮಾಡಿಕೊಳ್ಳಲು ಅಶಕ್ಯವಿದ್ದಿತು'' ಎಂದರು. ಕೂಡಲೇ ಟಿಳಕರು "ಮುಂಬಯಿಯು ಜಂಭ ವನ್ನು ತಾವು ಏನು ಕೊಚ್ಚುತ್ತೀರಿ? ಮುಂಬಯಿಯು ಸಿಂಹದ ಆಯಾಲ ವನ್ನು ಹಿಡಿದೆಳೆದು ಅದನ್ನು ಗುಹೆಗೆ ಹೊಗಿಸುವ ಸಾಮರ್ಥ್ಯವು ನನ್ನಲ್ಲಿದೆ ಎಂದು ನಾನು ಧೈರ್ಯದಿಂದ ಹೇಳಬಲ್ಲೆ'' ಎಂದು ಉತ್ತರಿಸಿದರು. ಇದು ಎಲ್ಲವೂ ಚೇಷ್ಟೆಯಲ್ಲಿ ನಡೆದಿದ್ದರೂ ಮುಂದಿನ ಜಗಳದ ಬೀಜಗಳು ಇದರಲ್ಲಿದ್ದವು.

---

# ಹೋರಾಟದ ತ್ರಿವಿಧ ರೂಪ

ಸ್ವರಾಜ್ಯದ ಘೋಷಣೆಯಿಂದ ರಾಷ್ಟ್ರೀಯ ಪಕ್ಷವು ಉತ್ತೇಜಿತ ವಾಯಿತು. ಘೋಷಣೆ ಮಾಡುವುದು ಸುಲಭ. ಆದರೆ ಅದರ ಗುರುತರವಾದ ಹೊಣೆ ಹೊರುವದು ಬಹುಕಷ್ಟವೆಂಬುದನ್ನು ಲೋಕಮಾನ್ಯರು ಮಾತ್ರ ಚನ್ನಾಗಿ ಅರಿತಿದ್ದರು. ಮಂದಪಕ್ಷೀಯರು ಸ್ವರಾಜ್ಯ ಹಾಗೂ ಬಹಿಷ್ಕಾರದ ಗೊತ್ತುವಳಿಗಳಿಗೆ ಹೃತ್ಪೂರ್ವಕ ಬೆಂಬಲವಿತ್ತಿಲ್ಲವೆಂಬುದನ್ನೂ ಅವರು ಊಹಿಸಿದ್ದರು. ಟಿಳಕರು ಬಹಿಷ್ಕಾರ ಹಾಗೂ ಸ್ವದೇಶಿ ಚಳವಳಿಗಳಿಂದ ಜನರಲ್ಲಿ ಜಾಗ್ರತೆಯನ್ನುಂಟು ಮಾಡಿ, ರಾಷ್ಟ್ರವನ್ನು ಸ್ವರಾಜ್ಯದತ್ತ ಮುನ್ನಡೆಸುವ ಹುಮ್ಮಸದಿಂದ ಕಾರ್ಯರಂಗಕ್ಕೆ ಇಳಿದರು.

ಕಲಕತ್ತೆಯಲ್ಲಿಯೇ ಟಿಳಕರು ಕಾರ್ಯ ಪ್ರಾರಂಭ ಮಾಡಿದರು. ಕಾಂಗ್ರೆಸ್ಸಿನ ನಂತರ ಪಾಲರ ಅಧ್ಯಕ್ಷತೆಯಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ 'ಹೊಸ ಪಕ್ಷವೂ ಅದರ ಮಾರ್ಗವೂ' ಎಂಬ ವಿಷಯದ ಮೇಲೆ ಮಾತನಾಡುತ್ತ ''ಉಗ್ರ ಮಂದಪಕ್ಷಗಳೆಂಬ ಭೇದವು ಸಾಪೇಕ್ಷವಿದೆ. ಪ್ರಗತಿಪಥದಲ್ಲಿ ಇಂದಿನ ಉಗ್ರವಾದಿಗಳು ನಾಳೆ ಮಂದಗಾಮಿಗಳಾಗುತ್ತಾರೆ, ಹಳಬರ ಅನುಭವ ಪಡೆದು ಅದರ ಬಲದಿಂದ ಹೊಸಬರು ಮುಂದುವರಿಯಬೇಕು. ಬಿನ್ನಹ ಬೇಡಿಕೆಗಳ ಮಾರ್ಗವನ್ನು ರಾಷ್ಟ್ರವು ತ್ಯಜಿಸಿದೆ. ಭಾರತದ ಭವಣೆಯ ನಿವಾರಣೆಗೆ ಸ್ವರಾಜ್ಯವೊಂದೇ ದಾರಿ. ಅದನ್ನು ದೊರಕಿಸಲು ಬಹಿಷ್ಕಾರವೇ ನಮ್ಮ ಶಸ್ತ್ರ'' ಎಂದು ಸಾರಿದರು.

ವಿಚಾರ ಮಾಡಿದಂತೆ ತಾವು ಗಂಭೀರವಾದ ಪರಿಸ್ಥಿತಿಯನ್ನು ಎದುರಿಸಬೇಕಾಗುವದೆಂದು ಟಿಳಕರಿಗೆ ಅನಿಸಹತ್ತಿತು. ಸುಶಿಕ್ಷಿತರಲ್ಲಿ ಜಾಗ್ರತಿಯು ಕಂಡು ಬಂದರೂ ಬಹುಜನ ಸಮಾಜವು ಉದಾಸೀನವಿದ್ದಿತು. ಅದನ್ನು ಹೊಡೆದೆಬ್ಬಿಸಿ, ಸ್ವರಾಜ್ಯದ ಹೋರಾಟಕ್ಕೆ ಅಣಿಗೊಳಿಸಬೇಕಾಗಿದ್ದಿತು. ಸರಕಾರವಂತೂ ದಿನದಿನಕ್ಕೆ ಕಠೋರವಾಗತೊಡಗಿತ್ತು. ಅಥನ್ನು ಎದುರಿಸಿ ರಾಷ್ಟ್ರದಬೇಡಿಕೆಗಳಿಗೆ ಸರಕಾರದ ಮನ್ನಣೆ ಪಡೆಯಬೇಕಾಗಿದ್ಧಿತು. ಮಂದಪಕ್ಷೀಯರಂತೂ ಬಹಿಷ್ಕಾರ ಹಾಗೂ ಸ್ವರಾಜ್ಯದ ಆಂದೋಲನೆಗಳನ್ನು

ಮುಂದಗೊಳಿಸಲು ಮುಂದಾಗಿದ್ದರು. ಈ ಮೂವರೊಡನೆ ಟಿಳಕರಿಗೆ ಹೋರಾಡಬೇಕಾಯಿತು. ಟಿಳಕರು ಯಾವುದಕ್ಕೂ ಎದೆಗುಂದದೆ ಸವ್ಯಸಾಚಿಯಂತೆ ಮೂರೂ ಕ್ಷೇತ್ರಗಳಲ್ಲಿ ಹೋರಾಟವನ್ನು ಹೂಡಿದರು.

ಟಿಳಕ ಹಾಗೂ ಗೋಖಲೆ ಗುಂಪುಗಳಲ್ಲಿ ಸ್ವಭಾವತಃ ಭೇದವಿದ್ದಿತು. ಭಾರತದಲ್ಲಿ ಬ್ರಿಟಿಶರ ಆಳಿಕೆಯು ಪ್ರಾರಂಭವಾದುದು ಈಶ್ವರೀವರವೆಂದು ಗೋಖಲೆ ಗುಂಪಿನವರು ತಿಳಿಯುತ್ತಿದ್ದರೆ, ಅದೊಂದು ದೇವರ ಶಾಪವೆಂದು ಟಿಳಕರ ಗುಂಪಿನವರು ಭಾವಿಸುತ್ತಿದ್ದರು. ಮೆಥಾ ಮೊದಲಾದವರು ಬ್ರಿಟಿಶರ ಆಳಿಕೆಯನ್ನು ಆನಂದದಿಂದ ಸ್ವಾಗತಿಸಿ ಚಿರಕಾಲ ಬಾಳಲೆಂದು ಭಾವಿಸುತ್ತಿದ್ದರೆ, ಟಿಳಕರು ಆ ಆಳಿಕೆಯು ಆದಷ್ಟು ಬೇಗನೆ ಕೊನೆಗೊಳ್ಳಬೇಕೆಂದು ಇಚ್ಛಿಸುತ್ತಿದ್ದರು. ಸಾಮ್ರಾಜ್ಯಾಂತರ್ಗತ ಸ್ವರಾಜ್ಯಕ್ಕಾಗಿ ಮಿತಿಯಿಲ್ಲದ ಕಾಲದವರೆಗೆ ಸಾವಧಾನದಿಂದ ವಿನಮ್ರರಾಗಿ ಸಾಗಲು ಮಂದಗಾಮಿಗಳು ಸಿದ್ಧರಿದ್ದರೆ, ರಾಷ್ಟ್ರೀಯರು ಸ್ವರಾಜ್ಯಕ್ಕಾಗಿ ಸ್ವಾವಲಂಬನದಿಂದ ಬಹಿಷ್ಕಾರದಂತಹ ಶಸ್ತ್ರಗಳಿಂದ ಹೋರಾಡುತ್ತ ಆದಷ್ಟು ತೀವ್ರವಾಗಿ ಅದನ್ನು ಸಂಪಾದಿಸಬೇಕೆಂದು ಅನ್ನುತ್ತಿದ್ದರು. ಹೀಗೆ ಮೂಲದಲ್ಲಿಯೇ ಎರಡೂ ಪಕ್ಷಗಳಲ್ಲಿ ಭೇದವಿದ್ದುದರಿಂದ ಟಿಳಕರಿಗೆ ಸ್ವಕೀಯರೊಡನೆಯೂ ಹೋರಾಟವು ಅನಿವಾರ್ಯವಾಯಿತು.

ಲೋಕಮಾನ್ಯರು ಕಲಕತ್ತೆಯಿಂದ ಮರುಳಿದ ಕೂಡಲೆ ಕಾರ್ಯಕ್ಕೆ ಹತ್ತಿದರು. ೧೯೦೭ ರ ೮ ನೇ ಜನವರಿಯ ಸಂಚಿಕೆಯಲ್ಲಿ "ಕಳೆದ ರಾಷ್ಟ್ರೀಯ ಸಭೆಯಲ್ಲಿ ವಿಶೇಷವೇನಾಯಿತು?" ಎಂಬ ಸ್ಫೂರ್ತಿದಾಯಕ ಅಗ್ರಲೇಖವನ್ನು ಬರೆದರು. ದಾದಾಭಾಯಿಯವರು ಭಿಕ್ಷಾಂದೇಹಿ ಮಾರ್ಗದಿಂದ ರಾಷ್ಟ್ರವನ್ನು ಮುಕ್ತಗೊಳಿಸಿ ಅದರ ಧ್ಯೇಯವು ಸ್ವರಾಜ್ಯವೆಂದು ಸಾರಿದ್ದಕ್ಕಾಗಿ ಅವರನ್ನು ಹೃತ್ಪೂರ್ವಕ ಅಭಿನಂದಿಸಿದರು. "ಮಹರ್ಷಿಗಳಾದ ದಾದಾಭಾಯಿಯವರು ಗಂಟು ಹಾಕಿದ ರಾಷ್ಟ್ರೀಯ ಸಭೆ ಹಾಗೂ ಸ್ವರಾಜ್ಯಗಳ ಪವಿತ್ರ ಸಂಬಂಧವನ್ನು ಇನ್ನು ಯಾರಿಂದಲೂ ಮುರಿಯಲು ಶಕ್ಯವಿಲ್ಲ. ಈ ಕಾಂಗ್ರೆಸ್ಸಿನ ವಿಶೇಷವೇ ಇದು. ಸಭೆಯ ಪಿತೃಸ್ಥಾನದಲ್ಲಿರುವ ಕೆಲವರಿಗೆ ಈ ವಿವಾಹವು ಪೂರ್ಣವಾಗಿ ಮಾನ್ಯವಿರದಿದ್ದರೂ ಅದನ್ನು ಮುರಿಯುವದು ಇಲ್ಲವೆ ಅದರಲ್ಲಿ ಬದಲು ಮಾಡುವದು ಇನ್ನು ಅಶಕ್ಯವಿದೆ. 'ಸ್ವರಾಜ್ಯವು

ನಮ್ಮ ಸಾಧ್ಯವಿದ್ದು, ಸ್ವದೇಶಿ, ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣಗಳು ಅದನ್ನು ದೊರಕಿಸುವ ಮಹಾ ಸಾಧನಗಳಾಗಿವೆ ಎಂದು ೨೨ ನೇ ರಾಷ್ಟ್ರೀಯ ಸಭೆಯು ಸಿದ್ಧಾಂತ ಮಾಡಿದೆ. ನವಯುವಕರು ಈ ಸಾಧನಗಳ ಯೋಗ್ಯ ಉಪಯೋಗ ಮಾಡಿಕೊಂಡು ಕಾರ್ಯಸಿದ್ಧಿಯನ್ನು ಮಾಡಿಕೊಳ್ಳಬೇಕು" ಎಂದು ತರುಣರಿಗೆ ಕರೆಯಿತ್ತರು.

ಟಿಳಕರು ಹೋರಾಟದ ಸಿದ್ಧತೆಯನ್ನು ನಡೆಸಿದರು. ತಮ್ಮ ವಿಶ್ವಾಸಿಕ ಅನುಯಾಯಿಗಳಾದ, ನ. ಚಿ. ಕೇಳಕರ, ಖಾಡೀಲಕರ, ಖಾಪರ್ಡೆ, ಖರೆ, ಅಣೆ, ಗಂಗಾಧರರಾವ ದೇಶಪಾಂಡೆ, ಪರಾಂಜಪೆ, ಕೌಜಲಗಿ ಶ್ರೀನಿವಾಸ ರಾವ ಮೊದಲಾದವರಿಗೆ ಆಂದೋಲನವನ್ನು ಮುಂದುವರಿಸಲು ಆದೇಶ ವಿತ್ತರು. ಅಲ್ಲದೆ ತಾವು ಸ್ವತಃ ಮಿಂಚಿನವೇಗದಿಂದ ಮಹಾರಾಷ್ಟ್ರ, ಕರ್ನಾಟಕ, ಸಂಯುಕ್ತಪ್ರಾಂತ, ವರ್ಹಾಡ, ಬಂಗಾಲ ಮತ್ತು ಆಂಧ್ರ ಪ್ರಾಂತಗಳಲ್ಲಿ ಸಂಚರಿಸಿದರು. ಬಹಿಷ್ಕಾರ ಹಾಗೂ ಸ್ವದೇಶಿಗಳ ಪ್ರಚಾರಕ್ಕೆ ಪ್ರಾರಂಭ ವಾಯಿತು. ಪುಣೆಯು ರಾಷ್ಟ್ರೀಯ ಹೋರಾಟದ ಕೇಂದ್ರವಾಯಿತು. ರಾಷ್ಟ್ರದ ಹೋರಾಟದ ಸೂತ್ರಗಳೆಲ್ಲವೂ ಟಿಳಕರ ಕೈಯಲ್ಲಿ. ರಾಷ್ಟ್ರವು ಟಿಳಕರ ಆದೇಶಕ್ಕಾಗಿ ಕಾಯುಹತ್ತಿತು. ಟಿಳಕರ ಮನೆಯೆಂದರೆ ರಾಷ್ಟ್ರೀಯ ಹೋರಾಟದ ಮುಖ್ಯ ಶಿಬಿರವಾಗಿ ಪರಿಣಮಿಸಿತು.

## ಮಂದ ಹಾಗು ಉಗ್ರಪಕ್ಷಗಳ ಹೋರಾಟ

ಟಿಳಕರು ಹೋರಾಟದ ಸಿದ್ಧತೆ ನಡೆಸಿದಂತೆ, ಗೋಖಲೆ ಪಕ್ಷದವರೂ ರಾಷ್ಟ್ರೀಯ ಪಕ್ಷವನ್ನು ಎದುರಿಸಲು ಮುಂದಾದರು. ಸ್ವದೇಶಿ ಹಾಗೂ ಬಹಿಷ್ಕಾರ ಚಳವಳಿಯ ಮೂಲಕ ರಾಷ್ಟ್ರದ ವಿಚಾರ ಸರಣಿಯಲ್ಲಿ ಬದಲಾಗು ತ್ತಿರುವದನ್ನು ಉದ್ದೇಶಿಸಿ ಗೋಖಲೆಯವರು ಅಲಹಾಬಾದಿನಲ್ಲಿ (೧೯೦೭ ನೆಯ ೪ನೇ ಫೆಬ್ರುವರಿ) ಉಪನ್ಯಾಸವಿತ್ತರು. ದಿನಾಂಕ ೧೨ ನೆಯ ಫೆಬ್ರುವರಿಯ ಕೇಸರಿಯಲ್ಲಿ ಗೋಖಲೆಯವರ ಸಮಾಚಾರವನ್ನು ಟಿಳಕರು ಚನ್ನಾಗಿಯೇ ತೆಗೆದುಕೊಂಡರು. "ಹೊಸ ರಾಜಕೀಯ ವಿಚಾರಗಳ ಗಾಳಿಯು ಎಲ್ಲ ಕಡೆಗೆ ಬೀಸುತ್ತಿರುವದನ್ನು ಕಂಡು, ನಾ. ಗೋಖಲೆಯವರಿಗೆ ಆನಂದ ವಾಗಿದೆ. ಆದರೆ ರಾಜಕೀಯ ಚಳವಳಿಯನ್ನು ನಡೆಯಿಸುವ ಮೊದಲಿನ ಸನದ

ಸೀರ ಚಳವಳಿಯ ಮಾರ್ಗವನ್ನು ಬಿಟ್ಟು ಉಪಯೋಗವಿಲ್ಲವೆಂದು ಗೋಖಲೆ ಯವರ ಅಭಿಪ್ರಾಯವಿದೆ. ಆದರೆ 'ಸನದಿಗನುಸರಿಸಿ' ಎಂಬ ಶಬ್ದದಿಂದ ಜನ ರನ್ನು ಎಕೆ ಭ್ರಮೆಗೊಳಿಸುವಿರಿ? ಚಳವಳಿಯು ಕಾಯುದೆಗನುಸರಿಸಿದ್ದು ಪಿನಲ್‌ಕೋಡಿನ ಭಂಗವಾಗದಿದ್ದರೆ ತೀರಿತು. 'ಸನದಿಗನುಸರಿಸಿ' ಎಂಬ ಭ್ರಾಮಕ ಹೆಸರಿಗೆ ಮೋಸಹೋಗಿ ರಾಷ್ಟ್ರದ ೨೧ ವರ್ಷಗಳು ಹಾಳಾಗಿವೆ. ಜನಮತವನ್ನು ಜಾಗೃತಗೊಳಿಸಿ, ಮತಾಧಿಕರನ್ನು ತಮ್ಮ ಕಡೆಗೆ ಒಲಿಸಿ ಕೊಳ್ಳುವದಕ್ಕೆ ಇಂಗ್ಲಂಡದಲ್ಲಿ ಕಾನ್ಸ್ಟಿಟ್ಯುಶನಲ್ ಚಳವಳಿ ಎನ್ನುತ್ತಾರೆ. ಇಂಗ್ಲಂಡದಲ್ಲಿ ರಾಜ ಪ್ರಜರ ನಡುವೆ ಕರಾರು ಪತ್ರವಾಗಿದೆ. ಭಾರತದಲ್ಲಿ ಅಂತಹ ಸನದೇನೂ ಇಲ್ಲ. ಆದರೆ ನಿರರ್ಥಕವಾದ ಚಳವಳಿ ಮಾತ್ರ ಇರುತ್ತದೆ. ಮಂದಪಕ್ಷೀಯರು ತಮ್ಮ ಚಳವಳಿಯು ಸನದಿಗೆ ವಿರೋಧವಾಗಿಯೂ ಇಲ್ಲ. ಅಥವಾ ಅದನ್ನು ತಲೆಕೆಳಗೆ ಮಾಡುವಂಥಹದೂ ಇಲ್ಲವೆಂದು ಜಂಭ ಕೊಚ್ಚು ತ್ತಾರೆ. ಆದರೆ ಭಾರತದ ರಾಜಕಾರಣದ ಬಗೆಗೆ ಯಾವುದಾದರೂ ಸನದು ಇದ್ದರೆ ತೋರಿಸುತ್ತೀರಾ! ಎಂಬುದೇ ಈ ಭ್ರಮಿಷ್ಠರಿಗೆ ನಮ್ಮ ಪ್ರಶ್ನೆ? ಹಿಂದು ಸ್ತಾನದ ಇತಿಹಾಸವನ್ನು ಎಷ್ಟು ಸಲ ತಿರುವಿ ಹಾಕಿದರೂ ಬ್ರಿಟನ್ನದಂತಹ ಸನದು ಎಲ್ಲಿಯೂ ಕಂಡು ಬರುವದಿಲ್ಲ. ಪಿನಲ್ ಕೋಡಿಗೆ ನಾ. ಗೋಖಲೆ ಯವರು ಸನದು ಎನ್ನುವರೋ? ಕಾಯುದೆಯ ಉಲ್ಲಂಘನೆ ಮಾಡಬೇಡಿರಿ ಎಂದು ಹೇಳುವದಕ್ಕೆ ಈ ಶಬ್ದವನ್ನು ಉಪಯೋಗಿಸುತ್ತಿದ್ದರೆ ಅದಕ್ಕೆ ಹೊಸ ಪಕ್ಷದವರ ಆಕ್ಷೇಪವಿದೆ ಎಂದು ನಮಗೇನು ಅನಿಸುವದಿಲ್ಲ. ಸನದು ಇರದೆ ಸನದಿಗನುಸರಿಸಿ ಚಳವಳಿ ಮಾಡಿರಿ ಎಂದು ಹೇಳುವದು ಮೂರ್ಖ ತನವಾಗುವದು. 'ಭಿಕ್ಷೆ ಬೇಡಿರಿ, ಎಂದು ಹೇಳಿದಂತಾಗುವದು. ಗೋಖಲೆ ಯವರಿಗೆ ಇದನ್ನೇ ಹೇಳುವದಿದ್ದರೆ ಅವರ ಭಿಕ್ಷಾಂದೇಹಿ ರಾಜಕಾರಣಕ್ಕೆ ಶರಣೆನ್ನಬೇಕು. ಅದು ಮೃಗಜಲದಂತೆ ಭ್ರಾಮಕವೂ ತ್ಯಾಜವೂ ಆಗಿದೆ. ಆದುದರಿಂದ ಇಂತಹ ರಾಜಕಾರಣದ ಪ್ರಭಾವವು ರಾಷ್ಟ್ರೀಯ ಸಭೆಯ ಮೇಲೆ ಪುನಃ ಬೀಳದಂತೆ ಎಚ್ಚರ ತೆಗೆದುಕೊಳ್ಳುವದು ಅವಶ್ಯವಿದೆ''

ಟಿಳಕರು ಮುಂದೆ ವಿವರಿಸುತ್ತ "ನಾ. ಗೋಖಲೆಯವರು ಹೊಸ ಪಕ್ಷದ ಪ್ರಧಾನ ತತ್ವಗಳನ್ನು ಒಪ್ಪುತ್ತಾರೆ. ಆದರೆ ಹಳೆಯದನ್ನು ಬಿಡಲು ಅವರಿಗೆ ಧೈರ್ಯವಿಲ್ಲ. ಹೊಸದನ್ನು ಖಂಡಿಸಲೂ ಆಗುವದಿಲ್ಲ ಹೀಗಾಗಿ ಅವರ

ರಾಜಕಾರಣವು ಅಸ್ಪಷ್ಟ ಹಾಗೂ ಗೊಂದಲಮಯದ್ದಾಗಿದೆ. ಔದ್ಯೋಗಿಕ ಬಹಿಷ್ಕಾರವು ಅವರಿಗೆ ಸಮ್ಮತವಿದೆ. ಆದರೆ ಬಹಿಷ್ಕಾರ ಶಬ್ದವು ಮಾತ್ರ ಅವರಿಗೆ ಮಾನ್ಯವಿಲ್ಲ. ಬಹಿಷ್ಕಾರ ಶಬ್ದವು ದ್ವೇಷ ಮೂಲಕ ಇಲ್ಲವೆ ದ್ವೇಷ ಸೂಚಕವಿದೆ ಎಂಬ ಗೋಖಲೆಯವರ ವಿಧಾನವು ತಪ್ಪಿದೆ. "ಏ ಯಥಾಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ'' ಎಂಬ ಭಗವಂತನ ಉಕ್ತಿಯಲ್ಲಿ ದ್ವೇಷವಿರದೆ, ಯೋಗ್ಯ ಪ್ರತಿಕಾರದ ಅರ್ಥವಿದೆ. ಸವಿಮಾತುಗಳಲ್ಲಿ ಗೋಖಲೆಯವರಿಗೆ ವಿಶ್ವಾಸವಿದೆ. ಹೊಸ ಪಕ್ಷದವರಿಗೆ ಇಲ್ಲ. ಇದೇ ಈ ಎರಡೂ ಪಕ್ಷಗಳಲ್ಲಿಯ ಭೇದವು. ಗೋಖಲೆಯವರು ಬಾಯಿ ಬಿಚ್ಚಿದರೆಂದು ನಮಗೆ ನಮ್ಮ ವಿಚಾರಗಳನ್ನು ಹೇಳಲು ಅನುಕೂಲವಾಯಿತು. ಜನತೆಯ ಎದುರಿಗೆ ಈ ಭೇದವು ಒಮ್ಮೆ ಬರುವದು ಅವಶ್ಯವಿದ್ದಿತು.''

ಎಲ್ಲರೂ ನವಕರಿಯನ್ನು ಬಿಡುವದು ಶಕ್ಯವಿಲ್ಲೆಂಬುದು ಗೋಖಲೆಯವರಂತೆ ನಮಗೂ ಮಾನ್ಯವಿದೆ. ಆದರೆ ತಾತ್ವಿಕ ದೃಷ್ಟಿಯಿಂದ ಅದನ್ನು ಪ್ರತಿಪಾದಿಸಲು ತೊಂದರೆ ಏನಿದೆ? ಸಾರ್ವಜನಿಕರೆಲ್ಲರೂ ಸಂಸಾರ ಬಿಡುವದಿಲ್ಲವೆಂದು ಗೊತ್ತಿದ್ದರೂ ಸಂಸಾರದ ಅಸಾರತೆಯನ್ನು ವರ್ಣಿಸುವದನ್ನು ವೇದಾಂತವು ಎಂದಾದರೂ ಬಿಟ್ಟಿದೆಯೆ? ಒಳ್ಳೇ ಬುದ್ಧಿವಂತರು ಸರಕಾರಿ ನವಕರಿಯಲ್ಲಿ ತೊಡಗದೆ ಭಾರತ ಸೇವಕ ಸಮಾಜದಂತಹ ಸಂಸ್ಥೆಯಲ್ಲಿ ಸೇರಬೇಕೆಂದು ಗೋಖಲೆಯವರೇ ಸಂಸ್ಥೆಯನ್ನು ಸ್ಥಾಪಿಸಿಲ್ಲವೆ? ಅದೇ ಬುದ್ಧಿಯಿಂದ ಹೊಸ ಪಕ್ಷವು ಉಪದೇಶಿಸಿದರೆ ದೋಷವೇನು?

ರಾಷ್ಟ್ರೀಯ ಶಿಕ್ಷಣದ ವಿಷಯವೂ ಹೀಗಿಯೇ ಇದೆ. ಸರಕಾರಿ ಶಿಕ್ಷಣ ಪದ್ಧತಿಯಲ್ಲಿ ಅನೇಕ ದೋಷಗಳಿದ್ದು ಅವೆಲ್ಲವೂ ದೂರಾಗಬೇಕೆಂದು ನಮ್ಮಂತೆ ಗೋಖಲೆಯವರಿಗೂ ಅನಿಸುತ್ತದೆ. ಅದರಂತೆಯೇ ಸದ್ಯಕ್ಕೆ ಎಷ್ಟು ಸರಕಾರಿ ಶಾಲೆಗಳಿರುವವೋ ಅಷ್ಟು ಖಾಸಗೀ ಶಾಲೆಗಳನ್ನು ಪ್ರಾರಂಭಿಸಲು ಶಕ್ಯವಿಲ್ಲೆಂಬುದು ನಮಗೂ ಮಾನ್ಯವಿದೆ. ಆದರೆ ಎಲ್ಲ ಶಾಲೆಗಳನ್ನು ಪ್ರಾರಂಭಿಸಲು ಬರುವದಿಲ್ಲೆಂದು ಒಂದಾದರೂ ರಾಷ್ಟ್ರೀಯ ಶಾಲೆಯನ್ನು ತೆರೆಯಕೂಡದೆಂದು ಹೇಳುವದು ಅವಿಚಾರತನವಲ್ಲವೆ?" ಎಂದು ತಮ್ಮ ಪಕ್ಷವನ್ನು ಸಮರ್ಥಿಸಿದ್ದಾರೆ.

೫ ನೇ ಮಾರ್ಚ ೧೯೦೭ ರ ಕೇಸರಿಯಲ್ಲಿ 'ಸನದಶೀರ ಹಾಗೂ ಕಾಯದೇಶೀರ, ಈ ಎರಡು ಶಬ್ದಗಳ ವಿಸ್ತೃತ ವಿವೇಚನೆಯನ್ನು ಮಾಡಿ

ಕೊನೆಗೆ ಟಿಳಕರು "ಇಂತಹ ಪರಿಸ್ಥಿತಿಯಲ್ಲಿ ಕಾಯದೆಬದ್ಧ ಇಲ್ಲವೆ ಕಾಯದೆ ಭಂಗ ಈ ಶಬ್ದಗಳು ನಮ್ಮ ಚಳವಳಿಗೆ ಅನ್ವಯಿಸುತ್ತವೆಯೋ ಇಲ್ಲವೊ ಎಂದು ಚಿಂತಿಸುತ್ತ ಕೂಡುವದರಲ್ಲಿ ಏನೂ ಅರ್ಥವಿಲ್ಲ. ನ್ಯಾಯ, ನೀತಿ, ಐತಿಹಾಸಿಕ ಪರಂಪರೆಗನುಸರಿಸಿ ಇವೆಯೋ ಇಲ್ಲವೋ ಎಂಬುದನ್ನಷ್ಟೇ ನಮಗೆ ನೋಡುವದಿದೆ. ಅವುಗಳ ಬೆಂಬಲ ನಮಗೆ ಇದ್ದರೆ, ನಾವು ಯಾವುದನ್ನೂ ವಿಚಾರ ಮಾಡುವ ಕಾರಣವಿಲ್ಲ. ಏಕೆಂದರೆ ಕಾಯದೆಗಳು ಪರಕೀಯರ ಅಂಕಿತದಲ್ಲಿವೆ. ಇಷ್ಟು ಮಾತ್ರ ನಿಜ ಕಾಯದೆ ಭಂಗಿಸಲ್ಪಟ್ಟರೆ, ಶಿಕ್ಷೆಯಾಗುವದು. ಆದರೆ ಜುಲುಮೆಯ ಕಾಯದೆ ಇದ್ದರೆ, ಶಿಕ್ಷೆಯನ್ನು ಅನುಭೋಗಿಸಿಯೇ ಅದರ ಪ್ರತಿಕಾರವನ್ನು ಮಾಡಬೇಕು. ಬೇರೆ ಹಾದಿಯೇ ಇಲ್ಲ. ನೀತಿ ಹಾಗೂ ಕಾಯದೆಗಳು ಪರಸ್ಪರ ವಿರುದ್ಧವಾದಾಗ ಇಂತಹ ಪ್ರಸಂಗಬರುವದು''

ಟಿಳಕರು ಈ ಲೇಖನದಿಂದ ಮಂದಪಕ್ಷದ ಕೋಟೆಗಳನ್ನೆಲ್ಲ ಉರುಳಿಸಿ ಅನೇಕ ಮಾತುಗಳನ್ನು ಸಾಧಿಸಿದರು. ಯಾವುದೊಂದು ಕೃತಿಯ ನ್ಯಾಯಾನ್ಯಾಯಗಳನ್ನು ನೋಡುವ ದೃಷ್ಟಿಯನ್ನು ಮುಂದಿಟ್ಟ ಮೂಲಕ ಜನತೆಯಲ್ಲಿ ವಿಚಾರ ದಿಶೆಯೇ ಬದಲಾಯಿತು. ಈ ನೈತಿಕ ದೃಷ್ಟಿಯು ರಾಜಕೀಯ ಜೀವನದಲ್ಲಿ ಮಹತ್ವವಾದ ಬದಲಾವಣೆಗಳನ್ನು ಮಾಡಿತು.

ಟಿಳಕರು ಈ ಬಗೆಯಾಗಿ ಮಂದಪಕ್ಷೀಯರ ಮೇಲೆ ಏರಿಹೋಗುತ್ತಿದ್ದಾಗ ಅವರು ಸುಮ್ಮನೆ ಕೂಡುವ ಬಗೆಹೇಗೆ? ೧೯೦೭ ರ ಮಾರ್ಚ ೨೯ಕ್ಕೆ ಸುರತದಲ್ಲಿ ಪ್ರಾಂತಿಕ ಪರಿಷತ್ತು ಮೆಥಾರವರ ನೆಚ್ಚಿನ ಅನುಯಾಯಿಗಳಾದ ಸರ ಭಾಲಚಂದ್ರ ಭಾಟವಡೇಕರರ ಅಧ್ಯಕ್ಷತೆಯಲ್ಲಿ ನೆರವೇರಿತು. ಅವರ ಭಾಷಣವು ಮಂದಪಕ್ಷೀಯರ ಧೋರಣದ ಪ್ರತೀಕವಾಗಿದ್ದಿತು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ''ಸಾರ್ವಜನಿಕ ಸೇವೆಮಾಡುವವರು ಪ್ರಾಮಾಣಿಕರಿರಬೇಕು. ಸತ್ಯವೇ ಕಾರ್ಯದ ಒರೆಗಲ್ಲಾಗಬೇಕು. ಸರಕಾರಕ್ಕೆ ಅರ್ಜಿ ಮಾಡುವದಾದರೆ, ನಮ್ರರೀತಿಯಿಂದ ಬೇಡಿಕೊಳ್ಳಬೇಕು. ಸರಕಾರವು ತಪ್ಪುತ್ತಿದ್ದರೆ ಅವರ ನ್ಯಾಯ ಬುದ್ಧಿ ಹಾಗೂ ಸಹಾನಭೂತಿಗಳನ್ನು ಜಾಗೃತಗೊಳಿಸಿ, ದೋಷವು ಕಡಿಮೆಯಾಗುವಂತೆ ಮಾಡಬೇಕು. ದ್ಯದ ಸರಕಾರವು ಉದಾರ ಹಾಗು ತಿಳುವಳಿಕೆಯದಿದ್ದು ಸದ್ಯದಲ್ಲಿ ಇದ

ಕ್ಕಿಂತ ಉತ್ತಮ ಸರಕಾರ ದೊರೆಯುವದು ಕಠಿಣ. ನಾವು ಸತತವಾಗಿ ಪ್ರಯತ್ನಮಾಡಬೇಕು. ಅವಸರಮಾಡಿ ಉಗ್ರಕಾರ್ಯಕ್ರಮಗಳನ್ನು ಕೈಕೊಂಡು ನಮ್ಮ ಕಾಲಮೇಲೆ ನಾವು ಕಲ್ಲುಹಾಕಿಕೊಳ್ಳಕೂಡದು" ಎಂದು ಮುಕ್ತಾಫಲಗಳನ್ನು ಸುರಿಸಿದರು.

ಈ ಸಭೆಯಲ್ಲಿ ಸ್ವದೇಶಿ ಹಾಗೂ ಬಹಿಷ್ಕಾರದ ಗೊತ್ತುವಳಿಗಳು ಬಂದೊಡನೆ "ಸ್ವದೇಶಿ ವಿಷಯವು ಪ್ರಾಂತಿಕ ಸಭೆಯದಿರದೆ ಔದ್ಯೋಗಿಕ ಕ್ಷೇತ್ರದಲ್ಲಿ ಬರುವದು" ಎಂದು ತಳ್ಳಿಹಾಕಿದರು. ಈ ಪರಿಷತ್ತಿನ ವಿಷಯವಾಗಿ ಬರೆಯುವಾಗ ಟಿಳಕರು "ಸುರತದ ಪ್ರಾಂತಿಕ ಪರಿಷತ್ತು ನಿಸ್ತೇಜವಾಯಿತು. ಅಧ್ಯಕ್ಷರ ಭಾಷಣ ಓದಿದರೆ, ಇಂತಹರಿಂದ ಏನು ಕಾರ್ಯವಾದೀತು, ಎಂಬ ಉದ್ಗಾರಗಳು ಹೊರಡುವವು." ಎಂದು ಬರೆದರು.

ಇದರಂತೆಯೇ ಮಂದಪಕ್ಷೀಯರು ಕೂಡಿಸಿದ ರಾಯಪೂರ, ಅಲ್ಹಾಬಾದ ಪರಿಷತ್ತುಗಳಲ್ಲಿಯೂ ಬಹಿಷ್ಕಾರ ಹಾಗೂ ಸ್ವದೇಶಿ ಗೊತ್ತುವಳಿಗಳು ಹಿಂದೂಡಲ್ಪಟ್ಟು. ಮಂದ ಉಗ್ರಪಕ್ಷಗಳ ಹೋರಾಟದಲ್ಲಿ ಕೊನೆಗೊಂಡವು.

ಇಂತಹ ಸಮಯದಲ್ಲಿ ಬ್ರಿಟಿಶರ ವೃತ್ತಪತ್ರಕಾರರೂ ಲೇಖಕರೂ ಆದ ಹೇನ್ರಿ ನೇವ್ಹಿನ್ಸನ್ನರು ಭಾರತಕ್ಕೆ ಬಂದಿದ್ದರು. ಆಗ ಟಿಳಕರು ಸಿಂಹಗಡದಲ್ಲಿದ್ದರು. ಟಿಳಕ ಹಾಗೂ ಗೋಖಲೆಯವರ ಕೀರ್ತಿಯನ್ನು ಕೇಳಿ, ಇಬ್ಬರ ಭೆಟ್ಟಿಯನ್ನೂ ತೆಗೆದುಕೊಂಡರು. ಅವರು ಟಿಳಕರ ಶಬ್ದಚಿತ್ರವನ್ನು ಬಹುಸುಂದರವಾಗಿ ಚಿತ್ರಿಸಿದ್ದಾರೆ. "ಟಿಳಕರ ಶಾಂತ ವೃತ್ತಿಯೂ ಮನಸ್ಸಂಯಮವೂ ಅವರ್ಣನೀಯವಿವೆ. ಅವರ ಮನಸ್ಸು ಕಾಯದೆಯಂತೆ ಧರ್ಮ ವಿಚಾರದಲ್ಲಿಯೂ ಮತ್ತು ಸನಾತನ ವಿದ್ಯಾ ಸಂಪತ್ತಿನಲ್ಲಿಯೂ ಮಗ್ನವಾಗಿರುತ್ತದೆ. ಟಿಳಕರು ಅತ್ಯಂತ ಸನಾತನಿಗಳಾಗಿದ್ದಾರೆ. ಹಿಂದೂ ಧರ್ಮವು ಪ್ರಗತಿಪರವಿದ್ದು ಆ ಪ್ರಗತಿಯ ಬಗೆಗೆ ಅವರು ಪೂರ್ಣ ವಿಶ್ವಾಸವುಳ್ಳವರಿರುವರು. ಯುಗ ಯುಗದಲ್ಲಿ ಶ್ರೀ ಕೃಷ್ಣನ ಅವತಾರವಾಗುವದು ಎಂಬ ಶ್ರೀಕೃಷ್ಣನ ವಚನದ ಮೇಲೆ ಅವರ ಸಂಪೂರ್ಣ ಶ್ರದ್ಧೆಯಿರುವದು."

ಟಿಳಕರು ತಮ್ಮ ಪಕ್ಷದ ಬಗೆಗೆ ಈ ರೀತಿಯಾಗಿ ನನಗೆ ವಿವರಿಸಿದರು. 'ಮಂದ ಹಾಗೂ ಉಗ್ರಪಕ್ಷಗಳ ಉದ್ದೇಶಗಳಲ್ಲಾಗಲೀ ಗುರಿಯಲ್ಲಾಗಲೀ

ಭೇದವಿಲ್ಲ. ಇಬ್ಬರ ನಡುವೆ ಮಾರ್ಗದ ಭೇದ ಮಾತ್ರವಿರುತ್ತದೆ. ಬ್ರಿಟಿಶರ ರಾಜ್ಯವನ್ನು ಸಮೂಲ ನಾಶಮಾಡಬೇಕೆಂಬ ಒಂದು ಸಣ್ಣಪಕ್ಷವೇನೋ ಇದೆ. ಅಂಥ ಮಾತುಗಳನ್ನು ಭವಿಷತ್ತಿಗೆ ಬಿಟ್ಟು ಬಿಡೋಣ. ನಾವು ನಿಶಃ ಸ್ತ್ರರು. ಮೇಲಾಗಿ ನಮ್ಮೊಳಗೆ ಒಡಕು. ಸಂಘಟನೆಯೂ ಇಲ್ಲ. ನಮಗೆ ಇಂಗ್ಲಿಷರ ರಾಜ್ಯವನ್ನು ಅಲ್ಲಾಡಿಸುವ ಸಾಮರ್ಥ್ಯವೆಲ್ಲಿದೆ? ದೇಶದ ಆಡಳಿತೆಯಲ್ಲಿ ನಮಗೂ ಅಧಿಕಾರ ದೊರೆಯಬೇಕು. ಬೇರೆ ಬೇರೆ ಪ್ರಾಂತಗಳಿಂದೊಡಗೂಡಿದ ಸಂಯುಕ್ತರಾಜ್ಯಘಟನೆಯು ನಮಗೆ ಬೇಕು. ಈ ಮಾತಾದರೂ ಕೂಡಲೇ ಸಾಧ್ಯವಾಗುವಂತಿಲ್ಲ. ಇಂದಿನ ಪ್ರಶ್ನೆಯೆಂದರೆ, ಎಲ್ಲವೂ ಶಾಂತವಾಗಿ ಸಾಗಿಲ್ಲವೆಂಬುದನ್ನು ತೋರಿಸಲು ನಾವು ಸರಕಾರಕ್ಕೆ ಧಕ್ಕೆ ಕೊಡಬೇಕೆನ್ನುತ್ತೇವೆ. ರಶಿಯಾದಲ್ಲಿಯ ಆಳರಸರ ವರ್ಣನೆಯನ್ನು ನೀವು ಮಾಡುವಿರಿ. ರಶಿಯಾದಲ್ಲಿಯ ಆಳರಸರು ಎಷ್ಟೇ ಕೆಟ್ಟವರಾಗಿದ್ದರೂ ಅವರು ರಶಿಯನ್ನರೇ ಆಗಿದ್ದಾರೆ. ರಶಿಯಾ ದೇಶದ ಸಂಪತ್ತು, ವರ್ಚಸ್ಸು ಬೆಳೆಯಬೇಕೆಂದೇ ಅವರಿಗೆ ಅನಿಸುತ್ತದೆ. ಆದರೆ ಇಲ್ಲಿಯ ಆಳಸರನ್ನು ನೋಡಿರಿ. ಅವರು ಪರಕೀಯರು ಪರಕೀಯರಿಗಾಗಿ. ದುಡಿಯುವವರು. ಈ ರಾಜ್ಯಭಾರದಲ್ಲಿ ನಮಗೆ ಎಲ್ಲಿಯೂ ಸ್ಥಾನವಿಲ್ಲ. ಆದುದರಿಂದ ಸರಕಾರಕ್ಕೆ ಸ್ವಲ್ಪ ಧಕ್ಕೆ ಕೊಡಬೇಕೆಂದು ನಮಗೆ ಅನಿಸುತ್ತದೆ. ಅದನ್ನು ಹೇಗೆ ಸಾಧಿಸಬೇಕೆಂಬುದೇ ದೊಡ್ಡ ಪ್ರಶ್ನೆಯಿದೆ. ಉಗ್ರ ಮತ್ತು ಮಂದಪಕ್ಷಗಳಲ್ಲಿಯ ಭೇದವು ಈ ಪ್ರಶ್ನೆಯ ಉತ್ತರದಲ್ಲಿಯೇ ಅಡಕವಾಗಿದೆ. ಕೇವಲ ಯುಕ್ತಿವಾದದಿಂದ ಇಲ್ಲಿಯ ಇಂಗ್ಲಿಷರ ಮನ ಒಲಿಸಲು ಸಾಧ್ಯವೆಂದು ಮಂದಪಕ್ಷದವರಿಗೂ ಅನಿಸುವದಿಲ್ಲ ಅವರ ವಿಶ್ವಾಸವು ಇಂಗ್ಲಂಡದ ಮೇಲೆ. ಇಂಗ್ಲಂಡದಲ್ಲಿಯಾದರೂ ನಮ್ಮನ್ನು ಯಾರು ಕೇಳುವರು? ಅವರಿಗೆ ಭಾರತದ ನಿಜವಾದ ಜ್ಞಾನವೇ ಇಲ್ಲ. ಇಷ್ಟೇ ಅಲ್ಲದೆ, ಭಾರತದ ಬಗೆಗೆ ತಮ್ಮ ತಮ್ಮಲ್ಲಿ ಮತಭೇದ ಮಾಡಿಕೊಳ್ಳಕೂಡದೆಂದು ಅಲ್ಲಿಯ ಎಲ್ಲ ಪಕ್ಷಗಳ ಧೋರಣವಿದೆ. ಈ ಮಾತಿನಿಂದ ನಿರಾಶರಾಗಿ ಉಗ್ರಪಕ್ಷದವರಾದ ನಾವು ಬೇರೆ ದಾರಿಯನ್ನು ತುಳಿಯಬೇಕೆಂದು ನಿಶ್ಚಯಮಾಡಿದ್ದೇವೆ. ಇದು ಕೇವಲ ಸ್ವಭಾವದ ಭೇದವು. ಯುವಕರೆಲ್ಲರೂ ನಮ್ಮ ಪಕ್ಷಕ್ಕೆ ಸೇರಿರುವರು. ಸ್ವಾವಲಂಬನವೇ ನಮ್ಮ ಮಹಾಮಂತ್ರವು. ಭಾರತದ ಹಿತಕ್ಕಾಗಿ ಎಂತಹ

ಕಷ್ಟಗಳು ಬಂದರೂ ಅವನ್ನು ಎದುರಿಸಲು ಮನಸ್ಸನ್ನು ಗಟ್ಟಿ ಮಾಡಿದ್ದೇವೆ. ೩, ೪ ಸಾವಿರ ಜನರನ್ನು ಜೇಲಿಗೆ ಅಟ್ಟಲು ಸರಕಾರವೂ ವಿಚಾರ ಮಾಡ ಬೇಕಾದೀತು. ಬಹಿಷ್ಕಾರದ ಚಳವಳಿಯಲ್ಲಿ ನಾವು ಯಾರ ಮೇಲೂ ಜುಲುಮೆ ಮಾಡಬೇಕೆನ್ನುವದಿಲ್ಲ. ಸತ್ಯಾಗ್ರಹವನ್ನು ಮಾಡುವದಾದರೂ ಕೇವಲ ದಬ್ಬಾಳಿಕೆಯ ಕಾಯದೆಯ ವಿಷಯದಲ್ಲಿಯೇ! ಸರಕಾರದ ವ್ಯಾಪಾರಕ್ಕೆ ಪೆಟ್ಟು ಬಿದ್ದರೆ, ಸರಕಾರಕ್ಕೆ ಸ್ವಲ್ಪ ಆತಂಕ ಉಂಟಾದರೆ, ಇಂಗ್ಲಂಡದ ಕಣ್ಣುಗಳು ತೆರೆಯಬಹುದು. ನಮ್ಮಲ್ಲಿ ಇಂದಿಲ್ಲ ನಾಳೆ ಒಕ್ಕಟ್ಟಾಗಿಯೇ ತೀರುವದು" ಈ ಸಂಭಾಷಣೆಯ ನಂತರ ನೆವ್ಹಿನ್ಸನ್ನರನ್ನು ಬೀಳ್ಕೊಟ್ಟರು. ಟಿಳಕರ ಭಾಷಣದಿಂದ ಈ ಹೊಸ ಪಕ್ಷವು ರಾಷ್ಟ್ರದಲ್ಲಿ ಚನ್ನಾಗಿ ಬೇರು ಬಿಡ ತೊಡಗಿದೆ ಎಂದು ನೆವ್ಹಿನ್ಸನ್ನರಿಗೆ ಮನವರಿಕೆಯಾಯಿತು.

ಈ ಹೋರಾಟವನ್ನು ಒಮ್ಮೆ ಮುಗಿಸಿಬಿಡುವ ನಿಶ್ಚಯವನ್ನು ಟಿಳಕರು ಮಾಡಿದರು. "ಸನದು ಸನದು ಎನ್ನುವಿರಿ, ಸನದು ಎಲ್ಲಿದೆ ? ಇಂಡಿಯನ್ ಪಿನಲ್‌ಕೋಡೇ ಭಾರತದ ಸನದು. ಅದೇ ಘಟನೆ" ಎಂದು ಗರ್ಜಿಸಿದರು. ಇದರ ಪ್ರತಿಧ್ವನಿಯು ಭಾರತದಲ್ಲೆಲ್ಲ ಆಯಿತು. ಮಂದಪಕ್ಷೀಯರೂ ಸರಕಾರದ ಉಚ್ಚ ಅಧಿಕಾರಿಗಳೂ ರಾಣೀಜಾಹೀರನಾಮೆಯ ಕಡೆಗೆ ಬಟ್ಟು ತೋರಿಸುತ್ತಿದ್ದರು. ಟಿಳಕರು ಅದಕ್ಕೆ ಕೈಹಚ್ಚಿದ್ದಿಲ್ಲ. ೧೯೦೭ ರ ಜೂನ ತಿಂಗಳಲ್ಲಿ ಅದರ ಸಮಾಚಾರವನ್ನು ತೆಗೆದುಕೊಂಡರು. ಅದರ ಗುಟ್ಟನ್ನೆಲ್ಲ ಹೊರಗೆಡವಿದರು. ಲಾರ್ಡ ಲಿಟನ್, ಲಾರ್ಡ ಕರ್ಝನ್ನರು, ಜಾಹೀರನಾಮೆಗೆ ಮಾಡಿದ ಭಾಷ್ಯಗಳನ್ನು ಬಯಲಿಗೆಳೆದರು. ಈ ಜಾಹೀರನಾಮೆಯು ಬಂಡೆಬ್ಬಿಸಿದ ಜನರನ್ನು ಸಮಾಧಾನಗೊಳಿಸುವದಕ್ಕಾಗಿ ಮಾಡಿದ ಸವಿಮಾತುಗಳು. ಅವು ವಚನಗಳಲ್ಲ. ಭಾರತದ ರಾಜಕೀಯ ಸತ್ತೆಯು ಅದರಿಂದ ಮರ್ಯಾದಿತವಾಗಲಿಲ್ಲ. "ಈ ಜಾಹೀರನಾಮೆಯು ಕರಾರು ಎಂದು ತಿಳಿಯಲು ಶಕ್ಯವಿಲ್ಲ. ಕರಾರು ಯಾವಾಗಲೂ ತುಲ್ಯಬಲವಿದ್ದವರಲ್ಲಿ ಮಾತ್ರ ಸಂಭವಿಸುತ್ತದೆ. ರಾಜನು ಈಶ್ವರಾಂಶನೆಂದು ಹೇಳಲ್ಪಡುತ್ತದೆ. ಅದು ನಿಜವದೆ. ಆದರೆ ಪ್ರಜೆಗಳಲ್ಲಿಯೂ ಈಶ್ವರಾಂಶವಿಲ್ಲವೆ! ರಾಜನು ಈಶ್ವರಾಂಶನಿದ್ದರೂ ಅವನ ನಿರಂಕುಶ ಅನ್ಯಾಯದ ಆಳಿಕೆಯನ್ನು ಧರ್ಮವು ಮಾನ್ಯಮಾಡಿಲ್ಲ ಎಂಬುದನ್ನೂ ಮರೆಯಬಾರದು. ಅದರ ವಿರುದ್ಧವಾಗಿ ಅಂತಹ ರಾಜರನ್ನು

ಕಿತ್ತೊಗೆಯಲು ಉಪದೇಶಿಸುತ್ತದೆ" ಎಂದು ಬರೆದು, ಮಂದಪಕ್ಷೀಯರ ಪ್ರಶ್ನೆಗಳನ್ನೆಲ್ಲ ಮುಗಿಸಿಬಿಟ್ಟರು.

**ಅಧಿಕಾರಿಗಳೊಡನೆ ಕುಸ್ತಿ**

ಆಂಗ್ಲೋ ಇಂಡಿಯನ್ ವೃತ್ತಪತ್ರಗಳು ಹೊಸಪಕ್ಷವು ಕ್ರಾಂತಿಕಾರಕವಿದೆ ಎಂದು ಕೂಗೆಬ್ಬಿಸಿದವು. ಅರ್ಥಾತ್ ಅವು ಸರಕಾರದ ಮುಖಗಳು. ಟಿಳಕರು ಅವರಿಗೆ ಉತ್ತರವೀಯುತ್ತ "ನಮ್ಮ ಧ್ಯೇಯವು ಈಗ ಕ್ರಾಂತಿಕಾರಕವೆನಿಸಬಹುದು. ಈಗಿನ ರಾಜ್ಯ ಪದ್ಧತಿಯನ್ನು ಸಮೂಲವಾಗಿ ಬದಲಿಸಬೇಕೆಂಬ ನಮ್ಮ ವಿಚಾರವು ನಿಜವಾಗಿಯೂ ಕ್ರಾಂತಿಕಾರಕವಿರುತ್ತದೆ. ಆದರೆ ಈ ಕ್ರಾಂತಿಯನ್ನು ರಕ್ತರಹಿತವಾಗಿ ನಡೆಯಿಸಬೇಕೆನ್ನುತ್ತೇವೆ. ಇದರ ಅರ್ಥ ತಿಕ್ಕಾಟವೇ ಆಗಕೂಡದೆಂದಲ್ಲ. ಭವಿಷ್ಯದಲ್ಲಿ ನಾವು ದೊಡ್ಡ ಆಪತ್ತನ್ನು ಎದುರಿಸಬೇಕಾಗಬಹುದು. ಮತ್ತು ಭಯಂಕರವಾದ ತ್ಯಾಗವನ್ನು ಮಾಡಬೇಕಾಗಬಹುದು. ಕಷ್ಟವನ್ನು ಸಹಿಸದೆ, ತ್ಯಾಗವನ್ನು ಮಾಡದೆ, ನಮ್ಮ ಪದರಿನಲ್ಲಿ ಏನೂ ಬೀಳಲಿಕ್ಕಿಲ್ಲ. ಅಧಿಕಾರಿಗಳ ಉದಾರತೆ, ಸದ್ಭಾವನೆಗಳನ್ನು ಜಾಗೃತಗೊಳಿಸುವ ಪ್ರಯತ್ನಗಳೆಲ್ಲ ವ್ಯರ್ಥವಾಗಿವೆ. ನಮ್ಮ ಉದ್ದೇಶ ಹಾಗೂ ಬೇಡಿಕೆಗಳು ನ್ಯಾಯವಾಗಿವೆ. ಅವುಗಳಿಗೆ ಇತಿಹಾಸದ ಆಧಾರವಿದೆ. ನಿಸರ್ಗದತ್ತವಾಗಿವೆ. ಅಲ್ಲದೆ ದೈವೀ ಪ್ರೇರಣೆಯಿಂದ ಪ್ರೇರಿತವಾಗಿವೆ. ಯಾವ ಶಕ್ತಿಯೂ ನಮ್ಮನ್ನು ಸ್ವರಾಜ್ಯದಿಂದ ಪರಾವೃತ್ತ ಮಾಡಲಾರದು" ಎಂದರು.

೧೦ ನೇ ಮೇ ೧೯೦೭ ನೇ ಇಸ್ವಿಯ ದಿವಸ ಸರಕಾರವು ೧೮೧೮ ರ ೩ ನೇ ಕಾನೂನಿನ ಪ್ರಕಾರ ಲಾಲಾಜಿಯವರನ್ನು ಬಂಧಿಸಿ ಗಡಿಪಾರು ಮಾಡಿತು. ತಾವು ಹೊರಗೆ ಇದ್ದರೆ, ಶಾಂತತಾಭಂಗವಾಗಿ ದಂಗೆಗಳಾಗುವ ಸಂಭವವಿದೆ ಎಂದು ಲಾರ್ಡ ಮಿಂಟೋರವರು ಕಾರಣವನ್ನು ತೋರಿಸಿದರು. ಇದನ್ನು ಕಂಡು ಟಿಳಕರು ಕಿಡಿ ಕಿಡಿಯಾದರು "ಇಂಗ್ಲೀಷ ರಾಜ್ಯಾಧಿಕಾರಕ್ಕೆ ನಿಜವಾಗಿಯೂ ಯಾರಾದರೂ ಶತ್ರುಗಳಿದ್ದರೆ, ಕಾಯದೇಬದ್ಧ ಚಳವಳಿಗೆ ವಿಘ್ನವನ್ನೊಡ್ಡುವ ಬಿಳಿ ಅಧಿಕಾರಿಗಳೇ! ಮುಸಲ್ಮಾನರ ಆಳಿಕೆಯು ಇವರಿಗಿಂತ ನೂರು ಪಟ್ಟು ಚನ್ನಾಗಿದ್ದಿತು. ಔರಂಗಜೇಬನು ವಿಚಾರಣೆಯಿಲ್ಲದೆ ಕೊಳೆ ಹಾಕಿದರೂ ಸನದಶೀರ ಚಳುವಳಿ ನಮಗೆ ಮಾನ್ಯವಿದೆ ಎಂದಾದರೂ

ಷ್ಠಾಲು ಬಡಿಯುತ್ತಿದ್ದಿಲ್ಲ. ರಾಜ್ಯಾಧಿಕಾರಿಗಳು ಒಂದು ವೇಳೆ ರಶಿಯದ ಪದ್ಧತಿಯನ್ನು ಅನುಸರಿಸಿದರೆ ಭಾರತದ ಪ್ರಜೆಗಳೂ ರಶಿಯದ ಪ್ರಜೆಗಳ ದಾರೀ ಹಿಡಿಯಬೇಕಾದೀತು?" ಎಂದು ಎಚ್ಚರಿಸಿದರು.

ಲಜಪತರಾಯರು ಅಫಗಾನಿಸ್ಥಾನದ ಅಮೀರರೊಡನೆ ರಾಜ್ಯಕ್ರಾಂತಿಯ ಗುಪ್ತಕಾರಸ್ಥಾನ ನಡೆಸಿರುವರೆಂದು ಸರಕಾರಕ್ಕೆ ಸಂಶಯವಿದೆಯೆಂದು ಇಂಗ್ಲಿಷಮನ್‌ಪತ್ರಿಕೆಯು ಬರೆಯಿತು. ಅದಕ್ಕೆ ಟಿಳಕರು "ಇವನು ಸೂರ್ಯ, ಇವನು ಜಯದ್ರಥರೆಂದು ತೋರಿಸಿ, ಪುರಾವೆಗಳನ್ನು ಮುಂದಿಡಲು ಸರಕಾರವು ಸಿದ್ಧವಾದರೂ ಆಗಬೇಕು. ಇಲ್ಲವೆ ಆರೋಪವನ್ನಾದರೂ ತಿರುಗಿ ತಕ್ಕೊಳ್ಳಬೇಕು. ಆರೋಪವನ್ನು ಸಿದ್ಧಮಾಡಿ ಲಾಲಾಜಿಯವರನ್ನು ಗಲ್ಲಿಗೇರಿಸಿದರೂ ಯಾರೂ ಆಕ್ಷೇಪ ಮಾಡಲಾರರು. ಆದರೆ ಅವರು ಕೇವಲ ಚಳುವಳಿ ಮಾಡುವರೆಂದು ಅಪ್ರಿಯರಾಗುತ್ತಿದ್ದರೆ, ಚಳವಳಿಯು ಎಂದೂ ನಿಲ್ಲಲಾರದೆಂದು ಸರಕಾರಕ್ಕೆ ಎಚ್ಚರಿಕೆ ಕೊಡುತ್ತೇವೆ'' ಎಂದು ಉತ್ತರ ಕೊಟ್ಟರು.

ಲಾಲಾಜಿಯವರನ್ನು ಹಿಡಿದ ಸುದ್ದಿಯು ಹಬ್ಬಿದೊಡನೆ ಫಿರೋಜಪೂರ, ಸಿಯಾಲಕೋಟ, ಪೇಶಾವರ, ರಾವಳಪಿಂಡಿ ಮೊದಲಾದ ಸ್ಥಳಗಳಲ್ಲಿ ದಂಗೆಗಳಾದವು. ಎಲ್ಲ ಕಡೆಗೂ ನಿಷೇಧಪರ ಸಭೆಗಳಾದವು. ಪುಣೆಯಲ್ಲಿ ಪೋಲೀಸರ ಕಾವಲು ಪ್ರಾರಂಭವಾಯಿತು. ಸರಕಾರವು ಸಭಾಬಂದಿ ಹುಕುಮನ್ನು ಹೊರಡಿಸಿತು. ಟಿಳಕರು 'ಇಂದು ಶಬ್ದದಿಂದ, ನಾಳೆ ಕೃತಿಯಿಂದ, ಈ ಆಜ್ಞೆಯನ್ನು ಮುರಿಯಬೇಕಾದೀತು' ಎಂದು ಹೇಳಿದರು.

ಈ ವಾತಾವರಣದಲ್ಲಿಯೇ ಶಿವಾಜಿಯ ಉತ್ಸವವು ನಡೆಯಿತು. ಟಿಳಕರು ಅಧ್ಯಕ್ಷರಿದ್ದರು. ಟಿಳಕರು ತಮ್ಮ ಭಾಷಣದಲ್ಲಿ ''ನಾವೇನು ದಂಗೆ ಹಾಕಲು ಇಲ್ಲಿ ಕೂಡಿಲ್ಲ. ನಾವು ಯಾವುದನ್ನೂ ಕದ್ದೂ, ಮುಚ್ಚಿ ಮಾತಾಡುವದಿಲ್ಲ. ಭಾಷಣವನ್ನು ಬರೆದುಕೊಳ್ಳಲು ೧೫ ಜನ ಪೋಲೀಸರೇಕೆ? ಪೋಲೀಸರು ಬಂದಿರುವರೆಂದು ನಾವೇನು ಹೆದರುವದಿಲ್ಲ. ಕಲೆಕ್ಟರ ಹಾಗೂ ಗವ್ಹರ್ನರರು ಬಂದರೆ ಬಹಳ ಒಳ್ಳೇದು. ಅವರು ಕೇಳಬೇಕೆಂದೇ ನಮ್ಮ ಇಚ್ಛೆಯಿದೆ. ಅದಕ್ಕಾಗಿಯೇ ನಾವು ಮಾತನಾಡುತ್ತೇವೆ ಬ್ರಿಟಿಶ ಸಾಮ್ರಾಜ್ಯದ ಉಳಿದ ನಾಗರಿಕರಿಗೆ ಇರುವ ಹಕ್ಕುಗಳು ನಮಗೂ ಬೇಕೆಂದೇ ನಮ್ಮ

ಚಳವಳಿಯಿಂದ. ಅವು ದೊರೆತಾಗಲೇ ನಮಗೆ ವಿಶ್ರಾಂತಿ. ಇದನ್ನೂ ನಾವು ಸ್ಪಷ್ಟವಾಗಿ ಹೇಳುತ್ತಿದ್ದೇವೆ. ಇದಕ್ಕೆ ೨ ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಿ ಇಷ್ಟು ಜನ ವರದಿಗಾರರನ್ನು ನೇಮಿಸುವದು ರಾಷ್ಟ್ರದ ಹಣವನ್ನು ಅಪವ್ಯಯ ಮಾಡಿದಂತೆ" ಎಂದು ಹೇಳಿದರು.

"ರಾಜಕೀಯ ವಿಷಯದಲ್ಲಿ ತಮ್ಮ ವಿರುದ್ಧವಾಗಿ ಚಳವಳಿ ಮಾಡುವ ಸುಶಿಕ್ಷಿತ ವರ್ಗವು ನಮ್ಮ ಶತ್ರುವಿರುತ್ತದೆ. ಆದಕ್ಕೆ ಅಶಿಕ್ಷಿತರ ಬೆಂಬಲ ವಿಲ್ಲವೆಂದು ಮೋರ್ಲೆಯವರು ಹೇಳುತ್ತಾರೆ. ಅವರ ಮತದಂತೆ ನಮಗೆ ಶಿಕ್ಷಣ ದೊರೆತು, ನಾವು ಶತ್ರುಗಳಾಗಿದ್ದೇವೆ. ನಾವು ಕಲಿಯದಿದ್ದರೆ ಶತ್ರು ಗಳಾಗುತ್ತಿದ್ದಿಲ್ಲ. ಮಿತ್ರರಾಗಿಯೇ ಉಳಿಯುತ್ತಿದ್ದೆವು! ಸಾರಾಂಶ ನಾವು ಸರಕಾರದ ಶತ್ರುಗಳಲ್ಲ. ನಮ್ಮ ಜ್ಞಾನವು ಸರಕಾರದ ಶತ್ರುವು. ಜ್ಞಾನದ ಶತ್ರುಗಳು ಯಾರು ಎಂಬುದನ್ನು ನೀವೆಲ್ಲರು ಬಲ್ಲಿರಿ! ಸುಶಿಕ್ಷಿತರು ಬಡವ ರಿರುವರೆಂಬ ಮಾತು ನಮಗೂ ಮಾನ್ಯವಿದೆ. ರಾಜಕೀಯ ಚಳುವಳಿ ಮಾಡುವ ವರು ಶ್ರೀಮಂತರಿರಬೇಕೆಂದು ಎಲ್ಲಿ ಹೇಳಿದೆ? ಜರ್ಮನಿ-ರಶಿಯಾ ದೇಶಗಳ ಚಳುವಳಿಗಾರರು ಬಡವರು. ಮೋರ್ಲೆಯವರು ಕೂಡ ಬಡವರೇ ಇದ್ದರು. ಮೋರ್ಲೆಯುವರಂಥವರು ಲಾಲಾಜಿಯನ್ನು ಗಡಿಪಾರು ಮಾಡಲು ಒಪ್ಪಿಗೆ ಕೊಟ್ಟು ಭಯಂಕರ ತಪ್ಪು ಮಾಡಿದ್ದಾರೆ. ಇಂತಹ ತಪ್ಪುಗಳನ್ನು ಮಾಡ ಹತ್ತಿದರೆ ಕ್ರಾಂತಿಯು ಸಮೀಪಿಸಿತೆಂದು ತಿಳಿಯಬೇಕು. ಮೋರ್ಲೆಯವರು ಕೊಡುವರು ಎಂದು ನಂಬಿದವರಿಗೆ ಅವರ ಪಾರ್ಲಿಮೆಂಟಿನ ಘೋಷಣೆ ಯಿಂದ, ನೆಚ್ಚಿದ ಎಮ್ಮೆ ಕೋಣವೀದಂತಾಗಿದೆ. ಹೆರವರೊಡನೆ ಹೋರಾಡು ವಾಗ ಕೌರವ ಪಾಂಡವರೆಲ್ಲರೂ ಕೂಡಿ ೧೦೫ ಜನ ಹೇಗೋ ಹಾಗೆ ಭಾರ ತದ ಪ್ರಶ್ನೆ ಬಂದರೆ ಬ್ರಿಟಿಶರೆಲ್ಲ ಒಂದೇ. ಆದುದರಿಂದ ನಾವು ಪಡೆಯು ಬೇಕಾದುದನ್ನು ಸ್ವಪ್ರಯತ್ನದಿಂದಲೇ ದೊರಕಿಸಬೇಕು. ಇದರ ಹೊಣೆ ಯೆಲ್ಲವೂ ತರುಣರ ಮೇಲಿದೆ. ಅವರು ಧೈರ್ಯದಿಂದ ಕಾಯದೆಗನುಸರಿಸಿ ಇತಿ ಹಾಸವನ್ನು ಆಧಾರವಾಗಿಟ್ಟುಕೊಂಡು ಪ್ರಯತ್ನಿಸಬೇಕು.

## ಜನ ಜಾಗೃತಿ

ಹೀಗೆ ಸರಕಾರದೊಡನೆಯೂ ಮಂದಪಕ್ಷದೊಡನೆಯೂ ಹೋರಾಡು ತ್ತಿರುವಾಗ ಜನಜಾಗೃತಿಯ ಕಾರ್ಯವನ್ನೂ ಕೈಕೊಂಡಿದ್ದರು. ಬಹಿಷ್ಕಾರ

ಹಾಗೂ ಸ್ವದೇಶೀ ತತ್ವಗಳ ಪ್ರಚಾರಕ್ಕಾಗಿ ರಾಷ್ಟ್ರದಲ್ಲೆಲ್ಲ ಸಂಚರಿಸಿದರು. ಪೈಸಾ ಫಂಡಿನ ಚಳುವಳಿಯನ್ನು ಎತ್ತಿ ಹಿಡಿದು, ಅದನ್ನು ಪ್ರೋತ್ಸಾಹಿಸಿದರು. ''ಪೈಸಾ ಫಂಡು ಕಾಮಧೇನುವಿನಂತಿದೆ. ಹನಿ ಹನಿ ಕೂಡಿ ಹಳ್ಳವಾಗುವದು. ಕಡ್ಡಿಪೆಟ್ಟಿಗೆ, ಪೆನ್ಸಿಲ್, ಸಾಬಾಣ, ಕೀಲಿ, ಮೇಣಬತ್ತಿ ಮೊದಲಾದ ಅನೇಕ ದೇಶಿ ಉದ್ಯೋಗಗಳನ್ನು ಕಲಿಸಲು, ಕಾರಖಾನೆಗಳನ್ನು ತೆಗೆಯಲು ಇದರ ಉಪಯೋಗವಾಗುವದು. ಜನರು ಸಂಶಯ ತೆಗೆದುಕೊಳ್ಳದೆ ಸಹಾಯ ಮಾಡಬೇಕು'' ಎಂದು ಉಪದೇಶಿಸಿದರು. ಟಿಳಕರು ಕೈಹಚ್ಚಿದಕೂಡಲೇ ಈ ನಿಧಿಯು ೨ ಸಾವಿರದಿಂದ ೧೦ ಸಾವಿರಕ್ಕೆ ಬಂದು ಮುಟ್ಟಿತು. ೧೯೦೭ ರ ಜನವರಿಯ ಕೇಸರಿಯಲ್ಲಿ ''ಲಗ್ನದಂಥ ಪವಿತ್ರ ಸಮಾರಂಭದಲ್ಲಿ ಸ್ವದೇಶಿ ವ್ರತದ ಭಂಗವು ಒಂದು ಬಗೆಯ ಅಮಂಗಲವು. ಪರದೇಶಿ ಬಟ್ಟೆ, ಪರದೇಶಿ ಸಕ್ಕರಿ, ಪರದೇಶಿ ಚ್ಶೈನಿ ವಸ್ತುಗಳಿಗೆ ಬಹಿಷ್ಕಾರ ಬೀಳಲೇಬೇಕು'' ೨೯ ನೇ ತಾರೀಖಿನ ಕೇಸರಿಯಲ್ಲಿ "ಬಹಿಷ್ಕಾರ ಚಳವಳಿಗೆ ಪೋಷಕವಾಗುವಂತೆ ಅಯರ್ಲಂಡಿನ ಸಿನಫೇನ ಚಳವಳಿಯ ಉದಾಹರಣೆ ಕೊಟ್ಟರು. ಆಯರ್ಲಂಡದ ದೆ. ಭ. ಗ್ರೀಫಿತ್ತರು ಇಂಗ್ಲಿಷರ, ಶರೆ, ತಂಬಾಕ, ಚಹಾ, ಸಕ್ಕರಿಗಳ ಮೇಲೆ ಬಹಿಷ್ಕಾರ ಹಾಕಲು ಉಪದೇಶ ಮಾಡುತ್ತಿದ್ದರು. ಬೋರರು ಯುದ್ಧಮಾಡಿ ಬ್ರಿಟಿಶರ ಹಾನಿಮಾಡಿದಷ್ಟು ಆಯರೀಶರು ಈ ಬಹಿಷ್ಕಾರದಿಂದ ಮಾಡಲು ಶಕ್ಯವಿದೆ'' ಎಂದು ಹೇಳಿದರು. ಅದರಂತೆ ಚೀನಿ, ಜಪಾನಿ ಜನರು ಅಮೇರಿಕೆಯ ವಿರುದ್ಧ ಈ ಶಸ್ತ್ರವನ್ನೆತ್ತಿ ಯಶಸ್ಸು ಗಳಿಸಿದಾಗ ನಾವೇಕೆ ಈ ಶಸ್ತ್ರದ ಉಪಯೋಗ ಮಾಡಬಾರದು? ಎಂದು ಜನರಿಗೆ ಆವ್ಹಾನಿಸಿದರು.

೧೯೦೭ ರ ನವ್ಹಂಬರ ೧೬ ನೇ ತಾರೀಖಿನ ದಿವಸ ಪಂಢರಪುರದ ನದಿಯ ಬೈಲಿನಲ್ಲಿ ೧೫ ಸಾವಿರ ಜನರ ಮುಂದೆ ಟಿಳಕರು ಸ್ವದೇಶಿಯ ಮೇಲೆ ಮಾತನಾಡಿದರು. ''ದೇಶದ ಪರಿಸ್ಥಿತಿಯು ದಿನ ದಿನಕ್ಕೆ ಕೆಡತೊಡಗಿದೆ. ದಬ್ಬಾಳಿಕೆಯು ನಡೆದಿದೆ. ನಾನಿಂದು ನಿಮ್ಮ ಮುಂದೆ ಮಾತನಾಡುತ್ತಿದ್ದೇನೆ. ಮುಂದಿನ ವರ್ಷ ಶಕ್ಯವಿದೆಯೋ ಇಲ್ಲವೋ ನಾನರಿಯೆ. ತಾವು ಯಾವ ಶ್ರದ್ಧೆಯಿಂದ ಇಲ್ಲಿಗೆ ಬಂದಿರುವಿರೋ ಅದೇ ಶ್ರದ್ಧೆ, ನಿಷ್ಠೆಗಳಿಂದ ದೇಶದ ವಿಚಾರ ಮಾಡಿರಿ. ನೀವು ಉದ್ಯೋಗ ಮಾಡದರೆ ಈ ದಿವಸಗಳು ಖಂಡಿತ

ವಾಗಿ ಹೋಗುವವು. ಇಲ್ಲದಿದ್ದರೆ, ಬಹಳ ಕಷ್ಟದಲ್ಲಿ ಬೀಳಬೇಕಾಗುವದು. ಸದ್ಯದ ಪರಿಸ್ಥಿತಿಯು ಬಗ್ಗೆ ಹಳ್ಳಿಪಳ್ಳಿಗಳಲ್ಲಿ ಚರ್ಚೆ ನಡೆಯಬೇಕು. ಬಾಯಿ ಮುಚ್ಚಿಕೊಂಡು ನಾವು ಒದೆಯನ್ನು ಸಹಿಸಲಾರವೆಂದು ನೀವು ಎಂದು ಸ್ಪಷ್ಟ ಹೇಳುವಿರೋ ಅಂದೇ ಮುಕ್ತಿಯಿದೆ. ನಾವು ಬಂಡು ಹೂಡಬೇಕೆ? ಎಂದು ಯಾರಾದರೂ ಕೇಳಬಹುದು. ಬಂಡು ಹೂಡುವ ಕಾರಣವೂ ಇಲ್ಲ. ಸುಮ್ಮನೆಯೂ ಕೂಡಬೇಕಾಗಿಲ್ಲ. ಎಂದೇ ನನ್ನ ಉತ್ತರ. ಮಾಮಲೇದಾರರು ಯಾರು? ನ್ಯಾಯಾಧೀಶರು ಯಾರು? ಎಲ್ಲರೂ ನಿಮ್ಮವರೇ! ರಾಜ್ಯವೆಲ್ಲ ನಿಮ್ಮ ಕೈಯಲ್ಲಿ. ಅದನ್ನು ನೀವು ತಿಳಿದಿಲ್ಲ. ನಿಮ್ಮ ಅಂತಃಕರಣದಲ್ಲಿ ಕಳಕಳಿಯಿದ್ದರೆ, ನೀವೇ ಮಾತನಾಡುವಿರಿ. ಅಂಜಬೇಡಿರಿ! ರೈತರು, ಕೂಲಿಕಾರರು, ವ್ಯಾಪಾರಸ್ಥರು, ಪಾಟೀಲ, ಕುಲಕರ್ಣಿಯುವರು ಎಲ್ಲರೂ ಈ ರಾಜ್ಯದಲ್ಲಿ ನಮ್ಮ ಸ್ಥಿತಿಯು ಚನ್ನಾಗಿಲ್ಲವೆಂದು ಸ್ಪಷ್ಟವಾಗಿ ಹೇಳಬೇಕು ನಮ್ಮ ಹತ್ತರ ಶಸ್ತ್ರಗಳಿಲ್ಲ. ಆದರೆ ಸ್ವದೇಶಿ ವೃತ ಧಾರಣ ಒಂದೇ ಇದಕ್ಕೆ ಉಪಾಯವಿದೆ. ನಮ್ಮ ಸಹಾಯದಿಂದ ನಡೆದ ರಾಜ್ಯಕ್ಕೆ ದಕ್ಕೆ ಉಂಟಾಗಬೇಕು. ಸ್ವದೇಶಿ ವೃತದ ಬಗ್ಗೆ ಪ್ರತಿಜ್ಞೆ ತೆಗೆದುಕೊಳ್ಳಲು ಈ ಮೊದಲು ಹೇಳಿದ್ದೇನೆ. ಮರೆತಿದ್ದರೆ, ತೆಗೆದುಕೊಳ್ಳಿರಿ. ನೀವು ಅಂಜಿದರೆ ನಿಮಗೆ ತರುಣೋಪಾಯವಿಲ್ಲವೆಂದು ಶ್ರೀ ವಿಠ್ಠಲನ ಸಮಕ್ಷಮದಲ್ಲಿ ಹೇಳುವೆ. ವಿಚಾರಮಾಡಿ ಕಾರ್ಯಕ್ಕೆ ಹತ್ತಿರಿ.''

೧೫ ನೇ ಡಿಸೆಂಬರ ದಿವಸ ಚಿಂಚಪೋಳಿಯಲ್ಲಿ ಕೂಲಿಕಾರರ ಮುಂದೆ ಸ್ವದೇಶಿ ವಿಷಯದ ಮೇಲೆ ಮಾತನಾಡುವಾಗ ''ಸ್ವದೇಶಿಯು ಬಗ್ಗೆ ನಿಮ್ಮ ಬುದ್ಧಿ ಭೇದ ಮಾಡಬಹುದು. ಅದಕ್ಕೆ ಅಂಜಬೇಡಿರಿ. ಸ್ವದೇಶಿಯು ಹೊಟ್ಟೆಯ ಪ್ರಶ್ನೆಯಿದೆ. ಭಟ್ಟರು ಸ್ವದೇಶಿಯ ಆಟ ಹೂಡಿದ್ದಾರೆ. ನಿಮಗೇನೂ ಪ್ರಯೋಜನವಿಲ್ಲೆಂದು ನಿಮ್ಮಲ್ಲಿ ಜಾತಿ, ದ್ವೇಷದ ಬೀಜ ಬಿತ್ತಬಹುದು. ಆದರೆ ಸ್ವದೇಶಿಯಿಂದ ನಿಮ್ಮದೇ ಹಿತವಿದೆ. ಭಟ್ಟರದಲ್ಲ. ನಾವು ನಿಮ್ಮ ಗಿರಣಿಯಲ್ಲಿಯ ಅರಿವೆ ತೆಗೆದುಕೊಳ್ಳುತ್ತೇವೆಂದೇ ನಿಮಗೆ ಕೂಲಿ ದೊರೆಯುತ್ತದೆ. ಅಂದರೆ ಸ್ವದೇಶಿಯ ಲಾಭವು ನಿಮಗೆ ಪ್ರತ್ಯಕ್ಷವಾಗಿ ಆಗುವದು. ನೀವು ೨ ಲಕ್ಷ ಜನರಿರುವಿರಿ. ಸರಕಾರದ ಹತ್ತರ ೨ ಲಕ್ಷ ಸೈನ್ಯವೂ ಇಲ್ಲ. ನೀವು ನಿಮ್ಮ ಸ್ಥಿತಿಯನ್ನು ತಿಳಿದುಕೊಳ್ಳಿರಿ. ಎರಡನೆಯವರಿಗೂ ತಿಳಿಸಿ ಹೇಳಿರಿ.

ನಿಮ್ಮ ದೇಶದಲ್ಲಿ ನಿಮಗೆ ಉದ್ಯೋಗ ಇಲ್ಲದ್ದಕ್ಕಾಗಿಯೇ ಇಲ್ಲಿಗೆ ಬಂದಿರುವಿರಿ. ಸ್ವದೇಶಿಯು, ಉದ್ದೇಶವೂ ನಿಮ್ಮೆಲ್ಲರಿಗೆ ಉದ್ಯೋಗ ಸಿಗಬೇಕೆಂದೇ ಇದೆ'' ಎಂದು ಹೇಳಿದರು

ರಾಷ್ಟ್ರೀಯ ಶಿಕ್ಷಣದ ಬಗೆಗೂ ಪುಣೆ, ಬಡೋದಾ, ಗುರ್ಲಹೊಸೂರ, ಬೆಳಗಾವಿಗಳಲ್ಲಿ ಟಿಳಕರ ಉಪನ್ಯಾಸಗಳಾದವು. ಬೆಳಗಾವಿಯಲ್ಲಿ ಕೆಳಗಿನಂತೆ ಟಿಳಕರು ತಮ್ಮ ವಿಚಾರಗಳನ್ನು ಮಂಡಿಸಿದರು.

''ಹೊಸ ಪೀಳಿಗೆಯ ಅವನತ ಸ್ಥಿತಿಯು ಹೀಗೆ ಇನ್ನೂ ಎಷ್ಟು ದಿವಸ ಸಾಗಬೇಕು ಆದ್ದರಿಂದಲೇ ರಾಷ್ಟ್ರದ ಮುಖಂಡರು ಈ ಪ್ರಶ್ನೆಯನ್ನು ಕೈಯಲ್ಲಿ ತೆಗೆದುಕೊಂಡಿದ್ದಾರೆ. ಸರಕಾರದವರು ವಿದ್ವಾಂಸರನ್ನು ಸಿದ್ಧಪಡಿಸುವರು. ಆದರೆ ಅವರ ಜ್ಞಾನವು ಕುಂಟವಾಗಿರುತ್ತದೆ. ಸರಕಾರದ ಈ ಧೋರಣೆ ನಮಗೆ ಮಾನ್ಯವಿಲ್ಲ. ಇದರಿಂದ ನಮ್ಮ ಜನಾಂಗವು ಕಳೆಗುಂದುವದು. ಆದುದರಿಂದ ನಮ್ಮ ಮಕ್ಕಳ ಶಿಕ್ಷಣವು ನಮ್ಮ ಕೈಯಲ್ಲಿಯೇ ಇರಬೇಕು. ದಾದಾಭಾಯಿಯವರು ಸ್ವರಾಜ್ಯದ ಘೋಷಣೆ ಮಾಡಿ, ವಿಚಾರಕ್ರಾಂತಿ ಮಾಡಿದ್ದಾರೆ. ಆ ವಿಚಾರ ಕ್ರಾಂತಿಯ ಓಘವನ್ನು ಮುಂದರಿಸಬೇಕೆ? ಇಲ್ಲವೆ ತಡೆಹಿಡಿಯಬೇಕೆ ? ನವರೋಜಿಯವರು ಹಾಗೂ ರಮೇಶಚಂದ್ರ ದತ್ತರು ಪರಿಶ್ರಮಬಟ್ಟು ಪ್ರಸ್ಥಾಪಿಸಿದ ಸಿದ್ಧಾಂತಗಳನ್ನು ನಮ್ಮ ಮಕ್ಕಳ ಮನಸ್ಸಿನಲ್ಲಿ ಚಿಕ್ಕಂದಿನಲ್ಲಿಯೇ ಬಿಂಬಿಸಬೇಕು. ರಾಷ್ಟ್ರೀಯ ಶಿಕ್ಷಣ ಪಡೆದವರಿಗೆ ಸರಕಾರಿ ನವಕರಿಗಳು ಸಿಗಲಿಕ್ಕಿಲ್ಲ. ಆದರೆ ನಮ್ಮಲ್ಲಿಯ ವ್ಯಾಪಾರಸ್ಥರಿಗೆ ಸರಕಾರಿ ಶಿಕ್ಷಣದ ಅವಶ್ಯಕತೆಯೆಂದಿಗೂ ಅನಿಸಿಲ್ಲ. ಶಿಸ್ತಿನ ಹೆಸರಿನಿಂದ ಸಾರ್ವಜನಿಕ ಜೀವನದಲ್ಲಿ ಭಾಗ ತೆಗೆದುಕೊಳ್ಳಬಾರದೆಂದು ಸರಕಾರವು ಆಜ್ಞೆ ಹೊರಡಿಸಿದೆ. ಅದನ್ನು ಮುರಿದರೆ ವಿದ್ಯಾರ್ಥಿಗಳು ಪರೀಕ್ಷೆಗೆ ಕೂಡಬಾರದಂತೆ. ನಮಗೇನು ಶಿಸ್ತು ಬೇಡವೆಂದಲ್ಲ–ರಾಷ್ಟ್ರೀಯ ಶಾಳೆಗಳಲ್ಲಿ ಕಳವು ಮಾಡಲು ಕಲಿಸುವೆವೋ ? ವಿದ್ಯಾರ್ಥಿಗಳು ಸಭೆಗೆ ಹೋಗಬಾರದೆಂದು ಕಟ್ಟಪ್ಪಣೆ. ಆದರೆ ಅವರು ಸಭೆಗೆ ಹೋಗಬೇಕೆಂದು ನನ್ನ ಅಭಿಪ್ರಾಯ. ಈ ಸಭೆಗಳಲ್ಲಿ ದೊರೆಯುವ ಶಿಕ್ಷಣವು ಶಾಲೆಗಳಲ್ಲಿ ದೊರೆಯುವದಿಲ್ಲ. ಆದ್ದರಿಂದ ಸಭೆಗಳಿಗೆ ಹೋಗಬೇಕೆಂದು ನಾನು ಅನ್ನುತ್ತೇನೆ''

೧೯೦೭ ರಲ್ಲಿ ಇಂಗ್ಲಂಡದ ಕೂಲಿಕಾರರ ಪಕ್ಷದ ಮುಖಂಡರಾದ ಕೇರ ಹಾರ್ಡಿಯವರು ಪುಣೆಗೆ ಬಂದರು. ಟಿಳಕರು ಅವರಿಗೆ ಯೋಗ್ಯ

ಸ್ವಾಗತವಿತ್ತರು. ಕೇಸರಿ ಕಚೇರಿಗೆ ಅವರು ಭೆಟ್ಟಿಕೊಟ್ಟರು. ಸಾರ್ವಜನಿಕ ಸಭೆಯಿಂದ ಅವರಿಗೆ ಮಾನಪತ್ರಕೊಡಲ್ಪಟ್ಟಿತ್ತು. ಅದರಲ್ಲಿ "ಇಂಗ್ಲಂಡದಲ್ಲಿಯ ಯಾವ ಪಕ್ಷವನ್ನು ಅವಲಂಬಿಸದೆ, ಸ್ವಾವಲಂಬನದಿಂದಲೇ ತಮ್ಮ ಪ್ರಶ್ನೆ ಯನ್ನು ಬಿಡಿಸಿಕೊಳ್ಳಬೇಕೆಂದು ಭಾರತೀಯರಿಗೆ ಅನಿಸಹತ್ತಿದೆ" ಎಂಬ ಮಾತನ್ನು ಸೇರಿಸಲಾಗಿತ್ತು. ಟಿಳಕರು ಭಾಷಣ ಮಾಡುವಾಗ ಭಾರತೀಯರ ಆಕಾಂಕ್ಷೆಯು ನ್ಯಾಯುವಾದುದೆಂದು ಬ್ರಿಟಿಶರಿಗೆ ಮನಗಾಣಿಸಿಕೊಡಬೇಕೆಂದು ಹೇಳಿದರು. ಅದಕ್ಕೆ ಅವರು ಉತ್ತರ ಕೊಡುತ್ತ "ಭಾರತದ ಬಗ್ಗೆ ಮೊದಲು ನನ್ನಲ್ಲಿದ್ದ ಸಹಾನುಭೂತಿಯು ಈಗ ನೂರುಪಟ್ಟು ಹೆಚ್ಚಾಗಿದೆ. ಇಂಗ್ಲಂಡಕ್ಕೆ ಹೋದನಂತರ ನಮ್ಮ ಪಕ್ಷದ ಸಭೆ ಕರೆದು, ನಿಮ್ಮ ಪರಿಸ್ಥಿತಿಯನ್ನು ಅವರ ಮುಂದೆ ಇಡುತ್ತೇನೆ" ಎಂದು ಹೇಳಿದರು. ಈ ಸ್ನೇಹ ಸಂಬಂಧವನ್ನು ಟಿಳಕರು ಕೊನೆಯವರೆಗೂ ಉಳಿಸಿಕೊಂಡರು.

ಮಂದ ಉಗ್ರಪಕ್ಷಗಳ ಹೋರಾಟವು ಹೀಗೆಯೇ ಮುಂದೆ ಸಾಗುತ್ತ ಸುರತ ಕಾಂಗ್ರೆಸ್ಸಿನಲ್ಲಿ ವಿಕೋಪಕ್ಕೆ ಹೋದ ಸಂಗತಿಯನ್ನು ಮುಂದಿನ ಪ್ರಕರಣದಲ್ಲಿ ನೋಡುವಾ.

---

## ಕಾಂಗ್ರೆಸ್ಸು ಕುಪ್ಪಳಿಸಿತು

ಕಲಕತ್ತಾ ಕಾಂಗ್ರೆಸಿನ ನಂತರ ಮಂದ ಹಾಗೂ ರಾಷ್ಟ್ರೀಯ ಪಕ್ಷಗಳಲ್ಲಿ ನಡೆದ ತಿಕ್ಕಾಟವನ್ನು ಹೋದ ಪ್ರಕರಣದಲ್ಲಿ ವರ್ಣಿಸಿದ್ದೇವೆ. ಸರಕಾರದ ದಬ್ಬಾಳಿಕೆಯೂ ಉಗ್ರರೂಪವನ್ನು ತಾಳಹತ್ತಿತು. ಮಂದ ಪಕ್ಷೀಯರು ರಾಷ್ಟ್ರೀಯ ಸಭೆಯು ಹಿಂದಡಿ ಇಡಬೇಕೆಂದು ಬಹಿರಂಗವಾಗಿಯೇ ಪ್ರಯತ್ನಿಸಹತ್ತಿದರು. ಇದನ್ನು ಕಂಡು ಕೆಲವು ಕಾಂಗ್ರೆಸ್ ಭಕ್ತರು ಜಗಳವನ್ನು ಹೆಚ್ಚಿಸುವದಕ್ಕಿಂತ ರಾಷ್ಟ್ರೀಯ ಪಕ್ಷದವರು ಬೇರೊಂದು ಕಾಂಗ್ರೆಸ್ಸನ್ನೇಕೆ ಸೇರಿಸಬಾರದು ? ಎಂದು ಕೇಳಹತ್ತಿದರು. ಟಿಳಕರು ''ಪಕ್ಷಪಕ್ಷಗಳಲ್ಲಿ ಜಗಳವಾಗುವದೆಂದು ಬೇರೆ ಕಾಂಗ್ರೆಸ್ಸು ಕೂಡಿಸಬೇಕೆಂಬ ವಿಚಾರ ಸರಣಿಯು ಯೋಗ್ಯವಾದುದಲ್ಲ. ರಾಷ್ಟ್ರೀಯ ಸಭೆಯ ವತನವನ್ನು ಯಾರಿಗೂ ಹಾಕಿಕೊಟ್ಟಿಲ್ಲ. ರಾಷ್ಟ್ರೀಯ ಸಭೆಯು ಇಡೀ ರಾಷ್ಟ್ರದ್ದು. ಜನಮತವನ್ನು ತಮ್ಮ ಕಡೆಗೆ ಒಲಿಸಿ, ಬಹುಮತವನ್ನು ತಮ್ಮ ಕಡೆಗೆ ಮಾಡಿಕೊಳ್ಳುವುದೇ ನ್ಯಾಯವಾದ ರಾಜ ಮಾರ್ಗವು. ಈ ಮಾರ್ಗವು ಎರಡೂ ಪಕ್ಷದವರಿಗೆ ತೆರವಿದೆ'' ಎಂದು ಉತ್ತರಕೊಟ್ಟರು.

ಕಲಕತ್ತಾ ಕಾಂಗ್ರೆಸ್ಸಿನಲ್ಲಿ ಮುಂದಿನ ವರ್ಷ, ನಾಗಪುರದಲ್ಲಿ ಕಾಂಗ್ರೆಸ ಅಧಿವೇಶನವನ್ನು ಕೂಡಿಸಬೇಕೆಂದು ನಿರ್ಣಯವಾಗಿದ್ದಿತು. ಸ್ವಾಗತ ಸಮಿತಿಯು ಮೂರು ನಾಲ್ಕಾಂಶ ಬಹುಮತದಿಂದ ಅಧ್ಯಕ್ಷರನ್ನೂ ಆರಿಸಬೇಕೆಂಬ ಗೊತ್ತುವಳಿಯೂ ಸ್ವೀಕೃತವಾಗಿದ್ದಿತು. ಮಧ್ಯಪ್ರಾಂತದ ರಾ. ಪಕ್ಷದ ಮುಖಂಡರಾದ ದಾದಾಸಾಹೇಬ ಖಾಪರ್ಡೆ, ಡಾ. ಮುಂಜೆ ಮತ್ತು ಆಳೇಕರರು ನಾಗಪೂರ ಕಾಂಗ್ರೆಸ್ಸಿಗೆ ಟಿಳಕರು ಅಧ್ಯಕ್ಷರಾಗಬೇಕೆಂದು ಸೂಚಿಸಿದರು. ಮಧ್ಯಪ್ರದೇಶ, ಬಂಗಾಲ, ಮದ್ರಾಸ, ಪಂಜಾಬ ಪ್ರಾಂತಗಳು ಅದನ್ನು ಎತ್ತಿ ಹಿಡಿದವು. ರಾಷ್ಟ್ರೀಯ ಪಕ್ಷವು ೧೮೦೦ ಜನ ಸಭಾಸದರನ್ನೂ ೪೨೦೦೦ ರೂಪಾಯಿಗಳನ್ನೂ ಕೂಡಿಸಿತ್ತು. ಮಂದಪಕ್ಷವು ೮೨೦ ಜನ ಸಭಾಸದರನ್ನೂ ೨೦೦೦೦ ರೂಪಾಯಿಗಳನ್ನೂ ಕೂಡಿಸಿದ್ದಿತು. ಅಧ್ಯಕ್ಷ

ಸ್ಥಾನಕ್ಕೆ ಬೇಕಾಗುವ ಕೈ ಬಹುಮತವು ಎರಡೂ ಪಕ್ಷಕ್ಕೆ ಇದ್ದಿಲ್ಲ. ಆದರೆ ಬಹುಮತವು ರಾಷ್ಟ್ರೀಯ ಪಕ್ಷದ್ದಿತ್ತು. ರಾಷ್ಟ್ರೀಯ ಪಕ್ಷದ ಅಧ್ಯಕ್ಷರಾಗುವ ಲಕ್ಷಣಗಳು ಕಾಣಹತ್ತಿದವು. ಮಂದಪಕ್ಷೀಯರು ಈ ಸಂಕಟವನ್ನು ತಪ್ಪಿಸಲು ವಿಶ್ವಪ್ರಯತ್ನಗಳನ್ನು ಕೈಕೊಂಡರು.

ಈ ಪರಿಸ್ಥಿತಿಯಿಂದ ಪಾರಾಗಲು ಮಂದಪಕ್ಷೀಯರು ಕಾರ್ಯಕಾರೀ ಮಂಡಳವನ್ನೇ ಬದಲಿಸುವ ಹೊಂಚು ಹಾಕಿ, ಇದಕ್ಕಾಗಿಯೇ ಸಭೆ ಕರೆದರು. ಸಭೆಯ ನೋಟೀಸನ್ನು ಕೂಡ ಯೋಗ್ಯ ರೀತಿಯಿಂದ ರಾಷ್ಟ್ರೀಯ ಪಕ್ಷಕ್ಕೆ ಕೊಡಲಿಲ್ಲ. ದಿ. ೨೨ ನೇ ಸಪ್ಟಂಬರ ದಿವಸ ನಾ. ಗಂಗಾಧರರಾವ ಚಿಟಣೀಸರು ವರ್ಕಿಂಗ ಕಮಿಟಿಯನ್ನು ವಿಚಾರಿಸದೆ ಸಭೆಕರೆದಿದ್ದರು. ರಾಷ್ಟ್ರೀಯ ಪಕ್ಷದವರಿಗೆ ಈ ಸಭೆಯ ಗಂಧವೂ ಕೂಡ ಹತ್ತಿರಲಿಲ್ಲ. ಈ ಸುದ್ದಿ ತಿಳಿದ ಕೂಡಲೇ ರಾಷ್ಟ್ರೀಯರು ಸಭೆಗೆ ಹೋಗಬೇಕೆಂದು ನಿಶ್ಚಯಿಸಿದರು. ಸಭೆಯು ಅಧಿಕೃತ, ಅನಧಿಕೃತವೆಂದು ಜಗಳ ನಡೆದು ಸಭೆಯು ಮುರಿದು ಹೋಯಿತು. "ಸಭೆಯು ನಿಯಮಗಳಿಗೆ ವಿರೋಧವಾಗಿ ಕೂಡಿಸಲ್ಪಟ್ಟಿದೆ" ಎಂದು ಚಿಟ್ನೀಸರು ಒಪ್ಪಿಕೊಳ್ಳಬೇಕಾಯಿತು. ಅವರು ರಾಜೀನಾಮೆಯನ್ನೇ ಕೊಟ್ಟರು.

ಅಧ್ಯಕ್ಷರ ಬಗೆಗೆ ನಡೆದ ಈ ಗೊಂದಲವನ್ನು ಉದ್ದೇಶಿಸಿ, ಟಿಳಕರು ೮ ನೇ ಅಕ್ಟೋಬರದ ಸಂಚಿಕೆಯಲ್ಲಿ "ಅಧ್ಯಕ್ಷರಾರಾಗಬೇಕೆಂಬ ವಾದ ಪ್ರಾಮುಖ್ಯವಾದುದಲ್ಲ! ಕಲಕತ್ತಾ ಕಾಂಗ್ರೆಸ್ಸಿನಲ್ಲಿ ನವರೋಜಿಯವರು ಹಾಕಿಕೊಟ್ಟ ಮಾರ್ಗವು ಕೇವಲ ಬಂಗಾಲದ ಮಟ್ಟಿಗೇ ಇರದೆ, ಅದು ರಾಷ್ಟ್ರಕ್ಕೇ ಅನ್ವಯಿಸುತ್ತದೆ ಎಂಬ ಮಾತಿಗೆ ಕಾಂಗ್ರೆಸ್ಸು ಒಪ್ಪಿಗೆ ಕೊಡುತ್ತದೆಯೋ ಇಲ್ಲವೋ ಎಂಬುದೇ ಮುಖ್ಯ ಪ್ರಶ್ನೆ! ಟಿಳಕರು ಅಧ್ಯಕ್ಷರಾಗಲು ಒಪ್ಪದಿದ್ದರೆ, ಇಲ್ಲವೆ ನಾಳೆ ಅವರು ಸತ್ತರೆ, ಈ ವಾದವು ಮುಗಿಯಲಾರದು ಎಂದು ನಾವು ಸಾರಿ ಹೇಳುತ್ತೇವೆ. ಈ ಪ್ರಶ್ನೆಯು ವ್ಯಕ್ತಿಯದಲ್ಲ, ಮತದ್ದು ಇರುತ್ತದೆ. ಕಾಂಗ್ರೆಸ್ಸು ಇಬ್ಬರಿಗೂ ಬೇಕಾಗಿದೆ. ಮತಭೇದವು ಸಭೆಮುರಿಯುವದರಿಂದಾಗಲೀ ಇಲ್ಲವೇ ಬೇರೆ ಬೇರೆ ಕಾಂಗ್ರೆಸ್ಸುಗಳನ್ನು ಕೂಡಿಸುವದರಿಂದಾಗಲೀ ಕೊನೆಗೊಳ್ಳುವದೆಂದು ನಮಗೆ ಅನಿಸುವದಿಲ್ಲ. ಇಂದಿಲ್ಲ ನಾಳೆ ರಾಷ್ಟ್ರೀಯ ಪಕ್ಷದ ಬಹುಮತವು ಕಾಂಗ್ರೆಸ್ಸಿನಲ್ಲಿ ಖಂಡಿತವಾಗಿ ಆಗುವದೆಂದು ನಾನು ಎದೆ ತಟ್ಟಿ ಹೇಳುತ್ತೇನೆ" ಎಂದು ಬರೆದರು.

ಗಂಡಹೆಂಡರ ನಡುವೆ ಕೂಸು ಸುಗ್ಗಾಗಬಾರದೆಂದು ಟಿಳಕರಿಗೆ ಅನಿಸುತ್ತಿದ್ದಿತು. ಇಬ್ಬರಲ್ಲಿಯೂ ಸಂಧಿಯಾಗಬೇಕೆಂದು ಅಪೇಕ್ಷಿಸುತ್ತಿದ್ದರು. ಮಂದಪಕ್ಷವು ರಾಷ್ಟ್ರೀಯ ಪಕ್ಷದವರು ಕೂಡಿಸಿದ ಹಣದಲ್ಲಿ ೧೫ ಸಾವಿರ ರೂಪಾಯಿಗಳನ್ನು ಕೊಡಬೇಕು. ಮತ್ತು ಮಂದಪಕ್ಷದವರ ಅಧ್ಯಕ್ಷರನ್ನು ಒಪ್ಪಿಕೊಳ್ಳಬೇಕೆಂದು ಸೂಚಿಸಿತು. ರಾ. ಪಕ್ಷದವರು ರಾಷ್ಟ್ರೀಯ ಪಕ್ಷದ ಅಧ್ಯಕ್ಷರನ್ನು ಮಾಡುವ ಕರಾರಿನ ಮೇಲೆ ಹಣ ಕೂಡಿಸಿದ್ದೇವೆ. ಮಂದಪಕ್ಷೀಯರು ಬೇಕಾದರೆ ಕಾಂಗ್ರೆಸ್ಸು ಕೂಡಿಸಲಿ. ಹಣವನ್ನು ಬಿಟ್ಟು ಉಳಿದ ಎಲ್ಲ ರೀತಿಯಿಂದ ನೆರವಾಗುವೆವು. ಇಬ್ಬರಿಗೂ ಬೇಕಾದ ಸುರೇಂದ್ರನಾಥ ಬ್ಯಾನರ್ಜಿಯವರನ್ನು ಅಧ್ಯಕ್ಷರನ್ನಾಗಿ ಮಾಡಲಿ. ಇದು ಅವರ ಮನಸ್ಸಿಗೆ ಬರದಿದ್ದರೆ, ರಾಜೀನಾಮೆಕೊಟ್ಟು ನಾವು ಮನೆಯಲ್ಲಿ ಕೂಡಲೂ ಸಿದ್ಧರಿದ್ದೇವೆ. ಇಷ್ಟಾದರೂ ಮಂದಪಕ್ಷೀಯರಿಗೆ ಕಾಂಗ್ರೆಸ್ಸು ಕೂಡಿಸುವ ಶಕ್ತಿಯಿಲ್ಲದಿದ್ದರೆ ಹೊಸಪಕ್ಷವು ತನ್ನ ಶಕ್ತಿಯ ಮೇಲೆ ಕಾಂಗ್ರೆಸ್ಸನ್ನು ಸೇರಿಸಲು ಸಿದ್ಧವಿದೆ. ಹೀಗಾದರೆ ಅಧ್ಯಕ್ಷಪದ ಮಾತ್ರ ಮಂದಪಕ್ಷೀಯರಿಗೆ ದೊರೆಯಲಾರದು. ಯಾವುದಕ್ಕಾದರೂ ಸಿದ್ಧವಾಗಬೇಕೆಂದು ಸೂಚಿಸಿದರು. ಹಗ್ಗ ಹರಿಯಲಿಲ್ಲ ಕೋಲು ಮುರಿಯಲಿಲ್ಲ ಎಂಬಂತಾಯಿತು.

೨೯ ನೇ ಅಕ್ಟೋಬರದ ಸಂಚಿಕೆಯಲ್ಲಿ ''ಮಂದಪಕ್ಷವು ಒಪ್ಪಂದಕ್ಕೆ ಸಿದ್ಧವಿರದಿದ್ದರೆ, ಹೊಸಪಕ್ಷವು ಈ ಸಂಗತಿಯನ್ನು ಅ. ಭಾ. ಕಾ. ಕಮಿಟಿಗೆ ತಿಳಿಸಿ, ಸ್ವಾಗತ ಸಮಿತಿಯಲ್ಲಿಯ ತಮ್ಮ ಕೈ ಹಿಂತೆಗೆದುಕೊಂಡು ಸುಮ್ಮನಿರಲು ನಾವು ಸಿದ್ಧರಿದ್ದೇವೆಂದು ತಿಳಿಸಬೇಕು. ನಾಗಪುರದಲ್ಲಿ ಕಾಂಗ್ರೆಸ್ಸು ಸೇರದಿದ್ದರೆ, ಕಾಂಗ್ರೆಸ್ಸಿಗೂ ನಾಗಪುರದ ಜನರಿಗೂ ಅವಮಾನವಾಗುವದು' ಎರಡೂ ಪಕ್ಷಗಳು ಸಿದ್ಧರಿರದಿದ್ದರೆ, ನಾಗಪುರದ ಜನರು ಸಿದ್ಧರಿರುವರೆಂದು ಅ. ಭಾ. ಕಾ. ಕಮಿಟಿಗೆ ತಿಳಿಸಬೇಕು'' ಎಂದು ಟಿಳಕರು ಸೂಚಿಸಿದರು.

ನಾಗಪುರದಲ್ಲಿ ಕಾಂಗ್ರೆಸ್ ಸೇರುವದು ಅಶಕ್ಯವೆಂದು ತಿಳಿದೊಡನೆ ಎರಡೂ ಪಕ್ಷದವರ ಸಭೆಯು ಒಪ್ಪಂದಕ್ಕಾಗಿ ಮುಂಬಯಿಯಲ್ಲಿ ಮೆಥಾರವರ ಮನೆಯಲ್ಲಿ ಸೇರಿತು. ಮುಂಜೆ, ಮೆಥಾರವರಲ್ಲಿ ಚಕಮಕಿಯಾಯಿತು. ''ಟಿಳಕರನ್ನು ಅಧ್ಯಕ್ಷರನ್ನಾಗಿ ಆರಿಸಬೇಕೆಂದು ನಾಗಪೂರದ ಜನರ ಅಭಿಪ್ರಾಯವಿದೆ, ಆದರೆ ನಿಯಮಗಳಿಗೆವಿರುದ್ಧವಾಗಿ ಅವರನ್ನು

ಅಧ್ಯಕ್ಷರನ್ನಾಗಿ ಮಾಡಬೇಕೆಂದು ನಾವು ಇಚ್ಛಿಸುವದಿಲ್ಲ. ಗುಪ್ತಮತದಾನ ತೆಗೆದುಕೊಳ್ಳೋಣ! ಟಿಳಕರು ಆರಿಸಿ ಬರದಿದ್ದರೆ, ಆರಿಸಿ ಬಂದವರನ್ನು ಮಾನ್ಯಮಾಡುವಾ!" ಎಂದು ಮುಂಜೆಯವರು ಹೇಳಿದರು. ಆಗ ಮೆಥಾರವರ ಅಂತರಂಗ ಹೊರಬಿದ್ದಿತು. ಮೆಥಾರವರು "ಸ್ವಾಗತ ಸಮಿತಿಯು ನಿಮಗೆ ದುಡ್ಡುಕೊಡದಿದ್ದರೆ ಏನು ಮಾಡುವಿರಿ?" ಎಂದು ಕೇಳಿದರು. ಮುಂಜೆಯುವರು "ಟಿಳಕರ ಸಲುವಾಗಿ ಪ್ರಸಂಗ ಬಂದರೆ ನಾವು ಭಿಕ್ಷೆ ಬೇಡಲು ಸಿದ್ಧರಿದ್ದೇವೆ ಹಣವನ್ನು ಕೂಡಿಸಿ ಕಾಂಗ್ರೆಸ್ಸನ್ನು ಯಶಸ್ವಿಯಾಗಿ ಮಾಡುವೆವು." ಎಂದರು. ಮುಂಜೆಯವರ ಈ ನಿರ್ಧಾರವನ್ನು ಕಂಡು 'ನಿಮಗೆ ಟಿಳಕರೇ ಯಾಕೆ ಅಧ್ಯಕ್ಷರು ಬೇಕು? ಡಾ| ರಾಜಬಿಹಾರಿಯುವರು ಏಕೆ ಬೇಡ?' ಎಂದರು. ಅದಕ್ಕೆ ಮುಂಜೆಯುವರು 'ಅದು ನಮ್ಮ ಇಚ್ಛೆ' ಎಂದು ಕೂಡಲೇ ಉತ್ತರಿಸಿದರು.

ನಾಗಪೂರದ ಮಂದಪಕ್ಷೀಯರು ಕಾಂಗ್ರೆಸನ್ನು ಕೂಡಿಸುವದು ತಮ್ಮಿಂದ ಆಗುವದಿಲ್ಲೆಂದು ಮೆಥಾರವರಿಗೆ ತಿಳಿಸಿದರು. ೧೦ ನೇ ನವಂಬರಕ್ಕೆ ಮೆಥಾರವರ ಮನೆಯಲ್ಲಿ ಅ. ಭಾ. ಕಾ. ಕಮೀಟಿಯ ಸಭೆ ಸೇರಿತು. ಕೇವಲ ೧೩ ಜನ ಮಾತ್ರ ಬಂದಿದ್ದರು. ಟಿಳಕ, ಖಾಪರ್ಡೆಯವರು ಉಪಸ್ಥಿತರಿದ್ದರು. ಎರಡೂ ಪಕ್ಷಗಳಲ್ಲಿ ಕೈಗೆ ಕೈ ಹತ್ತುವ ಪ್ರಸಂಗ ಬಂದಿತು. ಮೆಥಾರವರ ಪೂರ್ವ ಯೋಜನೆಯಂತೆ ಸುರತದ ಶಿಷ್ಟಮಂಡಳವೊಂದು ಮುಂದೆ ಬಂದು, ಕಾಂಗ್ರೆಸನ್ನು ಸೇರಿಸಲು ಆಮಂತ್ರಣಕೊಟ್ಟಿತು ಮತ ತೆಗೆದುಕೊಳ್ಳುವ ನಾಟಕ ನಡೆಯಿತು. ಟಿಳಕ ಖಾಪರ್ಡೆಯವರು ತಟಸ್ಥ ಉಳಿದರು. ನಾಗಪುರದಿಂದ ಕಾಂಗ್ರೆಸ್ಸು ಮಂದಪಕ್ಷೀಯರ ಭದ್ರಕೋಟೆಯಾದ ಸುರತಕ್ಕೆ ತರಲ್ಪಟ್ಟಿತು.

"ಈ ಜಗಳವು, ಹೊಸಪಕ್ಷವು ಪೂರ್ಣವಾಗಿ ವಿಜಯಿಯಾದಾಗಲೇ ಮುಗಿಯುವದು ಎಂಬುದನ್ನು ಲಕ್ಷದಲ್ಲಿಡಬೇಕು. ಸುರತವು ಭದ್ರವಾದ ಕೋಟೆಯೆಂದು ಮೆಥಾರವರು ತಿಳಿದಿರಬೇಕು. ಆದಾದರೂ ಸುರಕ್ಷಿತವಾಗಿದೆಯೋ ಇಲ್ಲವೋ ಎಂಬುದನ್ನು ಯಾರು ಬಲ್ಲರು?" ಎಂದು ಟಿಳಕರು ಪ್ರಶ್ನಿಸಿದರು. ಅಧ್ಯಕ್ಷಪದಕ್ಕೆ ಸೂಚಿಸಿದ ತಮ್ಮ ಹೆಸರನ್ನು ಹಿಂತೆಗೆದುಕೊಂಡು ಲಾಲಾಲಜಪತರಾಯರ ಹೆಸರನ್ನು ಸೂಚಿಸಿದರು. ಡಿಸೆಂಬರ ೧೦

ನೇ ತಾರೀಖಿನ ಕೇಸರಿಯಲ್ಲಿ ''ಸ್ವಾರ್ಥತ್ಯಾಗ ಮತ್ತು ರಾಷ್ಟ್ರಕ್ಕಾಗಿ ಕಷ್ಟ ಸೋಸುವ ದೃಷ್ಟಿಯಿಂದ ಲಜಪತರಾಯರು ಡಾ. ಘೋಷರಿಗಿಂತ ಸಾವಿರಪಟ್ಟು ಮಿಗಿಲಾಗಿರುವರು. ಕಾಂಗ್ರೆಸ್ಸು ಭಾರತೀಯರ ಹಕ್ಕುಗಳನ್ನು ಸರಕಾರದ ಮುಂದೆ ಇಟ್ಟು ಹೋರಾಡುವದಕ್ಕಾಗಿ ಹುಟ್ಟಿದೆ. ಯಾವುದೊಂದು ಕಾರ್ಯವು ಸರಕಾರಕ್ಕೆ ರುಚಿಸುವದೋ ಇಲ್ಲವೋ ಅಥವಾ ಸಿಟ್ಟಿಗೇಳುವದೋ ಎಂಬುದನ್ನು ನೋಡಿಕೊಂಡು ಚಳವಳಿಯನ್ನು ಮಾಡಬೇಕೆಂದರೆ ಕಾಂಗ್ರೆಸ್ ಏತಕ್ಕೆ ಬೇಕು? ಲಾಲಾಜಿಯವರಿಗೆ ಸನ್ಮಾನವನ್ನು ಮಾಡುವದಿದ್ದರೆ ಅವರನ್ನು ಅಧ್ಯಕ್ಷರನ್ನು ಮಾಡಿರಿ'' ಎಂದು ಬರೆದರು.

ಇದನ್ನೋದಿದೊಡನೆ ಗೋಖಲೆಯವರ ಅಂತರಂಗವು ಹೊರಬಿದ್ದಿತು. ಲಜಪತರಾಯರನ್ನು ಅಧ್ಯಕ್ಷರನ್ನಾಗಿ ಮಾಡಿ ಸರಕಾರವನ್ನು ರೇಗಿಗೆಬ್ಬಿಸುವ ಸಮಯವು ಇದಲ್ಲ. ಹಾಗೆ ಮಾಡಿದರೆ ಸರಕಾರವು ಸಿಟ್ಟಿಗೆದ್ದು ಕ್ಷಣಾರ್ಧದಲ್ಲಿ ನಮ್ಮ ಚಳುವಳಿಯನ್ನೆಲ್ಲ ಮಣ್ಣು ಮುಕ್ಕಿಸಿಬಿಡುವುದು? ಎಂದರು. ವಾದವು ವಿಕೋಪಕ್ಕೆ ಹೋಯಿತು. ಸುಶಿಕ್ಷಿತ ಮಂದಪಕ್ಷಿಯರು ಪುಂಡರಾದ ಶ್ರೀ ಅಂಬಾಲಾಲ ಸಾಕರಲಾಲ ಎಂಬುವವರನ್ನು ಮುಂದೆ ಮಾಡಿದರು. "ಲಾಲಾಜಿಯವರ ಹೆಸರನ್ನು ಮುಂದೆ ಮಾಡಿ ಸುಮ್ಮನೆ ಅವರಿಗೇಕೆ ಅಪಮಾನ ಮಾಡುವಿರಿ. ಅ. ಭಾ ಕಾ. ಕಮಿಟಿಯು ನಮ್ಮ ಕಿಸೆಯಲ್ಲಿದೆ'' ಎಂದು ಅಂಬಾ ಲಾಲರು ಮೈಮೇಲೆ ಬಂದರು. ರಾಷ್ಟ್ರೀಯ ಪಕ್ಷದವರು ಸಿಟ್ಟಿಗೆದ್ದು ಸಭೆಬಿಟ್ಟು ಎದ್ದು ಹೋದರು. ಮೆಥಾರವರು ಇದು ಒಳ್ಳೇ ಸಂಧಿಯೆಂದು ಡಾ. ರಾಜ ಬಿಹಾರಿಯವರ ಹೆಸರನ್ನು ಅಧ್ಯಕ್ಷಸ್ಥಾನಕ್ಕೆ ಸೂಚಿಸಿ, ಸರ್ವಾನುಮತದಿಂದ ಪಾಸಾಯಿತೆಂದು ಸಾರಿದರು.

ಕಾಂಗ್ರೆಸ್ಸು ಸೇರಲು ಒಂದು ವಾರವಿದ್ದಿತು. ಟಿಳಕರು ೨೩ ನೇ ತಾರೀಖಿಗೇ ಸುರತಕ್ಕೆ ಬಂದರು. ರಾಷ್ಟ್ರೀಯ ಪಕ್ಷದ ಧ್ವಜವನ್ನು ಊರಿದರು. ಅಂಬಾಲಾಲ ಸಾಕರಲಾಲರ ಜೋಡಿಗೆ, ದಾದಾಸಾಹೇಬ ಖಾಪರ್ಡೆಯವರನ್ನು ಹುದ್ದರಿಯಾಗಿ ಆರಿಸಿದರು. ಖಾಪರ್ಡೆಯವರು ಗುಜರಾಥಿಯನ್ನು ಚನ್ನಾಗಿ ಬಲ್ಲವರಾಗಿದ್ದರು ಎರಡೂ ಪಕ್ಷಗಳ ಸಭೆಗಳು ಜರಗುಹತ್ತಿದವು. ಖಾಪರ್ಡೆಯವರು ಅಂಬಾಲಾಲರನ್ನು ಹಣ್ಣುಗಾಯಿ ನೀರುಗಾಯಿ ಮಾಡಿಬಿಡಹತ್ತಿದರು.

ಲೋಕಮಾನ್ಯರ ಸ್ವಾಗತದ ವ್ಯವಸ್ಥೆಯನ್ನೇನೂ ಸ್ವಾಗತ ಸಮಿತಿಯು ಯವರು ಮಾಡಿರದಿದ್ದರೂ ರಾಷ್ಟ್ರೀಯ ಪಕ್ಷದವರು ಮಾತ್ರ ಅಪೂರ್ವವಾದ ಸ್ವಾಗತವನ್ನಿತ್ತರು. ದೊಡ್ಡ ಮೆರವಣಿಗೆಯಾಯಿತು. ಮೆರವಣಿಗೆಯ ಮುಂದೆ ಕುದುರೆಯ ಸ್ವಾರರು ಮಾರ್ಗ ಮಾಡುತ್ತ ಮುಂದೆ ನಡೆದಿದ್ದರು. ಈ ದೃಶ್ಯವು ಶಿವಾಜಿಯ ಹಿಂದಿನ ನೆನಪನ್ನು ಕೊಡುತ್ತಿದ್ದಿತು. ಅಂದಿನ ಸಭೆಯಲ್ಲಿ ಟಿಳಕರು "ರಾಷ್ಟ್ರೀಯ ಸಭೆಯಲ್ಲಿ ಒಡಕನ್ನು ಹುಟ್ಟಿಸುವದಕ್ಕಾಗಲಿ ಇಲ್ಲವೇ ಜಗಳವಾಡುವದಕ್ಕಾಗಲೀ ನಾನು ಇಲ್ಲಿಗೆ ಬಂದಿಲ್ಲ. ಹೋದವರ್ಷ ಕಲಕತ್ತೆ ಯಲ್ಲಿ ಸ್ವೀಕರಿಸಿದ ಗೊತ್ತುವಳಿಗಿಂತ ಕಾಂಗ್ರೆಸ್ಸು ಹಿಂದೆ ಹೆಜ್ಜೆ ಇಡದಂತೆ ನೋಡಿಕೊಳ್ಳುವದಕ್ಕಾಗಿ ಬಂದಿದ್ದೇವೆ. ಇದು ನಮ್ಮ ನಿರ್ಧಾರವು. ರಾಷ್ಟ್ರೀಯ ಸಭೆಯನ್ನು ದುರ್ಬಲಗೊಳಿಸುವದಕ್ಕಾಗಿ ಹೊಸ ಪಕ್ಷದ ಧ್ವಜವನ್ನು ನಿಲ್ಲಿಸಿರದೆ, ರಾಷ್ಟ್ರವು ಸರಕಾರದೊಡನೆ ಹೋರಾಡಲು ಸಿದ್ಧವಾಗುವದಕ್ಕಾಗಿ ನಿಲ್ಲಿಸಿದೆ ಕಾಂಗ್ರೆಸ್ಸಿನ ಸೂತ್ರಗಳನ್ನು ಕೈಯಲ್ಲಿಟ್ಟು ಕೊಂಡ ಜನರು ಕಲಕತ್ತೆಯ ಗೊತ್ತುವಳಿಗಳನ್ನು ಮಣ್ಣುಗೂಡಿಸುವ ಸಂಕಲ್ಪಮಾಡಿದ್ದರೆ ಆ ಅನಿಷ್ಟ ಪ್ರಸಂಗವನ್ನು ತಪ್ಪಿಸುವದಕ್ಕಾಗಿ ಸುರತದ ನಾಗರಿಕರು ನಮಗೆ ಸರ್ವರೀತಿಯಿಂದ ಸಹಾಯ ಮಾಡಬೇಕು" ಎಂದು ಮಾತನಾಡಿದರು.

ಮರುದಿನವೇ ಲಾಲಾಲಜಪತರಾಯರು ಸುರತಕ್ಕೆ ಬಂದರು. ಅವರ ಸ್ವಾಗತವು ಅತ್ಯದ್ಭುತವಾಯಿತು. ಇದರಲ್ಲಿ ಎರಡು ಉದ್ದೇಶಗಳು ಇದ್ದವು. ಸರಕಾರವು ವಕ್ರದೃಷ್ಟಿಯಿಂದ ನೋಡಿದರೂ ದೇ. ಭ. ರನ್ನು ಸನ್ಮಾನಿಸುವ ದರಲ್ಲಿ ನಾವು ಬೆದರುವದಿಲ್ಲೆಂದು ಸರಕಾರಕ್ಕೆ ತಿಳಿಸುವದು ಒಂದು ದೃಷ್ಟಿ. ಮಂದಪಕ್ಷೀಯರು ಅಧ್ಯಕ್ಷಸ್ಥಾನದ ಸನ್ಮಾನವನ್ನು ಮಾಡದಿದ್ದರೂ ಅಧ್ಯಕ್ಷರಿಗಿಂತ ಹೆಚ್ಚಿನ ಸನ್ಮಾನವನ್ನು ನಾಗರಿಕರು ಮಾಡಿದರೆಂಬುದನ್ನು ಅವರಿಗೆ ಮನವರಿಕೆಮಾಡಿಕೊಡಬೇಕಾಗಿದ್ದುದು ಎರಡನೇದೃಷ್ಟಿ. ನಿಯೋ ಜಿತ ಅಧ್ಯಕ್ಷರಾದ ಡಾ. ಘೋಷರು ಬಂದಾಗ, ಅವರ ಸತ್ಕಾರವನ್ನು ಸ್ವಾಗತ ಸಮಿತಿಯು ಏರ್ಪಡಿಸಿದ್ದರೂ ಅದು ತೀರ ಮಖಾಳವಾಯಿತು. ಇದರಿಂದ ರಾಷ್ಟ್ರೀಯ ಪಕ್ಷದ ಪ್ರಭಾವವು ಜನತೆಯ ಮೇಲೆ ಬೀಳುತ್ತ ನಡೆ ದಿದೆ ಎಂಬುದು ವ್ಯಕ್ತವಾಯಿತು.

ಸುರತದಲ್ಲಿ ರಾಷ್ಟ್ರೀಯಪಕ್ಷ, ಮಂದಪಕ್ಷ ಎಂಬ ಎರಡು ಗುಂಪುಗಳಾದವು. ಉಭಯತರಲ್ಲಿ ಒಪ್ಪಂದ ಮಾಡಿಸುವ ಪ್ರಯತ್ನಗಳು ನಡೆದವು. ಅರವಿಂದಬಾಬುಗಳ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಪಕ್ಷದ ಪರಿಷತ್ತು ಸೇರಿತು. ಕಲಕತ್ತಾ ಕಾಂಗ್ರೆಸ್ಸಿನಲ್ಲಿ ಪಾಸಾದ ಗೊತ್ತುವಳಿಗಳಿಗಿಂತ ಒಂದು ಇಂಚಾದರೂ ಈ ಕಾಂಗ್ರೆಸ್ಸು ಹಿಂದೆ ಸರಿಯಕೂಡದೆಂದು ಗೊತ್ತುವಳಿಯಾಯಿತು. ಉಳಿದ ವಿಷಯಗಳ ಬಗ್ಗೆಯೂ ಸೂಚನೆ ಮಾಡಲಾಯಿತು. ಅಷ್ಟರಲ್ಲಿ ಸ್ವಾಗತ ಸಮಿತಿಯು 'ಚತುಸ್ಸೂತ್ರಗಳನ್ನು ಕಾರ್ಯಕ್ರಮದ ಯಾದಿಯಲ್ಲಿ ಸೇರಿಸಲಾಗಿಲ್ಲವೆಂಬ ವಾರ್ತೆಯು ಸುಳ್ಳು' ಎಂದು ಒಂದು ಪ್ರಕಟನೆಯನ್ನು ಹೊರಡಿಸಿತು. ೨೫ ನೇ ತಾರೀಖಿನ ದಿವಸ ಗೋಖಲೆಯವರು ಸಿದ್ಧಪಡಿಸಿದ ಗೊತ್ತುವಳಿಗಳ ಪ್ರತಿಯು ಟಿಳಕರ ಕೈಸೇರಿತು. ಅದರಲ್ಲಿ ಸಾಮ್ರಾಜ್ಯಾಂತರ್ಗತ ಸ್ವರಾಜ್ಯಧ್ಯೇಯವು ಸೇರಿಸಲ್ಪಟ್ಟಿತ್ತು. ಆದರೆ ಅನೇಕ ಮಾತುಗಳು ರಾಷ್ಟ್ರೀಯ ಪಕ್ಷಕ್ಕೆ ವಿಘಾತವಾಗಿದ್ದವು. ಇದನ್ನು ಕಂಡು ಲಾಲಾಜಿಯವರು ಎರಡೂ ಪಕ್ಷದ ಮುಖಂಡರನ್ನೂ ಒಂದೆಡೆ ಕೂಡಿಸಿ ಒಪ್ಪಂದಕ್ಕೆ ತರಬೇಕೆಂದು ಯತ್ನಿಸಿದರು. ಅದು ವ್ಯರ್ಥವಾಯಿತು. ನಂತರ ಟಿಳಕ ಹಾಗೂ ಖಾಪರ್ಡೆಯವರು ಬ್ಯಾನರ್ಜಿಯವರ ಭೆಟ್ಟಿಯಾಗಿ ರಾಷ್ಟ್ರೀಯ ಪಕ್ಷದ ಸ್ಥಾನಮಾನಗಳಿಗೆ ಧಕ್ಕೆ ಬರದಂತೆ ಮತ್ತು ಅಧ್ಯಕ್ಷರ ಸೂಚನೆಯನ್ನು ಮಾಡುವಾಗ ಲಾಲಾಜಿಯವರ ಹೆಸರನ್ನು ಗೌರವಪೂರ್ವಕವಾಗಿ ಉಲ್ಲೇಖಿಸಿದರೆ, ಒಪ್ಪಂದವು ಶಕ್ಯವಿದೆಯೆಂದು ಸೂಚಿಸಿದರು. ಎರಡನೆಯ ಸೂಚನೆಯ ಬಗ್ಗೆ ಸುರೇಂದ್ರರಿಗೆ ಹೊಣೆ ಹೊರುವದು ಶಕ್ಯವಿದ್ದರೂ ಮೊದಲಿನ ಸೂಚನೆಯ ಬಗ್ಗೆ ಆಶ್ವಾಸನಕೊಡಲು ಸಾಧ್ಯವಿದ್ದಿಲ್ಲ. ಆಮೇಲೆ ಟಿಳಕರು ಸ್ವಾಗತಾಧ್ಯಕ್ಷರ ಭೆಟ್ಟಿಯಾಗಲು ಯತ್ನಿಸಿದರು. ಸಂಧ್ಯೆಗೆ ಕೂತಿರುವರೆಂಬ ನೆವ ಮಾಡಿ ಭೆಟ್ಟಿಯಾಗಲಿಲ್ಲ. ಗೊತ್ತುವಳಿಗಳ ಪ್ರತಿಯನ್ನು ಟಿಳಕರು ಕೇಳಿದರು. ೨೬ ನೇ ತಾರೀಖಿನ ಮೂರು ಘಂಟೆಗೆ ಅದು ಅವರ ಕೈಗೆ ಸಿಕ್ಕಿತು. ಆದರೆ ಈ ಪ್ರತಿಯು, ಮೊದಲನೇ ದಿವಸವೇ 'ಅಡ್ವೋಕೇಟ ಆಫ್ ಇಂಡಿಯಾ' ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಇದೆಲ್ಲವೂ ಮಂದಪಕ್ಷೀಯರ ಗತ್ತಾಗಿದ್ದಿತು. ಇಂತಹ ಪರಿಸ್ಥಿತಿಯಲ್ಲಿ ದೇಶದ ದೃಷ್ಟಿಯಿಂದ ಮಂದಪಕ್ಷೀಯರನ್ನು ಮೊದಲಿನಿಂದಲೂ ವಿರೋಧಿಸದೆ ಬೇರೆ ಮಾರ್ಗವೇ ಟಿಳಕರಿಗೆ ಉಳಿಯಲಿಲ್ಲ.

೨೬ ನೇ ಡಿಸೆಂಬರ ೧೯೦೭ ನೇ ದಿವಸ ಕಾಂಗ್ರೆಸ್ಸಿನ ಅಧಿವೇಶನವು ಪ್ರಾರಂಭವಾಯಿತು. ಸ್ವಾಗತಾಧ್ಯಕ್ಷರಾದ ಶ್ರೀ ತ್ರಿಭುವನದಾಸ ಮಾಳವೀಯವರ ಭಾಷಣವಾಯಿತು. ಅಂಬಾಲಾಲ ದೇಸಾಯಿಯವರು, ಡಾ. ಘೋಷರವರು ಅಧ್ಯಕ್ಷರಾಗಬೇಕೆಂದು ಸೂಚಿಸಿದರು. ಗದ್ದಲಕ್ಕೆ ಪ್ರಾರಂಭವಾಯಿತು. ಅಂತೂ ಇಂತೂ ಅವರ ಭಾಷಣವು ಮುಗಿಯಿತು. ಸುರೇಂದ್ರನಾಥ ಬ್ಯಾನರ್ಜಿಯವರು ಅನುಮೋದನಕೊಡಲು ಎದ್ದರು. ಜನರಲ್ಲಿ ಕೂಗಾಟವೆದ್ದಿತು. ಶಾಂತಮಾಡಲು ಸ್ವಾಗತಾಧ್ಯಕ್ಷರು ಎಷ್ಟು ಗಂಟೆ ಬಾರಿಸಿದರೂ ಎಲ್ಲವೂ ವ್ಯರ್ಥವಾಯಿತು. ಆಗ ಸಭೆಯನ್ನು ಮರುದಿವಸಕ್ಕೆ ಮುಂದುವರಿಸಿದರು.

ಸಭೆ ಮುಂದುವರಿಸಿದ ನಂತರ ವಾತಾವರಣವೆಲ್ಲ ಕಾದು ಹೋಗಿತ್ತು. ಒಡಕು ಉಂಟಾದರೆ ಅದರ ಪರಿಣಾಮವೇನೆಂದು ಎಲ್ಲಕಡೆಗೆ ಚರ್ಚೆ ನಡೆಯಿತು. ಗೋಖಲೆ ಹಾಗು ಟಿಳಕರಲ್ಲಿ ಒಪ್ಪಂದ ಮಾಡಿಸಲು ಉಪಸ್ವಾಗತಾಧ್ಯಕ್ಷರಾದ ಡಾ. ಚುನಿಲಾಲ ಸರಯ್ಯಾರವರು ಪ್ರಯತ್ನಿಸಿದರು. ಗೋಖಲೆಯವರು ಭೆಟ್ಟಿ ತೆಗೆದುಕೊಳ್ಳಲು ನಿರಾಕರಿಸಿದರು. ಈ ಪ್ರಯತ್ನವೂ ವ್ಯರ್ಥವಾಯಿತು. ಪಾರ್ಲಿಮೆಂಟಿನ ಸಭಾಸದರಾದ ರೂಥರ ಫೋರ್ಡರು ಒಪ್ಪಂದ ಮಾಡಿಸಲು ಪ್ರೊ. ಗಜ್ಜರರ ಬಂಗಲೆಯಲ್ಲಿ ಸಭೆ ಕೂಡಿಸುವರು. ಎಂದು ತಿಳಿದುಕೂಡಲೆ ಟಿಳಕ ಹಾಗೂ ಖಾಪರ್ಡೆಯವರು ಪ್ರೊ. ಗಜ್ಜರರ ಬಂಗ್ಲೆಗೆ ಹೋಗಿ ಕುಳಿತರು. ಆದರೆ ರೂಥರ ಫೋರ್ಡರೇ ಬರಲಿಲ್ಲ. ಒಪ್ಪಂದವಂತೂ ದೂರೇ ಉಳಿಯಿತು.

ಟಿಳಕರು ರಾಜಿಯಾಗಬೇಕೆಂದು ಮನಃಪೂರ್ವಕ ಪ್ರಯತ್ನಿಸಿದರು. ತಾವೇ ಮುಂದಾಗಿ 'ಕೆಲವು ಸಮಯದವರೆಗೆ ಅಧ್ಯಕ್ಷರ ಚುನಾವಣೆಯನ್ನು ಮುಂದೆಹಾಕಬೇಕು. ಪ್ರತಿಯೊಂದು ಪ್ರಾಂತದಿಂದ ಎರಡೂ ಪಕ್ಷಗಳ ಒಬ್ಬೊಬ್ಬ ಪ್ರತಿನಿಧಿಗಳನ್ನು ತೆಗೆದುಕೊಂಡು ಒಂದು ಸಮಿತಿಯನ್ನು ನಿರ್ಮಿಸಬೇಕು. ಅವರು ರಾಜಿಮಾಡಿಸಬೇಕು' ಎಂದು ಸೂಚಿಸಿದರು. ಗಜ್ಜರ ಹಾಗೂ ಸರಯ್ಯಾರವರು ಈ ಸುದ್ದಿಯನ್ನು ಮೇಥಾರವರಿಗೆ ಮುಟ್ಟಿಸುವ ಹೊಣೆ ಹೊತ್ತರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಹೀಗೆ ಎಲ್ಲವೂ ವ್ಯರ್ಥವಾದನಂತರ ಟಿಳಕರು ಸ್ವಾಗತಾಧ್ಯಕ್ಷರ ಕಡೆಗೆ

"ಅಧ್ಯಕ್ಷರ ಆಯ್ಕೆಗೆ ಅನುಮೋದನ ಕೊಟ್ಟನಂತರ ಪ್ರತಿನಿಧಿಗಳನ್ನು ಉದ್ದೇಶಿಸಿ, ನನಗೆ ಮಾತನಾಡಬೇಕಾಗಿದೆ ಆಯ್ಕೆಯನ್ನು ತಡೆಹಿಡಿಯುವ, ಒಪ್ಪಂದದ ಮಾರ್ಗ ಹುಡುಕುವದಕ್ಕಾಗಿ ಸಮಿತಿಯನ್ನು ನಿಯಮಿಸುವ ಸೂಚನೆ ಮಾಡಬೇಕಾಗಿದೆ. ಆದುದರಿಂದ ನನ್ನನ್ನು ಕರೆಯಿರಿ," ಎಂದು ಪತ್ರ ಕಳಿಸಿದರು. ಅದಕ್ಕೆ ಮಾಲವೀಯರು ಮುಟ್ಟಿತೆಂದು ಕೂಡ ತಿಳಿಸಲಿಲ್ಲ.

ಮರುದಿವಸ ಸಭೆ ಪ್ರಾರಂಭವಾಯಿತು. ಸುರೇಂದ್ರರ ಭಾಷಣವನ್ನು ಎಲ್ಲರೂ ಶಾಂತರೀತಿಯಿಂದ ಕೇಳಿಕೊಂಡರು. ಅವರು ತಮ್ಮ ಸ್ಥಳಕ್ಕೆ ಹೋಗುವ ಸಮಯದಲ್ಲಿ ಟಿಳಕರು ತಮಗೆ ಮಾತನಾಡಲು ಒಪ್ಪಿಗೆಕೊಡ ಬೇಕೆಂದು ಸ್ವಾಗತಾಧ್ಯಕ್ಷರಿಗೆ ಮತ್ತೆ ಚೀಟಿ ಕಳಿಸಿದರು. ಅದಕ್ಕೂ ಅವರದು ಮೌನ. ಬುದ್ಧಿಪೂರ್ವಕವಾಗಿ ತಾತ್ಸಾರ ಮಾಡುತ್ತಿರುವರೆಂದು ಟಿಳಕರಿಗೆ ಅನಿಸಿ, ಟಿಳಕರು ಎದ್ದು, ಸಭಾಪೀಠವನ್ನು ಏರತೊಡಗಿದರು. ಸ್ವಯಂ ಸೇವಕರು ತಡೆಯಲು ಪ್ರಯತ್ನಿಸಿದರು. ಟಿಳಕರು ಕೇಳದೆ,ಸಭಾಪೀಠವನ್ನೇರಿ ರದು, ಇಷ್ಟರಲ್ಲಿ ಡಾ| ಘೋಷರು ಕಾಯದೇಶೀರ ಅಧ್ಯಕ್ಷನಾಗಿರುವನೆಂದು ಹೇಳಿ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಿ, ಟಿಳಕರಿಗೆ ನಿಮ್ಮ ಸ್ಥಳಕ್ಕೆ ಹೋಗಿ ರೆಂದು ಹೇಳಿದರು. ಟಿಳಕರು ಸ್ಥಳಬಿಟ್ಟು ಕದಲಲಿಲ್ಲ. ಡಾ. ಘೋಷರ ಆಯ್ಕೆಯು ಇನ್ನೂ ಆಗಿಲ್ಲ. ಆ ಸೂಚನೆಗೆ ಉಪಸೂಚನೆ ತರಲು ನಾನು ಬಂದಿದ್ದೇನೆ. ಎಂದು ಹೇಳಿ, ಭಾಷಣ ಪ್ರಾರಂಭಿಸಿದರು. ಪ್ರತಿನಿಧಿಗಳನ್ನು ಉದ್ದೇಶಿಸಿ ಭಾಷಣಮಾಡಲು ತಮಗೆ ಅಧಿಕಾರವಿದೆ ಎಂದು ಮುಂದುವರಿ ದರು. ಅಧ್ಯಕ್ಷರು ಅದನ್ನು ನಿರಾಕರಿಸಿದರು. ಅದನ್ನು ದುರ್ಲಕ್ಷಿಸಿ ಟಿಳಕರು ಮಾತನಾಡಹತ್ತಿದರು. ಪ್ರೇಕ್ಷರಲ್ಲಿ ಗದ್ದಲವೆದ್ದಿತು. ''ಸಾಧು ಸಾಧು' 'ಇಲ್ಲ ಇಲ್ಲ' 'ಸರಿ ಸರಿ' 'ಇದು ತಪ್ಪು' 'ಕೂತುಕೊಳ್ಳಿರಿ ಎಂದು ಹೇಳುವ ವರು ನೀವಾರು? ನಾಚಿಕೆಗೇಡು' ಹೀಗೆ ಮಂಡಪವೆಲ್ಲ ಕೂಗಾಟದಿಂದ ತುಂಬಿ ಹೋಯಿತು. ಇಷ್ಟೆಲ್ಲ ಗೊಂದಲ ನಡೆದಿದ್ದರೂ ಟಿಳಕರು ಮಾತ್ರ ಎದೆಯ ಮೇಲೆ ಕೈಕಟ್ಟಿಕೊಂಡು ಸ್ಥಿತಪ್ರಜ್ಞರಂತೆ ಅಚಲವಾಗಿ ನಿಂತಿದ್ದರು. ವೈಕುಂಠಲಾಲ ದೇಸಾಯಿಯವರು ಟಿಳಕರ ಮೇಲೆ ಒಗೆಯಲು ಖುರ್ಚಿಯನ್ನೆ ತ್ತಿದರು. ಕೆಲವರು ಅವರ ಮೈಮೇಲೆ ಏರಿಹೋದರು. ಈ ರೀತಿ ಟಿಳಕರು ಸಂಕಟದಲ್ಲಿ ಸಿಕ್ಕದ್ದನ್ನು ಕಂಡು,ಅವರ ಕೆಲವು ಗೆಳೆಯರು ಅವರನ್ನು ರಕ್ಷಿಸಲು

ಸಭಾಪೀಠವನ್ನೇರಿದರು. ಗೋಖಲೆಯವರೂ ಟಿಳಕರನ್ನು ರಕ್ಷಿಸಲು ಧಾವಿಸಿದರು. ಯಾರೋ ಒಬ್ಬರು ಮಚ್ಚೆಯನ್ನು ತೆಗೆದು ಬೀಸಾಡಿದರು. ಅದು ಮೆಥಾ ಮತ್ತೂ ಸುರೇಂದ್ರನಾಥರಿಗೆ ಬಡೆದು, ಟೇಬಲ್ಲಿನ ಮೇಲೆ ಬಿದ್ದಿತು. ಕೈಗೆ ಕೈಹತ್ತಿತು. ತಲೆಗಳೊಡೆದವು. ಮಂದಪಕ್ಷೀಯರು ಹಿಂದಿನ ಬಾಗಿಲದಿಂದ ಹೋಗಿಬಿಟ್ಟರು. ಗೊಂದಲವೇ ಗೊಂದಲ. ಡಾ. ಘೋಷರು ಸಭಾವಿಸರ್ಜನೆಯ ಘೋಷಣೆ ಮಾಡಿದರು. ಪೋಲೀಸರು ಬಂದರು. ಶ್ರೀನಿವಾಸರಾವ ಕೌಜಲಗಿ, ಅಣ್ಣಾಚಾರ್ಯ ಕಟ್ಟಿ, ಗೋಖಲೆ, ದೇಶಪಾಂಡೆ ಮೊದಲಾದವರನ್ನು ಹಿಡಿದರು. ನಂತರ ಬಿಟ್ಟುಬಿಟ್ಟರು. ಜನರೆಲ್ಲರೂ ಹೊರಬಿದ್ದರು. ಆದದ್ದು ಒಳಿತಾಗಲಿಲ್ಲ, ಮುಂದೆ ಹೇಗೆ? ಎಂದು ಎಲ್ಲ ಕಡೆಗೂ ಚರ್ಚೆ ನಡೆಯಿತು. ಮೋತೀಲಾಲ ಘೋಷ, ಮಿತ್ರ, ಲಾಲಾ ಹರಿಕಿಸನಲಾಲ, ಚಟರ್ಜಿ ಮೊದಲಾದವರು ಟಿಳಕರೊಡನೆ ದೀರ್ಘ ಚರ್ಚೆಮಾಡಿ, ಅವರಿಂದ ಒಂದು ಪತ್ರವನ್ನು ತೆಗೆದುಕೊಂಡರು. ಅದರಲ್ಲಿ ಟಿಳಕರು "ನಾವು ಡಾ. ರಾಜಬಿಹಾರಿ ಘೋಷರ ಆಯ್ಕೆಯ ಬಗ್ಗೆ ಇರುವ ವಿರೋಧವನ್ನು ಹಿಂದೆ ತೆಗೆದುಕೊಳ್ಳುತ್ತೇವೆ. ಆದರೆ ಕಲಕತ್ತೆಯ ಚತುಸ್ಸೂತ್ರಗಳಿಗೆ ಕಾಂಗ್ರೆಸ್ಸು ಅಂಟಿಕೊಳ್ಳಬೇಕು ಮತ್ತು ಡಾ. ಘೋಷರ ಭಾಷಣದಲ್ಲಿ ರಾಷ್ಟ್ರೀಯ ಪಕ್ಷದ ಬಗ್ಗೆ ಅಪಮಾನಕಾರಕ ಮಾತುಗಳಿದ್ದರೆ, ಅವುಗಳನ್ನು ತೆಗೆದೊಗೆಯಬೇಕು." ಎಂದು ಬರೆದಿದ್ದರು. ಆದರೆ ಮಂದಪಕ್ಷೀಯರು ಈ ಸಹಕಾರದ ಹಸ್ತವನ್ನು ಧಿಕ್ಕರಿಸಿದರು ಕಾಂಗ್ರೆಸ್ಸು ಕುಪ್ಪಳಿಸಿತು. ಮುರಿದು ಹೋಯಿತು.

ಎರಡೂ ಪಕ್ಷದವರು ತಮ್ಮ ತಮ್ಮ ಸಭೆಗಳನ್ನು ಕೂಡಿಸಿದರು. ಮಂದಪಕ್ಷೀಯರು ಒಂದು ಪ್ರತಿಜ್ಞಾಪತ್ರವನ್ನು ಸಿದ್ಧಗೊಳಿಸಿ, ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಮೆಲ್ಲ ಮೆಲ್ಲನೆ ಸನದಶೀರ ಚಳವಳಿಯಿಂದ ದೊರಕಿಸಬೇಕೆಂಬ ಗುರಿಗೆ ಒಪ್ಪಿ, ಅಂಕಿತ ಹಾಕಿದವರ ಸಭೆ ಕರೆದು ಕನ್‌ವ್ಹೆನ್‌ಶನ್ ಎಂದು ಸರಿಟ್ಟು ಡಾ. ಘೋಷರ ಅಧ್ಯಕ್ಷತೆಯಲ್ಲಿ ೨೮ ತಾರೀಖಿನ ದಿವಸ ಸಭೆ ನಡೆಸಿದರು. ಆಶ್ಚರ್ಯದ ಸಂಗತಿಯೆಂದರೆ ಲಾಲಾಲಜಪತರಾಯರು ಪ್ರತಿಜ್ಞಾಪತ್ರಕ್ಕೆ ಸಹಿ ಹಾಕಿ, ಹಳಬರಲ್ಲಿ ಹೋಗಿ ಕುಳಿತಿದ್ದರು. ರಾಷ್ಟ್ರೀಯ ಪಕ್ಷದವರು ಸಭೆಯಲ್ಲಿ ಸೇರದಂತೆ ಎಲ್ಲ ರೀತಿಯ

ಮುಂಜಾಗ್ರತೆ ವಹಿಸಿದ್ದರು. ಇದಕ್ಕೆ ರಾಷ್ಟ್ರೀಯ ಸಭೆಯೆನ್ನಲು ಬರುವಂತಿದ್ದಿಲ್ಲ. ಮುಂದಿನ ವರ್ಷ ಇದೇ ಕಾಂಗ್ರೆಸ್ಸು ಎಂದು ಕರೆದರು.

ಅರವಿಂದರ ಅಧ್ಯಕ್ಷತೆಯಲ್ಲಿ ಒಂದು ಖಾಸಗೀ ಸ್ಥಳದಲ್ಲಿ ರಾಷ್ಟ್ರೀಯ ಪಕ್ಷದವರ ಸಭೆ ಜರುಗಿತು. ಸಭೆಯಲ್ಲಿ ಟಿಳಕರು "ಬೇರೆ ಕಾಂಗ್ರೆಸ್ಸು ಸ್ಥಾಪಿಸಬೇಕೆನ್ನುವ ವಿಚಾರವನ್ನು ಖಂಡಿಸಿದರು. ರಾಷ್ಟ್ರದಲ್ಲಿ ಉಂಟಾದ ನವಶಕ್ತಿಯನ್ನು ಉಪಯೋಗಿಸಿಕೊಳ್ಳಲು ರಾಷ್ಟ್ರೀಯ ಸಭೆಗೆ ಆಗದಿದ್ದರೆ ಅದು ಇದ್ದರೂ ಅಷ್ಟೆ! ಇಲ್ಲದಿದ್ದರೂ ಅಷ್ಟೆ! ಮಂದಪಕ್ಷೀಯರು ನಮ್ಮ ಸಹಾಯದ ಹಸ್ತವನ್ನು ಧಿಕ್ಕರಿಸಿದ್ದೇಕೆ? ಏಕೆಂದರೆ ಅವರಿಗೆ ಸರಕಾರದ ಕೃಪೆಯನ್ನು ಸಂಪಾದಿಸಬೇಕಾಗಿದೆ" ಎಂದು ಹೇಳಿದರು. ಮತ್ತು ಈ ಸಭೆಯಲ್ಲಿ ಸಂಯುಕ್ತ ಕಾಂಗ್ರೆಸ್ಸಿನ ಬಗ್ಗೆ ಪ್ರಯತ್ನಿಸುವ ಗೊತ್ತುವಳಿಯಾಯಿತು.

ಎರಡೂ ಪಕ್ಷದವರು ತಮ್ಮ ತಮ್ಮ ಹೇಳಿಕೆಗಳನ್ನು ಹೊರಡಿಸಿದರು. ಕಲಕತ್ತೆಯಲ್ಲಿಯ ಚತುಸ್ಸೂತ್ರಗಳನ್ನು ಬದಲು ಮಾಡಬೇಕೆಂದು ಮಂದ ಪಕ್ಷದವರ ಹೊಂಚು ಇದ್ದುದರಿಂದ ಅಧ್ಯಕ್ಷರ ಆಯ್ಕೆಯ ಸೂಚನೆಗೆ ಉಪ ಸೂಚನೆಯನ್ನು ಅನಿವಾರ್ಯವಾಗಿ ತರಬೇಕಾಯಿತು ಎಂದು ರಾಷ್ಟ್ರೀಯ ಪಕ್ಷದವರು ಘೋಷಣೆಯನ್ನು ಹೊರಡಿಸಿದರು.

ಯಾವುದಾದರೊಂದು ರೀತಿಯಿಂದ ಗೊಂದಲವನ್ನು ಹುಟ್ಟಿಸುವದೇ ರಾಷ್ಟ್ರೀಯ ಪಕ್ಷದವರ ಉದ್ದೇಶವಿದ್ದಿತು. ಅವರು ಮಾಡಿದ್ದೆಲ್ಲ ತಪ್ಪು ಎಂದು ಮಂದಪಕ್ಷದವರು ಸಾರಿದರು. ಅಂತೂ ಕೊನೆಗೆ ಗಂಡಹೆಂಡರ ನಡುವೆ ಕೂಸು ನುಗ್ಗಾಯಿತು ಎಂಬಂತೆ ಹೊಸ ಹಾಗೂ ಹಳೆಯ ಪಕ್ಷದ ತಿಕ್ಕಾಟದ ನಡುವೆ ಕಾಂಗ್ರೆಸ್ಸು ಮುರಿದು ಹೋಯಿತು. ರಾಷ್ಟ್ರದಲ್ಲಿ ಒಡಕು ಉಂಟಾಯಿತು. ರಾಷ್ಟ್ರದ ಶಕ್ತಿಪಾತವಾಯಿತು ಇದನ್ನೇ ಕಾಯುತ್ತಿದ್ದ ಆಳರಸರು ಇದರ ಲಾಭತೆಗೆದುಕೊಂಡು ದಬ್ಬಾಳಿಕೆಯನ್ನು ಪ್ರಾರಂಭಿಸಿದರು. ಈ ರೀತಿಯಾಗಿ ಸುರತ ಕಾಂಗ್ರೆಸ್ಸು ಭಾರತದ ಇತಿಹಾಸದಲ್ಲಿ ಕಾಳರಾತ್ರಿಯನ್ನುಂಟುಮಾಡಿತು.

——

# ಲೋಕಮಾನ್ಯರ ಕಾಂಗ್ರೆಸ್ ನಿಷ್ಠೆ
## (೧೯೦೮)

ರಾಷ್ಟ್ರದ ಶಕ್ತಿಗಳನ್ನೆಲ್ಲಾ ಒಂದುಗೂಡಿಸಿ, ಪರಕೀಯರೊಡನೆ ಹೋರಾಟ ಹೂಡಲು ಸಿದ್ಧರಾದ ಲೋಕಮಾನ್ಯರಿಗೆ ಸುರತದಲ್ಲಿ ಸಂಭವಿಸಿದ ಘಟನೆಗಳಿಂದ ಧಕ್ಕೆಯಾಗುವದು ಸ್ವಾಭಾವಿಕವಿದ್ದಿತು. ಟಿಳಕರ ಕಟಿಕಟಿಯು ಒಮ್ಮೆ ತಪ್ಪಿಹೋಯಿತೆಂದು ಮಂದಪಕ್ಷೀಯರಿಗೆ ಅನಿಸಿದರೆ, ಇದರಿಂದ ರಾಷ್ಟ್ರದ ಶಕ್ತಿಪಾತವಾಗಿ ಸಮೀಪಿಸುತ್ತಿದ್ದ ಸ್ವರಾಜ್ಯವು ಮುಂದೆ ಹೋಗುವದೆಂದು ಟಿಳಕರಿಗೆ ದುಃಖವಾಗುತ್ತಿದ್ದಿತು. ಆದುದರಿಂದ ವ್ಯಕ್ತಿಗತ ಮಾನಾಪಮಾನಗಳನ್ನು ಲೆಕ್ಕಿಸದೆ, ರಾಷ್ಟ್ರೀಯ ಐಕ್ಯಕ್ಕಾಗಿ ವಿಶ್ವಪ್ರಯತ್ನ ಮಾಡಲು ಸಂಕಲ್ಪ ಮಾಡಿದರು. ಪುನಃ ಸಂಯುಕ್ತ ರಾಷ್ಟ್ರೀಯ ಸಭೆ ಸೇರಿಸಲು ಯತ್ನ ಹೂಡಿದರು. ರಾಷ್ಟ್ರೀಯ ಪಕ್ಷದ ಮತಪ್ರಚಾರವನ್ನು ಮುಂದುವರಿಸಿ, ರಾಷ್ಟ್ರದ ಶಕ್ತಿ ಸಾಮರ್ಥ್ಯಗಳನ್ನು ಬಲಪಡಿಸುವ ಕಾರ್ಯ ಕೈಕೊಂಡರು.

### ಶ್ರೀ ಅರವಿಂದರಿಗೆ ಆಮಂತ್ರಣ

ಈ ದೃಷ್ಟಿಯಿಂದ ಅರವಿಂದ ಬಾಬುಗಳಿಗೆ, ಪುಣೆಗೆ ಬರಲು ಆಮಂತ್ರಣವಿತ್ತರು. ಮಹಾರಾಷ್ಟ್ರದಲ್ಲಿ ಅವರಿಗೆ ಅಪೂರ್ವವಾದ ಸ್ವಾಗತವಾಯಿತು. ಅರವಿಂದರು ಬಂಗಾಲದ ಆಂದೋಲನವನ್ನು ಸಮರ್ಥಿಸಿ, ಹಿಂದಿನ ಮುಖಂಡರು ಮುಂದಿನ ಮುಂದಾಳುಗಳ ಬೆನ್ನು ಹೇಗೆ ಹತ್ತಬೇಕಾಯಿತೆಂಬುದನ್ನು ಸ್ಪಷ್ಟಪಡಿಸಿ, ಕೇವಲ ದೋಷಗಳನ್ನು ಎಣಿಸುತ್ತ ಕೂಡದೆ, ರಾಷ್ಟ್ರದ ಸ್ವಾಭಿಮಾನ, ಸಾಮರ್ಥ್ಯ ಹಾಗೂ ಅದರ ಶ್ರೇಷ್ಠತೆಯ ಬಗೆಗೆ ವಿಶ್ವಾಸವನ್ನುಂಟು ಮಾಡಿ ಜನತೆಯನ್ನು ರಾಷ್ಟ್ರ ಕಾರ್ಯದಲ್ಲಿ ಪ್ರವೃತ್ತಮಾಡುವದೇ ಸ್ವಾಮಿ ವಿವೇಕಾನಂದ, ಹಾಗು ರಾಮಕೃಷ್ಣ ಪರಮಹಂಸ ಮೊದಲಾದವರ ಉಚ್ಚಪರಂಪರೆ ಎಂದು ಹೇಳಿ ರಾಷ್ಟ್ರೀಯ ಪಕ್ಷದ ಸ್ಪಷ್ಟೀಕರಣವನ್ನು ಮಾಡಿದರು.

## ರಾಷ್ಟ್ರಮತ, ಕಾಜಿನ ಕಾರಖಾನೆ, ಹಾಗೂ ಸಮರ್ಥವಿದ್ಯಾಲಯ

ರಾಷ್ಟ್ರೀಯ ಪಕ್ಷದ ಪ್ರಚಾರಕ್ಕಾಗಿ ಒಂದು ಮರಾಠಿ ದೈನಿಕ ವೃತ್ತ ಪತ್ರವು ಅವಶ್ಯವೆನಿಸಹತ್ತಿದುದರಿಂದ ಫೆಬ್ರುವರಿ ತಿಂಗಳಲ್ಲಿ ಟಿಳಕರು ಮುಂಬಯಿಯಲ್ಲಿ 'ನ್ಯಾಶನಲ್ ಪಬ್ಲಿಶಿಂಗ ಕಂಪನಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಒಂದು ಲಕ್ಷ ರೂಪಾಯಿಗಳ ಸೇರುಗಳನ್ನು ಮಾರಾಟಕ್ಕೆ ತೆಗೆದರು. ಕೂಡಲೇ ೫೦ ಸಾವಿರ ರೂಪಾಯಿಗಳು ಕೂಡಿದವು. ಈ ಪ್ರಕಾಶನ ಸಂಸ್ಥೆಯು ವತಿಯಿಂದ 'ರಾಷ್ಟ್ರಮತ' ಎಂಬ ದೈನಿಕವು ಹೊರಡುವದೆಂದು ಸಾರಿದರು. ಆದರೆ ರಾಷ್ಟ್ರಮತದ ಮೊದಲ ಸಂಚಿಕೆಯನ್ನು ನೋಡಲು ಟಿಳಕರು ಹೊರಗೆ ಉಳಿಯಲಿಲ್ಲ. ಇಂತಹ ರಾಷ್ಟ್ರೀಯ ವೃತ್ತಪತ್ರವನ್ನು ಸರಕಾರವು ನಡೆಯಗೊಡುವದೇ? ಸರಕಾರದ ವಕ್ರದೃಷ್ಟಿಯು ಬಿದ್ದಿತು. ದಂಡವನ್ನು ತೆತ್ತಿ ಸರಕಾರದ ಭಂಡಾರವನ್ನು ತುಂಬುವದಕ್ಕಿಂತ, ನಿಲ್ಲಿಸಿ ಬಿಡುವುದು ಒಳ್ಳೇಯದೆಂದು ಕಂಪನಿಯು ನಿರ್ಣಯಿಸಿತು.

ಎರಡನೆಯ ವಿಧಾಯಕ ಕಾರ್ಯವೆಂದರೆ, ರಾಷ್ಟ್ರೀಯ ಶಿಕ್ಷಣ. ೧೯೦೬ ರಲ್ಲಿ ಪ್ರಾರಂಭವಾದ ಸಮರ್ಥ ವಿದ್ಯಾಲಯವು ಕೊಲ್ಹಾಪುರದಲ್ಲಿ ನಡೆದಿದ್ದಿತಷ್ಟೆ? ಆದರೆ ಸಂಸ್ಥಾನಿಕರ ವಿಲಕ್ಷಣ ವೃತ್ತಿಯ ಮೂಲಕ ಇನ್ನು ಮುಂದೆ ಅಲ್ಲಿ ನಡೆಯುವದು ಶಕ್ಯವಿರಲಿಲ್ಲ. ಪುಣೆಯ ಹತ್ತರವಿರುವ ತಳೇ ಗಾವದಲ್ಲಿ ೬೦-೬೫ ಎಕರೆ ಭೂಮಿಯು ಮಾರಲಿಕ್ಕೆ ದೊರೆಯಿತು. ಟಿಳಕರು ಪ್ರೊ. ವಿಜಾಪೂರಕರರ ಸಹಾಯದಿಂದ ಮಹಾರಾಷ್ಟ್ರ ವಿದ್ಯಾಪೀಠವನ್ನು ಸ್ಥಾಪಿಸುವ ಯೋಜನೆಯನ್ನು ಮಾಡಿದರು. ಬೌದ್ಧಿಕ ಶಿಕ್ಷಣದೊಡನೆ ವ್ಯಾಪಾರ, ಉದ್ಯೋಗಗಳ ಶಿಕ್ಷಣವನ್ನೂ ಕೊಡುವ ವಿಚಾರ ಮಾಡಿದರು. ಪೈಸಾ ಫಂಡಿನಿಂದ ಕಾಜಿನ ಕಾರಖಾನೆಯನ್ನು ತಳೇಗಾವದಲ್ಲಿಯೇ ಪ್ರಾರಂಭಿಸುವ ಹೊಂಚನ್ನು ಹಾಕಿದರು. ವಿದ್ಯಾಪೀಠಕ್ಕಾಗಿ ನಿಧಿಯನ್ನು ಕೂಡಿಸಿದರು. ಆದರೆ ಸರಕಾರವು ೧೯೧೦ ರಲ್ಲಿ ಹೊಸ ಸುಗ್ರೀವಾಜ್ಞೆಯನ್ನು ಹೊರಡಿಸಿ, ರಾಷ್ಟ್ರದಲ್ಲಿಯ ರಾಷ್ಟ್ರೀಯ ಶಾಲೆಗಳನ್ನೆಲ್ಲ ನಿಲ್ಲಿಸಿಬಿಟ್ಟಿತು. ಪ್ರೊ. ವಿಜಾಪೂರಕರರು ಸೆರೆಮನೆಯ ಆತಿಥ್ಯವನ್ನು ಸ್ವೀಕರಿಸಬೇಕಾಯಿತು.

## ಸಂಯುಕ್ತ ಕಾಂಗ್ರೆಸ್ಸಿನ ಪ್ರಯತ್ನ

ಸುರತದ ವಾದದ ಬಗ್ಗೆ ಟಿಳಕರು 'ಅಧ್ಯಕ್ಷರ ಅಧಿಕಾರ' ಎಂಬ ವಿಷಯವಾಗಿ ಬಹು ಮಾರ್ಮಿಕವಾಗಿ ಚರ್ಚೆಯನ್ನು ಪ್ರಾರಂಭಿಸಿದರು. ಸಾರ್ವಜನಿಕ ಸಭಾನಿಯಮಗಳನ್ನು ಡಾ. ಸ್ಮಿಥರ ಪುಸ್ತಕದಿಂದ ಎತ್ತಿ ತೋರಿಸಿದರು. ಫೆಬ್ರುವರಿತಿಂಗಳಲ್ಲಿ ರಾಜಕೀಯ ಪಕ್ಷೋಪನ್ಯಾಸಗಳ ಮೇಲೆ ಟಿಳಕರು ಬರೆದ ಅಗ್ರಲೇಖಗಳು, ತಾತ್ವಿಕ, ನಿರ್ವಿಕಾರ ಯುಕ್ತಿ ವಾದಗಳಿಂದ ತುಂಬಿದ ಉತ್ಕೃಷ್ಟವಾದ ಬರಹಗಳಾಗಿವೆ. ಆ ಬರೆಹಗಳಲ್ಲಿ ಅವರ ಕಾಂಗ್ರೆಸ ನಿಷ್ಠೆಯೂ ರಾಷ್ಟ್ರೀಯ ಐಕ್ಯದ ಉತ್ಕಟೇಚ್ಛೆಯೂ ಸ್ಪಷ್ಟವಾಗಿ ಒಡಮೂಡಿದೆ.

೧೯೦೮ರ ಫೆಬ್ರುವರಿಯಲ್ಲಿ 'ಸಂಧಿಯು ಹೇಗೆ ಸಾಧ್ಯ?' ಎಂಬ ವಿವೇಚಕ ಅಗ್ರಲೇಖದಲ್ಲಿ 'ಪಾರ್ಲಿಮೆಂಟಿನ ಸಭೆಯಲ್ಲಿ ರಾಷ್ಟ್ರದ ಹಿತವನ್ನು ಹೇಗೆ ಸಾಧಿಸುವರು ಎಂಬ ಪ್ರತ್ಯಕ್ಷ ಉದಾಹರಣೆಯು ನಮ್ಮೆದುರಿಗಿದೆ. ಅಂದಮೇಲೆ ರಾಷ್ಟ್ರೀಯ ಸಭೆಯಲ್ಲಿ ಇಂತಹ ಪಕ್ಷದ ಜನರೇ ಇರಬೇಕೆಂಬ ಆಗ್ರಹದಲ್ಲಿ ಅರ್ಥವೇನಿದೆ? ಮತಭೇದದಲ್ಲಿ ಮತೈಕ್ಯವನ್ನು, ಅನೇಕತ್ವದಲ್ಲಿ ಏಕತ್ವವನ್ನು ಹೇಗೆ ಸಾಧಿಸಬೇಕೆಂಬುದನ್ನು ಪಾಶ್ಚಿಮಾತ್ಯರು ನಿರ್ಣಯಿಸಿದ್ದಾರೆ. ನಮ್ಮ ದೇಶದಲ್ಲಿ ಧರ್ಮದ ವಿಷಯದಲ್ಲಿ ಈ ನ್ಯಾಯವು ಅನುಸರಿಸಲ್ಪಡುತ್ತದೆ. ಶೈವ, ವೈಷ್ಣವ, ಗಾಣಪತ್ಯ ಮೊದಲಾದ ಅನೇಕ ಮತಗಳ ಜನರಿದ್ದರೂ ಅವರೆಲ್ಲರೂ ಒಂದು ವಿಶಾಲ ಧರ್ಮದ ಅಂಗವೆಂದು ಏಕವಾಕ್ಯತೆ ಮಾಡಲ್ಪಡುವಂತೆ ರಾಷ್ಟ್ರದಲ್ಲಿಯ ಭಿನ್ನ ಭಿನ್ನ ಪಕ್ಷಗಳು ಕೂಡ ಸ್ವರಾಜ್ಯವೆಂಬ ಒಂದೇ ಗುರಿಯುಳ್ಳದ್ದಾಗಿವೆ. ಪುಷ್ಪವಾದಿಗಳೂ ಫಲವಾದಿಗಳೂ ಸುಮ್ಮನೆ ಜಗಳವಾಡುವದೇಕೆ? ಬೀಜವನ್ನು ಬಿತ್ತಿರಿ, ನೀರೆರೆಯಿರಿ, ಅದನ್ನು ಬೆಳೆಯಿಸಿರಿ, ಇಬ್ಬರ ಕಾರ್ಯದ ಸಿದ್ಧಿಯೂ ಆಗುವದು. ರಾಷ್ಟ್ರದ ಅಭ್ಯುದಯಕ್ಕಾಗಿ ಐಕ್ಯತೆಯಿಂದ ಪ್ರಯತ್ನಿಸುವದು ಅವಶ್ಯವಿದೆ. ಅಂಗೈಯಲ್ಲಿಯ ಐದು ಬೆರಳುಗಳು ಒಂದೇ ಸಮನೆ ಇರುವವೇ? ಆದರೆ ಅವೆಲ್ಲವುಗಳ ಒಟ್ಟುಗೂಡುವಿಕೆಯಲ್ಲಿಯೇ ಕಾರ್ಯಶಕ್ತಿಯೂ, ಗ್ರಹಣ ಶಕ್ತಿಯೂ ಕೈಗೆ ಬರುವದೆಂಬುದನ್ನು ಮರೆಯಲಾಗದು.

ಹಾಗೆಯೇ ದೇಶಪ್ರೇಮದಿಂದ ಪ್ರೇರಿತವಾದ ಭಿನ್ನಭಿನ್ನ ಜನಾಂಗಗಳನ್ನು ಒಂದುಗೂಡಿಸಿ ರಾಷ್ಟ್ರಹಿತದ ದೃಷ್ಟಿಯಿಂದ ಉಪಯೋಗಿಸಿಕೊಳ್ಳುವದು ಮುಖಂಡರ ಇಂದಿನ ಕರ್ತವ್ಯವು. ಇದೇ ರಾಷ್ಟ್ರದ ಜೀವಂತತನದ ಲಕ್ಷಣವು. ಹೀಗೆಯೇ ಐಕ್ಯದ ಆವಶ್ಯಕತೆಯನ್ನು ವಿವರಿಸುತ್ತ ನಮ್ಮ ಜಗಳದ ಉಪಯೋಗವನ್ನು ಶತ್ರುಗಳು ಖಂಡಿತವಾಗಿ ಮಾಡಿಕೊಳ್ಳುತ್ತಾರೆ. ಈ ಸಂಧಿಯನ್ನು ಸಾಧಿಸಿ ಮೊದಲು ರಾಷ್ಟ್ರೀಯರನ್ನು, ನಂತರ ಮಂದ ಗಾಮಿಗಳನ್ನು ಸದೆಬಡಿಯುವದು" ಎಂದು ರಾಷ್ಟ್ರವನ್ನು ಎಚ್ಚರಿಸಿದರು.

''ಸಂಧಿಗೆ ನಿಜವಾದ ಆತಂಕವೆಲ್ಲಿದೆ?' ಎಂಬ ಅಗ್ರಲೇಖದಲ್ಲಿ "ಕಾಂಗ್ರೆಸ್ಸಿಗೆ ಸರಕಾರದೊಡನೆ ಪ್ರತಿಕಾರ ಹೂಡುವದಿದ್ದರೆ, ಹೊಸ ಪಕ್ಷದ ಸೋಗಿನ ಅರ್ಥವೇನು? ಮಂದಪಕ್ಷೀಯರು ಮನಸ್ಸಿನಿಂದ ನಿಜವಾಗಿ ಪ್ರತಿಕಾರವಾದಿಗಳಾಗಿರದಿದ್ದರೆ ಹೊಸ ಪಕ್ಷದವರನ್ನೇಕೆ ನಿಷೇಧಿಸುವದಿಲ್ಲ? ಎಂದು ಅಧಿಕಾರೀ ವರ್ಗವು ಪ್ರಶ್ನಿಸಹತ್ತಿದೆ. ಹಳಬರು ಹೊಸಬರ ಬಗೆಗೆ ಇಷ್ಟು ಸಹಾನುಭೂತಿಯನ್ನು ತೋರಿಸುತ್ತಿರುವದೇಕೇ? ಅವರಿಗೆ ಖಂಡಿತ ವಾಗಿಯೂ ಹಳಬರ ನೈತಿಕ ಬೆಂಬಲವೂ ಸಹಾನುಭೂತಿಯೂ ಇದೆ. ಎಂದು ಅಧಿಕಾರಿ ವರ್ಗವು ಗುಣಗುಟ್ಟುತ್ತಿರುವದೇ ಮಂದಪಕ್ಷೀಯರಿಗೆ ಪೇಚು ಬಂದಿದೆ. ಬಿಟ್ಟರೆ ಓಡುವದು, ಹಿಡಿದರೆ ಕಚ್ಚುವದು ಎಂಬಂತಾಗಿದೆ, ಮಂದಪಕ್ಷೀಯರ ಮನಸ್ಥಿತಿ........" ರಾಷ್ಟ್ರೀಯ ಪಕ್ಷವೇ ಆಗಲಿ, ಮಂದ ಪಕ್ಷವೇ ಆಗಲಿ ತಮ್ಮ ತಮ್ಮ ಬುದ್ಧಿಶಕ್ತಿಗಳಿಗನುಸರಿಸಿ ದೇಶ ಹಿತವನ್ನು ಸಾಧಿಸಬೇಕಾಗಿದೆ. ಯಾರಿಗೂ ದೇಶದ್ರೋಹವನ್ನು ಬಗೆಯುವದು ಇರುವದಿಲ್ಲ. ಇಬ್ಬರಿಗೂ ಆತಂಕ ಉಂಟಾದುದು ಉದ್ದೇಶವಲ್ಲ. ಕೃತಿಯ ಭೇದ. ಇಬ್ಬರ ಕೃತಿಗಳು ಭಿನ್ನಭಿನ್ನವಾಗಿದ್ದರೂ ಕೂಡಿ ನಡೆಯುವಲ್ಲಿ ಯಾವ ಆತಂಕವೂ ಇಲ್ಲ." ಸ್ವರಾಜ್ಯವೋ ಅಥವಾ ಸ್ವಾತಂತ್ರ್ಯವೋ ಎಂಬ ಪ್ರಶ್ನೆಯೇ ಈಗ ಉದ್ಭವಿಸುವದಿಲ್ಲ. ಅದನ್ನು ಬಿಟ್ಟುಬಿಡುವಾ. ಸವಿ ಮಾತುಗಳೋ ಅಥವಾ ಆಗ್ರಹದ ಪ್ರತಿಕಾರವೋ ಎಂಬುದೇ ಪ್ರಶ್ನೆ ಈ ಸಾಧನಗಳ ಭೇದದ ಮೂಲಕ ಉಂಟಾದ ತೊಡಕುಗಳನ್ನು ಹೇಗೆ ಬಿಡಿಸ ಬೇಕೆಂಬುದೇ ಎದುರಿಗಿರುವ ಮಹತ್ವದ ಪ್ರಶ್ನೆ! ಮನಸ್ಸಿದ್ದರೆ ಮಾರ್ಗವಿದೆ, ಎಂದು ನಮ್ಮ ಅಭಿಪ್ರಾಯ. ದೇಶಕಲ್ಯಾಣವೇ ಇಬ್ಬರದೂ ಗುರಿಯಾಗಿರು

ವಾಗ ಮಾರ್ಗವೇಕೆ ನಮಗೆ ದೊರೆಯಬಾರದು? ಇಬ್ಬರೂ ಸದಿಚ್ಛೆಯಿಂದ ರಾಷ್ಟ್ರದ ಹಿತವನ್ನೇ ಕಣ್ಣೆದುರಿಗಿಟ್ಟುಕೊಂಡು ನಿರ್ವಿಕಾರ ಮನಸ್ಸಿನಿಂದ ಅಭಿಮಾನ ತೊರೆದು ವಿಚಾರಕ್ಕೆ ಕುಳಿತರೆ ಖಂಡಿತವಾಗಿಯೂ ಮಾರ್ಗ ದೊರೆಯುವದು, ಎಂದು ವಿವರಿಸಿದರು.

"ಆತಂಕಗಳ ನಿವಾರಣೋಪಾಯ" ಎಂಬ ಲೇಖದಲ್ಲಿ ಮಂದಪಕ್ಷೀಯರ ಅಂತಃಕರಣವನ್ನೇ ಕೆಣಕಿದ್ದಾರೆ. ಸರಕಾರೀ ಅಧಿಕಾರಿಗಳ ಹಾಗೂ ನಿಮ್ಮ ಧ್ಯೇಯಗಳು ಒಂದೇ ಇರುವವೆಂದು ಬಗೆದು ಅವರೊಡನೆ ಅತ್ಯಂತ ಪ್ರೇಮದಿಂದ ವರ್ತಿಸುವಿರಾ? ಬಿಳಿಯ ಅಧಿಕಾರಿಗಳಿಗೆ ಸ್ವರಾಜ್ಯವನ್ನು ಕೊಡುವ ಇಚ್ಛೆಯಿಲ್ಲ. ಸ್ವಾತಂತ್ರ್ಯವನ್ನೂ ಕೊಡಲು ಅವರು ಬಯಸುವದಿಲ್ಲ. ಇಂತಹ ಅಧಿಕಾರಿಗಳೊಡನೆ ಸ್ವರಾಜ್ಯವಾದಿಗಳಾದ ಮಂದಪಕ್ಷೀಯರು ಸಹಕಾರದಿಂದ ನಡೆಯಲು ಸಿದ್ಧರಿದ್ದರೆ, ಸ್ವಕೀಯರೂ ದೇಶಬಂಧುಗಳೂ ಆದ ಸ್ವಾತಂತ್ರ್ಯವಾದಿಗಳೊಡನೆ ಪ್ರೇಮದಿಂದ ಕೂಡಿ ಏಕೆ ನಡೆಯಬಾರದು? ಸರಕಾರದೊಡನೆ ಹೋರಾಡಲು ಇಬ್ಬರಿಗೂ ಸಂಘಶಕ್ತಿಯ ಅವಶ್ಯಕತೆ ಯಿದೆಯೆಂಬುದನ್ನು ಮರೆಯಬಾರದು" ಎಂದು ಅಂತರಂಗವನ್ನು ತೆರೆದಿಟ್ಟರು.

ಈ ವಿಚಾರಗಳನ್ನು ಜೀವನದಲ್ಲಿ ಇಳಿಸಲು ಪ್ರಯತ್ನಿಸಹತ್ತಿದರು. ಈ ವಿಚಾರ ಪ್ರಚಾರಕ್ಕಾಗಿ ತಾಲೂಕ, ಜಿಲ್ಹಾ, ಪ್ರಾಂತಿಕ ಸಭೆಗಳನ್ನು ಕೂಡಿಸುವ ಸಂಕಲ್ಪ ಮಾಡಿದರು. ಮಾವಳದಲ್ಲಿ ಕೂಡಿದ ತಾಲೂಕಾ ಸಭೆಯಲ್ಲಿ ಈ ಸಂಯುಕ್ತ ಕಾಂಗ್ರೆಸ್ಸಿನ ಘೋಷಣೆ ಮಾಡಲ್ಪಟ್ಟಿತು. ೨೦ ನೇ ಮಾರ್ಚಕ್ಕೆ ಪುಣೆಯಲ್ಲಿ ಜಿಲ್ಹಾ ಪರಿಷತ್ತು ಕೂಡಿತು. ಎಲ್ಲ ಪಕ್ಷೀಯರೂ ಇದರಲ್ಲಿ ಭಾಗ ವಹಿಸಿದ್ದರು. ರಾಷ್ಟ್ರೀಯ ಶಿಕ್ಷಣ ಹಾಗೂ ಮದ್ಯಪಾನ ನಿಷೇಧದ ವಿಷಯಗಳ ಮೇಲೆ ಮಾತನಾಡುತ್ತ "ಸರಕಾರ ಹಾಗೂ ಜನರ ಹಿತ ವಿರೋಧದಿಂದ ಈ ಪ್ರಶ್ನೆಯು ಉದ್ಭವಿಸಿದೆ. ಹಿರಣ್ಯಕಶ್ಯಪುವು ಪ್ರಲ್ಹಾದನ ಶಾಲೆಯಲ್ಲಿ ನಾರಾಯಣನಿಗೆ ಬಹಿಷ್ಕಾರ ಹಾಕಿದ್ದನು. ಅದರಂತೆ ಸರಕಾರವು ಶಾಲೆಯಲ್ಲಿ ರಾಷ್ಟ್ರೀಯ ಭಾವನೆಗೆ ಬಹಿಷ್ಕಾರ ಹಾಕಿದೆ. ಆದುದರಿಂದ ರಾಷ್ಟ್ರೀಯ ಶಿಕ್ಷಣವು ಅವಶ್ಯವೆಂದು ಉಗ್ರವಾಗಿ ಮಾತನಾಡಿದರು. "ಪರಕೀಯ ಸರಕಾರವು ಬೇಕಾದಷ್ಟು ಶಿಸ್ತು ಶಾಂತತೆ ಕಾಯಲಿ! ಆದರೆ ನಮಗೆ

ನೀತಿ ಕಲಿಸುವ ಉಪದ್ವ್ಯಾಪ ಮಾತ್ರ ಮಾಡದಿರಲಿ! ಮದ್ಯಪಾನ ನಿಷೇಧವು ಭಾರತೀಯರ ಮಹತ್ವದ ಒಂದು ನೀತಿತತ್ವವಾಗಿದೆ. ಇದನ್ನು ಸಾಧಿಸುವಾಗ ಸರಕಾರವು ಅಡ್ಡ ಬರುತ್ತಿದ್ದರೆ ಅದನ್ನು ನಾವು ಎದುರಿಸಬೇಕು. ಸೆರೆಕುಡಿಯುವ ಬಗ್ಗೆ ತಿರಸ್ಕಾರವು ದೇಶದಲ್ಲಿ ಉಂಟಾಗಲೇಬೇಕು. ಒಂದು ಸೆರೆಯ ಅಂಗಡಿಯನ್ನು ನಿಲ್ಲಿಸಿದರೆ ಸ್ವರ್ಗ ಸಿಗುವದು ಎಂಬ ಭಾವನೆಯಿಂದ ತರುಣರು ಈ ಚಳುವಳಿಯಲ್ಲಿ ಮರಣಕ್ಕೂ ಸಿದ್ಧರಾಗಬೇಕು. ಸೆರೆದಂಗಡಿ ಯನ್ನು ನಿಲ್ಲಿಸುವಂಥ ಸಣ್ಣ ಕೆಲಸವು ನಮ್ಮಿಂದಾಗದಿದ್ದರೆ ಸ್ವರಾಜ್ಯಕ್ಕೆ ನಾವು ಅಯೋಗ್ಯರೆಂದೇ ನಾನು ತಿಳಿಯುವೆ" ಎಂದು ಗರ್ಜಿಸಿದರು. ಇಲ್ಲಿಂದಲೇ ಸರ್ಸಗಾವಲು ಚಳವಳಿಯು ಪ್ರಾರಂಭವಾಯಿತು. ಮುಂದಿನ ರಾಷ್ಟ್ರೀಯ ಸಭೆಯವರೆಗೆ ಎಲ್ಲ ಪಕ್ಷದ ಮುಖಂಡರು ಸಂಧಿಯನ್ನು ಹೇಗೆ ಸಾಧಿಸ ಬೇಕೆಂಬುದನ್ನು ವಿಚಾರ ಮಾಡಬೇಕು. ಮತ್ತು ಮೊದಲಿನಂತೆಯೇ ರಾಷ್ಟ್ರೀಯ ಸಭೆಯು ಎಲ್ಲರಿಂದೊಡಗೂಡಿ ಜರಗುವಂತೆ ಪ್ರಯತ್ನಿಸಬೇಕು. ಎಂಬ ಗೊತ್ತುವಳಿಯೂ ಸರ್ವಾನುಮತದಿಂದ ಸ್ವೀಕರಿಸಲ್ಪಟ್ಟಿತು.

"ಪಬನಾ' ಎಂಬಲ್ಲಿ ಬಂಗಾಲದ ಪ್ರಾಂತಿಕ ಪರಿಷತ್ತು ಸೇರಿತು. ರಾಷ್ಟ್ರದಲ್ಲಿ ಐಕ್ಯವನ್ನುಂಟುಮಾಡುವ ಲೋಕಮಾನ್ಯರ ಧೋರಣವು ಎತ್ತಿ ಹಿಡಿಯಲ್ಪಟ್ಟಿತು. ಪರಿಷತ್ತಿನಲ್ಲಿ ಬಂಗಾಲದ ಎರಡೂ ಪಕ್ಷಗಳು ಮಿಲಿತ ವಾಗಿದ್ದವು. ಬಂಗಾಲದಲ್ಲಿ ಮತಭೇದವು ಅಷ್ಟು ತೀವ್ರವಾಗಿರಲಿಲ್ಲ. ಸುರೇಂದ್ರನಾಥರು ಸುರತದಲ್ಲಿಯ ಗೊಂದಲದ ಕಾರಣಗಳನ್ನು ವಿವರಿಸಿ, ಚತುಸ್ಸೂತ್ರದ ವಿಷಯದಲ್ಲಿ ಎಲ್ಲ ಪಕ್ಷಗಳ ಮತೈಕ್ಯವಿರುತ್ತದೆ ಎಂದು ಸಾರಿದರು. ರಾಷ್ಟ್ರದಲ್ಲಿ ಐಕ್ಯದ ತಳಹದಿಯೇನು ಎಂಬುದನ್ನೂ ಅದು ಶಕ್ಯವಿದೆ ಎಂಬುದನ್ನೂ ಬಂಗಾಲವು ರಾಷ್ಟ್ರಕ್ಕೆ ಮಾರ್ಗದರ್ಶನ ಮಾಡಿತು.

## ಮದ್ಯಪಾನ ಪ್ರತಿಬಂಧ

ಚಿಕ್ಕ ಪುಟ್ಟ ಕಾರ್ಯಗಳಲ್ಲಿ ಕೂಡ ರಾಜಕೀಯ ಚಳವಳಿಯನ್ನು ಹುಟ್ಟಿಸಿ, ಜನರಲ್ಲಿ ಚೈತನ್ಯವನ್ನುಂಟುಮಾಡುವ ಕಲೆಯು ಟಿಳಕರಿಗೆ ಚನ್ನಾಗಿ ಸಾಧಿಸಿತ್ತು. ಇಂತಹ ಚಳವಳಿಗಳಲ್ಲಿ ಮಧ್ಯಪಾನ ಪ್ರತಿಬಂಧದ ಚಳವಳಿಯೂ ಒಂದು. ಪುಣೆ ಜಿಲ್ಹಾ ಸಭೆಯಲ್ಲಿ ಟಿಳಕರ ಭಾಷಣದಿಂದ ಈ ಚಳವಳಿಗೆ ಉಕ್ಕು ಬಂದಿತು. ಸಾವಿರಾರು ತರುಣರು ಮುಂದೆ ಬಂದರು.

ಕಾವಲು ಪ್ರಾರಂಭವಾಯಿತು. ಲೋಕಮಾನ್ಯರು ಈ ಚಳವಳಿಯಲ್ಲಿ ಎಲ್ಲ ಪಕ್ಷಗಳು ಸಮಾವೇಶವಾಗುವಂತೆ ಕಮಿಟಿಯ ಯೋಜನೆ ಮಾಡಿದರು. ಪುಣೆಯಲ್ಲಿ ಪ್ರಾರಂಭವಾದ ಈ ಚಳವಳಿಯು ಮಹಾರಾಷ್ಟ್ರ ಹಾಗೂ ಕರ್ನಾಟಕದಲ್ಲಿ ಹಬ್ಬಿತು. ಕುಡಿಯಲು ಬಂದವರಿಗೆ ಸ್ವಯಂಸೇವಕರು ಕೈಮುಗಿದು ಕುಡಿಯಬೇಡಿರಿ ಎಂದು ಬಿನ್ನವಿಸಹತ್ತಿದರು. ಒಳಗೆ ಹೋಗುವವರ ಮುಂದೆ ಅಡ್ಡ ಬೀಳಹತ್ತಿದರು. ಕುಡುಕರಿಗೆ ಇದರಿಂದ ತೊಂದರೆಯಾಗಹತ್ತಿತು. ಇದರ ಬಿಸಿಯು ಗುತ್ತಿಗೆದಾರರಿಗೂ ಸರಕಾರದ ಬೊಕ್ಕಸಕ್ಕೂ ಹತ್ತಿತು ಗುತ್ತಿಗೆದಾರರು ಸರಕಾರದ ಮೊರೆಹೊಕ್ಕರು. ಆಂಗ್ಲೋ-ಇಂಡಿಯನ್ ವೃತ್ತಪತ್ರಗಳು ಮಧ್ಯಪಾನ ಪ್ರತಿಬಂಧದ ಹೆಸರಿನಿಂದ ಲೋಕಮಾನ್ಯರು ಸರಕಾರದ ವಿರುದ್ಧ ಜನರನ್ನು ಎಬ್ಬಿಸಹತ್ತಿದ್ದಾರೆ. ತರುಣರಿಗೆ ಶಿಕ್ಷಣಕೊಡಹತ್ತಿದ್ದಾರೆ. ಇದು ಹೀಗೆಯೇ ನಡೆದರೆ ನಾಳೆ ಸರಕಾರವನ್ನೂ ನಿರೋಧಿಸುತ್ತಾರೆ. ಎಂದು ಕೂಗನ್ನು ಎಬ್ಬಿಸಿದವು. ಶಾಂತತೆಯ ನೆವಮಾಡಿ ಸರಕಾರವು ದಬ್ಬಾಳಿಕೆಯನ್ನು ಪ್ರಾರಂಭಿಸಿತು. ಪೋಲೀಸರು ಸ್ವಯಂಸೇವಕರನ್ನು ಪ್ರತಿಬಂಧಿಸಹತ್ತಿದರು. ಶಾಂತತಾ ಭಂಗವಾಯಿತು, ರಹದಾರಿಗೆ ಅಡ್ಡಬಂದರು. ಇತ್ಯಾದಿ ಕಲಮುಗಳ ಹೆಸರಿನಲ್ಲಿ ಖಟ್ಲೆಹಾಕಹತ್ತಿದರು. ಮಿತಿಮೀರಿ ಶಿಕ್ಷೆಯಾಗಹತ್ತಿದವು. ಜನತೆಯೂ ಅಷ್ಟೇ ಹುರುಪಿನಿಂದ ಮುಂದೆ ಬರಹತ್ತಿತು ಸರಕಾರ-ಪ್ರಜೆಗಳ ಈ ಹೋರಾಟವು ರಣರಂಗದ ರೂಪತಾಳಿತು. 'ಪುಣೆಯಲ್ಲಿ ಬ್ರಿಟಿಶ ರಾಜ್ಯವು ಸಂಪುಷ್ಟಕ್ಕೆ ಬಂದಿದ್ದು ಟಿಳಕರ ರಾಜ್ಯ ಪ್ರಾರಂಭವಾಗಿದೆ' ಎಂದು ಗುಪ್ತಪೋಲೀಸರು ವರದಿ ಮಾಡಿದರು. ಹೀಗೆ ಚಳವಳಿಯು ಗಗನಕ್ಕೆ ಮುಟ್ಟಿತು.

ಈ ನಡುವೆ ಮಾರ್ಚ ತಿಂಗಳಿನಲ್ಲಿ ಡಿಸೆಂಟ್ರಲಾಯಿಝೇಶನ್ ಕಮಿಶನ್ (ಅಧಿಕಾರವಿತರಣ ಮಂಡಳವು) ಬಂದಿತು. ಲಾರ್ಡ ಕರ್ಝನರ ಕಾಲದಲ್ಲಿ ರಾಜ್ಯದ ಅಧಿಕಾರವೆಲ್ಲ ದಿಲ್ಲಿಯಲ್ಲಿ ಕೇಂದ್ರೀಕೃತವಾಗಿದ್ದಿತು. ಸದ್ಯದ ರಾಜ್ಯಕಾರಭಾರದಲ್ಲಿ ಅಲ್ಪ ಸ್ವಲ್ಪ ಬದಲುಮಾಡಿ ಸರಕಾರ ಹಾಗೂ ಜನತೆ ಸಮೀಪ ಬರುವಂತೆ ಮಾಡಬೇಕೆಂಬ ಇಚ್ಛೆಯು ಮೋರ್ಲೆಯವರಿಗೆ ಇದ್ದಿತು. ಈ ಕಮಿಶನ್ನಿನ ಮುಂದೆ ಸಾಕ್ಷಿ ನುಡಿಯುವಾಗ ಟಿಳಕರು ''ಕಲೆಕ್ಟರ ಅಥವಾ ಕಮಿಶನ್ನರಲ್ಲಿ ಅಧಿಕಾರವನ್ನು ಹಂಚುವದಿರದೆ

ಸರಕಾರ ಹಾಗೂ ಜನತೆಯಲ್ಲಿ ಹಂಚಬೇಕಾಗಿದೆ. ಇಂಗ್ಲಿಷ ಶಿಕ್ಷಣದಿಂದ ಜನತೆಯ ಆಕಾಂಕ್ಷೆಗಳ ಕ್ಷೇತ್ರವು ವಿಸ್ತ್ರತವಾಗಿದ್ದು, ಎಲ್ಲಿಯವರೆಗೆ ಜನತೆಯ ಇಚ್ಛೆಗಳು ಸರಕಾರದಿಂದ ಸುಫಲಿತವಾಗುವದಿಲ್ಲವೋ ಅಲ್ಲಿಯವರೆಗೆ ಸರಕಾರ ಹಾಗೂ ಜನತೆಯಲ್ಲಿ ಅಂತರವು ಕಡಿಮೆಯಾಗಲಾರದು" ಎಂದು ಸ್ಪಷ್ಟ ವಾಗಿ ಹೇಳಿಬಿಟ್ಟರು. ೧೭ನೇ ಮಾರ್ಚದ ಕೇಸರಿಯಲ್ಲಿ ಈ ವಿಷಯವನ್ನು ವಿವರಿಸುತ್ತ "ಎಲ್ಲಿಯ ವರೆಗೆ ರಾಜ್ಯದ ಅಧಿಕಾರವು ಜನತೆಯ ಹಸ್ತಾಂತರ ವಾಗಿಲ್ಲವೋ ಅಲ್ಲಿಯ ವರೆಗೆ ನಿರ್ಣಯಾಧಿಕಾರವು ದಿಲ್ಲಿಯಲ್ಲಿದ್ದರೂ ಅಷ್ಟೆ! ಜಿಲ್ಹಾಧಿಕಾರಿಗಳ ಕೈಯಲ್ಲಿದ್ದರೂ ಅಷ್ಟೆ! ನಿಜವಾದ ಅಧಿಕಾರದ ವಿತರಣೆ ಎಂದರೆ-ಸರಕಾರದಿಂದ ಜನತೆಗೆ ಅಧಿಕಾರ ಬರುವದು. ಅಧಿಕಾರ ವಿಭಾಗ ಮಾಡುವದೆಂದರೆ, ಒಂದು ಬೊಟ್ಟಿನ ಮೇಲಿದ್ದ ಉಗುಳನ್ನು ಎರಡನೆ ಬಟ್ಟಿನ ಮೇಲೆ ಮಾಡಿ ತೋರಿಸುವದಲ್ಲ, ಜನತೆಗೆ ಸ್ವರಾಜ್ಯದ ಅಧಿಕಾರವನ್ನು ಎಷ್ಟು ಮತ್ತು ಹೇಗೆ ಕೊಡಬೇಕೆಂಬುದೇ ಅಧಿಕಾರ ವಿತರಣವು." ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು. ರಾಷ್ಟ್ರವು ಲೋಕಮಾನ್ಯರ ಈ ರಾಜಕೀಯ ಜ್ಞಾನಕ್ಕೆ ಚಕಿತವಾಯಿತು.

ಹೀಗೆ ಸರಕಾರದೊಡನೆಯೂ ಜನತೆಯೊಡನೆಯೂ ಹೋರಾಡುತ್ತ ಟಿಳಕರು ರಾಷ್ಟ್ರದ ಶಕ್ತಿಯನ್ನು ಕೇಂದ್ರೀಕರಿಸುತ್ತ ನಡೆದಿದ್ದರು. ಮಂದ ಪಕ್ಷೀಯರು ಮಾತ್ರ ಹಿನ್ನಡೆದಿದ್ದರು. ಅಲಹಾಬಾದದ ಪ್ರಾಂತಿಕ ಪರಿಷತ್ತಿ ನಲ್ಲಿ ಮೇಥಾರವರು ಸಂಯುಕ್ತ ಕಾಂಗ್ರೆಸ್ಸಿನ ಕಲ್ಪನೆಯನ್ನು ಧಿಕ್ಕರಿಸಿದರು. ಮಂದಪಕ್ಷವು ಬ್ರಿಟಿಶ ರಾಜ್ಯದಲ್ಲಿಯ ತನ್ನ ನಿಷ್ಠೆಯನ್ನೂ ಸನದಶೀರ ಮಾರ್ಗವನ್ನೂ ಎಂದೂ ತ್ಯಜಿಸಲಾರದು. ಯಾವುದು ಕಾಂಗ್ರೆಸ್ಸಿನ ಧ್ಯೇಯವಲ್ಲವೋ ಆ ಧ್ಯೇಯದತ್ತ ಕಾಂಗ್ರೆಸನ್ನು ನಾವು ಎಂದೂ ಬಿಡ ಲಾರೆವು. ಬೇಕಾದರೆ ಎರಡೂ ಪಕ್ಷದವರು ತಮ್ಮ ತಮ್ಮ ಬೇರೆ ಬೇರೆ ಕಾಂಗ್ರೆಸ್ಸನ್ನು ಕೂಡಿಸಿಕೊಳ್ಳಬಹುದು. ಸಂಯುಕ್ತ ಕಾಂಗ್ರೆಸ್ಸು ಶಕ್ಯ ವಿಲ್ಲ ಎಂದು ಸಾರಿದರು. ಲಾಲಾ ಲಜಪತರಾಯ, ಕೇಳಕರ ಮೊದಲಾದ ವರು ಸಂಯುಕ್ತ ಕಾಂಗ್ರೆಸ್ಸಿನ ಬಗ್ಗೆ ಎಷ್ಟು ಪ್ರಯತ್ನಿಸಿದರೂ ಮಾಲವೀಯ, ಮೇಥಾ, ಗೋಖಲೆ ಪ್ರಭೃತಿಗಳು ಕೇಳಲಿಲ್ಲ. ಸುರೇಂದ್ರರೂ ಕೈಊರ ಬೇಕಾಯಿತು.

ಟಿಳಕರ ಅಂತಃಕರಣದಲ್ಲಿದ್ದ ಸಂಯುಕ್ತ ಕಾಂಗ್ರೆಸ್ಸಿನ ಕಳವಳಿಯನ್ನು ಮಂದಪಕ್ಷೀಯರು ಹೀಗೆ ವಿಫಲಗೊಳಿಸಿದರೂ ಟಿಳಕರು ನಿರಾಶರಾಗಲಿಲ್ಲ. ಅರವಿಂದ ಬಾಬುಗಳೂ ಮುಂಜೆ ಮೊದಲಾದವರೂ ಸ್ವತಂತ್ರ ಕಾಂಗ್ರೆಸ್ಸನ್ನು ಕೂಡಿಸಬೇಕೆಂದು ಹೇಳಿದರೂ ಟಿಳಕರು ರಾಷ್ಟ್ರಹಿತವೇ ಮುಖ್ಯವೆಂದೂ ವ್ಯಕ್ತಿಯ ಮಾನಾಪಮಾನಗಳಿಗೆ ಮಹತ್ವ ಕೊಡಕೂಡದೆಂದೂ ಬೇರೆ ಕಾಂಗ್ರೆಸ್ಸು ಹೂಡುವದು ಘಾತಕವೆಂದೂ ಸಂಯುಕ್ತ ಕಾಂಗ್ರೆಸ್ಸಿಗಾಗಿ ಕಾಯಬೇಕೆಂದೂ ಸ್ವಜನರಿಗೆ ಹೇಳಿ ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಕೇಳಕರ ಹಾಗೂ ಮಾಧವರಾವ ಬೋಡಸರನ್ನು ಈ ಕಾರ್ಯಕ್ಕೆ ನಿಯಮಿಸಿದರು. ರಾಷ್ಟ್ರಕ್ಕೆ ಕಾಂಗ್ರೆಸ್ಸು ಒಂದೇ ಇರಬೇಕೆಂದೂ ಅದರಲ್ಲಿದ್ದೇ ರಾಷ್ಟ್ರಮತಪರಿವರ್ತನೆ ಮಾಡಬೇಕೆಂದೂ ಟಿಳಕರು ಪ್ರತಿಪಾದಿಸಿದರು. ಮಂದಪಕ್ಷೀಯರ ಬೇರೆ ಕಾಂಗ್ರೆಸ್ಸನ್ನು ಸೇರಿಸಬೇಕೆಂಬ ವಿಚಾರವೆತ್ತ ? ಟಿಳಕರ ರಾಷ್ಟ್ರೀಯ ಕಾಂಗ್ರೆಸ್ ನಿಷ್ಠೆಯೆತ್ತ !

**ದುರ್ದಮನೀಯ ದಬ್ಬಾಳಿಕೆ**

ಇತ್ತ ಈ ಪ್ರಯತ್ನ ನಡೆದಾಗ ಅತ್ತ ವಿಧಿಯು ಬೇರೆ ಆಟವನ್ನೇ ಹೂಡಿದ್ದನು. ೧೯೦೮ರ ೩೦ನೇ ಎಪ್ರಿಲ್ ದಿವಸ ಅಧಿಕಾರಿಗಳ ಜುಲುಮೆಗೆ ಬೇಸತ್ತು ಕ್ರಾಂತಿಕಾರಕ ತರುಣ ಬಂಗಾಲಿಗಳು ಬಾಂಬುಗಳನ್ನೆಸೆದು ಹೋಮ ಕುಂಡವನ್ನು ಹೊತ್ತಿಸಿದರು. ಈ ರಣಯಜ್ಞದಲ್ಲಿ ಭಾರತದ ಅನೇಕ ಜನರು ಬಲಿಯಾಗಬೇಕಾಯಿತು. ಇದೇ ಸಂಧಿಯನ್ನು ಕಾಯುತ್ತಿದ್ದ ಅಧಿಕಾರಿಗಳು, ಮೈಯಲ್ಲಿ ಭೂತ ಸಂಚಾರವಾದಂತೆ ಪೈಶಾಚಿಕ ಕೃತ್ಯಗಳನ್ನೆಸಗಿದರು. ಹೊಸ ಹೊಸ ಆರ್ಡಿನನ್ಸಗಳನ್ನು ಹೊರಗೆಡವಿದರು. ರಾಷ್ಟ್ರೀಯ ಪಕ್ಷವನ್ನು ಮಣ್ಣುಗೂಡಿಸುವ ಸಂಕಲ್ಪಮಾಡಿದರು. ಅನೇಕ ತರುಣರನ್ನು ಗಲ್ಲಿಗೇರಿಸಹತ್ತಿದರು. ದೇಶಭಕ್ತರನ್ನು ಶೆರೆಮನೆಗಳಿಗಟ್ಟ ಹತ್ತಿದರು. ಅನೇಕ ವೃತ್ತ ಪತ್ರಗಳು ದಬ್ಬಾಳಿಕೆಗೆ ಬಲಿಯಾದವು. ಈ ರಣಯಜ್ಞದ ಅಧ್ವರ್ಯುಗಳು ಟಿಳಕರೆಂದೇ ಭಾವಿಸಿದ ಸರಕಾರವು ಅವರನ್ನು ಹೊರಗೆ ಬಿಡುವುದೇ? ಟಿಳಕರು ಈ ದಬ್ಬಾಳಿಕೆಯನ್ನೂ ಕ್ರಾಂತಿಕಾರರ ಅತ್ಯಾಚಾರಗಳನ್ನೂ ಕಟುವಾಗಿ ಟೀಕಿಸಹತ್ತಿದರು. ಸರಕಾರವು ಹೊತ್ತು ಸಾಧಿಸಿ ಟಿಳಕರಮೇಲೆ ಶಸ್ತ್ರವನ್ನು ಎತ್ತಿತು. ಅದರ ಕತೆ ಮುಂದಿನ ಅಧ್ಯಾಯದಲ್ಲಿ ನೋಡಿರಿ.

---

## ರಾಜದ್ರೋಹದ ಎರಡನೆಯ ಖಟ್ಲೆ

### ೧೯೦೮

ವಂಗಭಂಗ ಚಳವಳಿಯನಂತರ ದೇಶದಲ್ಲೆಲ್ಲ ಪಸರಿಸುತ್ತ ಹೊರಟ ರಾಷ್ಟ್ರೀಯತೆಯು ೧೯೦೭ ರ ಸುರತ ಕಾಂಗ್ರೆಸ್ಸಿನಲ್ಲುಂಟಾದ ಒಡಕಿನಿಂದ ಒಂದು ಬೇರೆ ಸ್ವರೂಪವನ್ನೇ ತಳೆಯಿತೆನ್ನಬಹುದು. ಸರಕಾರವು ನಡೆಸಿದ ಅನ್ಯಾಯಗಳ ಪರಿಮಾರ್ಜನೆಗೆ ಭಯೋತ್ಪಾದಕ ಚಟುವಟಿಕೆಗಳೇ ತರುಣೋಪಾಯಗಳೆಂದು ನಂಬಿದ ಕೆಲವು ತಲೆತಿರುಕ ತರುಣರು ಬಾಂಬುಗಳಿಗೆ ಕೈಯಿಕ್ಕಿದರು. ಬಂಗಾಲದ ಮುಜಫರಪೂರ ಎಂಬಲ್ಲಿ ಖದೀರಾಮ ಬೋಸ ಎಂಬ ತರುಣನು ಜಿಲ್ಹಾ ಮ್ಯಾಜಿಸ್ಟ್ರೇಟರಾಗಿದ್ದ ಕಿಂಗ್ಸಫೋರ್ಡ ಎಂಬವನಿಗೆ ಗುರಿಯಿಟ್ಟು ಒಗೆದ ಬಾಂಬಿನ ಗುರಿತಪ್ಪಿ, ಇಬ್ಬರು ಯುರೋಪಿಯನ್ನ ಮಹಿಳೆಯರು ಮರಣಹೊಂದಿದರು. ಸರಕಾರವಾದರೋ ತನ್ನ ದಬ್ಬಾಳಿಕೆಯ ಕ್ರೂರ ಅಸ್ತ್ರವನ್ನು ಹೊರದೆಗೆಯಲು ಇಂತಹ ನೆವದ ಹಾದಿಯನ್ನೇ ಕಾಯುತ್ತಿತ್ತು. ಬ್ರಿಟಿಶ ಪತ್ರಿಕೆಗಳಂತೂ ಈ ಘಟನೆಯನ್ನೇ ಎತ್ತಿಕೊಂಡು ಭಾರತದಲ್ಲಿಯ ರಾಷ್ಟ್ರೀಯ ಚಳುವಳಿಯನ್ನೂ ಅದರ ಧುರೀಣರನ್ನೂ ಮನಸೋಕ್ತ ಟೀಕಿಸಿ, ಉಗ್ರಕ್ರಮ ಕೈಕೊಳ್ಳಲು ಸರಕಾರವನ್ನು ಒತ್ತಾಯಪಡಿಸತೊಡಗಿದವು. ಈ ದೇಶದಲ್ಲಿಯ ವಿದೇಶೀ ಹಸ್ತಕ ಪತ್ರಿಕೆಗಳು ಸಹ ಅದಕ್ಕೆ ದನಿಗೂಡಿಸದೆ ಬಿಡಲಿಲ್ಲ.

ಅಲ್ಹಾಬಾದದ ''ಪಾಯೋನಿಯರ" ಎಂಬ ಪತ್ರಿಕೆಯು ೧೯೦೮ ರ ಮೇ ೭ ರ ತನ್ನ ಸಂಚಿಕೆಯಲ್ಲಿ ಈ ಭಯೋತ್ಪಾದಕರ ಚಟುವಟಿಕೆಗಳನ್ನು ಉಲ್ಲೇಖಿಸುತ್ತ "ಸರಕಾರವು ಇದನ್ನು ಹತ್ತಿಕ್ಕಲು ಸರ್ವ ಉಪಾಯಗಳನ್ನು ಕೈಕೊಳ್ಳಬೇಕು. ಪ್ರತಿಯೊಂದು ಜಿಲ್ಹೆ ಅಥವಾ ಊರಲ್ಲಿಯ ಎಲ್ಲ ಭಯೋತ್ಪಾದಕರನ್ನು ಕೂಡಲೇ ಬಂಧಿಸಬೇಕಲ್ಲದೆ, ಇಂತಹ ಘಟನೆಯ ಪುನರಾವೃತ್ತಿಯಾದರೆ ಅವರಲ್ಲಿಯ ೮-೧೦ ಜನರನ್ನು ಒಮ್ಮೆಲೇ ಗುಂಡಿನ ಬಾಯಿಗೆ ಕೊಡಲಾಗುವದೆಂದು ಬೆದರಿಕೆ ಹಾಕಬೇಕು'' ಎಂದೂ ಬರೆಯಿತು.

ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯೂ ಈ ಚಳವಳಿಯ ಹೊಣೆಗಾರಿಕೆಯನ್ನು ರಾಷ್ಟ್ರೀಯ ಚಳುವಳಿಗಾರರ ತಲೆಗೇ ಕಟ್ಟಿತು.

ಏಶಿಯನ್ ಎಂಬ ಪತ್ರಿಕೆಯು ಕಿಂಗ್ಸಫೋರ್ಡರು ಈ ಘಟನೆಯ ಸೇಡನ್ನು ಸರಿಯಾಗಿ ತೀರಿಸಿಕೊಳ್ಳದೆ ಬಿಡಬಾರದೆಂದು ಹೇಳಿತು.

ಕಲಕತ್ತೆಯ 'ಇಂಗ್ಲಿಶ್' ಎಂಬ ಪತ್ರಿಕೆಯಲ್ಲಿ ಪ್ರಕಟವಾದ ಒಂದು ಪತ್ರದಲ್ಲಿ "ಇಂತಹ ಚಳವಳಿಗಾರರನ್ನು ತತ್‌ಕ್ಷಣ ಹಾಗೂ ಸುಲಭ ಕ್ರಮಗಳಿಂದ ದಂಡಿಸುವ ಅಧಿಕಾರಗಳನ್ನು ಅಧಿಕಾರಿಗಳಿಗೆ ಕೊಡಬೇಕು. ಈ ಚಳವಳಿಗಾರರಲ್ಲಿ, ಕೆಲವರನ್ನು ಸಾರ್ವಜನಿಕವಾಗಿ ಎಳೆತಂದು ಬೀದಿಯಲ್ಲಿ ನಿಲ್ಲಿಸಿ, ಊರಹೊಲೆಯರಿಂದ ಅವರಿಗೆ ಫಟಕಿ ಶಿಕ್ಷೆ ಕೊಡಿಸಬೇಕು. ಅವರ ಮುದ್ರಣಾಲಯಗಳನ್ನು ಜಪ್ತಮಾಡಬೇಕು" ಎಂದು ಸೂಚಿಸಲಾಗಿತ್ತು.

ಲೋಕಮಾನ್ಯ ಟಿಳಕರು ಈ ಬಗ್ಗೆ ತಳೆದ ದೃಷ್ಟಿಕೋನವೇ ಬೇರೆಯಾಗಿತ್ತು. ಅವರು ತಮ್ಮ ಕೇಸರಿ ಪತ್ರಿಕೆಯಲ್ಲಿ ಬರೆಯುತ್ತ "ರಾಷ್ಟ್ರೀಯ ಚಳವಳಿಯಾಗಲೀ ಹೊಸದಾಗಿ ತಲೆಯೆತ್ತಿದ ಕ್ರಾಂತಿಕಾರಿ ಪಕ್ಷವಾಗಲೀ ಈ ಬಾಂಬ ಘಟನೆಗಳಿಗೆ ಕಾರಣವಾಗಿರದೆ, ಸರಕಾರವು ಕೈಕೊಂಡಿರುವ ನಿರ್ದಯ ದಬ್ಬಾಳಿಕೆಯ ಧೋರಣೆಯೇ ಇದರ ಮೂಲಕಾರಣವಾಗಿದೆ" ಎಂದು ತೋರಿಸಿದರು. "ದೇಶದ ದುರ್ದೈವ ಮತ್ತು ಶಾಶ್ವತ ಉಪಾಯಗಳಲ್ಲ" ಎಂದು ಬರೆದ ಎರಡು ಲೇಖಗಳಲ್ಲಿ ಅವರು ಬಂಗಾಲ ತರುಣರ ಸಾಹಸ ಮತ್ತು ಉತ್ಸಾಹಗಳನ್ನು ಪ್ರಶಂಶಿಸಿದರಲ್ಲದೆ ಸರಕಾರವು ಜನತೆಯ ಮನಸ್ಸಿನಲ್ಲಿ ನಡೆದ ಅಲ್ಲೋಲ ಕಲ್ಲೋಲಗಳನ್ನು ಅರಿತುಕೊಳ್ಳಲೆತ್ನಿಸಬೇಕೆಂದು ಪ್ರತಿಪಾದಿಸಿದರು. ಆದರೆ ಅವರು ಬಾಂಬ ಘಟನೆಯನ್ನು ಎಲ್ಲಿಯೂ ಎತ್ತಿ ಹಿಡಿಯಲಿಲ್ಲ. "ಕೇವಲ ಸ್ಫೋಟಕಗಳ ಕಾಯದೆಯಿಂದ ಬಾಂಬ ಪ್ರಯೋಗವನ್ನು ಪ್ರತಿಬಂಧಿಸುವದು ಸಾಧ್ಯವಿಲ್ಲ; ಯಾಕಂದರೆ ಸ್ವಲ್ಪೇ ಸಲಕರಣೆಗಳಿಂದ ಅದನ್ನು ಯಾರೂ ಎಲ್ಲಿಯೂ ಸಿದ್ಧಪಡಿಸಬಹುದು. ಜನತೆಯ ಹೊಸ ಆಶೆ-ಆಕಾಂಕ್ಷೆಗಳನ್ನು ಸರಕಾರವು ದುರ್ಲಕ್ಷಿಸಿದರೆ ಅದರಿಂದ ಸರಕಾರಕ್ಕೇ ಗಂಡಾಂತರವು ತಪ್ಪಿದ್ದಲ್ಲ. ಸರಕಾರವು ಪತ್ರಿಕಾ ಕಾಯದೆಯನ್ನು ಪಾಸು ಮಾಡಿ ಜನಜಾಗೃತಿಯ ಕ್ರಮವನ್ನು ತಡೆಗಟ್ಟಿದರೆ ಇದರಿಂದ ಉಂಟಾಗುವ ನಿರಾಶೆಯು, ಭಯಂಕರ ಸ್ವರೂಪವನ್ನು ತಾಳಿ ದೊಡ್ಡ ದೊಡ್ಡ ವಿಚಾರಶೀಲ

ಮತ್ತು ಮೇಧಾವಿಗಳ ತಲೆಗಳನ್ನು ತಿರುಗಿಸಬಹುದು. ಬಾಂಬುಗಳನ್ನು ತಡೆಗಟ್ಟುವ ಶಾಶ್ವತ ಉಪಾಯವೆಂದರೆ ಜನತೆಗೆ ಸ್ವರಾಜ್ಯದ ಹಕ್ಕುಗಳನ್ನು ದಯಪಾಲಿಸುವದು. ದಬ್ಬಾಳಿಕೆಯಿಂದ ಜನತೆಯನ್ನು ಬಹಳ ದಿನ ಬೆದರಿಸಲಾಗದು." ಎಂದೂ ಅವರು ಬರೆದಿದ್ದರು.

ಅನುಕ್ರಮವಾಗಿ ಮೇ ೯ ಜೂನ ೧೨ಕ್ಕೆ ಪ್ರಕಟವಾದ ಈ ಲೇಖಗಳ ಇಂಗ್ಲಿಷ ಭಾಷಾಂತರಗಳ ಆಧಾರಗಳ ಮೇಲೆ ಲೋಕಮಾನ್ಯ ಟಿಳಕರನ್ನು ಬಂಧಿಸಬೇಕೆಂದು ಆಗಿನ ಮುಂಬಯಿ ಗವ್ಹರ್ನರರಾದ ಸರ್ ಜಾರ್ಜ ಕ್ಲಾರ್ಕ (ನಂತರ ಲಾರ್ಡ ಸಿಡನ್ಹ್ಯಾಮ) ರು ನಿರ್ಧರಿಸಿದರು. ಮುಂಬಯಿ ಗವ್ಹರ್ನರರು ಆಗಿನ ವ್ಹಾಯಿಸರಾಯರಾಗಿದ್ದ ಲಾರ್ಡ ಮಿಂಟೊ ಮತ್ತು ಲಂಡನದಲ್ಲಿಯ ಸೆಕ್ರೆಟರಿ ಫಾರ್ ಸ್ಟೇಟರಾಗಿದ್ದ ಲಾರ್ಡ ಮೋರ್ಲೆ ಇವರೊಡನೆ ವಿಚಾರ ವಿನಿಮಯ ನಡೆಸಿ, ಟಿಳಕರನ್ನು ಬಂಧಿಸಲು ನಿರ್ಣಯಿಸಿದ್ದರು. ಈ ಆಪ್ತಾಲೋಚನೆಯ ಸುಳಿವನ್ನು ಯಾರೊಬ್ಬ ಹಿಂದೀಯನಿಗೂ ಹತ್ತಗೊಟ್ಟಿರಲಿಲ್ಲ. ಇದಕ್ಕೆ ಸಂಬಂಧಿಸಿದ ಕೆಲ ಸಲಹೆ ಸೂಚನೆಗಳಂತೂ ಕಲಕತ್ತೆಯಲ್ಲಿಯ ವ್ಹಾಯಿಸರಾಯ ಮತ್ತು ಮುಂಬಯಿಯಲ್ಲಿಯ ಗವ್ಹರ್ನರರಲ್ಲಿ ವಿಶೇಷ ಸಂದೇಶವಾಹಕರ ಮುಖಾಂತರ ವಿನಿಮಯಿಸಲ್ಪಟ್ಟಿದ್ದವು. ಸರಕಾರವು ತನ್ನ ಅಧಿಕಾರಿಗಳನ್ನು ಮಾತ್ರವಲ್ಲದೆ ತನ್ನದೇ ಆದ ಅಂಚೆ ಮತ್ತು ತಂತೀ ಶಾಖೆಗಳ ಮೇಲೂ ವಿಶ್ವಾಸವಿಡಲಿಲ್ಲ.

ಸರಕಾರವು ಇಷ್ಟೊಂದು ಗೌಪ್ಯವನ್ನು ಕಾಪಾಡಿಕೊಂಡಿದ್ದರೂ ಇದರ ಸುಳಿವು ಲೋ. ಟಿಳಕರಿಗೆ ಹತ್ತದಿರಲಿಲ್ಲ. 'ಕಾಳ' ಎಂಬ ಮರಾಠಿ ವಾರ ಪತ್ರಿಕೆಯೊಂದರಲ್ಲಿ ಪ್ರಕಟವಾದ ಕೆಲ ಲೇಖಗಳಿಗಾಗಿ ಅದರ ಸಂಪಾದಕರಾಗಿದ್ದ ಪ್ರೊ. ಎಸ್. ಎನ್. ಪರಾಂಜಪೆ ಎಂಬವರ ಮೇಲೆ ಹಾಕಲಾಗಿದ್ದ ಖಟ್ಲೆಯೊಂದರಲ್ಲಿ, ಅವರಿಗೆ ನೆರವಾಗುವದಕ್ಕಾಗಿ ಟಿಳಕರು ಅಂದು ಮುಂಬಯಿಗೆ ಹೊರಟು ನಿಂತಿದ್ದರು. ಅವರು ಪುಣೆ ನಿಲ್ದಾಣದಲ್ಲಿ ಗಾಡಿಯನ್ನು ಹತ್ತುತ್ತಿರುವಾಗಲೇ ಬಾಪೂಸಾಹೇಬ ಗಾಂಧಿ ಎಂಬ ಅವರ ಮಿತ್ರರೊಬ್ಬರು ಅವರ ಹತ್ತಿರ ಬಂದು "ನೀವು ಮುಂಬಯಿಯಲ್ಲಿ ಕಾಲಿರಿಸಿದೊಡನೆಯೇ ನಿಮ್ಮನ್ನು ಬಂಧಿಸಬೇಕೆಂದು ಸರಕಾರವು ನಿರ್ಧರಿಸಿದೆ. ಆದ್ದರಿಂದ ನಿಮ್ಮ ಮುಂಬಯಿ ಪ್ರವಾಸವನ್ನು ಮುಂದೂಡಿರಿ"

ಎಂದು ಕಿವಿಯಲ್ಲಿ ಹೇಳಿದರು. ಮತ್ತು ಬಂಧಿತರಾಗುವ ಪೂರ್ವದಲ್ಲಿ ಮನೆತನ ಹಾಗೂ ಪತ್ರಿಕೆಗಳ ಬಗ್ಗೆ ತಾವು ಏರ್ಪಾಡು ಮಾಡಿಡಬೇಕೆಂದೂ ಅವರು ಸೂಚಿಸಿದರು. ಆದರೆ ಟಿಳಕರ ಸಿಂಹ ಹೃದಯವು ಇದರಿಂದ ಎಳ್ಳಷ್ಟೂ ಬೆದರಲಿಲ್ಲ. ಅಳುಕಲಿಲ್ಲ. ಕಾತರಗೊಂಡ ತಮ್ಮ ಸ್ನೇಹಿತರಿಗೆ ಅವರು ಅತ್ಯಂತ ಶಾಂತ ಮುದ್ರೆಯಿಂದ "ಮನೆಗೆ ಹೋಗಿ ನಾನೇನು ಮಾಡಬೇಕಾಗಿದೆ? ವೈರಿಗಳು ಪ್ರವೇಶಿಸದಂತೆ ನಾನೇನು ಸುತ್ತಲು ಕಂದಕ ತೋಡಿಕೊಂಡು ಕುಳಿತು ಹೊಸ ಸೈನ್ಯಸಂಗ್ರಹ ಮಾಡಲೇ? ಸರಕಾರದವರು ಇಡೀ ದೇಶವನ್ನೇ ಒಂದು ವಿಶಾಲ ಕಾರಾಗ್ರಹವನ್ನಾಗಿ ಪರಿವರ್ತಿಸಿದ್ದಾರೆ. ನನ್ನನ್ನು ಈ ವಿಶಾಲ ಕಾರಾಗೃಹದಿಂದ ಎತ್ತಿ, ಒಂದು ಸಣ್ಣ ಕೋಣೆಯಲ್ಲಿ ಹಾಕುವ ಹೊರ್ತು ಬೇರೆ ಏನು ತಾನೇ ಅವರು ಮಾಡಬಲ್ಲರು? ಈ ಅಲ್ಪ ಪ್ರವಾಸಕ್ಕಾಗಿ ಅದಾವ ಸಿದ್ಧತೆ ಮಾಡಬೇಕು?'' ಎಂದರು. ಟಿಳಕರು ಅದೇ ಗಾಡಿಯಿಂದ ಮುಂಬಯಿಗೆ ಹೋಗಿ ತಮ್ಮ ರೂಢಿಯಂತೆ ಸರದಾರ ಗೃಹಕ್ಕೆ ಹೋಗಿ ಇಳಿದುಕೊಂಡರು.

ಅವರು ಸೆರೆಹಿಡಿಯಲ್ಪಟ್ಟ ಜೂನ ೨೪ ರಂದು ಸಹ ಇದೇ ಮಾದರಿಯ ಘಟನೆ ನಡೆಯಿತು. ಪೋಲೀಸ ಸುಪರಿಂಡೆಂಟರು ಟಿಳಕರ ಬಂಧನದ ವಾರಂಟನ್ನು ತರುವದಕ್ಕಿಂತ ಕೆಲವೇ ತಾಸುಗಳ ಪೂರ್ವದಲ್ಲಿ ಟಿಳಕರ ಸಹಾಯಕರಲ್ಲೊಬ್ಬರಾದ ಶ್ರೀ ಯಶವಂತರಾವ ಕುಲಕರ್ಣಿ ಎಂಬವರಿಗೆ ಟಿಳಕರ ಬಂಧನದ ಆಜ್ಞೆಗೆ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಅಂಕಿತ ಹಾಕಿರುವರೆಂಬ ಸುದ್ದಿ ತಿಳಿಯಿತು. ಟಿಳಕರು ಹೋಟಲಿಗೆ ಹಿಂದಿರುಗಿದೊಡನೆಯೇ ಅವರಿಗೆ ಈ ವಾರ್ತೆಯನ್ನು ಮುಟ್ಟಿಸಲಾಯಿತು. ಆಗ ಮಾತ್ರ ಟಿಳಕರು ವ್ಯಾಕುಲಚಿತ್ತರಾಗಿ ''ಪ್ರತಿ ಹೋರಾಟ ನಡೆಸುವ ಶಕ್ತಿಯೇ ಇಲ್ಲದಂಥ ದೇಶದ ಧುರೀಣರಿಗೆ, ಇಂತಹ ವಾರ್ತೆಯು ಮೊದಲೇ ತಿಳಿದೇನು ಪ್ರಯೋಜನ!'' ಎಂದು ಉದ್ಗಾರ ತೆಗೆದರು. ವಿಶ್ರಾಂತಿ ಪಡೆಯಲು ತಮ್ಮ ಕೊಣೆಗೆ ತೆರಳಿದರು. ಅವರು ಆಗ ತೀರ ದಣಿದಿದ್ದರು. ಈ ಸುದ್ದಿಗೆ ಲಕ್ಷ್ಯಗೊಡುವಷ್ಟು ಸಹನೆ ಆಗ ಅವರಿಗೆ ಉಳಿದಿರಲಿಲ್ಲ. ಅವರು ಸ್ವಸ್ಥಚಿತ್ತರಾಗಿ ಮಲಗಿಬಿಟ್ಟರು.

ಸುಮಾರು ಮೂರು ತಾಸುಗಳನಂತರ ಪೋಲೀಸರು ವಾರಂಟು ತೆಗೆದುಕೊಂಡುಬಂದರು. ಟಿಳಕರು ಅವರನ್ನು ಸ್ನೇಹದಿಂದ ಸ್ವಾಗತಿಸಿ ನಗುತ್ತ

"ನನ್ನ ಬಂಧನದ ಆಜ್ಞೆಗೆ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಅಂಕಿತಹಾಕಿ ನಾಲ್ಕು ತಾಸುಗಳಾದವು. ಆದರೆ ಇದಕ್ಕೆ ಇಷ್ಟೊಂದು ವಿಲಂಬವೇಕೆ? ಪೋಲೀಸ ಕಚೇರಿಯಿಂದ ಸರದಾರ ಗೃಹಕ್ಕೆ ಬರಲು ಕೇವಲ ೧೫ ನಿಮಿಷಗಳು ಸಾಕು, ನೀವು ಸಾಕಷ್ಟು ಮೊದಲೇ ಬಂದಿದ್ದರೆ ನಾನು ಜಾಮೀನಿನ ಮೇಲೆ ಬಿಡುಗಡೆ ಹೊಂದುವದಕ್ಕಾಗಿ ಅರ್ಜಿಯನ್ನಾದರೂ ಸಲ್ಲಿಸಬಹುದಿತ್ತು. ಇರಲಿ ಇನ್ನು ವೇಳೆ ಕಳೆಯುವದು ಬೇಡ." ಎಂದು ಹೇಳಿ ಪಗಡಿಯನ್ನು ತಲೆಯ ಮೇಲಿಟ್ಟುಕೊಂಡು ತಮ್ಮ ಬೆಳ್ಳಿಯ ಅಡಿಕೆಯ ಡಬ್ಬಿಯನ್ನು ಕಿಸೆಯಲ್ಲಿ ಹಾಕಿಕೊಂಡು ಕೈಬಡಿಗೆಯನ್ನೆತ್ತಿಕೊಂಡು ಪೋಲೀಸ ಅಧಿಕಾರಿಗಳೊಡನೆ ವಿವಾಹ ಸಮಾರಂಭಕ್ಕೆ ಹೊರಟ ರೀತಿಯಲ್ಲಿ ಹೊರಟುಬಿಟ್ಟರು. ಅವರು ತಮ್ಮ ಭವಿಷ್ಯದ ಬಗ್ಗೆ ಅಷ್ಟೊಂದು ಸ್ವಸ್ಥಚಿತ್ತರಾಗಿದ್ದರು.

ಟಿಳಕರ ಬಂಧನದ ಆಜ್ಞೆಯನ್ನು ಜಾರಿ ಮಾಡಲು ವಿಲಂಬವಾದದ್ದು ಕೇವಲ ಆಕಸ್ಮಿಕವಾಗಿರಲಿಲ್ಲ. ಟಿಳಕರನ್ನು ಜಾಮೀನಿನ ಮೇಲೆ ಬಿಡುವ ಇಚ್ಛೆ ಸರಕಾರಕ್ಕಿರಲಿಲ್ಲ. ಮರುದಿನ ಅವರು ಮಾಡಿಕೊಂಡ ಅರ್ಜಿಯನ್ನು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ತಿರಸ್ಕರಿಸಿದರು. ಟಿಳಕರ ವಕೀಲರಾಗಿದ್ದ ಮಹಮ್ಮದಅಲಿ ಜಿನ್ನಾರವರು ಜುಲೈ ೨ ರಂದು ಮತ್ತೊಂದು ಜಾಮೀನ ಅರ್ಜಿಯನ್ನು ಮಾಡಿಕೊಂಡರು. ಆದರೆ ಅದೂ ತಿರಸ್ಕರಿಸಲ್ಪಟ್ಟಿತು. ಈ ಎರಡನೇ ಅರ್ಜಿಯನ್ನು ಪರಿಶೀಲಿಸಿದ ನ್ಯಾಯಾಧೀಶರಾದ ದಾವರರು "ಸದ್ಯದ ಪರಿಸ್ಥಿತಿಯಲ್ಲಿ ಈ ಅರ್ಜಿಯನ್ನು ತಿರಸ್ಕರಿಸುವದಕ್ಕೆ ಕಾರಣ ಕೊಡದಿರುವದೇ ಜಾಣತನದ್ದೆಂದು ನನಗನಿಸುತ್ತದೆ." ಎಂದು ತಮ್ಮ ನಿರ್ಣಯವನ್ನು ಹೇಳಿದರು. ಜಾಮೀನು ಅರ್ಜಿಗಳ ಬಗ್ಗೆ ಸರಕಾರವು ತಳೆದ ಧೋರಣೆಯೇ ಇಡೀ ಖಟ್ಲೆಯ ಬಗ್ಗೆ ಅನುಸರಿಸಲ್ಪಟ್ಟಿತು. ಸರಕಾರವು ಮುಂಗಡವಾಗಿಯೇ ಟಿಳಕರಿಗೆ ಶಿಕ್ಷೆ ವಿಧಿಸುವ ತೀರ್ಪನ್ನು ಬರೆದಿಟ್ಟುಕೊಂಡೇ ಅದಕ್ಕನುಸಾರವಾಗಿ ಇಡೀ ಖಟ್ಲೆಯನ್ನು ರೂಪಿಸಿಕೊಂಡಂತಿತ್ತು. ಆರೋಪಿಯು ಮಂಡಿಸಿದ ನ್ಯಾಯಬದ್ಧವಾದ ಒಂದು ವಾದಕ್ಕೂ ಕಿವಿಗೊಡದೆ ನ್ಯಾಯಾಧೀಶರು ಏಕಪಕ್ಷೀಯ ತೀರ್ಪನ್ನು ಕೊಡುವದೆಂದರೆ, ನ್ಯಾಯದಾನದ ಪರಿಹಾಸವಲ್ಲದೆ ಮತ್ತೇನು?

ಆಯ್. ಸಿ. ಸಿ. ಯ ೧೨೪ ಎ. ಮತ್ತು ೧೫೩ ಎ. ಕಲಮು ಗಳ ಪ್ರಕಾರ ಹಾಕಲ್ಪಟ್ಟ ಈ ಖಟ್ಲೆಯು ಜುಲೈ ೧೨ ರಂದು ಹೈಕೋರ್ಟಿಗೆ ಕಳಿಸಲ್ಪಟ್ಟಿತು. ರಾಜಕೀಯ ಆರೋಪಕ್ಕಾಗಿ ಈ ಖಟ್ಲೆಯನ್ನು ಹಾಕಿ ರುವದರಿಂದ ಸ್ಪೇಶಲ್ ಜ್ಯೂರಿಗಳನ್ನು ನೇಮಿಸಲು ಅಪ್ಪಣೆ ಕೊಡಬೇಕೆಂದು ಸರಕಾರವು ಮುಂಬೈ ಗವ್ಹರ್ನರರನ್ನು ಪ್ರಾರ್ಥಿಸಿಕೊಂಡಿತು. ಈ ಬಿನ್ನಹ ವನ್ನು ಟಿಳಕರ ವಕೀಲರಾಗಿದ್ದ ಶ್ರೀ. ಜೊಸೆಫ್ ಬ್ಯಾಪ್ಟಿಸ್ಟಾರವರು ವಿರೋಧಿಸುತ್ತ "ಈ ವಿಶೇಷ ಜ್ಯೂರಿಗಳ ನೇಮಕವು ಆರೋಪಿಯ ಹಿತ ಸಂಬಂಧಕ್ಕೆ ಬಾಧಕವಾಗಿದೆ. ಕಾಯದೆಯಲ್ಲಿ ಜ್ಯೂರಿಗಳನ್ನು ಆರೋಪಿಗೆ ನೆರವಾಗುವದಕ್ಕಾಗಿ ನೇಮಿಸಬೇಕೆಂದಿದೆಯೇ ಹೊರತು ಅವನಿಗೆ ವಿರುದ್ಧ ವಾಗಿಯಲ್ಲ. ಅದ್ದರಿಂದ ನಮ್ಮ ಮೇಲೆ ಈ ಬಗ್ಗೆ ಒತ್ತಾಯವೇಕೆ?" ಎಂದು ವಾದಿಸಿದರು. ಆದರೂ ಸರಕಾರವು ಒಂಭತ್ತು ಸ್ಪೆಶಲ್ ಜ್ಯೂರಿಗಳ ನೇಮಕಕ್ಕೆ ಅಪ್ಪಣೆ ಕೊಟ್ಟಿತು. ಅವರಲ್ಲಿ ಏಳು ಜನರು ಯುರೋಪಿ ಯನ್ನರೂ ಇಬ್ಬರು ಹಿಂದೀಯರೂ ಇದ್ದರು. ಯುರೋಪಿಯನ್ನರಿಗೆ ಮರಾಠಿ ಭಾಷೆಯ ಗಂಧ ಸಹ ಗೊತ್ತಿರಲಿಲ್ಲವೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಜುಲೈ ೧೩ ರಂದು ಹೈಕೋರ್ಟಿನಲ್ಲಿ ಈ ಖಟ್ಲೆಯ ವಿಚಾರಣೆಗೆ ಪ್ರಾರಂಭವಾಯಿತು. ಟಿಳಕರು ತಮ್ಮ ಪರವಾಗಿ ತಾವೇ ವಾದಿಸಿದರು. ಸರ ಕಾರದ ಮುಖ್ಯ ಸಾಕ್ಷಿಗಳಾದ ಓರಿಯಂಟಲ್ ಟ್ರಾನ್ಸಲೇಟರರನ್ನು ಟಿಳಕರು ವಿವರವಾಗಿ ಪರಿಪಶ್ನಿಸಿ ಸರಕಾರಿ ಆರೋಪದ ಹುಳುಕನ್ನು ಹೊರಗೆಡವಿ ದರು. ಸಾಕ್ಷಿಗಳ ಹೇಳಿಕೆ, ಪ್ರತಿ ಹೇಳಿಕೆಗಳು ಜುಲೈ ೧೫ ಕ್ಕೆ ಮುಗಿದವು. ಟಿಳಕರು ತಮ್ಮ ವಾದವನ್ನು ಅಂದೇ ಪ್ರಾರಂಭಿಸಿ, ೨೧ ತಾಸುಗಳ ವರೆಗೆ ತಮ್ಮ ಪಕ್ಷವನ್ನು ಮಂಡಿಸಿ, ಜುಲೈ ೨೨ ಕ್ಕೆ ಮುಕ್ತಾಯಗೊಳಿಸಿದರು. ಅಡ್ವೋಕೇಟ ಜನರಲ್ಲರು ಉತ್ತರಕೊಟ್ಟನಂತರ ನ್ಯಾಯಾಧೀಶರು ಸಾರಾಂಶವನ್ನು ಹೇಳಿದ ಮೇಲೆ ಜ್ಯೂರಿಗಳು ತಮ್ಮ ಅಭಿಪ್ರಾಯ ತಿಳಿಸಿ ದರು. ಅವರು ಏಳು, ವಿರುದ್ಧ ಎರಡು ಮತಗಳಿಂದ ಟಿಳಕರನ್ನು ಅಪರಾಧಿ ಗಳೆಂದು ಹೇಳಿದರು. ನ್ಯಾಯಾಧೀಶರು ಅದನ್ನೇ ಎತ್ತಿ ಹಿಡಿದು ತಮ್ಮ ತೀರ್ಪನ್ನು ಇತ್ತರು.

ಲೋಕಮಾನ್ಯ ಟಿಳಕರು ತಾವು ಬರೆದ ಲೇಖಗಳ ಭಾವವನ್ನು, ಅರ್ಥ ವನ್ನು ತಾವೇ ಸರಿಯಾಗಿ ಹೇಳಬಲ್ಲೆವೆಂಬ ಧೈರ್ಯದಿಂದ ಮತ್ತು ಅದರಿಂದ ಸರಕಾರವನ್ನು ಹಾಗೂ ನ್ಯಾಯಾಧೀಶರನ್ನು ಮನಗಾಣಿಸಬಹುದೆಂಬ ಆಶೆ ಯಿಂದ ತಮ್ಮ ವಕಾಲತ್ತನ್ನು ತಾವೇ ನಡೆಸಿದರು. ಅವರ ವಾದವು ಸರಲವೂ ಸ್ಪಷ್ಟವೂ ನಿಚ್ಚಳವೂ ಆಗಿತ್ತು. ಪ್ರಾರಂಭಕ್ಕೆ ಅವರು ಐ. ಪಿ. ಸಿ. ೧೨೪ ಎ. ಮತ್ತು ೧೫೩ ಎ ಕಲಮುಗಳಲ್ಲಿ ಉಲ್ಲೇಖಿತವಾದ ಅಪರಾಧಗಳ ಕಕ್ಷೆಯಲ್ಲಿ ತಮ್ಮ ಲೇಖಗಳು ಬರುವದಿಲ್ಲವೆಂದು ವಾದಿಸಿದರು. ತಮ್ಮ ಲೇಖಗಳು ಕೇವಲ ಭಾರತೀಯರ ಹೃದ್ಗತವನ್ನು ವ್ಯಕ್ತಪಡಿಸಲು ಬರೆಯಲ್ಪಟ್ಟವೆಯೋ ಹೊರತು ಯಾರನ್ನೂ ಉದ್ರೇಕಿಸಲು ಬರೆಯಲ್ಪಟ್ಟವುಗಳಲ್ಲವೆಂದೂ ಹಾಗೆ ಯಾವುದನ್ನು ಉದ್ರೇಕಗೊಳಿಸಿಲ್ಲವೆಂದೂ ಹೇಳಿದರು. ತಮ್ಮ ಈ ಆಕ್ಷೇಪಕ್ಕೆ ಸರಕಾರವು ಉತ್ತರಕೊಡಲೆಂದು ಅವರು ಆಹ್ವಾನಿಸಿದರು. ''ನಾನೇನು ಈ ಲೇಖಗಳ ಹೊಣೆಗಾರಿಕೆಯನ್ನು ಹಾರಿಸಿಕೊಳ್ಳುವದಿಲ್ಲ. ಇವುಗಳನ್ನು ನಾನೇ ಬರೆದಿರುವೆನೆಂದು ಒಪ್ಪುತ್ತೇನೆ ಸಾರ್ವಜನಿಕ ಹಿತದ ದೃಷ್ಟಿಯಿಂದ ಹೀಗೆ ಬರೆಯುವದು ಅವಶ್ಯವೆನಿಸಿದ್ದರಿಂದ ಬರೆದಿದ್ದೇನೆ. ಬಾಂಬ ಸ್ಫೋಟದ ಬಗ್ಗೆ ಆಂಗ್ಲೊ ಇಂಡಿಯನ್ ಪತ್ರಿಕೆಗಳು ವ್ಯಕ್ತಪಡಿಸಿದ ಅಭಿಪ್ರಾಯಗಳಿಗೆ ಉತ್ತರ ರೂಪವಾಗಿ ನಾನು ಈ ಲೇಖಗಳನ್ನು ಬರೆದಿದ್ದೇನೆ. ದಬ್ಬಾಳಿಕೆಯಿಂದ ಪರಿಸ್ಥಿತಿ ಸುಧಾರಿಸುವದಿಲ್ಲೆಂದೂ ಪ್ರಜೆಗಳಿಗೆ ಹಕ್ಕು ಬಾಧ್ಯತೆಗಳನ್ನು ಕೊಡುವದೇ ತಕ್ಕ ಉಪಾಯವೆಂದೂ ಪ್ರತಿಪಾದಿಸಿದ್ದೇನೆ'' ಎಂದು ಹೇಳಿದರು.

ಟಿಳಕರು ನಡೆಸಿದ ಮರು ಸವಾಲಿನಲ್ಲಿ ಸರಕಾರಿ ಸಾಕ್ಷಿಗಳು ಕುಪ್ಪರಿ ಸಿದವು. ಸರಕಾರದ ಪರವಾಗಿ ಸಾಕ್ಷಿ ನುಡಿಯಲು ಬಂದಿದ್ದ ಜೋಶಿ ಎಂಬ ಓರಿಯಂಟಲ್ ಟ್ರಾನ್ಸಲೇಟರರು ತಾವು ಸ್ವತಃ ಆ ಲೇಖವನ್ನು ಭಾಷಾಂತ ರಿಸಿಲ್ಲವೆಂದೂ ಮೂಲದಲ್ಲಿಯ ಕೆಲವು ಅಂಶಗಳನ್ನು ಅನುವಾದದಲ್ಲಿ ಬಿಡ ಲಾಗಿದೆಯೆಂದೂ ಇಂಗ್ಲೀಷಿನಲ್ಲಿ ಉಪಯೋಗಿಸಿದ ಕೆಲ ಶಬ್ದಗಳು ಮೂಲ ಮರಾಠಿಯ ಸತ್ಯಾರ್ಥವನ್ನು ಕೊಡುವದಿಲ್ಲವೆಂದೂ ನ್ಯಾಯಾಧೀಶರೆದುರು ಒಪ್ಪಬೇಕಾಯಿತು. ಆದರೆ ಅದನ್ನು ಕೇಳುವ ಕಿವಿ ಯಾರಿಗೆ?

ಆರೋಪದ ಮೂಲವಸ್ತುವಾದ ಲೇಖನವೇ ತಪ್ಪಾಗಿ ಅನುವಾದಿಸಲ್ಪ ಟ್ಟದೆಯೆಂದು ಅನುವಾದಕನೇ ಪ್ರತಿಜ್ಞಾಬದ್ಧವಾಗಿ ನ್ಯಾಯಾಲಯದಲ್ಲಿ

ಒಪ್ಪುತ್ತಿರುವಾಗ ನ್ಯಾಯಾಧೀಶರು ಅನುವಾದವು ಸರಿಯಾಗಿದೆಯೆಂದು ಹಟ ಸಾಧಿಸುವ ಉದಾಹರಣೆಯು ಬೇರೆಡೆಗೆ ಸಿಗುವದು ಸಾಧ್ಯವೇ ? ಸಾಮಾನ್ಯವಾಗಿ ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಟಿಳಕರ ವಿಷಯದಲ್ಲಿ ಬ್ರಿಟಿಶ್ ನ್ಯಾಯಾಲಯದ ವರ್ತನೆಯು ಇದೇ ರೀತಿಯಾಗಿತ್ತು.

ಕೊನೆಗೆ ಅವರು ತಮ್ಮ ವಾದವನ್ನು ಸಮಾರೋಪಗೊಳಿಸುತ್ತ "ನನ್ನ ಲೇಖನಗಳಲ್ಲಿ ಹೊಸ ಅಂಶವೇನೂ ಇಲ್ಲ. ಸರಕಾರದ ವಿರುದ್ಧ ಜನರನ್ನು ಉದ್ರೇಕಿಸುವ ಅಂಶಗಳು ಅದರಲ್ಲಿಲ್ಲ. ದುರ್ಘಟನೆಯನ್ನು ನನ್ನ ಪತ್ರಿಕೆಯು ಕೂಡಲೇ ಖಂಡಿಸಿದೆ. ಆದರೆ ಅದೇ ಕಾಲಕ್ಕೆ ಸರಕಾರದ ದಬ್ಬಾಳಿಕೆಯು ಖಂಡನಾರ್ಹವೆಂದೂ ನಾನು ಹೇಳಿದ್ದೇನೆ" ಎಂದು ಹೇಳಿದರು.

ಜ್ಯೂರಿಗಳು ೨ ತಾಸುಗಳವರೆಗೆ ವಿಚಾರ ವಿನಿಮಯ ನಡೆಸಿ ಟಿಳಕರ ಮೇಲೆ ಹೊರಿಸಲ್ಪಟ್ಟ ಮೂರೂ ಆರೋಪಗಳು (ಸರಕಾರವನ್ನು ನಿಂದಿಸಿದ ಬಗ್ಗೆ ಎರಡು, ಮತ್ತು ಜನತೆಯಲ್ಲಿ ದ್ವೇಷವನ್ನು ಬಿತ್ತಿದ ಬಗ್ಗೆ ಒಂದು) ಸಿದ್ಧವಾಗುವವೆಂದು ಏಳು, ವಿರುದ್ಧ ಎರಡು ಮತಗಳಿಂದ ಅಭಿಪ್ರಾಯ ವ್ಯಕ್ತ ಪಡಿಸಿದರು. ಟಿಳಕರು ನಿರಪರಾಧಿಗಳೆಂದು ಅಭಿಪ್ರಾಯಪಟ್ಟ ಆ ಇಬ್ಬರು ಜ್ಯೂರಿಗಳು ಭಾರತೀಯರಿದ್ದರೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಶಿಕ್ಷೆಯನ್ನು ಹೇಳುವ ಮೊದಲು ನ್ಯಾಯಾಧೀಶರು ಟಿಳಕರ ಕಡೆಗೆ ಹೊರಳಿ "ನಿಮಗೆ ಏನಾದರೂ ಹೇಳುವದಿದೆಯೇ ?" ಎಂದು ಕೇಳಿದರು.

ನ್ಯಾಯಾಲಯದ ತೀರ್ಪು ಏನೆಂಬುದು ಜ್ಯೂರಿಗಳ ಅಭಿಪ್ರಾಯವನ್ನು ತಿಳಿದ ಬಳಿಕ ಎಲ್ಲರಿಗೂ ಗೊತ್ತಿದ್ದ ವಿಷಯವಾಗಿತ್ತು. ಆದರೂ ಟಿಳಕರು ಎದೆಗುಂದಲಿಲ್ಲ. ಅವರಿಗೆ ಆಗ ೫೨ ವರ್ಷಗಳಾಗಿದ್ದವು. ಆದರೂ ಅವರಿಗೆ ತಮ್ಮ ಸ್ವಂತದ ಚಿಂತೆ ಇರಲಿಲ್ಲ. ರಾಷ್ಟ್ರದ ಬಗ್ಗೆ ಕಳಕಳಿ, ರಾಷ್ಟ್ರ ಸೇವೆಯ ಹಂಬಲ, ಇವೇ ಅವರ ಮನಸ್ಸನ್ನು ವ್ಯಾಪಿಸಿತ್ತು. ಅದೇ ನಿಸ್ಸೀಮ, ನಿಷ್ಕಾಮ ಭಾವನೆಯಿಂದ ಟಿಳಕರು ಎದ್ದು ನಿಂತು, "ಜ್ಯೂರಿಗಳು ಏನೇ ಅಭಿಪ್ರಾಯಪಟ್ಟರೂ ನಾನು ನಿರಪರಾಧಿಯೆಂಬ ನಂಬುಗೆಯು ನನ್ನಲ್ಲಿದೆ. ಈ ಜಗತ್ತಿನ ವ್ಯಾಪಾರಗಳನ್ನೆಲ್ಲ ನಿರ್ದೇಶಿಸುವ ಹೆಚ್ಚಿನ ಶಕ್ತಿಯೊಂದಿದೆ. ನಾನು ಸ್ವತಂತ್ರನಾಗಿ ಉಳಿಯುವದಕ್ಕಿಂತ ಕಷ್ಟ ಸೋಸುವದರಿಂದಲೇ ನನ್ನ ಧ್ಯೇಯ ಸಾಧನೆಗೆ ಹೆಚ್ಚು ನೆರವಾಗುವದೆಂದು ದೇವರ ಇಚ್ಛೆ ಇರ

ಬಹುದು'' ಎಂದು ಹೇಳಿದರು. ಅವರ ಅಂದಿನ ಮಾತು ಅಕ್ಷರಶಃ ಸತ್ಯವಾಗಿ ಪರಿಣಮಿಸಿತು

ನ್ಯಾಯಾಧೀಶ ದಾವರರು ಟಿಳಕರನ್ನು ಅಪರಾಧಿಗಳೆಂದು ಸಾರಿ, ಆರು ವರುಷ ಸಶ್ರಮ ಶಿಕ್ಷೆ ವಿಧಿಸಿದರು. ಅವರು ತಮ್ಮ ತೀರ್ಪಿನಲ್ಲಿ ''ನೀವು ಒಳ್ಳೇ ಬುದ್ಧಿವಂತರೂ ಪ್ರತಿಭಾಶಾಲಿಗಳೂ ಇರುವಿರಿ. ಅವುಗಳನ್ನು ಸರಿಯಾದ ರೀತಿಯಲ್ಲಿ ವಿನಿಯೋಗಿಸಿದರೆ, ಜನತೆಗೆ ಹೆಚ್ಚು ಸುಖ ಸಮೃದ್ಧಿಗಳು ದೊರೆಯುವವು ನಿಮ್ಮ ಲೇಖಗಳು ಅಪರಾಧಗಳಿಂದ ತುಂಬಿವೆ. ಅವು ಹಿಂಸೆಯನ್ನು ಉಪದೇಶಿಸುತ್ತವೆ. ಬಾಂಬು ಸ್ಫೋಟವನ್ನು ನೀವು ಸ್ವಾಗತಿಸಿರುವಿರಿ. ಕಳೆದ ಹತ್ತು ವರ್ಷಗಳಿಂದಲೂ ನೀವು ಸರಕಾರದ ಮೇಲೆ ಉದ್ದೇಶಪೂರ್ವಕವಾಗಿ ದ್ವೇಷಪೂರಿತ ಲೇಖಗಳನ್ನು ಬರೆಯುತ್ತಿರುವಿರಿ. ಇಂತಹ ಪತ್ರಿಕಾ ವ್ಯವಸಾಯವು ದೇಶಕ್ಕೆ ಘಾತುಕವಾದದ್ದು" ಎಂದು ಹೇಳಿದರು.

ರಾತ್ರಿ ೧೦ ಘಂಟೆಗೆ ಇತಿಹಾಸ ಪ್ರಸಿದ್ಧವಾದ ಈ ತೀರ್ಪನ್ನು ಸಾರಲಾಯಿತು. ಕೂಡಲೇ ಟಿಳಕರನ್ನು ವಿಶೇಷ ಗಾಡಿಯಿಂದ ಅಹಮದಾಬಾದಕ್ಕೆ ಒಯ್ಯಲಾಯಿತು. ಮತ್ತು ಮರುದಿವಸ ಜುಲೈ ೨೩ ರಂದು ಸಾಬರಮತಿ ಜೇಲಿಗೆ ಕಳಿಸಲಾಯಿತು. ಅಲ್ಲಿಂದ ಮುಂದೆ ಅವರನ್ನು ಬ್ರಹ್ಮದೇಶದಲ್ಲಿಯ ಮಂಡಾಲೆ ಜೇಲಿಗೆ ಸ್ಥಳಾಂತರಿಸಲಾಯಿತು.

ಟಿಳಕರ ಮೇಲಿನ ಖಟ್ಲೆಯ ತೀರ್ಪನ್ನು ಕೇಳಲು ಹೈಕೋರ್ಟಿನ ಹೊರಗಡೆಯಲ್ಲಿ ನೆರೆದ ಸಹಸ್ರಾರು ಜನರು ಅವರಿಗೆ ಪೂಮಾಲೆಗಳನ್ನು ಅರ್ಪಿಸಿ ಗೌರವಿಸಲು ಕಾತರರಾಗಿದ್ದರು. ಆದರೆ ಪೋಲೀಸರು ಯಾರಿಗೂ ಅರಿಯದಂತೆ ಗುಪ್ತವಾಗಿ ಅವರನ್ನು ಹಿಂಬಾಗಿಲಿನಿಂದ ಹೊರಗೊಯ್ದು ರೇಲ್ವೆ ಸ್ಟೇಶನ್ನಿಗೆ ಸಾಗಿಸಿಬಿಟ್ಟರು. ಗಾಡಿಯು ನಿಲ್ದಾಣವನ್ನು ಬಿಟ್ಟಬಳಿಕವೇ ಜನರಿಗೆ ಟಿಳಕರು ಹೋದದ್ದು ತಿಳಿಯಿತು. ಕೂಡಲೇ ರೊಚ್ಚಿಗೆದ್ದ ಜನವನ್ನು ಚದುರಿಸಲು ಪೋಲೀಸರು ಗೋಳಿಬಾರ ಸಹ ಮಾಡಬೇಕಾಯಿತು. ಗಲಭೆಗಳು ಅದೊಂದೇ ದಿನಕ್ಕೆ ನಿಲ್ಲದೆ ಮುಂದೆ ಕೆಲವು ದಿನಗಳವರೆಗೆ ನಡೆದವು. ಪೋಲೀಸರೂ ಹಿಂದೆ ಮುಂದೆ ನೋಡದೆ ಮಾನಬಂದಂತೆ ಹಿಂಸಾಚಾರ ನಡೆಯಿಸಿ, ಪರಿಸ್ಥಿತಿಯನ್ನು ನಿಯಂತ್ರಿಸುವದರಲ್ಲಿ ತುಂಬ

ಹೆಮ್ಮೆ ಪಟ್ಟುಕೊಂಡರು. ಅನೇಕ ದಿನಗಳವರೆಗೆ ಮುಂಬಯಿ ಪೇಟೆಗಳು ಹರತಾಳವಾಚರಿಸಿದವು. ೭೦ ಗಿರಣಿಗಳು ಬಂದಾಗಿದ್ದವು. ಈ ಗಲಭೆಗಳಲ್ಲಿ ೧೫ ಜನರು ಪೋಲೀಸರಿಂದ ಕೊಲ್ಲಲ್ಪಟ್ಟರಲ್ಲದೆ, ೪೮ ಜನರು ಗಾಯಗೊಂಡರು. ದೇಶದಾದ್ಯಂತ ಜನತೆಯ ಭಾವನೆಗಳು ಉದ್ರೇಕಿಸಲ್ಪಟ್ಟವು.

ಇಂಗ್ಲಂಡದ ಸೆಕ್ರೆಟರಿ ಫಾರ್‌ಸ್ಟೇಟರಾಗಿದ್ದ ಲಾರ್ಡ ಮೋರ್ಲೆಯವರಿಗೂ ಮುಂಬಯಿ ಗವ್ಹರ್ನರರಾಗಿದ್ದ ಸರ್ ಜಾರ್ಜ ಕ್ಲಾರ್ಕರಿಗೂ ಟಿಳಕರನ್ನು ವಿಚಾರಣೆಗೆ ಗುರಿಪಡಿಸಿ, ಶಿಕ್ಷಿಸುವದರ ಸಂಬಂಧದಲ್ಲಿ ಬಹಳ ಭಿನ್ನಾಭಿಪ್ರಾಯವಿದ್ದಿತೆಂಬುದು ಆಗಿನ ಅವರ ಪತ್ರ ವ್ಯವಹಾರದಿಂದ ಕಂಡು ಬರುತ್ತದೆ.

ಜುಲೈ ೩ ಕ್ಕೆ ಲಾರ್ಡ ಮೋರ್ಲೆಯವರು ಮುಂಬಯಿ ಗವ್ಹರ್ನರಿಗೆ ಬರೆದ ಪತ್ರದಲ್ಲಿ ‘‘ಟಿಳಕರ ಮೇಲೆ ಖಟ್ಲೆ ಹಾಕಿದ ವಿಷಯವು ಸ್ವಾಗತಾರ್ಹವೆಂದು ನಾನು ಹೇಳಲಾರೆ. ಅವರು ಕೇಸರಿಯಲ್ಲಿ ಬರೆದ ಲೇಖಗಳನ್ನು ಓದಿದೆ. ಅವುಗಳಲ್ಲಿ ಆಕ್ಷೇಪಾರ್ಹ ಅಂಶಗಳೇನೂ ನನಗೆ ಕಂಡು ಬರಲಿಲ್ಲ” ಎಂದಿದ್ದರು.

ಅವರೇ ಜುಲೈ ೩೧ಕ್ಕೆ ಬರೆದ ಪತ್ರದಲ್ಲಿ ‘‘ಟಿಳಕರಿಗೆ ಶಿಕ್ಷೆ ವಿಧಿಸುವ ಪೂರ್ವದಲ್ಲಿಯೇ ನೀವು ನನ್ನ ಸಲಹೆ ಕೇಳಿದ್ದರೆ, ಟಿಳಕರನ್ನು ಹೊರಗೆ ಬಿಡಿರಿ ಎಂದು ನಾನು ಹೇಳುತ್ತಿದ್ದೆ. ಅವರು ಎಷ್ಟೇ ಬರೆದರೂ ಆ ಲೇಖಗಳು ಅವರ ಬಂಧನಕ್ಕಿಂತ ಹೆಚ್ಚಿನ ಅನಾಹುತಗಳನ್ನು ಹುಟ್ಟಿಸಲಾರವು. ಆದರೇನು? ಕೊಡ ತುಳಕಿ ಬಿಟ್ಟಿದೆ. ಅದಕ್ಕೆ ಉಪಾಯವಿಲ್ಲ’’ ಎಂದು ಬರೆದಿದ್ದರು.

ಮತ್ತೆ ಅವರು ಅಗಸ್ಟ ೭ಕ್ಕೆ ಬರೆದ ಪತ್ರದಲ್ಲಿ ‘‘ಟಿಳಕರ ಮೇಲಿನ ಆರೋಪಗಳಲ್ಲಿ ಯಾವವೂ ನೈತಿಕವಾಗಿಯಾಗಲೀ ಕಾಯ್ದೆಯ ಮುಖಾಂತರವಾಗಿಯಾಗಲೀ ಕಾಯಿದೆಬದ್ಧವೆನಿಸಲಾರವು. ಇರಲಿ. ಕಾಲವೇ ತೀರ್ಪನ್ನು ಹೇಳಬೇಕು.” ಎಂದು ಬರೆದಿದ್ದರು.

ಲೋಕಮಾನ್ಯರ ಈ ಶಿಕ್ಷೆಯಿಂದ ಜಗತ್ತಿಗೇ ಸಿಡಿಲು ಬಡಿದಂತಾಯಿತು. ಬ್ರಿಟಿಶರ ನ್ಯಾಯದೇವತೆಯ ನಗ್ನ ಸ್ವರೂಪವು ಹೊರಬಿದ್ದಿತು. ಇಂಗ್ಲಂಡ ಹಾಗೂ ಭಾರತದಲ್ಲಿಯ ಅಸಂಖ್ಯ ವೃತ್ತಪತ್ರಗಳು ಈ ತೀರ್ಪನ್ನೂ

ಖಟ್ಲೆಯಲ್ಲಿ ನಡೆದ ಅನ್ಯಾಯವನ್ನೂ ಕಟುವಾಗಿ ಟೀಕಿಸಿದವು. ಮ್ಯಾಂಚೆಸ್ಟರ ಗಾರ್ಡಿಯನ್ ಪತ್ರವು ''ಟಿಳಕರಿಗೆ ಈಗ ೫೨ ವರ್ಷ. ಅವರು ಕರಿನೀರಿನ ಶಿಕ್ಷೆ ಮುಗಿಸಿಕೊಂಡು ಮರಳಿ ಜೀವಂತವಾಗಿ ಸ್ವದೇಶಕ್ಕೆ ಬರುವರೋ ಇಲ್ಲವೋ ಸಂಶಯವಿದೆ. ಸರಕಾರವು ತಮ್ಮ ಮಾರ್ಗದಲ್ಲಿರುವ ಕಂಟಕವನ್ನು ಏನಕೇನ ಪ್ರಕಾರದಿಂದ ಕಿತ್ತೊಗೆಯುವ ಸಂಕಲ್ಪವನ್ನು ಮಾಡಿದ್ದರೆಂದು ಟಿಳಕರಿಗೆ ವಿಧಿಸಿದ ಈ ಕ್ರೂರ ಶಿಕ್ಷೆಯು ಸ್ಪಷ್ಟಪಡಿಸುತ್ತದೆ. ಈ ಖಟ್ಲೆಯು ಹಾಗೂ ಶಿಕ್ಷೆಯು ಸ್ಮೃತಿಗಳು ಬಹುಕಾಲ ಉಳಿಯುತ್ತವೆ. ವರ್ಣದ್ವೇಷದ ತೀಕ್ಷ್ಣತೆಯನ್ನು ಕಡಿಮೆ ಮಾಡಿ ಪರಸ್ಪರರಲ್ಲಿ ವಿಶ್ವಾಸ ವನ್ನುಂಟುಮಾಡುವ ಮಾರ್ಗದಲ್ಲಿ ಇದರಿಂದ ದೊಡ್ಡ ಪ್ರತಿಬಂಧವು ಉಂಟಾಯಿತು. ಮತ್ತು ಪರಸ್ಪರರಲ್ಲಿ ವಿಶ್ವಾಸವಿಲ್ಲದೆ ಭಾರತದಲ್ಲಿ ರಾಜ್ಯ ನಡೆಯಿಸುವದು ಅಶಕ್ಯವಿದೆ. ಸುಧಾರಣೆಗಳು ನಿಷ್ಫಲವಾಗುವವು'' ಎಂದು ಬರೆಯಿತು. ಈ ಭವಿಷ್ಯವು ನಿಜವೂ ಆಯಿತು. ಸರ ಹೇನ್ರಿ ಕಾಟನ್, ಹಾಯಿಂಡಮನ್, ಕೇರಹಾರ್ಡಿ, ಮೊದಲಾದವರು ಸರಕಾರವು, "ಉನ್ಮತ್ತ ವಾಗಿದೆ, ಭ್ರಮಿಷ್ಟವಾಗಿದೆ" ಎಂದು ಕಟುವಾಗಿ ಟೀಕಿಸಿದರು. ಶ್ರೀ ಹಾಯಿಂಡಮನ್ನರು ''ಟಿಳಕರ ಲೇಖದಲ್ಲಿ ಬಾಂಬು ಒಗೆಯುವದಕ್ಕಾಗಲೀ ಅತ್ಯಾಚಾರಕ್ಕೆ ಉತ್ತೇಜನ ಕೊಡುವಂತಹ ಒಂದಾದರೂ ವಾಕ್ಯವನ್ನಾಗಲೀ ತೋರಿಸುವಿರಾ?'' ಎಂದು ಆವ್ಹಾನಿಸಿದರು. ದಿ ಇಂಡಿಯಾ ಪತ್ರವು ''ಟಿಳಕರ ವಿಚಾರಣೆ ಮತ್ತು ಅವರಿಗೆ ಕೊಟ್ಟ ಶಿಕ್ಷೆಯಿಂದ ಬ್ರಿಟಿಶ ನ್ಯಾಯವು ನಿ:ಪಕ್ಷಪಾತದ ವಿಜಯದ ಚಿನ್ಹವೆಂದು ಜಗತ್ತಿನಲ್ಲಿ ಯಾರೂ ಮನ್ನಿಸಲಾರರು." ಎಂದು ಆಕ್ರೋಶಮಾಡಿತು. ಟಿಳಕರ ಪ್ರತಿಸ್ಪರ್ಧಿಗಳಾದ ಸುರೇಂದ್ರನಾಥರೂ ಕೂಡ ''ಈ ಶಿಕ್ಷೆಯು ರಾಕ್ಷಸೀ ಸ್ವರೂಪದ್ದಿದ್ದು, ಅತ್ಯಂತ ನಿಂದ್ಯವಾಗಿದೆ'' ಎಂದು ಬಂಗಾಲಿ ಪತ್ರದಲ್ಲಿ ಬರೆದರು.

---

# ಮಂಡಾಲೆಯ ತಪೋಭೂಮಿ

ಲೋಕಮಾನ್ಯರಿಗೆ ರಾತ್ರಿ ಹತ್ತುಗಂಟೆಗೆ ಶಿಕ್ಷೆ ವಿಧಿಸಿ, ಹಿಂಬಾಗಿಲಿನಿಂದ ಅವರನ್ನು ಸಾಗಿಸಿದರಷ್ಟೆ? ಎಲ್ಲಿಗೆ ಸಾಗಿಸಿದರು? ಲೋಕಮಾನ್ಯರು ಎಲ್ಲಿ? ಎಂಬುದು ಭಾರತ ಸರಕಾರಕ್ಕೂ ಕೂಡ ಗೊತ್ತಿರಲಿಲ್ಲ. ಭಾರತ ಸರಕಾರದ ಗೃಹಶಾಖೆಯ ಕಾರ್ಯದರ್ಶಿಯು 'ಟಿಳಕರನ್ನು 'ಮೇಯೋ ಹಡಗದಿಂದ ಅಂದಮಾನಕ್ಕೆ ಕಳಿಸಿದರು. ಎಂದು ವೃತ್ತಪತ್ರದಲ್ಲಿ ಪ್ರಸಿದ್ಧವಾಗಿದೆ. ಅದು ನಿಜವಿದ್ದರೆ, ಯಾವ ಸಂಗತಿಯನ್ನೂ ಭಾರತ ಸರಕಾರಕ್ಕೆ ಮೊದಲು ತಿಳಿಸದೇ ನೀವು ಕೈಕೊಂಡ ಕ್ರಮದ, ಕಾರಣಗಳೇನೆಂಬುದರ ಬಗ್ಗೆ ವಿವರಣೆ ಕೊಡಬೇಕೆಂದು ಹಿಂದುಸ್ತಾನ ಸರಕಾರವು ಇಚ್ಛಿಸುತ್ತದೆ. ಅದನ್ನು ತಿಳಿಯಲು ಆತುರಗೊಂಡಿದೆ" ಎಂದು ಮುಂಬಯಿ ಸರಕಾರದ ನ್ಯಾಯ ಖಾತೆಗೆ ತಂತಿಕೊಟ್ಟನು. "ನಿನ್ನಿನ ನಿಮ್ಮ ತಂತಿ ತಲ್ಪಿತು. ಸದ್ಯಕ್ಕೆ ಟಿಳಕರು ಎಲ್ಲಿರುವರು? ಕರಿನೀರಿನ ಶಿಕ್ಷೆಯನ್ನು ಭೋಗಿಸಲು ಏನೇನು ಯೋಜನೆಯನ್ನು ಮಾಡಿರುವಿರಿ. ಅದನ್ನು ತಿಳಿದುಕೊಳ್ಳಲು ಭಾರತ ಸರಕಾರವೂ ವಿಲಾಯತಿ ಸರಕಾರವೂ ಆತುರವಾಗಿದೆ. ಆದುದರಿಂದ ಕೈಕೊಂಡಕ್ರಮದ ಬಗ್ಗೆ ಆಗಿಂದಾಗ ತಿಳಿಸುತ್ತ ಹೋಗಬೇಕೆಂದು ಭಾರತಸರಕಾರವು ಇಚ್ಛಿಸುತ್ತದೆ" ಎಂದು ಮರು ತಂತಿಕೊಟ್ಟರು. ಅಧಿಕಾರಿಗಳ ಕೃಷ್ಣಕಾರಸ್ಥಾನವೂ ಟಿಳಕರ ಬಗೆಗೆ ಅವರಿಗೆ ಇರುವ ದ್ವೇಷವೂ ಇದರಿಂದ ವ್ಯಕ್ತವಾಗತ್ತದೆ.

ಲೋಕಮಾನ್ಯರು ಎಲ್ಲಿಗೆ ಕಳಿಸಲ್ಪಟ್ಟರು? ಹೇಗೆ ಕಳಿಸಲ್ಪಟ್ಟರು? ಅಲ್ಲಿ ಕಾಲವನ್ನು ಅವರು ಹೇಗೆ ಕಳೆದರು? ಎಂಬ ಸಂಗತಿಗಳನ್ನು ಮಂಡಾಲೆಯಿಂದ ಮರಳಿ ಬಂದ ಬಳಿಕ ಟಿಳಕರು ತಾವೇ ಕೆಳಗಿನಂತೆ ಸುದ್ದಿಗಾರರಿಗೆ ತಿಳಿಸಿದರು.

"ನ್ಯಾಯಾಧೀಶರು ನನಗೆ ಶಿಕ್ಷೆಯನ್ನು ವಿಧಿಸಿದನಂತರ ನನಗೆ ಯಾರ ಭೆಟ್ಟಿಯನ್ನೂ ಕೊಡದೆ, ಮೋಟಾರಿನಲ್ಲಿ ಸ್ಟೇಶನಕ್ಕೆ ಒಯ್ದು ಉಗಿ

ಬಂಡಿಯಲ್ಲಿ ಕುಳ್ಳಿರಿಸಿದರು. ನನ್ನನ್ನು ಎಲ್ಲಿಗೆ ಒಯ್ಯುವರು ಎಂಬುದನ್ನು ಯಾರೂ ಹೇಳಲಿಲ್ಲ. ನಾನೂ ಕೇಳಲಿಲ್ಲ ಮರುದಿನ ಬೆಳಿಗ್ಗೆ ಸಾಬರಮತಿ ಸೆರೆಮನೆಯ ಎದುರಿಗೆ ಗಾಡಿಯು ನಿಂತಿತು. ಅಹಮ್ಮದಾಬಾದದ ಕಲೆಕ್ಟರರು ನನ್ನನ್ನು ಇಳಿಸಿಕೊಳ್ಳಲು ಸಿದ್ಧರಿದ್ದರು. ಇಳಿಸಿ ಜೇಲಿನಲ್ಲಿ ಕಳಿಸಿದರು.

ಕಠಿಣ ಶಿಕ್ಷೆಯ ಕೈದಿಯಂತೆ ನನ್ನ ಎಲ್ಲ ವ್ಯವಸ್ಥೆಯಾಯಿತು. ಆಹಾರವು ನನಗೆ ಹಿಡಿಯಲಿಲ್ಲ. ೧೦ ದಿನಗಳಲ್ಲಿ ೧೦ ಪೌಂಡು ತೂಕವು ಕಡಿಮೆಯಾಯಿತು. ನಾನು ಅನ್ನ ಸತ್ಯಾಗ್ರಹ ಮಾಡುತ್ತಿರುವೆನೆಂದು ಅವರಿಗೆ ಸಂಶಯು ಬಂದಿತು. ನಿರೀಕ್ಷಿಸಿದರು. ಅದಕ್ಕೆ ತಳಬುಡವಿರಲ್ಲ. ಡಾಕ್ಟರರು ಪರೀಕ್ಷಿಸಿ ದಿನಾಲು ೨ ಪೌಂಡು ಹಾಲು ೨ ಔಂಸ ತುಪ್ಪ ಕೊಡಲು ಆಜ್ಞಾಪಿಸಿದರು. ಅದು ಕೊನೆಯವರೆಗೂ ಸಾಗಿತು.

ನನಗೆ ಕರಿನೀರಿನ ಶಿಕ್ಷೆಯಾದುದರಿಂದ ಭಾರತದಲ್ಲಿ ನನ್ನನ್ನು ಇರಿಸುವದು ಶಕ್ಯವಿಲ್ಲೆಂದು ನನಗೆ ಅನಿಸುತ್ತಿದ್ದಿತು. ೧೩ ನೇ ಸಪ್ಟಂಬರ ದಿನ ಬೆಳಿಗ್ಗೆ ೮ ಘಂಟೆಗೆ ಜೇಲರನು ಬಂದು, ನನ್ನನ್ನು ಕಚೇರಿಗೆ ಕರೆದೊಯ್ದನು. ನನ್ನ ಅರಿವೆಗಳು ನನಗೆ ಕೊಡಲ್ಪಟ್ಟವು. ಜೇಲಿನ ಬಾಗಿಲಲ್ಲಿಯೇ ಉಗಿಬಂಡಿಯು ಸಿದ್ಧವಾಗಿದ್ದಿತು. ಒಬ್ಬ ಬಿಳಿಯ ಅಧಿಕಾರಿ ಹಾಗೂ ೮ ಜನ ಮುಸಲ್ಮಾನ ಸಿಪಾಯಿಗಳು ನನ್ನ ರಕ್ಷಕರಾಗಿದ್ದರು. ಒಬ್ಬ ಗುಜರಾಥಿ ಬ್ರಾಹ್ಮಣ ಕೈದಿಯನ್ನು ನನ್ನ ಅಡಿಗೆಗಾಗಿ ಯೋಜಿಸಲಾಗಿತ್ತು. ಎಲ್ಲರೂ ಗಾಡಿಯಲ್ಲಿ ಕುಳಿತೆವು. ಎಲ್ಲಿಗೆ ಹೋಗುವೆವೆಂಬುದು ಯಾರಿಗೂ ಗೊತ್ತಿರಲಿಲ್ಲ. ನನ್ನ ಕಠಿಣ ಶಿಕ್ಷೆಯು ಸಾದಾ ಆದ ಸಂಗತಿಯು ಜೇಲ ಸುಪರಿಂಟೆಂಡೆಂಟನಿಗೆ ೨ ನೇ ದಿನ ಮೊದಲೇ ತಿಳಿದಿದ್ದಿತು. ಎಂಬ ಸಂಗತಿಯು ನನಗೆ ಮುಂಡಾಲೆಯಲ್ಲಿ ಗೊತ್ತಾಯಿತು.

ಇಷ್ಟೆಲ್ಲ ಗುಪ್ತತೆಯು ಕಾಯಲ್ಪಟ್ಟಿದ್ದರೂ ಬಡೋದೆಯ ಸಮೀಪವಿರುವ ಮಿಯಾಗಾವ ಸ್ಟೇಶನ್ನಿನಲ್ಲಿ ಗಾಡಿ ನಿಂತೊಡನೆಯೇ 'ಟಿಳಕ ಮಹಾರಾಜಕೀಜಯ' ಎಂಬ ಜಯಘೋಷವಾಯಿತು. ನಮ್ಮ ಗಾಡಿಯು ಬೆಳಿಗ್ಗೆ ೬॥ ಗಂಟೆಗೆ ಮುಂಬಯಿ ಧಕ್ಕೆಗೆ ಬಂದಿತು. ಕೂಡಲೇ ನಮ್ಮನ್ನು 'ಹಾರ್ಡಿಂಜ' ಎಂಬ ಹಡಗದಲ್ಲಿ ಹತ್ತಿಸಿದರು. ಇದು ದೊಡ್ಡ ಹಡಗವಿದ್ದು ನಮ್ಮನ್ನು ಕೆಳಬದಿಯಲ್ಲಿ ತೀರ ಚಿಕ್ಕಕೋಣೆಯಲ್ಲಿ ಹಾಕಿದರು. ಅಲ್ಲಿ ಉಷ್ಣ

ತೆಯು ಅತಿಶಯವಾಗಿದ್ದು ಉಸುರಾಡಿಸಲು ಕೂಡ ಕಷ್ಟವಾಗುತ್ತಿದ್ದಿತು. ಬೆಳಿಗ್ಗೆ ಹಾಗು ಸಂಜೆಗೆ ಇನಸ್ಪೆಕ್ಟರರ ಕಣ್ಣೆದುರು ೧ ತಾಸು ಹಡಗದಲ್ಲಿ ತಿರುಗಾಡಲು ಅಪ್ಪಣೆ ದೊರೆತ್ತಿತ್ತು. ನಮ್ಮ ಹಡಗವು ಎಲ್ಲಿಯೂ ನಿಲ್ಲದೆ ೯ ನೇ ದಿವಸ ರಂಗೂನ ಬಂದರಕ್ಕೆ ಬಂದಿತು. ಬಂದರದಲ್ಲಿ ೨-೩ ಸಾವಿರ ಜನರು ನೆರೆದಿದ್ದರು. ಆ ಜನರಿಗೆ ಮೊದಲೇ ಈ ವಾರ್ತೆ ತಿಳಿದಂತೆ ತೋರಿತು. ಮರುದಿನ ಮಂಡಾಲೆಯನ್ನು ಮುಟ್ಟಿದೆವು.

ಮಂಡಾಲೆ ಕಿಲ್ಲೆಯ ನೈಋತ್ಯ ಮೂಲೆಯಲ್ಲಿ ತುರಂಗವಿದೆ. ಇಲ್ಲಿಯೇ ನಾನು ಆರು ವರ್ಷ ಕಳೆದೆ. ಮಾರಿಕಾ ಬೇನೆಯು ಹಬ್ಬಿದಾಗ ಮಾತ್ರ ನನ್ನನ್ನು 'ಮಿಂಕಟ್ಟಿ' ಎಂಬಲ್ಲಿ ಇಟ್ಟಿದ್ದರು. ನನ್ನನ್ನು ಯುರೋಪಿಯನ್ ವಾರ್ಡಿನಲ್ಲಿ ಇಟ್ಟಿದ್ದರು. ನಮ್ಮ ಕೋಣೆಯ ಎದುರಿಗೆ ೧೩೦ ಫೂಟು ಉದ್ದ ೫೦ ಫೂಟು ಅಗಲವಾದ ಪಟಾಂಗಣವಿದ್ದಿತು. ಈ ನಿರ್ಜನ ಪ್ರದೇಶದಲ್ಲಿ ನಾನೊಬ್ಬನೇ ತಿರುಗಾಡುತ್ತಿದ್ದೆ. ಜೇಲರನ ಹೊರತು ಒಳಗೆ ಯಾರಿಗೂ ಪ್ರವೇಶವಿರಲಿಲ್ಲ. ಹಗಲು ರಾತ್ರಿ ಕೀಲಿಯು ಜಡೆಯಲ್ಪಡುತ್ತಿತ್ತು. ನಾನಿರುವ ಕೋಣೆ ಅಟ್ಟದ ಮೇಲಿದ್ದು, ೨೦ ಫೂಟ ಉದ್ದ ೧೨ ಫೂಟು ಅಗಲವಿದ್ದಿತು. ಇದು ಕಟ್ಟಿಗೆಯ ಒಂದು ಪಂಜರ. ಜೇಲಿನಲ್ಲಿಯ ಬರಾಕುಗಳೆಲ್ಲ ಕಟ್ಟಿಗೆಯವೇ! ನನ್ನ ಕೋಣೆಯಲ್ಲಿ ಎರಡು ಖುರ್ಚಿ, ೧ ಟೇಬಲ, ಪುಸ್ತಕಗಳನ್ನಿಡಲು ಎರಡು ಕಪಾಟುಗಳೂ ಒಂದು ಕಬ್ಬಿಣದ ಮಂಚವಿದ್ದುವು. ನನ್ನೊಡನೆ ಅಡಿಗೆಗಾಗಿ ಬಂದ ಗುಜರಾಥಿ ಬ್ರಾಹ್ಮಣನ ಶಿಕ್ಷೆಯ ಅವಧಿಯು ಮುಗಿದದ್ದರಿಂದ ಯರವಡಾದಿಂದ ಕುಲಕರ್ಣಿ ಎಂಬ ಬ್ರಾಹ್ಮಣ ಕೈದಿಯೊಬ್ಬನು ಬಂದನು. ಅವನಿಗೆ ಐದುವರ್ಷ ಶಿಕ್ಷೆಯಾಗಿದ್ದರೂ ಅವನಿಗೆ ೨ ವರ್ಷ ಮಾಫಿ ದೊರೆತದ್ದರಿಂದ ಉತ್ತರದ ಒಬ್ಬ ಬ್ರಾಹ್ಮಣನನ್ನು ತಂದು ಇಟ್ಟರು. ಅವನು ಕೊನೆಯವರೆಗೂ ನನ್ನೊಡನೆಯೇ ಇದ್ದನು.

ಹಾಲು, ತುಪ್ಪ, ಅನ್ನ, ಚಪಾತಿಗಳು ನನಗೆ ಕೊಡಲ್ಪಡುತ್ತಿದ್ದವು. ಕೆಲವು ದಿನಗಳನಂತರ ಹಣ್ಣು ಹಂಪಲ ಕೊಡಹತ್ತಿದರು. ನಾನು ಸಾದಾ ಕೈದಿ ಇದ್ದುದರಿಂದ ನನ್ನ ಅರಿವೆಗಳನ್ನು ನನಗೆ ಉಪಯೋಗಿಸಲು ಕೊಟ್ಟರು. ನನ್ನ ಖರ್ಚಿನಿಂದ ಚಹಾ, ಕಾಫಿ, ಅಡಿಕೆಗಳನ್ನೂ ತರಿಸಿಕೊಳ್ಳಲು ಅಪ್ಪಣೆ ಕೊಟ್ಟರು. ನನಗೆ ಪುಸ್ತಕಗಳನ್ನು ಓದಲು ಕೊಡದಿದ್ದರೆ ನನ್ನ ಪರಿಸ್ಥಿತಿಯು

ಏನಾಗುತ್ತಿದ್ದಿತೋ ನಾನರಿಯೆ. ನನ್ನ ಪಾಲಿಗೆ ಜಗತ್ತು ಶೂನ್ಯವಿದ್ದಿತು. ನಾನು ಏಕಾಕಿ ಮೊದಮೊದಲು ಪುಸ್ತಕಗಳನ್ನು ಸಾಕಷ್ಟು ಕೊಡುತ್ತಿದ್ದರು. ಪ್ರಚಲಿತ ರಾಜಕಾರಣ ಪುಸ್ತಕಗಳು ಸಿಗುತ್ತಿದ್ದಿಲ್ಲವೆಂಬುದನ್ನು ಹೇಳಲಿಕ್ಕೇ ಬೇಡ. ವೃತ್ತಪತ್ರಗಳನ್ನು ಕೊಡುವದು ಶಕ್ಯವೇ ಇದ್ದಿಲ್ಲ. ಕೆಲಕಾಲದ ನಂತರ ನಾಲ್ಕೇ ಪುಸ್ತಕಗಳನ್ನು ಕೊಡಹತ್ತಿದರು. ಆಗ ನಾನು ಗೀತಾ ರಹಸ್ಯವನ್ನು ಬರೆಯುತ್ತಿದ್ದ ಮೂಲಕ ಈ ಆಜ್ಞೆಯು ವಿರುದ್ಧ ಬ್ರಹ್ಮೀ ಸರಕಾರಕ್ಕೆ ಬಿನ್ನವಿಸಿಕೊಂಡೆ ಪುಸ್ತಕಗಳ ಪುಟ ಎಣಿಸಿ, ಸಹಿಮಾಡಿ, ನಾನು ಬೇಡಿದಷ್ಟು ಪುಸ್ತಕಗಳನ್ನು ಕೊಡಹತ್ತಿದರು. ಬರೆಯಲು ಪೆನ್ಸಿಲ್ಲು ಹಾಗು ಕಟ್ಟಿದ ವಹಿ (ಪಾನುಗಳನ್ನು ಎಣಿಸಿ, ಅಂಕಿತಹಾಕಿ) ಗಳನ್ನು ಕೊಡುತ್ತಿದ್ದರು. ನನಗೆ ಮನೆಗೆ ಪತ್ರ ಬರೆಯುವಾಗ ಮಾತ್ರ ಬಿಡಿಕಾಗದ ಮಸಿಗಳು ದೊರೆಯುತ್ತಿದ್ದವು.

ಭಗವದ್ಗೀತೆಯ ಮೇಲೆ ಉಪಲಬ್ಧವಿದ್ದ ಭಾಷ್ಯ ಹಾಗೂ ಟಿಪ್ಪಣೆ ಗಳಲ್ಲಿ ಗೀತೆಯ ರಹಸ್ಯವು ಸರಿಯಾಗಿ ಹೊರಬಂದಿಲ್ಲವೆಂದು ನನಗೆ ಅನಿಸು ತ್ತಿದ್ದಿತು. ಪೌರ್ವಾತ್ಯ, ಪಾಶ್ಚಾತ್ಯ ತತ್ವಜ್ಞಾನಗಳ ತುಲನಾತ್ಮಕ ಅಭ್ಯಾಸ ಮಾಡಿ, ಗೀತೆಯ ವಿಷಯದಲ್ಲಿ ನನ್ನ ಕಲ್ಪನೆಗಳಿಗೆ ಮೂರ್ತಸ್ವರೂಪ ಕೊಡ ಬೇಕಾಗಿದ್ದಿತು. ಅದನ್ನು ಮಾಡಿದೆ. ಅದನ್ನು ಬರೆದು ತೆಗೆಯಲು ೪-೬ ತಿಂಗಳು ಹಿಡಿದವು. ಆದರೆ ಆದರಲ್ಲಿ ಸುಧಾರಣೆ ಮಾಡಲು ಮಾತ್ರ ಬಹು ಕಾಲ ಹಿಡಿಯಿತು. ಅದು ಸರಕಾರದ ಹತ್ತಿರವಿದ್ದು, ಇನ್ನೂ ನನ್ನ ಕೈಗೆ ಬಂದಿಲ್ಲ. ಅಲ್ಲಿಯ ಹವೆಯು ಬಹಳ ಉಷ್ಣವಿದ್ದ ಮೂಲಕ, ಚಳಿಗಾಲದಲ್ಲಿ ಆದಷ್ಟು ಕೆಲಸ, ಬೇಸಿಗೆಯಲ್ಲಿ ಆಗುತ್ತಿದ್ದಿಲ್ಲ. ನಾನು ಕೆಲವು ದಿವಸ ಫ್ರೆಂಚ, ಜರ್ಮನ್ ಭಾಷೆಗಳನ್ನು ಕಲಿಯುವದರಲ್ಲಿ ಕಳೆದೆ. ಗಣಿತದಲ್ಲಿಯ ಪ್ರಮೇಯ, ಜ್ಯೋತಿಷ, ತತ್ವಜ್ಞಾನಗಳನ್ನು ಅಭ್ಯಸಿಸಿದೆ. ಟಿಪ್ಪಣೆಗಳನ್ನು ಮಾಡಿದೆ. ಜರ್ಮನಿ, ಪಾಲಿ ಭಾಷೆಗಳು ಚೆನ್ನಾಗಿ ಅವಗತವಾದವು.

ತಿಂಗಳಿಗೊಂದು ಪತ್ರಬರೆಯಲು, ಮನೆಯವರ ಪತ್ರಕೊಡಲು, ಅವ ಕಾಶವಿದ್ದಿತು. ಆದರಲ್ಲಿ ಮನೆಯ ಸಮಾಚಾರವನ್ನಷ್ಟೇ ಬರೆಯಬೇಕಾಗು ತ್ತಿತ್ತೆಂಬುದನ್ನೂ ಹೇಳಲಿಕ್ಕೇಬೇಡ. ೩ ತಿಂಗಳಿಗೊಮ್ಮೆ ಭೆಟ್ಟಿ ದೊರೆಯು ತ್ತಿತ್ತು. ಇದರ ಉಪಯೋಗವನ್ನು ಮನೆಯವರನ್ನು ಕಾಣಲು ಮಾತ್ರ

ಮಾಡಿಕೊಂಡೆ. ಒಮ್ಮೆ ಮಾತ್ರ ಕಾಯದೆಯ ಸಲಹೆಗಾರರಾದ ರಾಘವಯ್ಯ, ಖಾಪರ್ಡೆ, ವಿಜಾಪೂರಕರರ ಭೆಟ್ಟಿ ತೆಗೆದುಕೊಂಡೆ. ಒಮ್ಮೆ ಬ್ರಹ್ಮ ದೇಶದ ಲೆಪ್ಟಿನಂಟ ಗವ್ಹರ್ನರರು ಬಂದು ಯೋಗಕ್ಷೇಮ ವಿಚಾರಿಸಿದರು. ಒಟ್ಟಿನಲ್ಲಿ ನಾನು ಚನ್ನಾಗಿದ್ದೆ. ಯಾವಾಗದರೊಮ್ಮೆ ಸ್ವಲ್ಪ ಜ್ವರ ಬರುತ್ತಿದ್ದವು. ಮಧುಮೇಹ ಮಾತ್ರ ಹೆಚ್ಚಾಗಿದೆ.೪-೮ ಹಲ್ಲುಗಳು ಬಿದ್ದಿವೆ. ಕಿವಿ ಕೇಳದಾಗಿವೆ. ಮುಪ್ಪು ಆವರಿಸುತ್ತಲಿದೆ. ಜೇಲಿನ ಪರಿಣಾಮವು ನನ್ನ ಮೇಲೆ ಆಗಿಲ್ಲ. ನಿಮಗೆ ಹೇಗೆ ಕಾಣುವದೊ ನಾನರಿಯೆ !

ನನ್ನ ಶಿಕ್ಷೆಯು ಮುಗಿಯುತ್ತ ಬಂದಿತು. ನಾನು ನನ್ನ ಪುಸ್ತಕಗಳನ್ನೆಲ್ಲ ಕಟ್ಟಿ ಮೇ (೧೯೧೪) ದಲ್ಲಿ ಪುಣೆಗೆ ಕಳಿಸಿದೆ. ಕರಿ ನೀರಿನ ಶಿಕ್ಷೆಯಾದವರನ್ನು ಎರಡು ತಿಂಗಳು ಮೊದಲು ಅವರ ಪ್ರಾಂತಕ್ಕೆ ಗಳಿಸುವ ಪದ್ಧತಿ. ೮ನೇ ಜೂನಕ್ಕೆ ನನ್ನನ್ನು ಜೇಲಿನಂದ ಸ್ಟೇಶನಕ್ಕೆ ಕರೆತಂದು ರೇಲ್ವೆಯಿಂದ ರಂಗೂನ ಬಂದರಕ್ಕೆ ತಂದರು. ಮುಂಬಯಿ ಪೋಲೀಸರು ಅಲ್ಲಿಗೆ ಬಂದಿದ್ದರು. ನನ್ನನ್ನೂ ಅಡಿಗೆಯ ಆಚಾರಿಯನ್ನೂ 'ಮೇಯೋ' ಹಡಗದಲ್ಲಿ ಹತ್ತಿಸಿದರು. ಹಡಗ ಹತ್ತಿದ ಮೇಲೆ ನಮ್ಮ ಕಾವಲಿನ ಪುಣೆಯ ಪೋಲೀಸರ ಮೋರೆಗಳು ಕಂಡವು. ಅದರಲ್ಲಿ ಪೋಲೀಸ ಇನಸ್ಪೆಕ್ಟರ ರಿಂಗ, ಸಾರ್ಜಂಟ ಜೋನ್ಸರೆಂಬ ಇಬ್ಬರು ಬಿಳಿಯರು ಇದ್ದರಲ್ಲದೆ, ಇನ್‌ಸ್ಪೆಕ್ಟರ ಸದಾವರ್ತೆ, ಮಾರುತಿ ಜಮಾದಾರ, ಒಬ್ಬ ಪೋಲೀಸ ಇದ್ದರು. ಈ ಪಂಚರ ಕೈಯಲ್ಲಿ ನಮ್ಮನ್ನು ಕೊಟ್ಟು ರಂಗೂನಿನ ಪೋಲೀಸರು ಮರುಳಿದರು.

ಈ ಹಡಗವು ಮದ್ರಾಸಕ್ಕೆ ಬರಲು ನಾಲ್ಕೈದು ದಿನಗಳು ಸಾಕಾಗಿದ್ದರೂ ಸರಕಾರದ ಪೂರ್ವ ಯೋಜನೆಯಂತೆ ಸಾವಕಾಶವಾಗಿ ಎರಡು ದಿನ ತಡಮಾಡಿ ಬಂದು ಮುಟ್ಟಿತು. ಹಡಗದಿಂದ ಇಳಿದೆವು. ಮೋಟಾರು ಸಿದ್ಧವಾಗಿದ್ದಿತು. ಸ್ಟೇಶನಕ್ಕೆ ಬಂದೆವು. ಮೇಲುಗಾಡಿಯಲ್ಲಿ ಎರಡನೇ ವರ್ಗದ ಒಂದು ಡಬ್ಬಿಯು ನನಗಾಗಿ ಕಾದಿದ್ದಿತು. ಅದರಲ್ಲಿ ನಾವು ಪ್ರವೇಶಿಸುತ್ತಲೇ ಎಲ್ಲ ಕಿಡಕಿ ಬಾಗಿಲುಗಳು ಹಾಕಲ್ಪಟ್ಟವು. ಹಡಪಸರ ಸ್ಟೇಶನ್ ಬಂದೊಡನೆ ಪುಣೆಯ ಡಿ. ಎಸ್. ಪಿ. ಯವರು ನನ್ನನ್ನೂ ಸದಾವರ್ತೆಯವರನ್ನೂ ಈಳಿಸಿಕೊಂಡರು. ಅಷ್ಟರಲ್ಲಿ ಮಿ. ಗಾಯಿಡರರು

ಬಂದರು. ಮೋಟಾರುಗಳು ಸಿದ್ಧವಿದ್ದವು. ಹಡಪಸರ ಸ್ಟೇಶನಕ್ಕೆ ಮೇಲುಗಾಡಿಯು ನಿಲ್ಲುತ್ತಿರಲಿಲ್ಲ. ಆದರೆ ಈಗ ನಿಂತುದನ್ನು ಕಂಡು ಸ್ಟೇಶನ್ ಮಾಸ್ತರರಿಗೆ ಆಶ್ಚರ್ಯವಾಯಿತು. ನನ್ನನ್ನು ಟಿಕೀಟು ಕೇಳಿದರು. ನಾನು ಪೋಲೀಸರನ್ನು ತೋರಿಸಿದೆ.

ನನ್ನ ಶಿಕ್ಷೆಯ ಅವಧಿಯು ಇನ್ನೂ ಒಂದು ತಿಂಗಳು ಇದ್ದಿತು. ಆದ್ದರಿಂದ ನನ್ನನ್ನು ಯರವಡೆಯಲ್ಲಿಡುವರೋ ಅಥವಾ ಮತ್ತೆಲ್ಲಿಯಾದರೂ ಇಡುವರೋ ಎಂಬ ಆಲೋಚನೆಯು ಬಂದಿತು. ಆದರೆ ಮೋಟಾರುಗಳು ಯರವಡಾ ಜೇಲಿನ ದಾರಿಯನ್ನು ಹಿಡಿಯಲಿಲ್ಲ. ಆಗ ನನ್ನ ಸಂಶಯಗಳೆಲ್ಲ ದೂರಾದವು. ೧೭ನೇ ಜೂನ ಮಂಗಳವಾರ ದಿವಸ ರಾತ್ರಿ ೧೨ ಘಂಟೆಗೆ, ಮೋಟಾರು ಗಾಯಕವಾಡರ ವಾಡೇದ ಎದುರಿಗೆ ಬಂದು ನಿಂತಿತು. ಮೋಟಾರಿನಿಂದ ಕೆಳಗಿಳಿದ ಕೂಡಲೇ ಗಾಯಿಡರರು ನನ್ನನ್ನು ಕುರಿತು 'ದಯಾಳು ಸರಕಾರವು ನಿಮ್ಮ ಉಳಿದ ಒಂದು ತಿಂಗಳ ಶಿಕ್ಷೆಯನ್ನು ಮಾಫಿಮಾಡಿದೆ. ಇನ್ನು ನಿಮ್ಮ ಮೇಲೆ ಯಾವ ಬಂಧನವೂ ಇಲ್ಲ.' ಎಂದು ಹೇಳಿದರು. ಆಗ ನಾನು 'ಸರಕಾರಕ್ಕೆ ಆಭಾರಿಯಾಗಿರುವೆನೆಂದು ತಿಳಿಸಿರಿ' ಎಂದು ಹೇಳಿದೆ. ನನ್ನೊಡನೆ ಪೋಲೀಸರು ಇದ್ದ ಮೂಲಕ ಬಾಗಿಲು ಕಾಯುವವನು ಬಾಗಿಲವನ್ನು ಬೇಗನೆ ತೆರೆಯಲಿಲ್ಲ. ವಿದ್ವಾಂಸರು ಬಂದೊಡನೆ ಬಾಗಿಲು ತೆರೆದರು.

ಟಿಳಕರು ಸುದ್ದಿಗಾರರಿಗೆ ಹೇಳಿದ ತಮ್ಮ ವೃಂತಾಂತಗಳಲ್ಲಿ ಸರಕಾರದ ನಡತೆಯ ಬಗ್ಗೆ ಒಂದು ಚಕಾರ ಶಬ್ದವನ್ನು ಕೂಡ ಉಚ್ಚರಿಸಲಿಲ್ಲ. ಸರಕಾರದ ದುಷ್ಟತನವನ್ನು ಬಣ್ಣ ಬಣ್ಣದ ಮಾತುಗಳಿಂದ ಬಣ್ಣಿಸಬೇಕೆಂದಿದ್ದ ಸುದ್ದಿಗಾರರು ಇದರಿಂದ ನಿರಾಶೆಹೊಂದಿರಬಹುದು. ಜೇಲಿನಲ್ಲಿರುವಾಗ ಟಿಳಕರ ಬಿಡುಗಡೆಯ ಪ್ರಯತ್ನಗಳು ಅನೇಕಸಲ ನಡೆದವು. ೧೯೧೧ ರಲ್ಲಿ ಪಂಚಮ ಜಾರ್ಜರ ರಾಜ್ಯಾರೋಹಣದ ಕಾಲದಲ್ಲಿ ಅವರನ್ನು ಬಿಡಬಹುದೆಂದು ಜನ ಭಾವಿಸಿದ್ದಿತು. ಅದಕ್ಕೆ ಸಿಡೆನ್‌ಹ್ಯಾಮರು ಅಡ್ಡಬಂದರು. ಕೊನೆಗೆ ದೇವರ ಕೃಪೆಯಿಂದ ಯಾರ ಹಂಗೂ ಇಲ್ಲದೆ ತೇಜಸ್ವಿಗಳಾಗಿ, ಶಿಕ್ಷೆ ಮುಗಿಸಿ, ಹೊರಬಿದ್ದರು.

## ತಪೋಮಯ ಜೀವನ

ಲೋಕಮಾನ್ಯರ ಜೇಲಿನ ಬಹಿರಂಗ ಜೀವನದ ವೃತ್ತಾಂತವನ್ನು ಮೇಲೆ ವಿವರಿಸಿದೆ. ಆದರೆ ಜೇಲಿನ ಅಂತರಂಗಿಕ ಜೀವನವು ಮಾತ್ರ ಅದ್ಭುತ ರಮ್ಯವೂ ಆಧ್ಯಾತ್ಮಮಯವೂ ಆಗಿದ್ದಿತು. ಅದರ ಚಿತ್ರವನ್ನು ಅವರೊಡನೆ ಇದ್ದ ವ್ಹಿ. ಆರ್. ಕುಲಕರ್ಣಿಯವರು ಹೃದಯಂಗಮವಾಗಿ ವರ್ಣಿಸಿದ್ದಾರೆ.

"ಟಿಳಕರು ದಿನಾಲು ಬೆಳಿಗ್ಗೆ ಎದ್ದು ಮುಖಮಾರ್ಜನಾದಿಗಳನ್ನು ತೀರಿಸಿಕೊಂಡು ತಮ್ಮ ಗಾದಿಯ ಮೇಲೆ ಆಸನವನ್ನು ಹಾಕಿಕೊಂಡು ಧ್ಯಾನಸ್ಥರಾಗಿ ಕಂಚಿನ ಪ್ರತಿಮೆಯಂತೆ ಒಂದು, ಒಂದೂವರೆ ತಾಸು ಕುಳಿತು ಕೊಳ್ಳುತ್ತಿದ್ದರು. ಒಮ್ಮೊಮ್ಮೆ ಸಂಸ್ಕೃತ ಶ್ಲೋಕಗಳನ್ನು ಉಚ್ಚರಿಸುತ್ತಿದ್ದರು. ಅದನ್ನು ಕಂಡು ನನಗೆ ಬದ್ಧನ ಧ್ಯಾನಸ್ಥ ಮೂರ್ತಿಯ ನೆನಪಾಗುತ್ತಿದ್ದಿತು. ಚಳಿಗಾಲದಲ್ಲಿ ಮೋರೆ ತೊಳೆಯಲು ಬಿಸಿನೀರು ಕಾಸಿ, ವರಿಸಿ ಕೊಳ್ಳಲು ವಸ್ತ್ರವನ್ನೂ ಸಾಬಾಣವನ್ನೂ ಇಡುತ್ತಿದ್ದೆ. 'ನಾನು ನಿನ್ನಂತೆಯೇ ಕೈದಿಯಿದ್ದುದರಿಂದ ನನಗೇಕೆ ಈ ಉಪಚಾರ? ಬೇಡವೆಂದು ಹೇಳುತ್ತಿದ್ದರು. ಪ್ರಾರ್ಥನೆಯನಂತರ ಚಹಾ ತೆಗೆದುಕೊಂಡು ಅಭ್ಯಾಸಕ್ಕೆ ಕೂಡುತ್ತಿದ್ದರು. ೯ ಘಂಟೆಗೆ ಸ್ನಾನ ಮಾಡುತ್ತಿದ್ದರು.

ಒಂದುದಿನ ನನ್ನನ್ನು ಕರೆದು 'ಪುಣೆಯಲ್ಲಿ ನನಗೆ ಊಟಕ್ಕೆ ಕೂಡ ಸಮಯ ಸಿಗುತ್ತಿದ್ದಿಲ್ಲ: ಇಲ್ಲಿ ಬೇಕಾದಷ್ಟು ಸಮಯವಿದೆ. 'ನಾವಿಬ್ಬರೂ ಬ್ರಾಹ್ಮಣರು, ಗಾಯತ್ರಿಯ ಜಪಮಾಡದೆ, ಸೂರ್ಯನಿಗೆ ಅರ್ಘ್ಯಕೊಡದೆ ನಾವು ಉಣ್ಣ ಕೂಡದು' ಎಂದು ಹೇಳಿದರು. ಅಂದಿನಿಂದ ನಾವಿಬ್ಬರೂ ಆ ನಿಯಮವನ್ನು ಪಾಲಿಸಿದೆವು. ನನ್ನ ಆಹಾರ ತೀರ ಹಾಳು ಇರುವದನ್ನು ಕಂಡು 'ನಿನಗೆ ಕೊಡುವ ಅನ್ನವನ್ನು ನೀನು ತಿನ್ನಬೇಡ. ಎಲ್ಲಿಯಾದರೂ ಜೇನೆ ಬಿದ್ದಿ. ನನಗೆ ಮಾಡಿದ ಅಡಿಗೆಯಲ್ಲಿಯೇ ನೀನೂ ಊಟಮಾಡು' ಎಂದರು. ನನ್ನ ಸಲುವಾಗಿ ತಾವು ಕಡಿಮೆ ಉಣ್ಣಹತ್ತಿದರು. ಇದನ್ನು ಕಂಡು ನನಗೆ ಅಳುವು ಬಂದಿತು. ನನಗೆ 'ತಿನ್ನಲು ಹಣ್ಣುಹಂಪಲ ಸಿಗುತ್ತವೆ. ಅವು ನಿನಗೆ ಸಿಗುವದಿಲ್ಲ. ಆದ್ದರಿಂದ ನಾನು ಹೇಳುತ್ತೇನೆ. ಸುಮ್ಮನೆ ಅದರಂತೆ ನಡೆ ಎಂದು ಆಜ್ಞಾಪಿಸಿದರು. ಉಂಡುಳಿದ ಅನ್ನ ಹಾಗೂ ಬೇಳೆಗಳನ್ನು ಗುಬ್ಬಿಗಳಿಗೆ ಹಾಕುತ್ತಿದ್ದರು. ಅವರು ಊಟಕ್ಕೆ ಕುಳಿತೊಡನೆಯೇ ಗುಬ್ಬಿಗಳ

ಗುಂಪು ಅವರ ಸುತ್ತು ಮುತ್ತು ನೆರೆಯುತ್ತಿತ್ತು. ಅವರೂ ಅತ್ಯಂತ ಪ್ರೇಮ ದಿಂದ ಅವುಗಳೊಡನೆ ಚೆಲ್ಲಾಟವಾಡುತ್ತಿದ್ದರು. ಒಂದುದಿನ ಜೇಲಿನ ಸುಪ ರಿಂಡೆಂಟನು ಅಕಸ್ಮಾತ ಬಂದನು. ಪಕ್ಷಿಗಳ ಈ ಪ್ರೇಮಮಯವಾದ ಜೀವನ ವನ್ನು ನೋಡಿದನು. ಆಶ್ಚರ್ಯಚಕಿತನಾದನು. 'ಟಿಳಕರೇ ಈ ಪಕ್ಷಿಗಳು ನಿಮಗೆ ಅಂಜುವದೇ ಇಲ್ಲವಲ್ಲ' ಎಂದನು. ಅದಕ್ಕೆ ಟಿಳಕರು 'ಅದರ ಕಾರಣ ವನ್ನು ನಾನರಿಯೆ. ನಾನು ಅವುಗಳನ್ನು ಬೆದರಿಸುವದಿಲ್ಲ. ಮತ್ತು ಅವು ಗಳನ್ನು ನಾನು ತಿನ್ನುವದೂ ಇಲ್ಲ. ಅವುಗಳಿಗೆ ನಾನು ತಿನ್ನಲೂ ಹಾಕುವೆ. ಗುಬ್ಬಿಗಳು ಅತ್ಯಂತ ನಿರುಪದ್ರವಿ ಪ್ರಾಣಿಗಳು; ಆದರೆ ನಾನು ನಾಗರ ಹಾವಿ ನಂತಹ ವಿಷಾರಿ ಪ್ರಾಣಿಗಳನ್ನು ಕೂಡ ದ್ವೇಷಿಸುವದಿಲ್ಲ. ಆದುದರಿಂದ ಅವೂ ಕೂಡ ನನಗೆ ಬೆದರುವದಿಲ್ಲ. ಈಶ್ವರ ನಿರ್ಮಿತವಾದ ಯಾವ ಪ್ರಾಣಿ ಗಳನ್ನೂ ನಾನು ದ್ವೇಷಿಸುವದಿಲ್ಲ' ಎಂದರು. ಇದನ್ನು ಕೇಳಿದೊಡನೆ ಸುಪರಿಂಡೆಂಟನು ಕ್ಷಣಹೊತ್ತು ಕಂಬದಂತೆ ಸುಮ್ಮನೆ ನಿಂತನು. ಮರು ಮಾತಾಡದೆ ಹೊರಟುಹೋದನು. ಈ ಸಂಗತಿಯು ಟಿಳಕರ ಜೀವನದ ಇನ್ನೊಂದು ಭಾಗವನ್ನು ಪ್ರಕಟಿಸುತ್ತದೆ. ಅವರ ಜೀವ ರಾಶಿಯ ಮೇಲಿ ರುವ ಪ್ರೇಮವು ಇದರಿಂದ ವ್ಯಕ್ತವಾಗುತ್ತದೆ.

ಕುಲಕರ್ಣಿಯವರು ಇಂತಹ ಅನೇಕ ಮನೋರಂಜಕ ಹಾಗೂ ಉದ್ಬೋಧಕ ಸಂಗತಿಗಳ ಟಿಪ್ಪಣಿ ಮಾಡಿದ್ದಾರೆ. ಟಿಳಕರ ಮಧುಮೇಹ ರೋಗವು ಅವರನ್ನು ವಿಚಾರಕ್ಕೆ ಗುರಿಮಾಡುತ್ತಿದ್ದಿತು. ಆದರೆ ಅವರು ಔಷಧಿಯನ್ನು ಮಾತ್ರ ತೆಗೆದುಕೊಳ್ಳುತ್ತಿದ್ದಿಲ್ಲ. ತಾವೇ ಊಟದಲ್ಲಿ ಬದಲು ಮಾಡಿಕೊಳ್ಳುತ್ತಿದ್ದರು. ಅವರ ಊಟವು ತೀರ ಮಿತಿ. 'ನಾನು ಬದುಕುವ ದಕ್ಕಾಗಿ ಉಣ್ಣುತ್ತಿದ್ದೇನೆ. ಉಣ್ಣುವದಕ್ಕಾಗಿ ಬದುಕುವದಿಲ್ಲ' ಎಂದು ಹೇಳುತ್ತಿದ್ದರು. ಒಂದು ದಿನ ಸಾರಿಗೆ ಉಪ್ಪು ಹಾಕುವದನ್ನು ಮರೆತಿದ್ದೆ. ಟಿಳಕರು ಸುಮ್ಮನೆ ಉಂಡು ಎದ್ದರು. ನಾನು ಊಟಕ್ಕೆ ಕುಳಿತಾಗ ಅದು ಗೊತ್ತಾಯಿತು. ನಾನು ಹೋಗಿ ಅವರ ಕ್ಷಮೆ ಕೇಳಿದೆ. ಅವರು ನಕ್ಕರು. ನಿಜವಾಗಿ ಹೇಳಬೇಕೆಂದರೆ, ನನಗೆ ಯಾವುದೂ ಲಕ್ಷ್ಯಕ್ಕೆ ಬಂದಿಲ್ಲ. ನನ್ನ ವಿಷಯದಲ್ಲಿ ನೀನು ಅಲಕ್ಷ್ಯವನ್ನು ಎಂದೂ ತೋರಿಸಿಲ್ಲ. ಕ್ಷಮೆ ಮಾಡುವ ಪ್ರಶ್ನೆಯೇ ಇಲ್ಲ' ಎಂದರು.

ನಮ್ಮನ್ನು ೬ ಗಂಟೆಗೆ ಒಳಗೆ ಹಾಕುತ್ತಿದ್ದರು. ಟಿಳಕರು ನನಗೆ ಐತಿಹಾಸಿಕ ಕತೆಗಳನ್ನು ಹೇಳುತ್ತಿದ್ದರು. ನಗುತ್ತಿದ್ದರು. ಚೇಷ್ಟೆ ಮಾಡುತ್ತಿದ್ದರು. ಒಂದು ದಿನ ಬ್ರಹ್ಮದೇಶದ ಗವ್ಹರ್ನರನು ಜೇಲಿಗೆ ಬಂದನು. ಅವರು ನಾನೇ ಟಿಳಕರೆಂದು ಭಾವಿಸಿ 'ಗುಡ್‌ಮಾರ್ನಿಂಗ' ಎಂದರು. ನಾನು ಟಿಳಕರು ಮೇಲೆ ಇರುವರೆಂದು ಹೇಳಿದೆ. ಅಷ್ಟರಲ್ಲಿ ಟಿಳಕರು ಕೆಳಗೆ ಬಂದರು. ನಡೆದ ಸಂಗತಿಯನ್ನು ಕೇಳಿ ಎಲ್ಲರೂ ನಕ್ಕರು. ನಂತರ ಎಲ್ಲರೂ ಮೇಲೆ ಹೋದರು. ಟಿಳಕರು ಜರ್ಮನ್ ಭಾಷೆಯ ಅಭ್ಯಾಸ ನಡೆಸಿರುವೆನೆಂದು ಹೇಳಿದರು. ಗವ್ಹರ್ನರರಿಗೆ ಅದರಿಂದ ಸಂತೋಷವಾಯಿತು. ಅವರು ನನ್ನ ಮಗಳು ಜರ್ಮನಿ ಭಾಷೆಯನ್ನು ಕಲಿಯುತ್ತಲಿದ್ದಾಳೆ. ದಯವಿಟ್ಟು ಆಕೆಯನ್ನು ತಾವು ಪರೀಕ್ಷಿಸುವಿರಾ? ಎಂದರು. ಟಿಳಕರು 'ಆಗಲಿ' ಎಂದರು ಗವ್ಹರ್ನರರು ಕೈದಿಗೆ ಈ ರೀತಿ ಸಲಿಗೆ ತೋರಿಸುವದು ಜೇಲಿನ ಅಧಿಕಾರಿಗಳಿಗೆ ಸೇರಲಿಲ್ಲ. ಹುಡುಗೆಯ ಪ್ರಶಂಸೆಮಾಡಿ ಏನಾದರೂ ಅನುಕೂಲತೆಗಳನ್ನು ಟಿಳಕರು ದೊರಕಿಸಬಹು ದೆಂಬ ಕುಕಲ್ಪನೆ ಅವರಿಗೆ ಬಂದಿತು. ಮರುದಿನ ತಂದೆ ಮಕ್ಕಳಿಬ್ಬರೂ ಬಂದರು. ಟಿಳಕರು ಹುಡಿಗೆಯನ್ನು ಪರೀಕ್ಷಿಸಿ, ಹುಡಿಗೆಯು ಇನ್ನೂ ಸಾಕಷ್ಟು ಅಭ್ಯಾಸಮಾಡಿಲ್ಲ, ಇನ್ನೂ ಮಾಡಬೇಕು ಎಂದು ಹೇಳಿದರು. ಆಗ ಜೇಲಿನ ಅಧಿಕಾರಿಗಳಿಗೆ ಟಿಳಕರು ಸಾಮಾನ್ಯ ವ್ಯಕ್ತಿಗಳಲ್ಲ ಎಂದು ತಿಳಿಯಿತು. ತಾವು ಯೋಚಿಸಿದ ಕಲ್ಪನೆಗಾಗಿ ಪಶ್ಚಾತ್ತಾಪ ಪಟ್ಟರು. ಅಂದಿನಿಂದ ಅವರ ದೃಷ್ಟಿಯೇ ಬದಲಾಗಿ ಅವರನ್ನು ದೇವರಂತೆ ಭಾವಿಸ ಹತ್ತಿದರು.

ನನಗೆ ಒಮ್ಮೆ ಜ್ವರ ಬಂದವು. ನನ್ನನ್ನು ದವಾಖಾನೆಗೆ ಕಳಿಸಲಿಲ್ಲ. ತಂದೆ ತಾಯಿಗಳಂತೆ ತಾವೇ ನನ್ನ ಶುಶ್ರೂಷೆ ಮಾಡಿದರು. ಅಡಿಗೆಯನ್ನು ಮಾಡಿ ನನಗೆ ಮೊದಲು ಉಣ್ಣಲು ಹಾಕಿ, ಆ ಮೇಲೆ ತಾವು ಉಣ್ಣು ತ್ತಿದ್ದರು. ಅನೇಕ ಸಾರೆ ನನಗೆ ಸಾಲುವಷ್ಟು ಅಡಿಗೆಯನ್ನಿಟ್ಟು ತಾವು ಉಪವಾಸವಿರುತ್ತಿದ್ದರು. ಮಗನಗಿಂತಲೂ ಹೆಚ್ಚು ನನ್ನನ್ನು ಪ್ರೀತಿ ಸುತ್ತಿದ್ದರು. ನನಗೆ ಐದುವರ್ಷದ ಶಿಕ್ಷೆಯಾಗಿತ್ತು. ಮೂರು ವರ್ಷ ಮುಗಿದ ನಂತರ, ನನ್ನ ಸಲುವಾಗಿ ಕೂಡಲೆ ತಾವೇ ಅರ್ಜಿಮಾಡಿ, ಎರಡು ವರ್ಷ

ಮಾಫಿ ದೊರಕಿಸಿಕೊಟ್ಟರು. ಅವರನ್ನು ಬಿಟ್ಟು ಬರಲು ನನಗೆ ಮನಸ್ಸಿದ್ದಿಲ್ಲ. ಅವರು ಮನೆಗೆ ಹೋಗಲು ನನಗೆ ಬಹಳ ಆಗ್ರಹ ಪಡಿಸಿದರು. ನಾನು ಹೊರಡುವ ದಿವಸ ನನಗೆ ಬಹಳ ಅಸಮಾಧಾನವಾಯಿತು. ಆಗ ಅವರು ನನ್ನನ್ನು ಸಮಾಧಾನ ಪಡಿಸಿ, ಆಶೀರ್ವದಿಸಿ, ಪುಣೆಗೆ ಹೋಗಿ ತಮ್ಮ ಯೋಗಕ್ಷೇಮದ ಎಲ್ಲ ಸಂಗತಿಗಳನ್ನು ತಿಳಿಸಲು ಹೇಳಿ ಬೀಳ್ಕೊಟ್ಟರು. ನಾನು ನಿಮ್ಮ ಮನೆಗೆ ಹೋದರೆ ನನ್ನನ್ನು ಅವರು ನಂಬುವ ಬಗೆ ಹೇಗೆ? ಎಂದು ಕೇಳಿದೆ. ಅದಕ್ಕೆ ಅವರು ಬಿದ್ದ ಹಲ್ಲುಗಳನ್ನು ಕೊಟ್ಟು, ವಿದ್ವಾಂಸರಿಗೆ ಮುಟ್ಟಿಸಲು ಹೇಳಿದರು ನಾನು ಪುಣೆಗೆ ಹೋಗಿ ಅವರ ಅಳಿಯಂದಿರ ಕೈಯಲ್ಲಿ ಆ ಹಲ್ಲುಗಳನ್ನು ಕೊಟ್ಟಕೂಡಲೆ, ಒಮ್ಮೆಲೇ ಅವರು ಅವುಗಳನ್ನು ಗುರ್ತಿಸಿದರು. ಹಾಗೂ ನನಗೆ ಲೋಕಮಾನ್ಯರ ಪತ್ನಿಯವರ ಭೆಟ್ಟಿ ಮಾಡಿಸಿದರು. ನಾನು ಅವರಿಗೆ ಲೋಕಮಾನ್ಯರ ಎಲ್ಲ ಸಂಗತಿಯನ್ನು ಅರುಹಿದೆ”

ಲೋಕಮಾನ್ಯರನ್ನು ಸರಕಾರವು ತಮ್ಮ ಶತ್ರುವೆಂದು ತಿಳಿದಿದ್ದ ಮೂಲಕ ಜಗತ್ತಿನ ಸಂಬಂಧವು ಅವರಿಗೆ ಬರದಂತೆ ದಕ್ಷತೆ ವಹಿಸಿದ್ದಿತು. ಅವರು ಜೇಲಿನಿಂದ ಬರೆಯುವ ಪತ್ರದಲ್ಲಿ ಮನೆಯ ಸಮಾಚಾರ, ತಾಯಿ ಮಹಾರಾಜರ ಆಸ್ತಿಯ ವ್ಯವಸ್ಥೆ, ತಾವು ಕೈಕೊಂಡ ಬರೆಹಗಳ ವಿಚಾರ, ಇವೇ ಇರುತ್ತಿದ್ದವು. ಗೀತಾರಹಸ್ಯದ ಬಗೆಗೆ ೨ ನೇ ಮಾರ್ಚ ೧೯೧೧ ರಲ್ಲಿ ಕೆಳಗಿನಂತೆ ಬರೆದಿದ್ದಾರೆ.

‘‘ನಾನು ಇದೇ ಗೀತಾರಹಸ್ಯ ಗ್ರಂಥವನ್ನು ಬರೆದು ಮುಗಿಸುತ್ತಿದ್ದೇನೆ. ಇದರಲ್ಲಿ ಗೀತೆಯ ವಿಷಯವಾಗಿ ನನ್ನ ವಿಚಾರಗಳನ್ನು ಸ್ಪಷ್ಟವಾಗಿ ಮಂಡಿಸಿದ್ದೇನೆ. ದೈನಂದಿನ ಜೀವನದಲ್ಲಿ ನೈತಿಕ ಪ್ರಶ್ನೆಗಳನ್ನು ಬಿಡಿಸುವಾಗ, ಹಿಂದು ಧಾರ್ಮಿಕ ತತ್ವಜ್ಞಾನದ ಉಪಯೋಗವು ಹೇಗಾಗುವದೆಂಬುದನ್ನು ಇದರಲ್ಲಿ ವಿವರಿಸಲಾಗಿದೆ. ಗ್ರೀಸರು ನೀತಿಶಾಸ್ತ್ರವನ್ನು ಬರೆಯುವಾಗ ಉಪಯೋಗಿಸಿದ ವಿಚಾರಸರಣಿಯನ್ನೇ ಅನುಸರಿಸಲಾಗಿದೆ. ಆದರೆ ಬಹುಜನರ ಬಹು ಹಿತ, ಅಥವಾ ಮಾನವೀ ಪ್ರೇರಣೆಗಳೇ ನೀತಿಶಾಸ್ತ್ರದ ಮೂಲಗಳು ಎಂಬ ವಿಚಾರ ನನಗೆ ಮಾನ್ಯವಿಲ್ಲ. ಗೀತಾರಹಸ್ಯದಲ್ಲಿ ಪೌರ್ವಾತ್ಯ ತತ್ವಜ್ಞಾನವು, ಪಾಶ್ಚಾತ್ಯ ತತ್ವಜ್ಞಾನಕ್ಕಿಂತ ಏನೂ ಕಡಿಮೆ

ಯಿಲ್ಲವೆಂದು ತುಲನಾತ್ಮಕವಾಗಿ ತೋರಿಸಿದ್ದೇನೆ. ಈ ಇಪ್ಪತ್ತು ವರ್ಷಗಳಿಂದ ನೀತಿಯ ಬಗ್ಗೆ ನನ್ನ ತಲೆಯಲ್ಲಿದ್ದ ವಿಚಾರಗಳಿಗೆಲ್ಲ ಮೂರ್ತರೂಪಕೊಡುವ, ಇಲ್ಲಿಯವರೆಗೆ ಯಾರೂ ಕೇಳದ ವಿಚಾರವನ್ನು ಮಂಡಿಸುವ ಸಾಹಸ ಮಾಡಲಾಗಿದೆ. ಅದರ ಸಮರ್ಥನೆ ಮಾಡಲು ಕೆಲವು ಪುಸ್ತಕಗಳ ಆಧಾರಗಳನ್ನು ಜೋಡಿಸಬೇಕಾಗಿದೆ. ಹೊರಗೆ ಬಂದ ಮೇಲೆ ಆ ಕೆಲಸವನ್ನು ಪೂರ್ಣ ಮಾಡುವೆ"

ಮಾನವರ ಮನಸ್ಸು ಎಷ್ಟೇ ಗಟ್ಟಿಯಿದ್ದರೂ ಸಾಂಸಾರಿಕ ದುಃಖಗಳಿಂದ ತಲ್ಲಣಗೊಳ್ಳದೆ ಹೋಗುವದಿಲ್ಲ. ಸಾಧಕರು ಸಂಯಮಿಸುವರು. ಸಹನ ಮಾಡುವರು. ಲೋಕಮಾನ್ಯರ ಧರ್ಮಪತ್ನಿಯವರಾದ ಸೌ. ಸತ್ಯಭಾಮಾಬಾಯಿಯವರ ಮರಣವಾರ್ತೆಯು ಅವರಿಗೆ ದೊಡ್ಡ ಧಕ್ಕೆ ಕೊಟ್ಟಿತು. ಲೋಕಮಾನ್ಯರು ಲೋಕಕ್ಕೆ ಎಷ್ಟು ಜ್ಞಾತರೋ ಅಷ್ಟೇ ಸತ್ಯಭಾಮಾಬಾಯಿಯವರು ಅಜ್ಞಾತರು. ಹಳೇತರದ ಭಾವಿಕಹೆಣ್ಣುಮಗಳು. ಒಬ್ಬರೊಡನೆ ಮಾತು ಇಲ್ಲ. ಕತೆಯಿಲ್ಲ. ತಾನಾಯಿತು. ತನ್ನಮನೆಯಾಯಿತು. ಒಂದು ದಿನ ಕೂಡ ಅವರು ಗಟ್ಟಿಯಾಗಿ ಮಾತನಾಡಿದ್ದನ್ನು ಯಾರೂ ಕೇಳಿರಲಿಲ್ಲ. ಅತ್ಯಂತ ಧಾರ್ಮಿಕ ಭಾವನೆಯವರು. ರಾಮಾಯಣ, ಮಹಾಭಾರತಗಳನ್ನು ಅರಿತವರು. ಪತಿವ್ರತೆಯರು. ಅವರ ಮರಣವಾರ್ತೆಯು ಟಿಳಕರಿಗೆ ಬಂದಿತು. ಅದರಿಂದ ಅವರಿಗೆ ಭಯಂಕರ ದುಃಖವಾಯಿತು. ಈ ವಿಷಯದಲ್ಲಿ ೮ ನೇ ಜೂನ ೧೯೧೨ ರಲ್ಲಿ ತಮ್ಮ ಅಳಿಯಂದಿರಿಗೆ ಕೆಳಗಿನಂತೆ ಪತ್ರ ಬರೆದಿದ್ದಾರೆ.

"ತಮ್ಮ ತಂತಿ ಮುಟ್ಟಿತು. ಮನಸ್ಸಿಗೆ ಬಹಳ ದುಃಖವಾಯಿತು. ಸಂಕಟಗಳನ್ನು ಸಹಿಸುವ ವೃತ್ತಿಯು ನನ್ನದಿದ್ದರೂ ಈ ಸುದ್ದಿಯಿಂದ ನಾನು ಬಹಳ ತಲ್ಲಣಗೊಂಡಿದ್ದೇನೆ. ನನ್ನ ಮುಂದೆ ಆಕೆಯು ಹೋದುದು ಒಳ್ಳೆಯದೇ ಎಂದರೂ ಮರಣ ಕಾಲದಲ್ಲಿ ನಾನು ಹತ್ತರವಿಲ್ಲೆಂದೂ ಅದರಲ್ಲಿಯೂ ಜೇಲಿನಲ್ಲಿರುವೆನೆಂದೂ ಬಹಳ ದುಃಖವಾಗುತ್ತದೆ. ಭವಿತವ್ಯವನ್ನು ತಪ್ಪಿಸುವರಾರು? ಯಾವುದು ಆಗಬಾರದೆಂದು ಬಯಸುತ್ತಿದ್ದೆನೋ ಅದೇ ಸಂಭವಿಸಿತು. ನನ್ನ ದುಃಖವನ್ನು ತೋಡಿಕೊಂಡು ನಿಮ್ಮನ್ನು ಕಷ್ಟಕ್ಕೀಡು ಮಾಡಲು ನಾನು ಇಚ್ಛಿಸುವದಿಲ್ಲ. ಆದರೆ ನನ್ನ ಜೀವನದ ಒಂದು ಭಾಗವು

ಮುಗಿಯಿತು. ಇನ್ನೊಂದು ಬೇಗನೆ ಮುಗಿಯುವದರಲ್ಲಿದೆ ಎಂದು ಅನಿಸು ತ್ತದೆ. ಆಕೆಯ ಉತ್ತರಕ್ರಿಯೆಗಳು ಯಥಾಸಾಂಗವಾಗಿ ಸಾಗಲಿ. ಆಕೆಯ ಅಸ್ತಿಯನ್ನು ಕಾಶಿಯಲ್ಲಿಯಾಗಲೀ ಪ್ರಯಾಗದಲ್ಲಿಯಾಗಲೀ ಗಂಗೆಯಲ್ಲಿ ಹಾಕಿರಿ. ಆಕೆಯು ಮರಣ ಸಮಯದಲ್ಲಿ ವ್ಯಕ್ತಪಡಿಸಿದ ಇಚ್ಛೆಗಳನ್ನು ಅಕ್ಷರಶಹ ಪಾಲಿಸಿರಿ. ಹುಡುಗರ ಯೋಗಕ್ಷೇಮದ, ಶಿಕ್ಷಣದ ಭಾರವು ನಿಮ್ಮ ಮೇಲೆಯೇ ಇದೆ. ನಾನು ಇಲ್ಲದ ಮೂಲಕ ಮಾತೃವಿಯೋಗದ ದುಃಖವು ಹೆಚ್ಚಾಗಿ ಹುಡುಗರಿಗೆ ಆಗಿರಬೇಕು. ದುಃಖದಲ್ಲಿ ವಿದ್ಯಾಭ್ಯಾಸದ ಕಡೆಗೆ ದುರ್ಲಕ್ಷಿಸಬಾರದೆಂದು ನಾನು ಹೇಳಿದ್ದೇನೆಂದು ಅವರಿಗೆ ತಿಳಿಸಿರಿ. ನನ್ನ ತಾಯಿಯು ತೀರಿಕೊಂಡಾಗ ನಾನು ಅವರಿಗಿಂತಲೂ ಚಿಕ್ಕವನಿದ್ದೆ. ಇಂತಹ ಸಂಕಟಗಳಿಂದ ಮನುಷ್ಯನು ಹೆಚ್ಚು ಸ್ವಾವಲಂಬನ ಕಲಿಯಬೇಕು. ಈಶ್ವರನ ಅವಕೃಪೆಯಿಂದ ಈ ಸಂಕಟವು ಬಂದಿದೆ ಎಂದು ಹುಡುಗರಿಗೆ ತಿಳಿದರೆ ದೇವರು ಅವರಿಂದ ಬಹಳ ದೂರವಿಲ್ಲ. ದುಃಖ ಮಾಡುತ್ತ ವೇಳೆಯ ದುರುಪ ಯೋಗ ಮಾಡಬಾರದು. ಆಕೆಯ ವಸ್ತ ಒಡವೆಗಳ ಯಾದಿ ಮಾಡಿರಿ. ಅವು ಗಳನ್ನು ಏನು ಮಾಡಬೇಕೆಂಬುದನ್ನು ನಾನು ತಿಳಿಸುವೆ. ಹುಡುಗರಿಗೆ ಈಗ ನಿಮ್ಮ ಹೊರತು ಬೇರೆ ಆಧಾರವಿಲ್ಲ. ದೇವರು ನಿಮಗೆ ಆಯುಷ್ಯ ಶಕ್ತಿಗಳನ್ನು ಕೊಡಲೆಂದು ಆತನಲ್ಲಿ ಪ್ರಾರ್ಥಿಸುವೆ. ಇಷ್ಟು ದೂರವಿದ್ದ ನಾನು ಇದಕ್ಕಿಂತ ಹೆಚ್ಚಿಗೆ ಇನ್ನೇನು ಮಾಡಬಲ್ಲೆ''

ಲೋಕಮಾನ್ಯರ ಸಮಚಿತ್ತದ ಪ್ರತೀಕವಿದು. ಅವರ ತಪೋಮಯ ಜೀವನವು ಲೋಕ ಕಲ್ಯಾಣಕಾರಕವಾಗಿ ಪರಿಣಮಿಸಿತು. ಗೀತಾರಹಸ್ಯ ದಂತಹ ದಿವ್ಯ ಬೆಳಕು ಜಗತ್ತಿಗೆ ದೊರೆಯಿತು. ಗ್ರಹಣದಿಂದ ಮುಕ್ತನಾದ ಸೂರ್ಯನಂತೆ ಪ್ರಕಾಶಮಾನರಾಗಿ ಟಿಳಕರು ಮಂಡಾಲೆಯಿಂದ ಮರಳಿದರು.

## ೭ ನೆಯ ಘಟ್ಟ

# ಭಾರತದ ಏಕೈಕ ಮುಖಂಡರು

## ಮಂಗಲ ಪ್ರಭಾತ

### ೧೯೧೪—೧೯೧೫

ಲೋಕಮಾನ್ಯರನ್ನು ೧೭ ನೇ ಜೂನ ದಿನ ಮಧ್ಯರಾತ್ರಿ ೧೨ ಘಂಟೆಗೆ ಅವರ ಮನೆಯ ಮುಂದೆ ತಂದು ಬಿಟ್ಟರಷ್ಟೆ! ಪೋಲೀಸರು ಬಾಗಿಲು ತೆಗೆಯಲು ಹೇಳಿದರೆ ಬಾಗಿಲ ಕಾಯುವವನು (ಭಯ್ಯಾನು) ಕೂಡಲೆ ತೆರೆಯಲಿಲ್ಲ. ಯಾವಾಗಾದರೊಮ್ಮೆ ಪೋಲೀಸರು ಬಂದು ಹೀಗೇ ಎಬ್ಬಿಸುತ್ತಿದ್ದರು. ಯಾವಾಗ ಟಿಳಕರೇ ಬಾಗಿಲ ತೆರೆಯಲು ಹೇಳಿದರೋ ಆಗ ಆಶ್ಚರ್ಯಚಕಿತನಾಗಿ, ಹರ್ಷಿತನಾಗಿ, ವಿದ್ವಾಂಸರನ್ನು ಎಬ್ಬಿಸಿ ಬಾಗಿಲ ತೆರೆದನು. ಎಲ್ಲಿ ನೋಡಿದಲ್ಲಿ ಆನಂದವೇ ಆನಂದ. ವಾಡೆಯೆಲ್ಲ ನಗುವಂತೆ ಭಾಸವಾಗ ಹತ್ತಿತು. ಆನಂದದ ಈ ಸುದ್ದಿಯನ್ನು ತಿಳಿಸಲು ಜನ ಅತ್ತಿತ್ತ ಹೋಯಿತು. ಕ್ಷಣಾರ್ಧದಲ್ಲಿ ವಾಡೆಯೆಲ್ಲ ತುಂಬಿಹೋಯಿತು. ಬಂದವರೆಲ್ಲ ಟಿಳಕರಿಗೆ ನಮಸ್ಕರಿಸಿ, ಕೂಡುತ್ತಿದ್ದರು. ಎಲ್ಲರ ಕಣ್ಣುಗಳಲ್ಲಿಯೂ ಆನಂದಾಶ್ರುಗಳು ಸುರಿಯಹತ್ತಿದವು. ಕಂಠಗಳು ಬಿಗಿದು ಬಂದವು. ಟಿಳಕರು ಎಲ್ಲರ ಯೋಗಕ್ಷೇಮವನ್ನು ವಿಚಾರಿಸಿದರು. ತಮ್ಮ ಪ್ರೀತಿಯ ಮುಂದಾಳುವನ್ನು ಕಾಣಲು ಜನರ ಗುಂಪುಗಳು ಬರಹತ್ತಿದವು. ಅಂದಿನ ರಾತ್ರೆಯೇ ಹಗಲಾಗಿ ಪರಿಣಮಿಸಿತು. ಬೆಳಗಿನ ನಾಲ್ಕು ಗಂಟೆಯಾಯಿತು. ಎಲ್ಲರಿಗೂ ಅಪ್ಪಣೆಕೊಟ್ಟು ಟಿಳಕರು ಅಡ್ಡಾದರು. ೨ ದಿನ ದರ್ಶನ ಕೊಡುವದರ ಹೊರ್ತು ಬೇರೆ ಕೆಲಸಕ್ಕೆ ಅವಕಾಶವೇ ದೊರೆಯಲಿಲ್ಲ.

ಬೆಳಗಾಗುವದರೊಳಗಾಗಿ ಪುಣೆ ಪಟ್ಟಣದಲ್ಲೆಲ್ಲ ಟಿಳಕರು ಬಂದ ಸುದ್ದಿಯೇ ಸುದ್ದಿ. ಎಷ್ಟೋ ಜನರು ಸಕ್ಕರೆ ಹಂಚಿದರು. ಇನ್ನು ಕೆಲಜನ

ದೇವರಿಗೆ ಆರತಿಗಳನ್ನೆತ್ತಿದರು. ದೇವರ ದರ್ಶನಕ್ಕೆ ಬರುವಂತೆ ಜನ ರೇಜು ಇಟ್ಟಿತು. ಟಿಳಕರ ಮನೆಯು ಯಾತ್ರಾ ಸ್ಥಳವಾಗಿ ಪರಿಣಮಿಸಿತು. ಭಾರತ ದಲ್ಲೆಲ್ಲ ಈ ಸುದ್ದಿಯು ಹಬ್ಬಿತು. ಅಸಂಖ್ಯಾತ ಅಭಿನಂದನಪರ ತಂತಿಗಳು ಬಂದವು. ಲಂಡನ್, ಪ್ಯಾರೀಸ, ಟೋಕಿಯೊ, ನ್ಯೂಯಾರ್ಕಗಳಿಂದ ಪತ್ರ ಹಾಗೂ ತಂತಿಗಳ ಸುರಿಮಳೆಯಾಯಿತು. ಪೋಸ್ಟಮನ್ನರಿಗೆ ವಿಶ್ರಾಂತಿಯೇ ಸಿಗಲಿಲ್ಲ. ಸಂದೇಶಗಳನ್ನು ಸ್ವೀಕರಿಸಲು ಕೇಸರಿಯ ಕಚೇರಿಯು ಪ್ರತ್ಯೇಕ ವಾಗಿ ವ್ಯವಸ್ಥೆ ಮಾಡಬೇಕಾಯಿತು. ಟಿಳಕರು ಮಂಡಾಲೆಗೆ ಹೋದೊಡ ನೆಯೆ ಭಾರತದ ರಾಜಕೀಯ ಕ್ಷೇತ್ರದಲ್ಲಿ ಕವಿದ ಕತ್ತಲೆಯು ೧೮ ನೇ ಜೂನದ ಸುಪ್ರಭಾತದಲ್ಲಿ ಭಾರತೀಯರ ಹೃದಯದಲ್ಲಿ ಮತ್ತೆ ಮಂಗಲ ಪ್ರಭಾತವಾಯಿತು.

## ಸಾರ್ವಜನಿಕ ಸನ್ಮಾನ

ಲೋಕಮಾನ್ಯರಿಗೆ ಸಾರ್ವಜನಿಕ ರೀತಿಯಿಂದ ಸನ್ಮಾನ ಮಾಡ ಬೇಕೆಂದು ಸಾರ್ವಜನಿಕ ಸಭೆಯು ೨೦ ನೇ ತಾರೀಖನ್ನು ಗೊತ್ತುಮಾಡಿತು. ಈ ಸುದ್ದಿ ಹಬ್ಬಿದ ಕೂಡಲೇ ದರ್ಶನಾಪೇಕ್ಷೆಯಿಂದ ಬರುವ ಜನರಿಂದ ರೇಲ್ವೆಗಾಡಿಗಳು ತುಂಬಿ ಬರಹತ್ತಿದವು. ಅದೊಂದು ಮಹಾಪರ್ವಣಿ ಯಾಗಿಯೇ ಪರಿಣಮಿಸಿತು. ೨೦ ನೇ ತಾರೀಖಿನ ೪ ಗಂಟೆಯಿಂದ ಗಾಯಕ ವಾಡಾ ವಾಡೆಯ ಬೈಲೆಲ್ಲ ತುಂಬಹತ್ತಿತು. ೧೦ ಸಾವಿರಕ್ಕೆ ಮಿಕ್ಕಿ ಜನ ಸೇರಿರಬೇಕು. ನಾಗಪೂರ, ವರ್ಹಾಡ, ಖಾನದೇಶ, ನಾಸಿಕ, ಸೊಲ್ಲಾಪೂರ, ಬೆಳಗಾವಿ ನಗರಗಳಿಂದಲೂ ದೂರ ದೂರ ದೇಶಗಳಿಂದಲೂ ಜನ ಬಂದಿದ್ದಿತು. ಲೋಕಮಾನ್ಯರು ಸಭಾಸ್ಥಾನಕ್ಕೆ ಬಂದೊಡನೆಯೇ "ಟಿಳಕ ಮಹಾರಾಜಕೀ ಜಯ" ಎಂದು ಗಗನಭೇದಿಯಾದ ಜಯಜಯ ಕಾರವಾಯಿತು. ಅಣ್ಣಾಸಾಹೇಬ ಪಟವರ್ಧನರು ಅಧ್ಯಕ್ಷರಾಗಿದ್ದರು. ಟಿಳಕರಿಗೆ ಪೂಮಾಲೆಗಳನ್ನು ಸಮರ್ಪಿಸಿದನಂತರ ಟಿಳಕರು ಗದ್ಗದಿತ ಕಂಠ ದಿಂದ ಮಾತನಾಡಲು ಎದ್ದು ನಿಂತರು ಸಭೆಯೆಲ್ಲವೂ ಅವರ ಮಾತುಗಳನ್ನು ಕೇಳುವ ಉತ್ಸುಕತೆಯಿಂದ ಅತ್ಯಂತ ಶಾಂತವಾಗಿದ್ದಿತು.

"ಆರು ವರ್ಷಗಳ ನಂತರ ನಾನು ಮರಳಿ ಇಲ್ಲಿಗೆ ಬಂದಿದ್ದೇನೆ. ನನ್ನ ಸುತ್ತುಮುತ್ತಲಿನ ಪರಿಸ್ಥಿತಿಯನ್ನು ನಿರೀಕ್ಷಿಸಿದಾಗ ಅಯುಪ್ಹಿನ್ನರ ಸ್ಕೆಚ್

ಪುಸ್ತಕದಲ್ಲಿಯ ರಿಪ್‌ಹ್ವನವಿಂಕಲಿನ್ನನಂತೆ ನನ್ನ ಸ್ಥಿತಿಯಾಗಿದೆ. ನಾನು ಜಗತ್ತನ್ನು ಮರೆತೇಬಿಡಬೇಕು. ಜಗತ್ತೂ ನನ್ನನ್ನು ಪೂರ್ಣ ಮರೆಯ ಬೇಕೆಂದು ಸರಕಾರವು ನನಗೆ ಏಕಾಂತವಾಸದ ಶಿಕ್ಷೆ ಕೊಟ್ಟಿತು. ನನ್ನ ವಿಸ್ಮರಣವು ನಿಮಗೆ ಆಗದ್ದನ್ನು ಕಂಡು ನನಗಾದ ಆನಂದವನ್ನು ವ್ಯಕ್ತಪಡಿ ಸಲು ನನ್ನಲ್ಲಿ ಶಬ್ದಗಳಿಲ್ಲ. ಆರುವರ್ಷದ ತಮ್ಮ ವಿಯೋಗದಿಂದ ತಮ್ಮ ಬಗ್ಗೆ ನನ್ನಲ್ಲಿ ಎಳ್ಳಷ್ಟೂ ಪ್ರೇಮವು ಕಡಿಮೆಯಾಗಿಲ್ಲ. ಈ ಮಾತನ್ನು ಸತ್ಯವೆಂದು ನಂಬಬೇಕು. ಆರು ವರ್ಷಗಳ ಪೂರ್ವದಲ್ಲಿ ಯಾವರೀತಿಯಿಂದ ನಿಮ್ಮ ಸೇವೆ ಗೈದೆನೋ ಅದೇ ರೀತಿಯಿಂದ ಮುಂದಾದರೂ ಮಾಡುತ್ತ ಹೋಗುವೆನು. ನನ್ನ ಸೇವೆಯನ್ನು ಮೊದಲಿನಂತೆ ಸ್ವೀಕರಿಸಲು ನೀವು ಸಿದ್ಧರಿರುವಿರಿ ಎಂಬುದಕ್ಕೆ ಇಲ್ಲಿ ನೆರೆದ ಜನಸಮೂಹವೇ ಸಾಕ್ಷಿ."

ಲೋಕಮಾನ್ಯರ ನಿಶ್ಚಯಾತ್ಮಕವಾದ, ಗಂಭೀರವಾದ, ಧೀರೋ ದಾತ್ತವಾದ ಈ ಭಾಷಣವು ಜನರ ಅಂತಃಕರಣವನ್ನು ಸೆಳೆದುಕೊಂಡಿತು. ಲೋಕಮಾನ್ಯ ಹಾಗೂ ಜನತೆಯ ಸಂಬಂಧವು ಮತ್ತೆ ಜೋಡಿಸಲ್ಪಟ್ಟಿತು. ರಾಷ್ಟ್ರದ ನಿಜವಾದ ಮುಖಂಡರು ಇವರೇ ಎಂದು ಜನ ತಲೆ ಬಾಗಿತು. ಸರಕಾರದ ಎದೆ ಮಾತ್ರ ಧಸಕ್ಕೆಂದಿತು.

ಲೋಕಮಾನ್ಯರ ಅನೇಕ ಸ್ನೇಹಿತರು ಇನ್ನು ಮುಂದೆ ರಾಜಕಾರಣ ವನ್ನು ಬಿಟ್ಟು ಅಧ್ಯಾತ್ಮದಲ್ಲಿಯೂ ಲೇಖನ ಕಾರ್ಯದಲ್ಲಿಯೂ ತೊಡಗ ಬೇಕೆಂದು ಸೂಚಿಸಿದರು. ಅದಕ್ಕೆ ಟಿಳಕರು "ಪೌರ್ವಾತ್ಯ, ಪಾಶ್ಚಾತ್ಯ ತತ್ವ ಜ್ಞಾನಗಳ ತುಲನಾತ್ಮಕ ಅಭ್ಯಾಸಮಾಡಿ ಗ್ರಂಥ ಬರೆಯುವದರಲ್ಲಿ ನನ ಗಾಗುವ ಆನಂದ ಬೇರಾವುದರಲ್ಲಿಯೂ ಇಲ್ಲ. ಆದರೆ ದುರ್ದೈವದಿಂದ ನನ್ನ ರಾಷ್ಟ್ರವು ಸ್ವತಂತ್ರವಿಲ್ಲ. ರಾಷ್ಟ್ರವನ್ನು ಸ್ವತಂತ್ರ ಮಾಡುವದು ನನ್ನ ಮೊದಲನೆಯ ಕರ್ತವ್ಯವೆಂದು ನಾನು ತಿಳಿಯುತ್ತೇನೆ. ದಯವಿಟ್ಟು ನನ್ನನ್ನು ಆ ಕರ್ತವ್ಯದಿಂದ ಚ್ಯುತಿಗೊಳಿಸಬೇಡಿರಿ. ರಾಜಕಾರಣಿಯೆಂದೇ ನಾನು ಕೊನೆಯ ಉಸಿರು ಬಿಡಬೇಕೆಂದು ಪರಮಾತ್ಮನ ಸಂಕಲ್ಪವಿರುವಂತೆ ತೋರು ತ್ತದೆ. ಅದನ್ನು ನಾನು ಒಪ್ಪಿಕೊಂಡಿದ್ದೇನೆ. ಆದುದರಿಂದ ಕೃಪೆ ಮಾಡಿ ನನಗೆ ಕಾರ್ಯಮಾಡಲು ಬಿಡಿರಿ." ಎಂದು ಉತ್ತರಿಸಿದರು ಎಂತಹ ಕರ್ತವ್ಯ ನಿಷ್ಟೆ! ಎಂತಹ ಸ್ವಾತಂತ್ರ್ಯಪ್ರೇಮ!

## ಸರಕಾರದ ನಜರ ಕೈದಿ

ಲೋಕಮಾನ್ಯರು ಶಿಕ್ಷೆಯನ್ನು ಅನುಭೋಗಿಸಿ ಬಂದನಂತರ ಅವರು ಹೆಣ್ಣಾಗುವರು. ಜನರು ಬೆದರುವರು ಅವರ ಸಮೀಪಕ್ಕೆ ಯಾರೂ ಹಾಯುವದಿಲ್ಲ, ಅವರ ಪ್ರಭಾವವೆಲ್ಲ ಕಡಿಮೆಯಾಗಿ ನಿರ್ಮೂಲ್ಯರಾಗುವರು ಎಂದು ಎಣಿಕೆ ಹಾಕಿದ್ದ ಸರಕಾರಕ್ಕೆ ಈ ಅಪೂರ್ವವಾದ ಸ್ವಾಗತ, ದರ್ಶನಾಪೇಕ್ಷೆಯಿಂದ ನೆರೆದ ಜನ ಜಾತ್ರೆಗಳನ್ನು ಕಂಡು, ತಮ್ಮ ಲೆಖ್ಖ ತಪ್ಪಿತೆಂದು ಅವರಿಗೆ ಅನಿಸಿ, ಮತ್ತೆ ಅಧಿಕಾರಿ ವರ್ಗವು ಕೈತೊಳಕೊಂಡು ಬೆನ್ನು ಹತ್ತಿತು. ೨೫ನೇ ಜೂನ ೧೯೧೪ಗಳರಂದು ಟಿಳಕರು ರಾಜದ್ರೋಹ ಮಾಡಿದರೆಂದು ಮುದ್ರೆಯೊತ್ತಿ ಅವರ ಭೆಟ್ಟಿಯನ್ನು ಯಾರೂ ತೆಗೆದುಕೊಳ್ಳಬಾರದೆಂದು ಹುಕುಮುನ್ನು ಹೊರಡಿಸಿದರು. ಈ ಆಜ್ಞೆಯನ್ನು ಮುರಿದವರು ಸರಕಾರದ ಅವಕೃಪೆಗೆ ಪಾತ್ರರಾಗುವರು ಎಂದು ಸಾರಿದರು. ಮತ್ತು ಅವರ ಮನೆಗೆ ಬರಹೋಗುವವರ ನಿರೀಕ್ಷೆಗಾಗಿ ಇಬ್ಬರು ಪೋಲೀಸರನ್ನು ಮನೆಯ ಮುಂದೆ ಇಟ್ಟರು. ಪುಣೆಯ ಕಲೆಕ್ಟರರು ಗಣೇಶೋತ್ಸವದಲ್ಲಿ ಗಣಪತಿಯ ಹೊರತು ಬೇರೆ ಯಾವ ಜಯಜಯಕಾರವನ್ನು ಮಾಡಬಾರದೆಂದೂ ರಾಜ ದ್ರೋಹಕ್ಕಾಗಿ ಶಿಕ್ಷೆಯಾದವರ ಚಿತ್ರಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಹಾಕಬಾರದೆಂದೂ ಅವರಿಗೂ ಅವರ ಸಂಬಂಧಿಕರಿಗೂ ಹೂಮಾಲೆ ಹಾಕುವದಕ್ಕೂ ನಿರ್ಬಂಧ ಹಾಕಲಾಗಿದೆ ಎಂದೂ ಸಾರಿದರು. ಆದರೆ ಈ ಆಜ್ಞೆಗಳು ಗಾಳಿಗೆ ತೂರಲ್ಪಟ್ಟವು. ಸರಕಾರಿ ನವಕರರು ಮತ್ತು ಅವರ ಅವಕೃಪೆಗೆ ಪಾತ್ರರಾಗಬಾರದೆನ್ನುವವರನ್ನು ಬಿಟ್ಟು ಉಳಿದ ಜನರೆಲ್ಲ ದರ್ಶನಕ್ಕೆ ಬರಹತ್ತಿದರು. ಬೆಳಗಾವಿಯ ಬೆಳವಿ ದತ್ತೋಪಂತರು ಭೆಟ್ಟಿ ತೆಗೆದುಕೊಂಡು ಬಂದರು. ಕಲೆಕ್ಟರನು ಅವರನ್ನು ಕರೆಯಿಸಿ, 'ನೀವು ಟಿಳಕರ ದರ್ಶನಕ್ಕೆ ಹೋಗಿದ್ದಿರಂತೆ ಅಹುದೇ?' 'ಅಹುದು ಹೋಗಿದ್ದೆ!' 'ನಿಮಗೆ ಸರಕಾರದ ಹುಕುಮು ಗೊತ್ತಿಲ್ಲವೇ?' ಅದಕ್ಕೆ ಬೆಳವಿಯವರು ಅಷ್ಟೇ ಧಿಟ್ಟತನದಿಂದ 'ನಾನು ಯಾರೆಂಬುದು ನಿಮಗೆ ಗೊತ್ತಿಲ್ಲವೇ? ನಾನೊಬ್ಬ ಸ್ವತಂತ್ರ ವಕೀಲನಿದ್ದು ಟಿಳಕರ ಭೆಟ್ಟಿ ತೆಗೆದುಕೊಂಡದ್ದಕ್ಕಾಗಿ ಹಾಯಕೋರ್ಟು ಸನದನ್ನು ಕಸಿದುಕೊಳ್ಳುವದೆಂದು ನನಗೆ ಅನಿಸುವದಿಲ್ಲ ಅಲ್ಲದೆ ನಾನು ಕಾಯದೆ ಕೌನ್ಸಿಲ್ಲಿನ ಸಭಾಸದನಿರುವೆನು. ನನಗೆ ಈ ಆಜ್ಞೆಯನ್ನು ಏನು ತೋರಿಸುವಿರಿ! ಶಿಕ್ಷೆ

ಯಾದವರನ್ನು ಕಾಣಬಾರದೆಂದು ಕಾಯದೆಯಾದಾಗ ನೋಡೋಣವಂತೆ' ಎಂದು ಉತ್ತರಿಸಿದರು. ಗಣಪತಿ ಉತ್ಸವದ ಗತಿಯೂ ಹೀಗೇ ಆಯಿತು. ಸರಕಾರವು ಮಾಡಿದ್ದೊಂದು ಆದು ಆದದ್ದೊಂದು. ಇತ್ತ ಟಿಳಕರು ಈ ಅನ್ಯಾಯವು ದೂರವಾಗಬೇಕೆಂದು ಪಾರ್ಲಿಮೆಂಟಿನ ಸಭಾಸದರಾದ ಕೇರ ಹಾರ್ಡಿಯವರ ಮುಖಾಂತರ ಪ್ರಯತ್ನ ನಡೆಸಿದರು. ಅವರು ಸ್ಟೇಟ ಸೆಕ್ರೆಟರಿಗಳಾದ ಕ್ರ್ಯೂರವರಿಗೆ ಪತ್ರ ಬರೆದರು. ಅವರು 'ನಾನು ಮುಂಬಯಿ ಸರಕಾರಕ್ಕೆ ಇದರ ಬಗ್ಗೆ ವಿಚಾರಿಸುವೆ ಎಂದು ಉತ್ತರ ಕೊಟ್ಟರು. ಈ ಪತ್ರವ್ಯವಹಾರವು ನಡೆದ ಕಾಲದಲ್ಲಿ ಒಂದು ಅಕಲ್ಪಿತವಾದ ಘಟನೆ ನಡೆದು, ಈ ಪ್ರಶ್ನೆಯನ್ನು ಸರಕಾರವೇ ಬಿಡಿಸಬೇಕಾಯಿತು.

## ಲೋಕಮಾನ್ಯರ ಜಾಹೀರನಾಮೆ

ಕಾಲದ ಮಹಿಮೆ ಅಗಾಧವಾದುದು. ೪ ನೇ ಆಗಸ್ಟ ೧೯೧೪ ನೇ ದಿನಾಂಕ ಯುರೋಪದಲ್ಲಿ ಮಹಾಯುದ್ಧವು ಪ್ರಾರಂಭವಾಯಿತು. ತಮ್ಮ ಈ ಸಂಕಟ ಸಮಯದಲ್ಲಿ ಸಕಲರ ಸಹಾನುಭೂತಿಯು ಅವಶ್ಯವೆಂದೂ ಟಿಳಕರೂ ಈ ಸಮಯದಲ್ಲಿ ದೊಡ್ಡ ಮನಸ್ಸಿನಿಂದ ಸರಕಾರಕ್ಕೆ ಸಹಾನುಭೂತಿ ತೋರಿಸಬೇಕೆಂದೂ ತಾವೂ ಅವರ ಮೇಲಿನ ಎಲ್ಲ ನಿರ್ಬಂಧಗಳನ್ನು ಹಿಂತೆಗೆದುಕೊಳ್ಳಲು ಸಿದ್ಧರಿರುವೆವೆಂದೂ ಕರ್ಣೋಪಕರ್ಣವಾಗಿ ಟಿಳಕರ ಕಿವಿಗೆ ಮುಟ್ಟುವಂತೆ ಮಾಡಿ, ಸರಕಾರವು ಅವರ ಮನೆಯ ಮುಂದಿನ ಕಾವಲನ್ನು ನಿಲ್ಲಿಸಿತು.

ರಾಜಕಾರಣವನ್ನು ಪ್ರಾರಂಭಿಸಲು ಇದು ಒಳ್ಳೇ ಸಂಧಿ ಎಂದು ಟಿಳಕರು ಭಾವಿಸಿದರು. 'ಇಂಗ್ಲಂಡದ ಸಂಕಟ ಸಮಯವು ಭಾರತದ ಸುಸಂಧಿ' ಎಂದು ಬಗೆದಿದ್ದ ಟಿಳಕರು ಇದರ ಲಾಭವನ್ನು ಮಾಡಿಕೊಳ್ಳುವ ದೃಷ್ಟಿಯಿಂದ ೨೭ ನೇ ಆಗಷ್ಟಕ್ಕೆ ಒಂದು ಜಾಹೀರನಾಮೆಯನ್ನು ಹೊರಡಿಸಿದರು.

''ಸರಕಾರದ ಅಂತಃಕರಣದಲ್ಲಿ ಪರಿವರ್ತನವಾಗಿದೆ. ಭಾರತೀಯ ಪ್ರಜೆಗಳ ಸಂಕಟವನ್ನು ಪರಿಹರಿಸುವ ಇಚ್ಛೆಯುಳ್ಳದ್ದಾಗಿದೆ ಎಂದು ಕಂಡು ಬರುತ್ತದೆ. ಇದು ಶುಭಲಕ್ಷಣವೆಂದು ನನ್ನ ಮತವಿದೆ. ಇದರೊಡನೆ ಇನ್ನೊ ಒಂದು ಮಾತನ್ನು ಹೇಳದಿರಲಾರೆ. ನಾನು ಜೇಲಿನಲ್ಲಿರುವಾಗ ಚಿರೋಲ

ರಂಥವರು ತಮ್ಮ ಪುಸ್ತಕದಲ್ಲಿ ನನ್ನ ಲೇಖ ಹಾಗೂ ಭಾಷಣಗಳು ಅತ್ಯಾಚಾರದ ಕೃತಿಗಳಿಗೆ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ರೀತಿಯಿಂದ ಉತ್ತೇಜನ ನೀಯುತ್ತವೆ. ಮತ್ತು ಬ್ರಿಟಿಶ ರಾಜ್ಯವನ್ನು ಕಿತ್ತೊಗೆಯಲು ಪ್ರೇರಿಸುತ್ತವೆ ಎಂದು ಹೇಯುವಾದ ಆರೋಪಗಳನ್ನು ಹೊರಿಸಿದ್ದಾರೆ. ಇಂತಹ ಹೊಲಸು ಆರೋಪಗಳನ್ನು ನಾನು ಸಾರ್ವಜನಿಕವಾಗಿ ಖಂಡಿಸುತ್ತೇನೆ. ಆಯರ್ಲಂಡದ ಹೋಮರೂಲ ಲೀಗಿನಂತೆ ಸದ್ಯದ ಆಡಳಿತೆಯಲ್ಲಿ ಬದಲುಮಾಡಿಕೊಳ್ಳುವದೇ ನನ್ನ ಇಚ್ಛೆ ಇದ್ದು, ರಾಜ್ಯವನ್ನೇ ಬುಡಮೇಲು ಮಾಡುವದು ಇರುವದಿಲ್ಲವೆಂದು ಒಮ್ಮೆ ಸ್ಪಷ್ಟವಾಗಿಯೇ ಹೇಳಿಬಿಡುತ್ತೇನೆ. ಭಾರತದ ಬೇರೆ ಬೇರೆ ಭಾಗಗಳಲ್ಲಿ ಜರುಗಿದ ಅತ್ಯಾಚಾರಗಳು ನನ್ನ ಸ್ವಭಾವಕ್ಕೆ ವಿರುದ್ಧವಾಗಿವೆ. ಇಷ್ಟೇ ಅಲ್ಲದೆ ಅಂತಹ ಕೃತ್ಯಗಳಿಂದ ರಾಜಕೀಯ ಪ್ರಗತಿಯು ಕುಂಠಿತವಾಗುವದೆಂದು ನನ್ನ ಸ್ಪಷ್ಟವಾದ ಅಭಿಪ್ರಾಯವಿದೆ. ಇಂತಹ ಕೃತಿಗಳು ದೋಷಾರ್ಹವೆಂದು ಹಿಂದೂ ಹೇಳಿದ್ದೇನೆ, ಇಂದೂ ಹೇಳುತ್ತೇನೆ

ಜರ್ಮನಿಯ ಬಾದಶಹನು ಕಾಲ ಕಾಲಕ್ಕೆ ಕೊಟ್ಟ ವಚನಗಳನ್ನು ಗಾಳಿಪಟ ಮಾಡಿ ಚಿಕ್ಕ ಚಿಕ್ಕ ರಾಷ್ಟ್ರಗಳ ಗಡಿಗಳ ಮೇಲೆ ಏರಿ ಹೋದುದರಿಂದ ಅವುಗಳ ರಕ್ಷಣೆಗಾಗಿ ಬ್ರಿಟಿಶರು ಜರ್ಮನಿಯ ವಿರುದ್ಧ ಶಸ್ತ್ರ ಹಿಡಿಯುವ ಪ್ರಸಂಗ ಬಂದಿದೆ. ಇಂತಹ ಸಂಕಟ ಸಮಯದಲ್ಲಿ ಹಿಂದೀ ಪ್ರಜರು ಚಿಕ್ಕವರೇ ಇರಲಿ, ದೊಡ್ಡವರೇ ಇರಲಿ, ಸಿರಿವಂತರೇ ಇರಲಿ, ಬಡವರೇ ಇರಲಿ, ಅವರು ಬ್ರಿಟಿಶ ಸರಕಾರಕ್ಕೆ ತಮಗೆ ಶಕ್ಯವಿದ್ದಷ್ಟು ಸಹಾಯವನ್ನೂ ಬೆಂಬಲವನ್ನೂ ಕೊಡುವದು ಪ್ರತಿಯೊಬ್ಬರ ಕರ್ತವ್ಯವೆಂದು ನಾನು ತಿಳಿಯುತ್ತೇನೆ" ಎಂದು ಟಿಳಕರು ತಮ್ಮ ನೈತಿಕ ಬೆಂಬಲವನ್ನಿತ್ತು ತಮ್ಮ ನಿಷ್ಠೆಯನ್ನು ವ್ಯಕ್ತಪಡಿಸಿದರು.

ಲೋಕಮಾನ್ಯರ ಈ ಪ್ರಕಟನೆಯು ಅತ್ಯಂತ ಸಮಯೋಚಿತವಾದುದೂ ಮುತ್ಸದ್ದಿತನದ್ದೂ ಎಂದು ಜಗತ್ತಿನ ರಾಜಕಾರಣಿಗಳು ಟಿಳಕರ ಬುದ್ಧಿಮತ್ತೆಯನ್ನು ಕೊಂಡಾಡಿದರು. ಅವರ ಮೇಲಿನ ನಿರ್ಬಂಧಗಳೆಲ್ಲವೂ ದೂರಾದವು. ಭಾರತೀಯ ರಾಜಕಾರಣದಲ್ಲಿ ನವಮನ್ವಂತರವು ಪ್ರಾರಂಭವಾಯಿತು. ಲೋಕಮಾನ್ಯರು ಜಾಹೀರನಾಮೆಯನ್ನು ಹೊರಡಿಸಿ ಸುಮ್ಮನೆ

ಕೊಡಲಿಲ್ಲ. ನಿಜವಾಗಿಯೂ ಸರಕಾರಕ್ಕೆ ಈ ಸಮಯದಲ್ಲಿ ಸಹಾಯ ಮಾಡಬೇಕೆಂದು ಅವರಿಗೆ ಅನಿಸಹತ್ತಿತು. ಕೇಸರಿ ಪತ್ರದಲ್ಲಿ 'ಭಾರತ ಹಾಗೂ ಸೈನಿಕ ಶಿಕ್ಷಣ' ಎಂಬ ಲೇಖಮಾಲೆಯನ್ನು ಪ್ರಾರಂಭಿಸಿದರು. ಯುದ್ಧದ ಉಪಯೋಗ ಮಾಡಿಕೊಂಡು ಸೈನಿಕ ಶಿಕ್ಷಣವನ್ನು ಇಲ್ಲಿ ಪ್ರಾರಂಭಿಸುವದು ಇಷ್ಟವಿದೆ ಎಂದು ಸರಕಾರದ ಮನಸ್ಸಿನ ಮೇಲೆ ಬಿಂಬಿಸಲು ಪ್ರಯತ್ನಿಸಿದರು. ತರುಣರು ಸೈನ್ಯದಲ್ಲಿ ಸೇರಿ ಸೈನಿಕ ಶಿಕ್ಷಣ ಪಡೆಯಲು ಒಳ್ಳೇ ಸಂಧಿ ಇದೆ ಎಂದು ಉಪದೇಶಿಸಹತ್ತಿದರು. ರಾಷ್ಟ್ರದ ಸ್ವಾತಂತ್ರ್ಯದ ದೃಷ್ಟಿಯಿಂದ ಸೈನಿಕ ಶಿಕ್ಷಣದ ಅವಶ್ಯಕತೆ ಎಷ್ಟಿದೆ ಎಂಬುದನ್ನು ತರುಣರಿಗೆ ಮನಗಾಣಿಸಿ ಕೊಟ್ಟರು. ಸರಕಾರವು ಸುಶಿಕ್ಷಿತ ತರುಣರಸೈನ್ಯಪಡೆ ಪ್ರಾರಂಭಿಸಿ ತರುಣರಿಗೆ ಅವಕಾಶಕೊಡಬೇಕೆಂದೂ ಸರಕಾರಕ್ಕೆ ಸೂಚಿಸಿದರು. ಈ ವಿಷಯದಲ್ಲಿ ಮಂದ ಹಾಗೂ ರಾಷ್ಟ್ರೀಯ ಪಕ್ಷಗಳಲ್ಲಿ ಏಕವಾಕ್ಯತೆಯಾಯಿತು. ಆದರೆ ಸರಕಾರವು ಮಾತ್ರ ಈ ಸಹಕಾರದ ಹಸ್ತವನ್ನು ಸ್ವೀಕರಿಸಲಿಲ್ಲ. ಒಂದು ವೇಳೆ ಈ ಸಹಕಾರವನ್ನು ಸ್ವೀಕರಿಸಿದರೆ, ನಾಳೆ ಮುಖಂಡರ ಬೇಡಿಕೆಗಳಿಗೆ ಮನ್ನಣೆಕೊಡಬೇಕಾಗುವದೆಂಬುದೇ ಆಳರಸರಿಗೆ ಭೀತಿ.

## ಸಂಯುಕ್ತ ಕಾಂಗ್ರೆಸ್ಸಿನ ಪ್ರಯತ್ನ

ಲೋಕಮಾನ್ಯರು ಜೇಲಿನಿಂದ ಹೊರಗೆ ಬಂದಾಗ ಭಾರತದ ರಾಜಕೀಯ ಕ್ಷೇತ್ರದಲ್ಲೆಲ್ಲ ಕತ್ತಲೆ ಕವಿದಿದ್ದಿತು. ಎಲ್ಲಿ ನೋಡಿದಲ್ಲೆಲ್ಲ ನಿರಾಶೆಯ ನೆರಳು ಬಿದ್ದಿತ್ತು. ಮಂದಪಕ್ಷೀಯರ ಕಪಿಮುಷ್ಟಿಯ ಧೋರಣದಿಂದ ಕಾಂಗ್ರೆಸು ರಾಷ್ಟ್ರೀಯತೆಯನ್ನು ಕಳೆದುಕೊಂಡು ತೀರ ಚಿಕ್ಕರೂಪ ತಾಳಿದ್ದಿತು. ಈ ವೇಳೆಯಲ್ಲಿ ಥಿಯಾಸಫಿಸ್ಟರಾದ ಅನಿಬಿಝೆಂಟರು ರಾಜಕಾರಣದಲ್ಲಿ ಆಸ್ಥೆ ವಹಿಸಹತ್ತಿದರು. ಅವರ ಸಂಸ್ಥೆಯು ಅಂತರ ರಾಷ್ಟ್ರೀಯ ಖ್ಯಾತಿ ಪಡೆದಿದ್ದಿತು. ಬಿಝೆಂಟರು ಕಾಂಗ್ರೆಸ್ಸಿನ ದುಸ್ಥಿತಿಯನ್ನು ಕಂಡು ರಾಷ್ಟ್ರೀಯ ಪಕ್ಷವು ಕಾಂಗ್ರೆಸ್ಸಿನಲ್ಲಿ ಬರುವ ಪ್ರಯತ್ನಕ್ಕೆ ಕೈಹಾಕಿ ಈ ವಿಷಯವಾಗಿ ಮಾತನಾಡಲು ಪುಣೆಗೆ ಬರುವೆವೆಂದು ಟಿಳಕರಿಗೆ ಓಲೆ ಬರೆದರು. ಲೋಕಮಾನ್ಯರೂ ಇದೇ ವಿಚಾರದಲ್ಲಿದ್ದರು. ರಾಷ್ಟ್ರೀಯ ಪಕ್ಷದ ಮುಖಂಡರ ಸಭೆ ಕರೆದರು. ಕಾಂಗ್ರೆಸ್ಸಿನಲ್ಲಿ ಒಕ್ಕಟ್ಟನ್ನುಂಟುಮಾಡುವ, ರಾಷ್ಟ್ರೀಯ

ಪಕ್ಷವನ್ನು ಸಂಘಟಿಸುವ, ಹೋಮರೂಲ ಚಳವಳಿಯನ್ನು ಕೈಕೊಳ್ಳುವ, ಗೀತಾರಹಸ್ಯ ಕಾರ್ಯ ಪೂರ್ಣಮಾಡುವ, ಚಿರೋಲರ ಮೇಲೆ ಖಟ್ಲೆ ಮಾಡುವ ಕ್ರಮವನ್ನು ನಿಶ್ಚಿತಪಡಿಸಿದರು. ಬಿಝುಂಟರು ಶ್ರೀ ಸುಬ್ಬರಾಯರೊಡನೆ ಬಂದರು. ಟಿಳಕರು ಆನಿಬಿಝುಂಟರಗೆ ಕಾಂಗ್ರೆಸ್ಸಿನಲ್ಲಿ ಸೇರಲು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳು ನಮಗೆ ಅಡ್ಡಬಂದಿಲ್ಲ, ಕಾಂಗ್ರೆಸ ಪ್ರತಿನಿಧಿಗಳನ್ನು ಆರಿಸುವ ಪದ್ಧತಿಯು ತಡೆಯಾಗಿದೆ. ಮಂದಪಕ್ಷೀಯರ ಕೈಯಲ್ಲಿರುವ ಕಮಿಟಿಗಳೇ ಆರಿಸಬೇಕೆಂಬ ನಿಯಮವು ನನಗೆ ಮಾನ್ಯವಿಲ್ಲ. ಈ ನಿಯಮವನ್ನು ಸಡಲಿಸಿ, ಸರ್ವರಿಗೂ ಚುನಾವಣೆಯ ಬಾಗಿಲವನ್ನು ತೆರೆದರೆ ಮದ್ರಾಸ ಕಾಂಗ್ರೆಸ್ಸಿಗೆ ಎಲ್ಲ ಪಕ್ಷದವರಿಗೂ ಬರಲು ಆಮಂತ್ರಣ ಕೊಡೋಣ. ಇಂಗ್ಲಂಡದಲ್ಲಿ ಪಾರ್ಲಿಮೆಂಟಿಗೆ ಅವರವರ ಪಕ್ಷದವರು ತಮ್ಮತಮ್ಮ ಪ್ರತಿನಿಧಿಗಳನ್ನು ಕಳಿಸುವಂತೆ ಇಲ್ಲಿಯೂ ವ್ಯವಸ್ಥೆಯಾಗಬೇಕೆಂದೂ ಹೇಳಿದರು” ಈ ಮಾತು ಬಿಝುಂಟರಿಗೆ ಸಮಂಜಸವೆನಿಸಿತು.

ಆನಿಬಿಸಂಟರು ನಂತರ ನಾ. ಗೋಖಲೆಯವರಿಗೆ ಭೆಟ್ಟಿಯಾದರು. ಟಿಳಕರ ವಿಚಾರಗಳನ್ನು ತಿಳಿಸಿದರು. ಈ ಸಂಧಿಗೆ ಗೋಖಲೆಯವರು ಸಮ್ಮತಿಸಿದರು. ಕಾಂಗ್ರೆಸ್ಸಿನಲ್ಲಿ ತರುವ ಗೊತ್ತುವಳಿಯ ಕರಡನ್ನು ತಾವೇ ಬರೆದು ಕೊಟ್ಟರು. ಮತ್ತು ಅದನ್ನು ಮೆಥಾರವರ ಕಣ್ಣಿಗೆ ಹಾಕಲು ಬಿಝುಂಟರಿಗೆ ತಿಳಿಸಿದರು. ಈ ವಿಷಯ ಮೆಥಾರೊಡನೆ ಚರ್ಚಿಸಲು ಬಿಝುಂಟರು ಸುಬ್ಬರಾಯರನ್ನು ಕಳಿಸಿದರು. ಮೆಥಾರವರು ಅದನ್ನು ಕಿವಿಯಮೇಲೆಯೇ ಹಾಕಿಕೊಳ್ಳಲಿಲ್ಲ. ಮೆಥಾರವರ ಈ ವರ್ತನದಿಂದ ಟಿಳಕರ ಪಕ್ಷವು ಸರಿಯಾದುದು ಎಂದು ಬಿಝುಂಟರಿಗೆ ಮನವರಿಕೆಯಾಯಿತು. ಟಿಳಕರಿಗೆ ಕಾಂಗ್ರೆಸ್ಸಿನ ಘಟನೆಯಲ್ಲಿ ಅವಶ್ಯವಿರುವ ತಿದ್ದುಪಡಿಯನ್ನು ಮಾಡಿಸುವ ಆಶ್ವಾಸನಕೊಟ್ಟು ಬಿಝುಂಟರು ಮದ್ರಾಸಕ್ಕೆ ಬಂದರು. ಮೆಥಾರ ವಿರೋಧದಿಂದಲೋ ಅಥವಾ ಟಿಳಕರು ಕಾಂಗ್ರೆಸ್ಸಿನಲ್ಲಿ ಪ್ರವೇಶಿಸಿದರೆ ತಮ್ಮ ಪಕ್ಷವು ಹಿಂದೆ ಬೀಳುವದೆಂದೋ ಗೋಖಲೆಯವರು ತಮ್ಮ ಮತವನ್ನು ಬದಲಿಸಿದರು. ವಿಷಯ ನಿಯಾಮಕ ಕಮಿಟಿಯಲ್ಲಿ ಬಿಝುಂಟರು ಒಪ್ಪಂದದ ವಿಷಯವನ್ನು ಮಂಡಿಸಿದರು. ಸಾಧಾರಣವಾಗಿ ಎಲ್ಲರಿಗೂ ಅದು ಮಾನ್ಯವಾಗಿತ್ತು. ಆದರೆ ಆಯತಾ ವೇಳೆಯಲ್ಲಿ ಗೋಖಲೆಯವರು ಒಂದು ಗುಪ್ತ ಪತ್ರ ಬರೆದರು. ಅದರಲ್ಲಿ

ಸರಕಾರವನ್ನು ಪೂರ್ಣವಾಗಿ ಬಹಿಷ್ಕರಿಸುವದೇ ಟಿಳಕರ ಧೋರಣವಿರು ತ್ತದೆ. ಕಾಂಗ್ರೆಸ್ಸಿನಲ್ಲಿ ಸೇರಿ ಆಯುರಿಶ್‌ರಂತೆ ಅಡ್ಡಗಾಲು ಹೊಡೆಯುವ ಧೋರಣವನ್ನು ಅವರು ಮುಂದೆ ಮಾಡುವರು' ಎಂದು ಬರೆದಿದ್ದರು. ಇದ ರಿಂದ ಗೊಂದಲವೆದ್ದಿತು. ಬಿರ್ಕೆಂಟರು ಇದರ ರಹಸ್ಯವೇನೆಂದು ಟಿಳಕರಿಗೆ ತಂತಿಕೊಟ್ಟರು. ಟಿಳಕರು "ಇದು ಪೂರ್ಣ ಸುಳ್ಳು. ನಾನು ಸರಕಾರಕ್ಕೆ ಬಹಿ ಷ್ಕಾರ ಹಾಕಬೇಕೆಂದು ಎಲ್ಲಿಯೂ ಹೇಳಿಲ್ಲ. ಇಷ್ಟೇ ಅಲ್ಲ, ರಾಷ್ಟ್ರೀಯ ಪಕ್ಷದ ಪ್ರಮುಖರು ಮುನಸೀಪಾಲಿಟಿಗಳಲ್ಲಿಯೂ ಕಾಯದೇ ಮಂಡಲಗಳಲ್ಲಿಯೂ ಕಾರ್ಯ ಮಾಡುತ್ತಿದ್ದು, ಅವರಿಗೆ ನಾನು ವೈಯಕ್ತಿಕವಾಗಿಯೂ ಸಾರ್ವ ಜನಿಕವಾಗಿಯೂ ಪೂರ್ಣ ಬೆಂಬಲ ಕೊಟ್ಟಿದ್ದೇನೆ" ಎಂದು ಮರುತಂತಿ ಕೊಟ್ಟರು. ಈ ತಂತಿ ಬರುವಷ್ಟರಲ್ಲಿಯೇ ಒಪ್ಪಂದವು ಮುರಿದುಹೋಗಿತ್ತು. ಈ ಆರೋಪವನ್ನು ಹೊರಿಸಿದ ಭೂಪೇಂದ್ರನಾಥರು ಟಿಳಕರ ಕ್ಷಮೆಯನ್ನು ಕೇಳಿದರು. ಅವರು ಒಪ್ಪಂದಕ್ಕೆ ಅನುಕೂಲವಾಗಿದ್ದರು. ಈ ಸುದ್ದಿಯು ತಿಳಿದೊಡನೆ ದಿನಶಹಾ ವಾಚ್ಛಾರವರು ಭೂಪೇಂದ್ರರಿಗೆ 'ನೀವು ಮಂದ ಪಕ್ಷೀಯರ ವಿಶ್ವಾಸಘಾತ ಮಾಡುತ್ತಿರುವಿರಿ' ಎಂದು ಅಪಮಾನಕಾರಕ ಪತ್ರ ಬರೆದಿದ್ದರೆಂದು ಮುಂದೆ ಹೊರಬಿದ್ದಿತು. ಬಿರ್ಕೆಂಟರ ಸೂಚನೆಯು ಸ್ವೀಕೃತವಾಗಲಿಲ್ಲ. ಆದರೆ ಈ ವಿಷಯುವನ್ನು ವಿಚಾರಮಾಡಿ ವರದಿ ಮಾಡ ಬೇಕೆಂದು ಒಂದು ಕಮಿಟಿಯು ನಿಯಮಿಸಲ್ಪಟ್ಟಿತು.

೫ನೇ ಜನವರಿ ಕೇಸರಿಯಲ್ಲಿ ಒಪ್ಪಂದಕ್ಕೆ ನಿಜವಾದ ತೊಂದರೆ ಎಲ್ಲಿದೆ ಎಂಬುದನ್ನು ವಿವರಿಸುತ್ತ 'ಕುದುರೆಯು ಕುಂಟು ಬೀಳುವದು ಮುಂಬಯಿ ಯಲ್ಲಿ, ಅದಕ್ಕೆ ಲಗಾಮು, ಹಾಕುವವರು ಯಾರಾದರೂ ಗಂಟು ಬೀಳ ದಿದ್ದರೆ ಅದು ಹೀಗೆಯೇ ಒದೆಯುತ್ತ ಕಚ್ಚುತ್ತ ನಿಲ್ಲುವದು' ಎಂದು ಟೀಕಿಸಿ ದರು. 'ಟಿಳಕರು ರಾಷ್ಟ್ರೀಯ ಸಭೆಯನ್ನು ಹೊಕ್ಕರೆ ಅದನ್ನು ವಶಪಡಿಸಿ ಕೊಳ್ಳುವರು ಎಂಬ ಭಾವನೆಯಿಂದ ಒಪ್ಪಂದವನ್ನು ಮುರಿದರು' ಎಂದು ಅಮೃತ ಬಝಾರ ಪತ್ರಿಕೆಯು ಬರೆಯಿತು. ಟಿಳಕರು ಆ ಗುಪ್ತ ಪತ್ರವನ್ನು ಪ್ರಸಿದ್ಧಿಸಲು ಆಹ್ವಾನಿಸಿದರು. ಆನಿಬಿರ್ಕೆಂಟರು ನ್ಯೂ ಇಂಡಿಯಾ ಪತ್ರಿಕೆ ಯಲ್ಲಿ ಟಿಳಕರ ಮಾತಿನಲ್ಲಿ ಎಲ್ಲಿಯೂ ಸರಕಾರಕ್ಕೆ ಬಹಿಷ್ಕಾರವೆಂಬ ಮಾತು ಬಂದಿಲ್ಲ. ಇಂದಿಲ್ಲ ನಾಳೆ ಕಾಂಗ್ರೆಸ್ಸು ನಮ್ಮದೇ ಎಂದು ಅವರು ಅಂದರು.

ಅವರ ೩೦ ನೇ ಆಗಸ್ಟದ ಜಾಹೀರನಾಮೆಯಲ್ಲಿ ಸರಕಾರಕ್ಕೆ ಸಹಕಾರವನ್ನು ನೀಡಬೇಕೆಂದು ಸಾರಿದ್ದರ ಮೇಲೆ ವಿಶ್ವಾಸವಿಡದೆ, ಸುಬ್ಬರಾಯರ ಹೇಳಿಕೆಯ ಮೇಲೇ ಕೈಯೂರುವದು ಆಶ್ಚರ್ಯವು' ಎಂದು ತಮ್ಮ ಪತ್ರದಲ್ಲಿ ಪ್ರಕಟಿಸಿದರು.

ಗೋಖಲೆಯವರು ಇದಕ್ಕೆ ಉತ್ತರವಾಗಿ "ಟಿಳಕರು ಬಹಿಷ್ಕಾರ ವಾದಿಗಳಿರುವರು. ಒಪ್ಪಂದವು ಶಕ್ಯವಿಲ್ಲ. ನಾವು ಐಯರಿಶರಂತೆ ಕಾಯಿದೆಗನುಸರಿಸಿ ಸರಕಾರವನ್ನು ತಡೆಯಲು ಯತ್ನಿಸುವೆವು. ನಮಗೆ ಕಾಂಗ್ರೆಸ್ಸಿನಲ್ಲಿ ಪ್ರವೇಶ ದೊರೆಯದಿದ್ದರೆ, ನಾವು ಬೇರೆ ಸಂಘವನ್ನು ತೆಗೆಯುವೆವು ಎಂದು ಅಂದರೆಂದು ಸುಬ್ಬರಾಯರು ಹೇಳಿದರು. ೧೯೦೭ ರ ಹಳೆಯ ವಿಚಾರಗಳೇ ಇವು ಎಂದು ನಾನು ಬಗೆದೆ. ಅವನ್ನೇ ಪತ್ರದಲ್ಲಿ ಬರೆದಿದ್ದೇನೆ. ಆ ಪತ್ರವು ವೃತ್ತಪತ್ರಗಳಿಗೆ ಹೋಗಬಾರದೆಂದು 'ಗುಪ್ತ' ಎಂದು ಬರೆದೆ" ಎಂದು ಉತ್ತರ ಕೊಟ್ಟರು. ಆದಕ್ಕೆ ಟಿಳಕರು ೧೯೦೭ರ ವಿಚಾರಗಳೇನಿದ್ದವೆಂಬುದನ್ನು ಗೋಖಲೆಯವರು ತಿಳಿದಿದ್ದೂ ೧೯೧೦ ರಲ್ಲಿ ಒಪ್ಪಂದವಾಗಲು ಪ್ರಯತ್ನಿಸಿದ್ದರು. ಈಗ ಕೂಡ ಬಿಝೆಂಟರಿಗೆ ತಿದ್ದುಪಡೆಯ ಸೂಚನೆ ಬರೆದು ಕೊಟ್ಟರು. ಒಪ್ಪಂದಕ್ಕೆ ಸಮ್ಮತಿಸಿದರು. ಇದು 'ಕಳ್ಳರ ತಿರುಬೊಬ್ಬೆ' ಎಂದು ೯ನೇ ತಾರೀಖಿನ ಕೇಸರಿಯಲ್ಲಿ ಉತ್ತರಿಸಿದರು. ಹೀಗೆ ವಾದ ವಿವಾದ ನಡೆದಿರಲು ೧೯೧೫ರ ಫೆಬ್ರುವರಿಯಲ್ಲಿ ಗೋಖಲೆಯವರು ಸ್ವರ್ಗವಾಸಿಗಳಾದರು. ಆಗ ಟಿಳಕರು ಅತ್ಯಂತ ದುಃಖದಿಂದ 'ಗೋಖಲೆಯವರ ಬಗೆಗೆ 'ಕೇವಲ ಹಳಹಳಿಸುವದರಿಂದೇನು ಪ್ರಯೋಜನ. ಅವರ ಉದಾಹರಣೆಯನ್ನು ಕಣ್ಣೆದುರು ಇಟ್ಟುಕೊಂಡು ಅವರಂತೆ ಒಬ್ಬನಾದರೂ ಸಿದ್ಧನಾಗಿ ಅವರ ಸ್ಥಳವನ್ನು ತೆಗೆದುಕೊಂಡರೆ ಹಳಹಳಿಯಾದುದಕ್ಕೆ ಏನಾದರೂ ಉಪಯೋಗವು' ಎಂದು ಉದ್ಗಾರಗಳನ್ನು ತೆಗೆದರು. ಈ ವಾದವು ಇಲ್ಲಿಗೆ ನಿಂತಿತು.

### ಪ್ರಾಂತಿಕ ಪರಿಷತ್ತು

ಒಪ್ಪಂದವಾಗಲಿ ಬಿಡಲಿ, ರಾಷ್ಟ್ರೀಯ ಪಕ್ಷವು ಸ್ವತಂತ್ರ ರೀತಿಯಿಂದ ಕಾರ್ಯರಂಗಕ್ಕಿಳಿದರೆ, ಒಪ್ಪಂದಕ್ಕೆ ಅನುಕೂಲ ವಾತಾವರಣವು ನಿರ್ಮಾಣ

ವಾಗುವದೆಂದು ಬಗೆದು, ರಾಷ್ಟ್ರೀಯ ಪಕ್ಷದ ಪ್ರಾಂತಿಕ ಪರಿಷತ್ತುಗಳನ್ನು ಕೂಡಿಸಬೇಕೆಂದು ನಿಶ್ಚಯಿಸಿದರು. ಮೇ ೮-೯ನೇ ತಾರೀಖಿಗೆ ಪುಣೆಯಲ್ಲಿ ಪ್ರಾಂತಿಕ ಪರಿಷತ್ತನ್ನು ಕೂಡಿಸಬೇಕೆಂದು ಗೊತ್ತಾಯಿತು. "ಕಾಂಗ್ರೆಸ್ ಪ್ರತಿಜ್ಞಾ ಪತ್ರಕ್ಕೆ ಪ್ರತ್ಯಕ್ಷ ಸಹಿ ಮಾಡದಿದ್ದರೂ ಪರಿಷತ್ತಿಗೆ ಬರುವ ಪ್ರತಿ ನಿಧಿಗಳಿಗೆ ಅದು ಮಾನ್ಯವಿರುವದೆಂದು ತಿಳಿಯುತ್ತೇವೆ. ಇದು ಮಾನ್ಯವಿರು ವವರೇ ಪ್ರತಿನಿಧಿಗಳಾಗಬಲ್ಲರು. ಎಂದು ಪ್ರಸಿದ್ಧಿಸಿದರು. ಸ್ವಾಗತ ಕಮಿಟಿಯು ಸ್ಥಾಪಿಸಲ್ಪಟ್ಟಿತು. ‘ಜನಮತದಂತೆ ಪ್ರತಿನಿಧಿಗಳನ್ನು ಆರಿಸು ವದು ಪ್ರಾಚೀನ ಪರಂಪರೆಯಿದ್ದು, ಅದು ಮುಂದೂ ನಡೆಯಬೇಕೆಂಬುದಕ್ಕೆ ಈ ಪ್ರಯತ್ನವು. ಎಲ್ಲರೂ ಪರಿಷತ್ತಿಗೆ ಬರಬೇಕೆಂದು ಟಿಳಕರು ವಿನಂತಿ ಮಾಡಿಕೊಂಡರು. ಬ್ಯಾ. ಬ್ಯಾಪ್ಟಿಸ್ಟಾರ ಅಧ್ಯಕ್ಷತೆಯಲ್ಲಿ ಪರಿಷತ್ತು ನಡೆ ಯಿತು. ಭೇದಭಾವ ಮರೆಯಲು ಹೋಮರೂಲಿಗಾಗಿ ಪ್ರಯತ್ನಿಸಲು ಅಧ್ಯಕ್ಷರು ಬಿನ್ನವಿಸಿದರು. ಯುದ್ಧಕ್ಕೆ ಸಹಾಯ ಮಾಡುವ, ಮಿತ್ರರ ಹಿತ ಚಿಂತನೆಮಾಡುವ, ಗೊತ್ತುವಳಿಗಳನ್ನು ಟಿಳಕರು ಮಂಡಿಸಿ ಸ್ವಾತಂತ್ರ್ಯ ರಕ್ಷಕರ ಕಡೆಗೆ ದೇವರು ಇರುವನೆಂದೂ, ಭಾರತದ ದೃಷ್ಟಿಯಿಂದಲೂ ಇಂಗ್ಲಿಷರಿಗೆ ಜಯವಾಗುವದು ಅವಶ್ಯವೆಂದೂ ಏಕೆಂದರೆ ಅವರಿಂದ ಸ್ವರಾಜ್ಯ ಸಿಗುವ ಆಶೆಯಿದೆ ಎಂದೂ ಹೇಳಿದರು. ಗೋಖಲೆಯವರ ಬಗ್ಗೆ ಅವರೇ ಗೊತ್ತುವಳಿ ಮಂಡಿಸಿದರು. ಈ ಪರಿಷತ್ತು ಜನರಲ್ಲಿ ಉತ್ಸಾಹ ತುಂಬಿತು. ಒಪ್ಪಂದಕ್ಕಾಗಿ ಟಿಳಕ, ಬ್ಯಾಪ್ಟಿಸ್ಟಾ, ಜೆಳವಿ ಈ ಮೂವರ ಕಮಿಟಿಯು ನೇಮಿಸಲ್ಪಟ್ಟಿತು.

## ಮುಂಬಯಿ ಕಾಂಗ್ರೆಸ್

ಬಿಝೆಂಟರು ಇದೇ ಸಮಯಕ್ಕೆ ಹೋಮರೂಲ ಲೀಗ ಸ್ಥಾಪಿಸುವ ಘೋಷಣೆ ಮಾಡಿದರು. ಅದಕ್ಕೆ ಟಿಳಕರು ಬೆಂಬಲಕೊಟ್ಟರು. ಬಿಝೆಂಟರು ‘ಕಾಂಗ್ರೆಸ್ಸಿಗೆ ಇದು ವಿರೋಧವಿಲ್ಲೆಂದು ಸಾರಿ ದಾದಾಭಾಯಿಯವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ೧೯೧೫ರ ಕಾಂಗ್ರೆಸ್ಸು ಸತ್ಯೇಂದ್ರ ಸಿಂಹರ ಅಧ್ಯಕ್ಷತೆಯಲ್ಲಿ ಮುಂಬಯಿಯಲ್ಲಿ ಸೇರುವದಿತ್ತು. ಬ್ಯಾ. ಜಿನ್ನಾರಂತಹರು ಮುಸ್ಲಿಂಲೀಗನ್ನೂ ಮುಂಬಯಿಯಲ್ಲಿಯೇ ಕೂಡಿಸಿ ಕಾಂಗ್ರೆಸ್ಸ ಹಾಗೂ

ಲೀಗುಗಳನ್ನು ಸಮೀಪಕ್ಕೆ ತರಲು ಯತ್ನಿಸಹತ್ತಿದರು. ಹೀಗೆ ಎಲ್ಲ ಕಡೆಗೆ ಐಕ್ಯದ ವಾತಾವರಣ ನಿರ್ಮಾಣವಾಯಿತು. ಫಿರೋಜಶಹಾ ಮೇಥಾರ ವರು ಕಾಂಗ್ರೆಸ್ಸಿನ ಸ್ವಲ್ಪ ದಿವಸ ಮೊದಲು ತೀರಿಕೊಂಡರು. ಮುಂಬಯಿಗೆ ಇದರಿಂದ ಬಹುದೊಡ್ಡ ಹಾನಿಯಾಯಿತು. ಟಿಳಕರು ಮುಂಬಯಿ ಕಾಂಗ್ರೆಸ್ಸಿಗೆ ಬರಬೇಕೆಂದು ಅನೇಕ ಮಂದಪಕ್ಷೀಯರು ಬಯಸಿದರು. ಅದಕ್ಕೆ ಟಿಳಕರು 'ಇದು ತಲಬಾಗಿಲವನ್ನು ಹಾಕಿ ಅಟ್ಟದ ಮೇಲೆ ನಿಂತು ಒಳಗೆ ಬರಲು ಕರೆದಂತಿದೆ. ಸುತ್ತು ಮುತ್ತಲಿನ ಕಂದಕಕ್ಕೆ ದಾರಿ ಮಾಡಿಕೊಡಿರಿ. ಮದ್ರಾಸದ ಸೂಚನೆಯನ್ನು ವಿಚಾರಮಾಡಿ ನಿರ್ಣಯ ಕೊಡಿರಿ" ಎಂದು ಸೂಚಿಸಿದರು. ಮುಂಬಯಿಯ ಹೊರತು ಇಡೀ ದೇಶವೆಲ್ಲ ಒಪ್ಪಂದಕ್ಕೆ ಅನುಕೂಲವಿದ್ದಿತು. ಆದುದರಿಂದ ರಾಷ್ಟ್ರೀಯ ಪಕ್ಷವು ಒಳಗೆ ಬರುವಂತೆ ಮುಂಬಯಿ ಕಾಂಗ್ರೆಸ್ಸು "೧೯೧೫ ರ ಕ್ಕಿಂತ ಎರಡು ವರ್ಷ ಪೂರ್ವದಲ್ಲಿ ಅಸ್ತಿತ್ವದಲ್ಲಿದ್ದ ಸಂಸ್ಥೆಗಳು ೧೫ ಜನರನ್ನು ಸ್ವತಂತ್ರ ರೀತಿಯಿಂದ ಕಾಂಗ್ರೆಸ್ಸಿಗೆ ಪ್ರತಿನಿಧಿಗಳನ್ನು ಆರಿಸಿ ಕಳುಹಿಸಬಹುದು ಎಂದು ಗೊತ್ತುವಳಿ ಬಂದಿತು. ಆದರೆ ಇತ್ತೀಚಿನ ಸಂಸ್ಥೆಗಳ ಗತಿ ಏನು ಎಂಬ ಪ್ರಶ್ನೆ ಉದ್ಭವಿಸಿ, ಘಟನೆ ಯಂತೆ ಯಾವುದೇ ಸಂಸ್ಥೆಯು ರಜಿಸ್ಟರ ಮಾಡಲು ಅಪೇಕ್ಷೆ ಪಟ್ಟರೆ, ಅದು ರಜಿಸ್ಟರ್ ಮಾಡಿಕೊಳ್ಳಲೇಬೇಕು' ಎಂದು ತಿದ್ದುಪಡಿಯಾಯಿತು. ಇದರಿಂದ ಎಲ್ಲ ಪ್ರಶ್ನೆಗಳು ದೂರವಾಗಿ ಎಲ್ಲರಿಗೂ ಪ್ರತಿನಿಧಿಗಳನ್ನು ಕಳಿಸಲು ಅವಕಾಶವಾಯಿತು. ಹೀಗೆ ಮುಂಬಯಿ ಕಾಂಗ್ರೆಸ್ಸಿನ ಈ ಗೊತ್ತುವಳಿಯು ಟಿಳಕರು ಎಂಟು ವರ್ಷಗಳಿಂದ ಪ್ರಯತ್ನಿಸುತ್ತಿದ್ದ ಸಂಯುಕ್ತ ಕಾಂಗ್ರೆಸ್ಸಿಗೆ ಮಾರ್ಗ ಮಾಡಿಕೊಟ್ಟಿತು. ಇದು ಟಿಳಕರ ವಿಜಯ ವಲ್ಲದೆ ಮತ್ತೇನು?

---

# ಲೋಕಮಾನ್ಯರ ವಿಜಯ

ಮುಂಬಯಿ ಕಾಂಗ್ರೆಸ್ಸಿನಲ್ಲಿ ರಾಷ್ಟ್ರೀಯರಿಗೆ ಕಾಂಗ್ರೆಸ್ಸಿನಲ್ಲಿ ಪ್ರವೇಶಿಸಲು ಮಾರ್ಗ ಮಾಡಿಕೊಟ್ಟಿತಷ್ಟೆ! ಒಂದು ಬಗೆಯಿಂದ ಇದು ಟಿಳಕರ ವಿಜಯವೇ ಆಗಿದ್ದಿತು. ಟಿಳಕರು ೧೯೧೫ರ ಡಿಸೆಂಬರದಿಂದಲೇ 'ಹೋಮ ರೂಲ ಲೀಗಿನ' ಮೇಲೆ ಲೇಖಗಳನ್ನು ಬರೆಯಲು ಪ್ರಾರಂಭಿಸಿದ್ದರು. 'ಹೋಮ ರೂಲ' ಶಬ್ದವನ್ನು ಬುದ್ಧಿಪೂರ್ವಕವಾಗಿ ಆರಿಸಿದ್ದರು. ಹೋಮ ರೂಲವೆಂದೊಡನೆ ಆಯರ್ಲಂಡದ ಹೋರಾಟವು ಜನರ ಮನಸ್ಸಿನಲ್ಲಿ ಬರುತ್ತಿದ್ದಿತು. ಮತ್ತು ಈ ಚಳವಳಿಯು ಕಾಯದೇಬದ್ಧತೆಯ ಪ್ರಶ್ನೆಯೂ ಉದ್ಭವಿಸುತ್ತಿರಲಿಲ್ಲ. ಲೋಕಮಾನ್ಯರು ನಾವು ಇನ್ನು ಕಾಂಗ್ರೆಸ್ಸಿನಲ್ಲಿ ಸೇರುವೆವೆಂದು ಘೋಷಣೆ ಮಾಡಿದರು. ಬೆಳಗಾವಿಯಲ್ಲಿ ತಾ| ೨೭–೨೮–೨೯ ನೇ ಎಪ್ರಿಲ್‌ದಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತನ್ನು ಕೂಡಿಸಬೇಕೆಂದು ಗೊತ್ತಾಯಿತು. ಶ್ರೀ ದತ್ತಾತ್ರಯ ವೆಂಕಟೇಶ ಬೆಳವಿಯವರು ಸ್ವಾಗತಾಧ್ಯಕ್ಷರಾಗಿ ಆರಿಸಲ್ಪಟ್ಟರು. ಬೆಳಗಾವಿ ಪರಿಷತ್ತಿನ ಪೂರ್ವದಲ್ಲಿ ಒಪ್ಪಂದದ ವಿಷಯವಾಗಿ ವಿಚಾರ ವಿನಿಮಯ ಮಾಡಲು ಪುಣೆಯಲ್ಲಿ ರಾಷ್ಟ್ರೀಯ ಪಕ್ಷದ ಸಭೆಯನ್ನು ಟಿಳಕರು ಕರೆದರು. ಇಡೀ ದಿವಸ ಚರ್ಚೆ ನಡೆಯಿತು. ಪ್ರತಿಜ್ಞಾ ಪತ್ರಿಕೆಗೆ ಸಹಿ ಮಾಡುವದು ಅಪಮಾನಕಾರಕವೆಂದು ಕೆಲವರಿಗೆ ಅನಿಸುತ್ತಿದ್ದಿತು. ಟಿಳಕರು ಬೇಸತ್ತು ಅಟ್ಟದ ಮೇಲೆ ಹೋಗಿ ಕುಳಿತರು. ಆಗ ಗಂಗಾಧರರಾಯರು ಮೇಲೆ ಬಂದು ನಿಮ್ಮ ಮನಸ್ಸಿನಲ್ಲಿ ಏನಿದೆ ಎಂಬುದನ್ನು ಒಮ್ಮೆ ಹೇಳಿಬಿಡಿರಿ. ಅದರಂತೆ ನಡೆಯುವೆವು ಎಂದರು. ಅದಕ್ಕೆ ಟಿಳಕರು 'ಪ್ರತಿಜ್ಞಾಪತ್ರಕ್ಕೆ ಅಂಕಿತಹಾಕಿ ಕಾಂಗ್ರೆಸ್ಸಿನಲ್ಲಿ ಸೇರಬೇಕು. ಎಂದು ನನಗನಿಸುತ್ತದೆ. ಕಾಂಗ್ರೆಸ್ಸಿನಿಂದ ಹೊರಗುಳಿಯುವದರಿಂದ ಯಾವ ಪ್ರಯೋಜನವೂ ಆಗಿಲ್ಲ' ಎಂದರು, ಮುಖಂಡರ ವಿಚಾರವೇ ನಮ್ಮ ವಿಚಾರ. ಬೆಳಗಾವಿ ಜಿಲ್ಹೆಯು ನಿಮ್ಮ ಹಿಂದೆ ಇರುವದೆಂದು ತಿಳಿಯಿರಿ ಎಂದು ಬೆಂಬಲವಿತ್ತರು. ಡಾ| ಮುಂಜೆಯವರು ಇದು ಆತ್ಮಘಾತಕೀ ಧೋರಣ,

ಆದರೂ ನಿಮ್ಮ ಮಾತು ಕೇಳುವ ನಿಶ್ಚಯ ಮಾಡಿದ್ದೇನೆ ಎಂದರು. "ಈ ಸಮಯದಲ್ಲಿ ಈ ಧೋರಣವೇ ಬುದ್ಧಿವಂತಿಕೆಯದೆಂದು ನಿಮಗೆ ಬೇಗನೆ ತಿಳಿಯುವದು" ಎಂದು ಟಿಳಕರು ಉತ್ತರಿಸಿದರು.

ಬೆಳಗಾವಿಯಲ್ಲಿ ೧೯ ನೇ ಪ್ರಾಂತಿಕ ಪರಿಷತ್ತು ಬೆಳವಿಯವರ ವರದಿಗೆ ಒಪ್ಪಿಗೆ ಇತ್ತಿತು. ಮುಂಬಯಿ ಕಾಂಗ್ರೆಸ್ಸಿನ ಘಟನೆಯಲ್ಲಿ ಮಾಡಲ್ಪಟ್ಟ ಬದಲಾವಣೆಯು ಸಮಾಧಾನಕರವಿರದಿದ್ದರೂ ರಾಷ್ಟ್ರೀಯ ಪಕ್ಷದವರು ಕಾಂಗ್ರೆಸ್ಸಿನಲ್ಲಿ ಸೇರಬೇಕು. ಎಂಬುದೇ ಆ ವರದಿಯ ಮುಖ್ಯ ವಿಷಯ ವಿದ್ದಿತು. ಟಿಳಕರೇ ಗೊತ್ತುವಳಿಯನ್ನು ಮಂಡಿಸಿದರು. 'ಯಾರಾದರೂ ವಿರೋಧಿಸುವವರು ಇದ್ದರೆ, ವಿರೋಧಿಸಬಹುದೆಂದು' ಹೇಳಿದರು. ಎಲ್ಲರೂ ಒಪ್ಪಿಗೆಯನ್ನು ಕೊಟ್ಟರು. ಒಪ್ಪಂದಕ್ಕೆ ಮಣ್ಣು ಕೊಡಬೇಕೆಂದು ಬಂದವರು ಆದರ ಜಯಂತಿಯನ್ನು ಮಾಡುವ ಸಂಕಲ್ಪದಿಂದ ತಮ್ಮ ತಮ್ಮ ಸ್ಥಳಗಳಿಗೆ ಮರುಳಿದರು.'ಲೋಕಮಾನ್ಯರು ಕಾಂಗ್ರೆಸ್ಸಿನಲ್ಲಿ ಸೇರುವ ಗೊತ್ತುವಳಿಯನ್ನು ಸ್ವೀಕರಿಸಿ ಕಾಂಗ್ರೆಸ್ಸನ್ನು ಗೆದ್ದರು' ಎಂದು ಟಾಯಿಮ್ಸ ಪತ್ರಿಕೆಯು ಬರೆಯಿತು. ಆಗ ಎಲ್ಲರ ಕಣ್ಣುಗಳು ತೆರೆದವು.

### ಹೋಮ ರೂಲ ಚಳವಳಿ

ಪ್ರಾಂತಿಕ ಪರಿಷತ್ತಿನ ಸಮಯದಲ್ಲಿಯೇ ಹೋಮರೂಲ ಲೀಗಿನ ಸಭೆಯಾಯಿತು. ಬ್ಯಾ. ಬ್ಯಾಪ್ಟಿಸ್ಟಾರವರು ಅಧ್ಯಕ್ಷರು, ನ. ಚಿ. ಕೇಳಕರರು ಮುಖ್ಯಕಾರ್ಯದರ್ಶಿಗಳು ಇದ್ದರು. ಮೇ ೧ನೇ ದಿನಾಂಕ ಲೀಗು ಜನ್ಮ ತಾಳಿತು. ಕರ್ನಾಟಕ ಶಾಖೆಗೆ ಗಂಗಾಧರರಾಯರು ಅಧ್ಯಕ್ಷರು, ಆಲೂರ ವೆಂಕಟರಾಯರು ಕಾರ್ಯದರ್ಶಿಗಳಾದರು. ಅಂದೇ ಸ್ವರಾಜ್ಯವೆಂದರೇನು? ಎಂಬ ವಿಷಯದ ಮೇಲೆ ಟಿಳಕರ ಭಾಷಣವಾಯಿತು. "ಯಾವುದಕ್ಕಾಗಿ ಈ ಹೊಸ ಸಂಘವು ಸ್ಥಾಪಿಸಲ್ಪಟ್ಟಿದೆಯೋ ಅದೇ ವಿಷಯವಾಗಿ ಎರಡು ಮಾತುಗಳನ್ನು ಹೇಳಬಯಸುವೆ. ಸ್ವರಾಜ್ಯದ ಬಗೆಗೆ ಕೆಲವರಿಗೆ ಅಜ್ಞಾನವಿದೆ. ಕೆಲವರು ತಿಳಿದೂ ತಿಳಿದು ವಿಪರ್ಯಾಸವನ್ನು ಮಾಡುತ್ತಾರೆ. ಹಲವರು ಮೊದಲಿನಿಂದಲೂ ವಿರೋಧಿಸುತ್ತಾರೆ. ಈ ಪ್ರಶ್ನೆಯು ನನ್ನಿಂದ ಉದ್ಭವವಾಗಿಲ್ಲ. ಸ್ವರಾಜ್ಯದ ಕಲ್ಪನೆಯು ಬಹಳ ಹಳೆಯದು. ಈಗಿರುವ ರಾಜ್ಯವು 'ಸ್ವ' ಅಂದರೆ ನಮ್ಮದಲ್ಲವೆಂದೇ ಈ ಚಳವಳಿಯು. ಇದರ ಬಗ್ಗೆ

ಯಾರಲ್ಲಿಯೂ ಮತಭೇದವಿಲ್ಲ. ಇಂಗ್ಲಂಡದಲ್ಲಿ ರಾಜನಿರುವನು, ಆದರೆ ಅವನು ಹೆಸರಿಗೆ ಮಾತ್ರ. ಇಂಗ್ಲಂಡದಿಂದ ಸುಶಿಕ್ಷಿತ ಜನರು ಇಲ್ಲಿಗೆ ಬಂದು ತಮಗೆ ಸರಿಕಂಡಂತೆ ರಾಜ್ಯಭಾರ ಮಾಡುವರು. ಸ್ವರಾಜ್ಯದ ಪ್ರಶ್ನೆಯೆಂದರೆ ರಾಜ್ಯಕಾರಭಾರದ ಪ್ರಶ್ನೆಯು. ಬ್ರಿಟಿಶ ರಾಷ್ಟ್ರದ ಸಹಾಯದಿಂದ ಅವರ ನೇತೃತ್ವದಲ್ಲಿ ನಮ್ಮ ಕಲ್ಯಾಣವನ್ನು ಸಾಧಿಸಬೇಕಾಗಿದೆ. ಆದರೆ ಯಾರ ಸಹಾಯದಿಂದ ಈ ಕಾರ್ಯವಾಗಬೇಕಾಗಿದೆಯೋ ಆ ಸರಕಾರವು ಅವ್ಯಕ್ತ ವಾಗಿದೆ. ಪರಬ್ರಹ್ಮನಿಂದ ಮಾಯೆ ಹೇಗೆ ಭಿನ್ನವೋ ಹಾಗೆ ವ್ಯಕ್ತ ಸರಕಾರವು ಅವ್ಯಕ್ತದಿಂದ ಭಿನ್ನವಾಗಿದೆ. ವ್ಯಕ್ತ ಸರಕಾರವು ಮೇಲಿಂದ ಮೇಲೆ ಬದಲಾಗುತ್ತದೆ. ಈ ವ್ಯಕ್ತ ಸರಕಾರವನ್ನು ಉದ್ದೇಶಿಸಿಯೇ ನಾವು ಸ್ವರಾಜ್ಯ ಎಂಬ ಶಬ್ದವನ್ನು ಉಪಯೋಗಿಸುತ್ತೇವೆ. ಅವ್ಯಕ್ತ ಸರಕಾರವನ್ನೂ ನಾವು ಬದಲಿಸಲು ಇಚ್ಛಿಸುವದಿಲ್ಲ. ವ್ಯಕ್ತ ಸರಕಾರವು ಸ್ವರಾಜ್ಯವಾಗಬೇಕೆಂಬುದೇ ನಮ್ಮ ಬೇಡಿಕೆ. ಈಗ ಇರುವ ಪದ್ಧತಿಯನ್ನು ಬದಲಿಸಿರಿ ಎಂಬುದೇ ನಮ್ಮ ಚಳವಳಿ. ಇಂಗ್ಲಂಡದ ಅರಸು ಉತ್ಸವಮೂರ್ತಿ ಮಾತ್ರ. ರಾಜ್ಯಭಾರ ಮಾಡುವವರು ಬೇರೆಯೇ ಇರುತ್ತಾರೆ. ಇಲ್ಲಿಯು ಕಾರಭಾರವು ಸ್ಟೇಟ ಸೆಕ್ರೆಟರಿಯಿಂದ ಗೌಡನವರೆಗೆ ಅಧಿಕಾರಿಗಳ ಕಡೆಗೆ ಇರುವದು. ಇವರನ್ನು ಬದಲು ಮಾಡಿರಿ ಎಂದು ಹೇಳಿದರೆ ರಾಜದ್ರೋಹವಾಗುವದಿಲ್ಲ. ಸ್ವರಾಜ್ಯಕ್ಕೆ ನಾವು ಪಾತ್ರರಿಲ್ಲೆಂದು ಹೇಳುವದರಲ್ಲಿ ಯಾವ ಹುರುಳೂ ಇಲ್ಲ. ನಾ. ಸಿಂಹ, ಚೌಬಳರಂಥವರು ಪಾತ್ರರಿಲ್ಲವೆ? ೨೧ ವರ್ಷದ ಅನನುಭವಿ ಯಾದ ಇಂಗ್ಲಂಡದ ತರುಣನು ಕಲೆಕ್ಟರನಾಗುವನು. ಆದರೆ ೬೦ ವರ್ಷದ ಅನುಭವಿ ಮುದುಕ ಮಾಮಲೇದಾರನು ಮಾತ್ರ ಅವನ ಕೈಯಲ್ಲಿ ದುಡಿಯು ಬೇಕು. ಇದೆಲ್ಲಿಯ ನ್ಯಾಯ. ನೀವು ನಮ್ಮನ್ನು ಬುದ್ಧಿವಂತರನ್ನು ಮಾಡಲು ಬಂದಿರುವಿರಿ, ಎಂದೊಪ್ಪೋಣ. ಆದರೆ ಇನ್ನೂ ಎಷ್ಟು ದಿವಸ, ಹೇಳಿಬಿಡಿ! ನಮ್ಮ ಪೂರ್ವಜರು ರಾಜ್ಯ ಸಾಮ್ರಾಜ್ಯಗಳನ್ನು ನಡೆಯಿಸಿಲ್ಲವೆ! ಹೋಮ ರೂಲ ಕೊಟ್ಟರೆ ಇಂಗ್ಲಿಷ ರಾಜ್ಯವೇನೂ ಮುಳುಗುವದಿಲ್ಲ. ನಾವು ಯಾವ ಮಾರ್ಗದಿಂದ ಹೋಗಬೇಕೆನ್ನುತ್ತೇವೋ ಆ ಮಾರ್ಗದಲ್ಲಿ ಅಳರಸರು ಅಡ್ಡ ನಿಂತಿದ್ದಾರೆ. ಅವರನ್ನು ಸರಿಸಿ ನಾವು ಹೋಗಬೇಕಾಗುತ್ತದೆ. ನಮಗೆ ಅಡ್ಡ ಬಂದು ನಮ್ಮ ದೇಶದ ಪಗಾರ ತೆಗೆದುಕೊಂಡು ಮತ್ತೆ ತಿರುಗಿ ನಮಗೇ

'ನಿಮಗಾಗಿ ನಾವು ಇಂಗ್ಲಂಡದ ಸುಖಕರವಾದ ಹವೆಯನ್ನು ಬಿಟ್ಟು ಇಲ್ಲಿಗೆ ಬಂದಿದ್ದೇವೆ' ಎಂದು ಹೇಳುತ್ತಾರೆ ಆದರೆ ತಮ್ಮಗಳಿರಾ! ನಿಮಗೆ ಇಲ್ಲಿ ಬರಲು ಕರೆದವರಾರು? ಯಶಾಪಯಶಸ್ಸು ದೇವರ ಆಧೀನ. ನನ್ನ ಕಣ್ಣು ಕಾಣಲಿಕ್ಕಿಲ್ಲ. ಆದರೆ ಕಾರ್ಯಕ್ಕೆ ತಕ್ಕ ಫಲವು ಬರಲೇಬೇಕು. ಎಂಬ ಬುದ್ಧಿಯಿಂದ ಕಾರ್ಯ ಪ್ರವೃತ್ತರಾಗಿರಿ."

ಇದೇ ತಿಂಗಳಲ್ಲಿ ಅಹಮದನಗರದಲ್ಲಿ ಜಿಲ್ಹಾ ಪರಿಷತ್ತಿನ ಕಾಲಕ್ಕೆ ಟಿಳಕರ ವ್ಯಾಖ್ಯಾನವು ಕೆಳಗಿನಂತೆ ಆಯಿತು. "ನಮ್ಮ ಬೇಡಿಕೆಯಿಂದ ಯಾರಿಗಾದರೂ ಹಾನಿಯಾಗುತ್ತಿದ್ದರೆ, ಅದು ಆಳರಸರಿಗೆ ಮಾತ್ರ. ಆದುದರಿಂದಲೇ ನಮ್ಮ ಪೂರ್ವಜರೆಲ್ಲ ಮೂರ್ಖರೆಂದು ಅವರು ಹೇಳುತ್ತಾರೆ. ನಾನಾಪಢಣವೀಸನು ಮೂರ್ಖನು. ಮಲಿಕಾಂಬರನು ಮೂರ್ಖನು. ನಾವಂತೂ ಚಿಕ್ಕ ಮಕ್ಕಳು. ೧೫೦ ವರ್ಷ ರಾಜ್ಯವಾಳಿ ನಮ್ಮನ್ನು ಜಾಣರನ್ನಾಗಿ ಮಾಡಲು ನಿಮಗೆ ಆಗದಿದ್ದರೆ ತಪ್ಪು ಯಾರದು? ಎಲ್ಲರೂ ಮೂರ್ಖರೆಂದು ಹೇಳುವ ಈ ಜಾಣನೇ ಅಯೋಗ್ಯನಲ್ಲವೆ? ಯೋಗ್ಯ ಅವಕಾಶವನ್ನು ಕಲ್ಪಿಸಿಕೊಡದೆ, ಅಯೋಗ್ಯರೆಂದು ಹೇಳಿದರೆ ಕೇಳುವವರಾರು? ನಾವು ನಮ್ಮ ಬೇಡಿಕೆಯನ್ನು ಬಲವಾಗಿ ಮಂಡಿಸಬೇಕು. ಬಂದ ಕಷ್ಟಗಳನ್ನು ಸಹಿಸಬೇಕು. ಒಟ್ಟಾಗಬೇಕು. ನಮ್ಮ ಬೇಡಿಕೆಗಳು ದೊರೆಯದೆ ನಮಗೆ ಸಮಾಧಾನವಾಗದೆಂದು ಜಗತ್ತಿಗೆ ತೋರಿಸಬೇಕು. ಅದು ಪೂರ್ಣವಾಗುವವರೆಗೆ ಚಳವಳಿಯು ನಿಲ್ಲಕೂಡದು, ನಾವು ಸತ್ತರೂ ನಮ್ಮ ಮಕ್ಕಳು ಅದನ್ನು ಮುಂದುವರಿಸುವರು." ಟಿಳಕರು ಮರುದಿನ ಹೀಗೆ ಹೇಳಿದರು:

"ನನ್ನ ಮೊಮ್ಮಗನು ಮುತ್ತಿನ ಪಲ್ಲಕ್ಕಿಯಲ್ಲಿ ಕುಳಿತು ಮೆರೆಯಬೇಕೆಂದು ವರ ಕೇಳಿದ ಮುದಿಕೆಯಂತೆ, ಸ್ವರಾಜ್ಯ ಬೇಡಿಕೆಯು ಎಲ್ಲವನ್ನು ಒಳಗೊಂಡಿದೆ. ಸ್ವರಾಜ್ಯವಿಲ್ಲದಿದ್ದರೆ ಏನೂ ಇಲ್ಲ. ಎಲ್ಲ ಸುಧಾರಣೆಗಳು ಫಲಪ್ರದವಾಗಬೇಕಿದ್ದರೆ ಸ್ವರಾಜ್ಯ ಒಂದೇ. ಇಂಗ್ಲಂಡದಲ್ಲಿ ಹೆಸರಿಗೆ ಅರಸನಿದ್ದು, ಅಧಿಕಾರಗಳೆಲ್ಲವೂ ಜನರ ಕೈಯಲ್ಲಿವೆ. ಅದೇ ರೀತಿಯಂತೆ ನಮಗೂ ಬೇಕು. ಈ ನಮ್ಮ ಮಾತಿಗೆ ಅರಸನ ಆತಂಕವಿಲ್ಲ. ನಡುವಿನವರು ಮಾತ್ರ ತೊಂದರೆ ಕೊಡುವರು. ನಡುವಿನವರು ಹೋಗದೆ ನಾವು ಬಲಿಷ್ಠರಾಗೆವು. ಸ್ವರಾಜ್ಯ ಸಂಘದ ಸಭಾಸದರಾಗುವದು ರಾಜದ್ರೋಹವಲ್ಲ. ವ್ಯಾಪಾರಿ

ಗಳಾದ ನೀವು ಗೋರಕ್ಷಣಕ್ಕಾಗಿ ಹಣ ತೆಗೆದು ಇಡುತ್ತೀರಿ. ಸ್ವರಾಜ್ಯಕ್ಕಾಗಿ ಏಕೆ ಇಡಬಾರದು? ಸ್ವದೇಶಿ ರೂಪವಾದ ಪೃಥ್ವಿಯು ಗೋಮಾತೆಯಂತೆ ಪೂಜ್ಯಗಳು."

ಲೋಕಮಾನ್ಯರ ಉಪನ್ಯಾಸಗಳು ತೆರಪಿಲ್ಲದೆ ನಡೆದವು. ಪುಣೆಯಲ್ಲಿ ೨೨ನೇ ಮೇ ದಿವಸ ಟಿಳಕರ ಅಧ್ಯಕ್ಷತೆಯಲ್ಲಿ ಬಿರ್ಝುಂಟಮ್ಮನವರ ವ್ಯಾಖ್ಯಾನ ವಾಯಿತು. ಚಳವಳಿಯ ಈ ಉಗ್ರ ರೂಪವನ್ನು ಕಂಡು ಸರಕಾರವು ದಬ್ಬಾಳಿಕೆ ಪ್ರಾರಂಭ ಮಾಡಿತು ಮುದ್ರಣ ಕಾಯಿದೆಯಂತೆ ನ್ಯೂ ಇಂಡಿಯಾ ಪತ್ರಿಕ್ಕೆ ೨೦೦೦ ರೂಪಾಯಿಗಳ ಜಾಮೀನನ್ನು ಸರಕಾರವು ಕೇಳಿತು. ಇದರಿಂದ ಬೆಂಕಿಯಲ್ಲಿ ತುಪ್ಪ ಸುರುವಿದಂತಾಯಿತು. ಸರ್ ಸುಬ್ರಹ್ಮಣ್ಯ ಅಯ್ಯರರಂತ ಹರು ಸರಕಾರವನ್ನು ಟೀಕಿಸಹತ್ತಿದರು. ಬಿರ್ಝುಂಟರು ಮುಂಬಯಿ ಪ್ರಾಂತ ದಲ್ಲಿ ಬರಕೂಡದೆಂದು ಸರಕಾರವು ನಿರ್ಬಂಧಿಸಿತು. ಆಗ ಟಿಳಕರು "ಈ ಚಳವಳಿಯಲ್ಲಿ ಯುದ್ಧಕ್ಕೆ ಅಹಿತಕರವಾದ ಯಾವ ಮಾತುಗಳೂ ಇಲ್ಲ. ಯುದ್ಧಾನಂತರ ಏನು ಬೇಡಬೇಕೆಂಬುದೇ ಈ ಚಳುವಳಿಯ ಉದ್ದೇಶವಿದೆ ದಬ್ಬಾಳಿಕೆಯಿಂದ ಈ ಚಳವಳಿಯು ನಿಲ್ಲಲಾರದು. ಎಂಬುದನ್ನು ಸರಕಾರವು ಲಕ್ಷದಲ್ಲಿಡಬೇಕು" ಎಂದು ಸರಕಾರವನ್ನು ಎಚ್ಚರಿಸಿದರು.

## ಷಷ್ಟ್ಯಬ್ಧಿ ಪೂರ್ತಿ

ಲೋಕಮಾನ್ಯರಿಗೆ ಜುಲೈ ೨೦ ನೇ ತಾರೀಖಿಗೆ ೬೦ ವರ್ಷಗಳು ತುಂಬುತ್ತಿದ್ದವು. ಅವರ ಮಿತ್ರರೆಲ್ಲರೂ ಲೋಕಮಾನ್ಯರ ಬಗ್ಗೆ ಜನತೆ ತನ್ನ ಭಕ್ತಿ ವಿಶ್ವಾಸಗಳನ್ನು ವ್ಯಕ್ತಪಡಿಸಲು ಇದು ಒಳ್ಳೇ ಸುಸಂಧಿಯು ಎಂದು ಬಗೆದು, ಅವರಿಗೆ ನಿಧಿ ಅರ್ಪಿಸುವ ಯೋಜನೆ ಮಾಡಿದರು. ದಾದಾಸಾಹೇಬ ಖಾಪರ್ಡೆ, ಗಂಗಾಧರರಾವ ದೇಶಪಾಂಡೆ, ಡಾ. ಮುಂಜೆ ಮೊದಲಾದವರ ಸಹಿಯಿಂದ ನಿಧಿಯ ಪ್ರಕಟನೆ ಹೊರಟಿತು. ೧ ಲಕ್ಷ ರೂಪಾಯಿಗಳನು ಕೂಡಿಸುವ ಪ್ರಯತ್ನ ನಡೆಯಿತು. ಟಿಳಕರು ವೈದಿಕ ಅಭಿಮಾನಿಗಳು. ೨೩ನೇ ತಾರೀಖಿನ ದಿವಸ ಮನೆಯಲ್ಲಿ ಹೋಮ ಹವನ, ರುದ್ರಾಭಿಷೇಕ, ಬ್ರಾಹ್ಮ ಣರ ಭೋಜನ, ದೀಪೋತ್ಸವಗಳು ನಡೆದವು. ಸಾಯಂಕಾಲ ಪ್ರಚಂಡ ಸಭೆಯಾಯಿತು. ಲೋಕಮಾನ್ಯರಿಗೆ ಮಾನಪತ್ರ ಸಮರ್ಪಿಸಲ್ಪಟ್ಟಿತು. ಬೆಳವಿಯವರು ಇಂಗ್ಲಿಷಿನಲ್ಲಿ ಮಾನಪತ್ರ ಓದಿದರು. ೮೬೩೩೬ ರೂಪಾಯಿ

ಗಳನ್ನು ಸಮರ್ಪಿಸಿದರು. ಅಸಂಖ್ಯಾತ ಉಡುಗರೆಗಳು ಇಡೀ ಭಾರತ ದೇಶ ದಿಂದ ಅರ್ಪಿಸಲ್ಪಟ್ಟವು. ಮಾನಪತ್ರಕ್ಕೆ ಉತ್ತರವೀಯುವಾಗ ಲೋಕಮಾನ್ಯರು "ನನ್ನ ವಿಷಯಕ್ಕೆ ಹೊಗಳಿಕೆಯ ಮಾತುಗಳನ್ನಾಡಿರುವಿರಿ. ನಾನು ಮಾಡಿದ ಅಲ್ಪ ಸೇವೆಯಿಂದ ತೃಪ್ತರಾಗಬೇಡಿರಿ. ಎದುರಿಗೆ ಇರುವ ರಾಷ್ಟ್ರ ಕಾರ್ಯವು ಬಹಳ ವ್ಯಾಪಕವೂ ಅಗತ್ಯದ್ದೂ ಇದೆ. ತಾವೆಲ್ಲರೂ ಅದಕ್ಕಾಗಿ ಮನಃಪೂರ್ವಕವಾಗಿ ದುಡಿಯಬೇಕಾಗಿದೆ. ಮಾತೃಭೂಮಿಯು 'ಕೆಲಸಕ್ಕೆ ತೊಡಗಿರಿ' ಎಂದು ಕರೆಯುತ್ತಿದ್ದಾಳೆ. ಆ ಕರೆಯನ್ನು ಆಕೆಯ ಪ್ರಿತಿಯ ಮಕ್ಕಳು ಅಕ್ಕರೆಯಿಂದ ಕೈಕೊಳ್ಳುವರೆಂದು ಬಗೆದಿದ್ದೇನೆ. ನನ್ನ ಕೊನೆಯ ಬಿನ್ನಹವಿಷ್ಟೆ! ಮಾತೃಭೂಮಿಯ ಕರೆಯನ್ನು ಕೇಳಿರಿ, ನಾವೆಲ್ಲರೂ ರಾಷ್ಟ್ರದೇವರಾಗೋಣ. ಇಲ್ಲಿ ಏರಾಟಿಕೆಯಿಲ್ಲ. ಮಾತ್ಸರ್ಯವಿಲ್ಲ. ಮಾನಾಪಮಾನವಿಲ್ಲ. ಸಂಕಟಗಳಿಗೆ ಬೆದರುವ ಕಾರಣವಿಲ್ಲ. ಕಾರ್ಯಪೂರ್ತಿಗೊಳಿಸುವ ದೇವರು ದೊಡ್ಡವನಿದ್ದಾನೆ. ದೇವರ ದಯೆಯಿಂದ ಈ ಪ್ರೇರಣೆಯು ನಿಮಗಾಗಿ, ನನ್ನ ಕಣ್ಣುಗಳು ಅದರ ಸ್ವಲ್ಪಾದರೂ ಫಲಗಳನ್ನು ಕಾಣಲಿ! ಇಷ್ಟೇ ದೇವರಲ್ಲಿ ನನ್ನ ಪ್ರಾರ್ಥನೆ" ಎಂದರು.

**ರಾಜದ್ರೋಹದ ಮೂರನೇ ಖಟ್ಲೆ**

ಇತ್ತ ಉತ್ಸವವು ನಡೆದಿರಲು, ಅತ್ತ ಸರಕಾರವು ಟಿಳಕರಿಗೆ ರಾಜ ಮನ್ನಣೆ ಮಾಡುವ ಸಿದ್ಧತೆಯನ್ನು ಪೂರ್ಣಗೊಳಿಸಿತು. ಅಂದೇ ಪುಣೆಯ ಹ್ಯಾಡಮ್ಯಾಜಿಸ್ಟ್ರೇಟರು ಟಿಳಕರ ಮೇಲೆ ನೋಟೀಸು ಹೊರಡಿಸಿದರು. ಬೆಳಗಾವಿ, ಅಹಮ್ಮದನಗರಗಳಲ್ಲಿ ರಾಜದ್ರೋಹದ ಭಾಷಣ ಮಾಡಿದ್ದಕ್ಕಾಗಿ ಟಿಳಕರಿಂದ ೨೦೦೦೦ ರೂಪಾಯಿಗಳ ಸ್ವಂತ ಮುಚ್ಚಳಿಕೆಯನ್ನೂ ಹತ್ತು ಹತ್ತು ಸಾವಿರ ರೂಪಾಯಿಗಳ ಎರಡು ಜಾಮೀನನ್ನೂ ಸದ್ವರ್ತನದ ಬಗ್ಗೆ ಏಕೆ ತೆಗೆದುಕೊಳ್ಳಬಾರದೆಂಬ ವಿಷಯಕ್ಕೆ ಕಾರಣ ತೋರಿಸಲು ಹೇಳಿದರು. ೭ ನೇ ಅಗಸ್ಟ ದಿವಸ ವಿಚಾರಣೆ ನಡೆಯಿತು. ನ್ಯಾಯಾಧೀಶರು ನಿಮ್ಮ ಮೇಲೆ ೧೨೪ ನೇ ಕಲಮಿನಂತೆ ಖಟ್ಲೆ ಮಾಡದೆ ಕೇವಲ ಜಾಮೀನಿನ ಮೇಲೆ ಖಟ್ಲೆ ಹಾಕಿದೆ. ಇದು ನಿಮ್ಮ ಭಾಗ್ಯ ಎಂದು ನಿರ್ಣಯಕೊಟ್ಟರು. ಟಿಳಕರು ಹೈಕೋರ್ಟಿಗೆ ಅಪೀಲು ಮಾಡಿದರು. ಆಗ ನ್ಯಾಯಾಧೀಶರು 'ಅಲ್ಲಲ್ಲಿಯ ವಾಕ್ಯಗಳನ್ನು ವಿಚಾರ ಮಾಡದೆ, ಇಡೀ ಭಾಷಣಗಳನ್ನು ಓದಿ ನೋಡಿದರೆ,

ರಾಜದ್ರೋಹವು ಸಿದ್ಧವಾಗುವದಿಲ್ಲ. ವಿಧಾನಗಳು ಕೆಟ್ಟವಿದ್ದರೂ ಅವುಗಳನ್ನು ಉಪಯೋಗಿಸಿದ ಸ್ಥಳಗಳನ್ನು ನೋಡಿದರೆ, ಅವು ಆಕ್ಷೇಪಾರ್ಹವಿಲ್ಲ. ಈ ಎಲ್ಲ ಕಾರಣಗಳ ಮೂಲಕ ಮ್ಯಾಜಿಸ್ಟ್ರೇಟರ ಹುಕುಮನ್ನು ನಾನು ತಿರುಗಿಸುತ್ತೇನೆ" ಎಂದು ಟಿಳಕರನ್ನು ದೋಷಮುಕ್ತಗೊಳಿಸಿದರು.

ಹಾಯಕೋರ್ಟು ಟಿಳಕರು ದೋಷಮುಕ್ತರೆಂದು ಸಾರಿದ ಕೂಡಲೇ ಟಿಳಕ ಹಾಗೂ ನ್ಯಾಯಾಧೀಶರ ಮೇಲೆ ಅಭಿನಂದನದ ಸುರಿಮಳೆಯಾಯಿತು. ಎಲ್ಲ ವೃತ್ತಪತ್ರಗಳು ಮುಕ್ತಕಂಠದಿಂದ ಹೊಗಳಿದವು. ಟಾಯಿಮ್ಸ ಪತ್ರಿಕೆಯು "ಮ್ಯಾಜಿಸ್ಟ್ರೇಟರ ನಿರ್ಣಯವಾದ ಕೂಡಲೆ, ನಾವು ಅವಸರದಿಂದ ಮಾಡಿದ ಟೀಕೆಯನ್ನು ತಿರುಗಿ ತೆಗೆದುಕೊಳ್ಳುತ್ತೇವೆ" ಎಂದು ಪ್ರಸಿದ್ಧಿಸಿತು. ಎಲ್ಲ ಕಡೆಗೂ ಆನಂದೋತ್ಸವಗಳು ನಡೆದವು.

**ಖಟ್ಲೆಯ ನಂತರ**

ಜಾಮೀನು ಕೇಳಲ್ಪಟ್ಟರೂ ಚಳವಳಿಯು ನಿಲ್ಲಲಿಲ್ಲ. ಹೈಕೋರ್ಟ ನಿರ್ಣಯವು ಹೊರಬೀಳುವ ಮೊದಲೇ ಹೋಮರೂಲ ಲೀಗಿನ ವ್ಯಾಖ್ಯಾನಗಳು ಪ್ರಾರಂಭವಾದವು. ಬಿಸೆಂಟರು ೧ನೇ ಸಪ್ಟಂಬರ ದಿನ ಭಾರತದಲ್ಲೆಲ್ಲ ಲೀಗಿನ ಶಾಖೆಗಳನ್ನು ಪ್ರಾರಂಭಿಸಬೇಕೆಂದು ಘೋಷಣೆ ಮಾಡಿದರು. ಸರಕಾರವು ಅವರ ಹಿಂದಿನ ಜಾಮೀನನ್ನು ರದ್ದುಪಡಿಸಿ ಪುನಃ ಹತ್ತುಸಾವಿರ ರೂಪಾಯಿಗಳ ಜಾಮೀನು ಕೇಳಿತು. ಬಿಸೆಂಟರು ಹಾಯಕೋರ್ಟಗೆ ಅರ್ಜಿ ಮಾಡಿದರು. ಈ ಕಾಯದೆಯು ದುಷ್ಟವಿದ್ದು ಅದಕ್ಕೆ ಉಪಾಯವಿಲ್ಲೆಂದು ಕೋರ್ಟು ಉತ್ತರ ಕೊಟ್ಟಿತು. ಸುರೇಂದ್ರನಾಥ ಬ್ಯಾನರ್ಜಿ ಮೊದಲಾದ ಮಂದಪಕ್ಷೀಯರೂ ಕೂಡ ಯುದ್ಧಾನಂತರ ಹೋಮರೂಲು ಭಾರತಕ್ಕೆ ದೊರೆಯಬೇಕೆಂದು ಮಾತನಾಡಹತ್ತಿದರು. ಗೋರಖಪೂರ, ಅಹಮ್ಮದಾಬಾದ ಮೊದಲಾದ ಪ್ರಾಂತಿಕ ಪರಿಷತ್ತುಗಳಲ್ಲಿ ಕೂಡ ಹೋಮರೂಲ ಬೇಡಿಕೆಯು ಮಂಡಿಸಲ್ಪಸಟ್ಟಿತು. ನವ್ಹಂಬರ ತಿಂಗಳಲ್ಲಿ ಕಾಂಗ್ರೆಸ್ಸು ತನ್ನ ಯೋಜನೆ ಸಿದ್ಧಪಡಿಸಿತು. ಮುಸ್ಲಿಂಲೀಗಿನವರೂ ಒಂದು ಯೋಜನೆ ಸಿದ್ಧಪಡಿಸಿದರು. ಬ್ಯಾ. ಬ್ಯಾಪ್ಟಿಸ್ಟಾರವರು ಹೋಮರೂಲ ಲೀಗಿನ ವತಿಯಿಂದ ಮೊದಲೇ ತಮ್ಮ ಯೋಜನೆ ಸಿದ್ಧಪಡಿಸಿದ್ದರು. ಆಗಾಮಿ ಲಖನೌ ಕಾಂಗ್ರೆಸ್ಸಿನ ಎದುರಿಗೆ ಮೂರೂ ಯೋಜನೆ

ಗಳು ಬಂದವು. ಟಿಳಕರು ಈ ಸಮಯದಲ್ಲಿ ರಾಷ್ಟ್ರದಲ್ಲಿ ಕಂಡು ಬಂದ ಐಕ್ಯಕ್ಕಾಗಿ ಕುಣಿದಾಡಿದರು. ಟಿಳಕರನ್ನು ಮುಂಬಯಿ ಪ್ರಾ. ಕಾ. ಕಮಿಟಿಯು ಅ. ಭಾ. ಕಾ. ಕಮಿಟಿಯ ಸಭಾಸದರನ್ನು ಮಾಡಿತು. ಕಾಂಗ್ರೆಸ್ಸಿನ ಇತಿಹಾಸದಲ್ಲಿಯೇ ರಾಷ್ಟ್ರವು ಹೊಸ ಹೆಜ್ಜೆಯನ್ನು ಹಾಕುವ ಕಾಲ ಬಂದಿತು.

ಇಷ್ಟೆಲ್ಲ ನಡೆದಿದ್ದರೂ ಸರಕಾರದ ಅಂತಃಕರಣದಲ್ಲಿ ಮಾತ್ರ ಬದಲಾವಣೆಯಾಗಿದ್ದಿಲ್ಲ. ನವ್ಹಂಬರದಲ್ಲಿ ಟಿಳಕರು ಗದಗ, ಹುಬ್ಬಳ್ಳಿ, ಧಾರವಾಡಗಳಿಗೆ ಬಂದಿದ್ದರು. ಗದಗಿನ ಜನರಿಗೆ ಸ್ವಾಭಾವಿಕವಾಗಿ ಟಿಳಕರಿಗೆ ಸನ್ಮಾನ ಮಾಡುವ ಅಪೇಕ್ಷೆಯಾಯಿತು. ಈ ಸುದ್ದಿಯು ಕಲೆಕ್ಟರನಿಗೆ ತಿಳಿದೊಡನೆ ಸಭೆ ತಡೆಯಲು ವಿಚಾರ ಮಾಡಿದನು. ಟಿಳಕರು ಸಭಾಸ್ಥಾನಕ್ಕೆ ಬಂದರು ಪೋಲೀಸ ಪಾರ್ಟಿಯು ಜನರನ್ನು ಚದುರಿಸುತ್ತಿತ್ತು. ಟಿಳಕರು ಇದನ್ನು ಕಂಡು ಜನರನ್ನು ಕೂಡಿಸಲು ತಿಳಿಸಿದರು. ಅ. ಪೋ. ಸು. ಓನರಮುನ್ನ ನು ಬಂದು ನೋಟೀಸಕೊಟ್ಟನು. ಪೋಲೀಸ ಆ್ಯಕ್ಟಿನ ೪೨ ನೇ ನಿಯಮದಂತೆ ಮುನಸಿಪಾಲಿಟಿಯ ಹದ್ದಿಯಲ್ಲಿ ರಸ್ತೆಯ ಮೇಲೆ ಇಲ್ಲವೆ ಜನರಿಗೆ ಕಾಣಿಸುವ ಸ್ಥಳದಲ್ಲಿ ಟಿಳಕರು ಜನತೆ ಉದ್ರೇಕಗೊಳ್ಳುವಂತೆ ಮಾತನಾಡಕೂಡದು ಎಂದು ನೋಟೀಸಿನಲ್ಲಿ ಕಾಣಿಸಿದ್ದರು. ಲೋಕಮಾನ್ಯರು ಅದನ್ನೋದಿ ಕಿಸೆಯಲ್ಲಿ ಹಾಕಿದರು. ನೀವು ಜನರನ್ನು ಏಕೆ ಚದರಿಸುತ್ತಿರುವಿರಿ? ಎಂದು ಪೋಲೀಸರನ್ನು ಕೇಳಿದರು. ಅದಕ್ಕೆ ಅವರು ಕಲೆಕ್ಟರರ ಬಾಯಿಯ ಹೇಳಿಕೆಯಾಗಿದೆ ಎಂದರು. ಆಗ ಟಿಳಕರು 'ಕೇವಲ ಎಲೆ, ಅಡಿಕೆ ಕೊಡಲು ಆಭಾರ ಮನ್ನಿಸಲು ಈ ನೋಟೀಸು ಅನ್ವಯಿಸುವದಿಲ್ಲ. ಹಾಗಾಗಬೇಕಾದರೆ ಹೊಸ ನೋಟೀಸು ಬೇಕು! ಎಂದರು. ಪೋಲೀಸ ಅಧಿಕಾರಿಯು ಡಿ. ಮ್ಯಾಜಿಸ್ಟ್ರೇಟರ ಕಡೆಗೆ ಹೋಗಿಬಂದು, ಜನ ಕೂತನಂತರ ೫ ನಿಮಿಷಗಳಲ್ಲಿ ಕಾರ್ಯ ಮುಗಿಯಬೇಕೆಂದರು. ಆಲೂರ ವೆಂಕಟರಾಯರು ಟಿಳಕರನ್ನು ಹಾಯಕೋರ್ಟು ನಿರ್ದೋಷಿಗಳೆಂದು ನಿರ್ಣಯ ಕೊಟ್ಟಿದೆ. ಅದಕ್ಕಾಗಿ ಅಭಿನಂದನೆ ಎಂದು ಹೇಳಿ ಎಲೆ, ಅಡಿಕೆ ಕೊಟ್ಟರು. ಅದಕ್ಕೆ ಟಿಳಕರು ಸ್ವರಾಜ್ಯದ ಬೇಡಿಕೆಯು ಕಾಯದೇಬದ್ಧವಾಗಿದೆ. ಜನರು ಅದನ್ನು ಬೇಡಬೇಕು. ಎಂದು ಉತ್ತರಕೊಟ್ಟರು. ಆದರಂತೆ ಹುಬ್ಬಳ್ಳಿ, ಧಾರವಾಡಗಳಲ್ಲಿ ಖಾಸಗೀ ಸ್ಥಳಗಳಲ್ಲಿ ಸಭೆಗಳು ಜರುಗಿದವು. ಮರುದಿವಸ ಟಿಳಕರು ಪುಣೆಗೆ ಮರಳಿದರು.

---

# ಲೋಕಮಾನ್ಯರ ಜಯದುಂದುಭಿ

## (ಲಖನೌ ಕಾಂಗ್ರೆಸ್)

ರಾಷ್ಟ್ರೀಯ ಪಕ್ಷವು ಕಾಂಗ್ರೆಸ್ಸಿನಲ್ಲಿ ಸೇರಬೇಕೆಂದು ಬೆಳಗಾವಿಯಲ್ಲಿ ನಿರ್ಣಯವಾಗಿ ಜನರಲ್ಲಿ ಲಖನೌ ಕಾಂಗ್ರೆಸ್ಸಿನ ಬಗ್ಗೆ ಉತ್ಸಾಹ ಉಕ್ಕೇರಿತು. ಲೋಕಮಾನ್ಯರು ತಮ್ಮ ಅನುಯಾಯಿಗಳಿಗೆಲ್ಲ ಕರೆಯಿತ್ತರು. ಮುಂಬಯಿಂದ "ಹೋಮರೂಲ ಸ್ಪೇಶಲ್" ಎಂಬ ಉಗಿಬಂಡಿಯು ದಿ. ೨೬ ಕ್ಕೆ ಹೊರಟಿತು. ೩-೪ ನೂರು ಜನರೊಡನೆ ಲೋಕಮಾನ್ಯರು ಹೊರಟರು. ಲೋಕಮಾನ್ಯರು ಇಂದು ಸ್ವಾತಂತ್ರ್ಯದ ಮೂರ್ತಿ. ಅವರ ದರ್ಶನಾಪೇಕ್ಷೆಯಿಂದ ಪ್ರತಿಯೊಂದು ಸ್ಟೇಶನ್ನಿನಲ್ಲಿಯೂ ಸಾವಿರಾರು ಜನರು ನೆರೆದು ಸ್ವಾಗತವೀಯುತ್ತಿದ್ದರು. ಹೂಮಳೆಗರೆಯುತ್ತಿದ್ದರು. ಫಲಪುಷ್ಪಗಳನ್ನರ್ಪಿಸುತ್ತಿದ್ದರು. ಉಪಹಾರಗಳನ್ನೀಯುತ್ತಿದ್ದರು. ಗಗನಭೇದಿಯಾದ ಜಯ ಜಯಕಾರಗಳನ್ನು ಮಾಡುತ್ತಿದ್ದರು. ಅವರಿಗೆ ಅರ್ಪಿತವಾದ ಮಾಲೆಗಳಿಗೆ ಒಂದು ರೇಲ್ವೆ ಡಬ್ಬಿಯ ಅವಶ್ಯಕತೆಯಿದ್ದಿತು. ಸಂಗಡಿಗರೆಲ್ಲರೂ ಅಜೀರ್ಣಕ್ಕಾಗಿ ಔಷಧಿ ತೆಗೆದುಕೊಳ್ಳುವ ಪ್ರಸಂಗ ಬಂದಿತು. ಈ ಚೈತ್ರಯಾತ್ರೆಯನ್ನು ವರ್ಣಿಸುವದು ಅಸಾಧ್ಯ.

ಲಖನೌ ಸ್ಟೇಶನಕ್ಕೆ ಗಾಡಿಯು ಬಂದಿತು. ಲೋಕಮಾನ್ಯರ ಸ್ವಾಗತಕ್ಕಾಗಿ ಊರಿಗೆ ಊರೇ ಬಂದಿದ್ದಿತು. ಗಾಡಿಯಿಂದ ಇಳಿದೊಡನೆಯೇ ಕಮಲ ಹಾಗೂ ಗುಲಾಬಿ ಹೂಗಳ ಮಳೆಗರೆಯಲಾಯಿತು. ಜನರ ಉತ್ಸಾಹಕ್ಕೆ ಮಿತಿಯೇ ಇಲ್ಲ. ಅಸಂಖ್ಯಾತ ಪುಷ್ಪಗುಚ್ಛಗಳು ಅರ್ಪಿಸಲ್ಪಟ್ಟವು. ಟಿಳಕರು ಮೋಟಾರಿನಲ್ಲಿ ಕುಳಿತರು. ಮುಂದೆ ಸಾಗಲು ಮಾರ್ಗವೇ ಇಲ್ಲದಾಯಿತು. ಪೋಲೀಸರೂ ಸ್ವಯಂಸೇವಕರೂ ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ. ಮೋಟಾರು ಓಡುವದೆಂದು ಒಬ್ಬನು ಬಂದು ಟಾಯರುಗಳನ್ನು ಹರಿದು ಮೋಟಾರನ್ನು ನಿಲ್ಲಿಸಿ, ಬೈಗಳ ಬದಲು ಜನರ ಮೆಚ್ಚುಗೆಗೆ ಪಾತ್ರನಾದನು. ಜನತೆ ಅವರನ್ನು ಗಾಡಿಯಲ್ಲಿ ಕುಳ್ಳಿರಿಸಿ, ತಾವೇ

ಎಳೆಯುತ್ತ ಮೆರವಣಿಗೆ ತೆಗೆದರು. ಛೇದಿಲಾಲ ಧರ್ಮಶಾಲೆಯು ಅವರ ಬೀಡಾರವಾಗಿದ್ದಿತು. ಉಪ್ಪರಿಗೆಯನ್ನೇರಿ ನೆರೆದ ಜನರಿಗೆಲ್ಲ ದರ್ಶನವಿತ್ತರು. 'ನೀವು ಭಾಗ್ಯವಂತರು. ನಾಳೆ ಇದೇ ಪಟ್ಟಣದಲ್ಲಿ ರಾಷ್ಟ್ರೀಯ ಸಭೆಯು ಹೋಮರೂಲಿನ ಧ್ವಜವನ್ನು ಹಾರಿಸತಕ್ಕದ್ದಿದೆ' ಎಂದು ಚಿಕ್ಕ ಭಾಷಣ ಮಾಡಿ ಜನರಿಂದ ಅಪ್ಪಣೆ ತೆಗೆದುಕೊಂಡರು.

ಈ ಸಲದ ಅಧಿವೇಶನವು ರಾಷ್ಟ್ರದ ಇತಿಹಾಸದಲ್ಲಿಯೇ ಅತ್ಯಂತ ಮಹತ್ವವಾದುದು. ಕಾಂಗ್ರೆಸ್ಸಿನಿಂದ ಒಡೆದು ಹೋಗಿದ್ದ ರಾಷ್ಟ್ರೀಯ ಪಕ್ಷವು ಮತ್ತೆ ಕಾಂಗ್ರೆಸ್ಸಿನ ಒಳಗೆ ಬಂದಿತ್ತು ಹಿಂದೂ ಮುಸ್ಲೀಮರು ಒಕ್ಕಟ್ಟಾಗಿ ವಿಷಯ ನಿಯಾಮಕ ಕಮೀಟಿಯಲ್ಲಿ ಸರ್ವ ಸಮ್ಮತವಾದ ಸ್ವರಾಜ್ಯದ ಯೋಜನೆ ಸಿದ್ಧಪಡಿಸಿದರು. ಹೋಮರೂಲೆಂದು ಹಗಲಿರಳು ಕನವರಿಸುತ್ತಿದ್ದ ಬಿಝೆಂಟಮ್ಮನವರು ವೇದಿಕೆಯ ಮೇಲೆ ವಿರಾಜಮಾನರಾಗಿದ್ದರು. ರಾಷ್ಟ್ರದೊಳಗಿನ ಬಣಗಳೆಲ್ಲ ಮುರಿದು, ಭೇದಗಳು ಅಳಿದು, ತನ್ನ ಹಕ್ಕುಗಳಿಗಾಗಿ ರಾಷ್ಟ್ರವು ಒಕ್ಕಟ್ಟನಿಂದ ಹೋರಾಡುವ ಸ್ಫೂರ್ತಿದಾಯಕ ದೃಶ್ಯವು ಸಭೆಯಲ್ಲಿ ಕಂಗೊಳಿಸುತ್ತಿತ್ತು, ಲೋಕಮಾನ್ಯರು ಮಂಡಪವನ್ನು ಪ್ರವೇಶಿಸಿ, ವೇದಿಕೆಯ ಮೇಲೆ ಬಂದೊಡನೆಯೇ ಜನತೆಯು ತೋರಿದ ಆದರ ಸತ್ಕಾರಗಳು ಅವರ್ಣನೀಯವಾಗಿದ್ದವು. ಲೋಕಮಾನ್ಯರು ಕೈಮುಗಿದು ವಂದನೆಗಳ ನರ್ಪಿಸಿ, ಎಲ್ಲರ ಹೃದಯವನ್ನು ತಮ್ಮ ಕಡೆಗೆ ಸೆಳೆದುಬಿಟ್ಟರು. ಸ್ವಾಗತಾಧ್ಯಕ್ಷರಾದ ಜಗತ್ ನಾರಾಯಣರು, ಹೊರಗುಳಿದ ರಾಷ್ಟ್ರೀಯರೂ ಹಾಗೂ ಮುಸಲ್ಮಾನರೂ ಕಾಂಗ್ರೆಸ್ಸಿನಲ್ಲಿ ಬಂದು ಕೂಡಿದ್ದಕ್ಕಾಗಿ ಅಭಿನಂದಿಸಿದರು. 'ಸುರತಿನ ಫ್ರೆಂಚ ಉಪವನದಲ್ಲಿ ಕಾಂಗ್ರೆಸ್ಸಿನಲ್ಲಿ ಉಂಟಾದ ಒಡಕು ಲಖನೌ ಕೇಸರಿ ಉಪವನದಲ್ಲಿ ಪುನಃ ಬೆಸೆಯಲ್ಪಟ್ಟಿತು. ಎಂದು ಅಂಬಿಕಾ ಚರಣ ಮುಜಮುದಾರರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಧನ್ಯೋದ್ಗಾರಗಳನ್ನು ತೆಗೆದರು.

ಲೋಕಮಾನ್ಯರು ಮುಖ್ಯ ಗೊತ್ತುವಳಿಯ ಮೇಲೆ ಮಾತನಾಡುತ್ತ "ತಾವು ನನಗೆ ಒಳ್ಳೇ ಸನ್ಮಾನವನ್ನು ಮಾಡಿದಿರಿ. ನಾನು ಯಾವ ತತ್ವಗಳಿಗಾಗಿ ಹೋರಾಡುತ್ತಿರುವೆನೋ ಆ ತತ್ವಗಳ ಸನ್ಮಾನವೇ ಇದು ಎಂದು ತಿಳಿಯುತ್ತೇನೆ. ಆ ತತ್ವಗಳೇ ಈ ಸ್ವರಾಜ್ಯದ ಗೊತ್ತುವಳಿಯಲ್ಲಿ ಅಡಕ

ವಾಗಿವೆ. ಸ್ವರಾಜ್ಯ ಶಬ್ದದ ಅರ್ಥವನ್ನು ವರೆಗೆ ಹಚ್ಚಿ ನೋಡಿದರೆ ಪೂರ್ಣ ಅರ್ಥ ಇದರಲ್ಲಿ ಕಾಣಲಿಕ್ಕಿಲ್ಲ. ಆದರೆ ಈ ಇಪ್ಪತ್ತು, ಮೂವತ್ತು ವರ್ಷ ಕಾಂಗ್ರೆಸ್ಸು ಮಾಡಿದ ಗೊತ್ತುವಳಿಗಳ ಸಾರವು ಇದರಲ್ಲಿದೆ. ಆದುದರಿಂದ ಸರ್ವರೂ ಒಕ್ಕಟ್ಟಿನಿಂದ ಇದಕ್ಕಾಗಿ ದುಡಿಯಬೇಕು. ಇನ್ನು ಮುಂದೆ ಚಿಕ್ಕ ಪುಟ್ಟ ಯಾವ ಬೇಡಿಕೆಗಳನ್ನೂ ಮಂಡಿಸದೆ ಎಲ್ಲವುಗಳನ್ನು ಒಳಗೊಂಡ ಸ್ವರಾಜ್ಯದ ಬೇಡಿಕೆಯೊಂದಕ್ಕೆ ಎಲ್ಲರೂ ಸಮ್ಮತಿಸಬೇಕೆಂದು ಬಿನ್ನವಿಸುತ್ತೇನೆ. ನಾವು ಮುಸಲ್ಮಾನರಿಗೆ ಬಹಳ ಹಕ್ಕುಗಳನ್ನು ಕೊಟ್ಟಿದ್ದೇವೆಂದೂ ಅವರಿಗೆ ನಾನು ಬಹು ಬಾಗಿ ನಡೆವೆನೆಂದೂ ಕೆಲ ಹಿಂದೂ ಬಂಧುಗಳ ತಕರಾರು. ನಾನು ಸರ್ವ ಹಿಂದುಗಳ ಪ್ರತಿನಿಧಿ ಎಂಬುದನ್ನು ಬಲ್ಲೆ. ಸ್ವರಾಜ್ಯದ ಎಲ್ಲ ಹಕ್ಕುಗಳು ಮುಸಲ್ಮಾನರ ಕೈಸೇರಿದರೂ ನನಗೆ ಕೆಡಕೆನಿಸುವದಿಲ್ಲ. ರಜಪೂತರ ಕೈಸೇರಿದರೂ ನಡೆಯುವದು. ಆದರೆ ಆಳರಸರ ಕೈಯಿಂದ ಮೊದಲು ಆ ಹಕ್ಕುಗಳು ಬರಲಿ. ಮೂರನೆಯವರೊಡನೆ ಹೋರಾಡುವಾಗ ನಾವು ಒಕ್ಕಟ್ಟಿನಿಂದ, ಒಂದೇ ಧ್ವನಿಯಿಂದ ಬೇಡಬೇಕು. ಸ್ವರಾಜ್ಯವು ಸ್ವರ್ಗದಿಂದ ಬೀಳುವದಿಲ್ಲ. ಕಾರ್ಯಕ್ಕೆ ಉದ್ಯುಕ್ತರಾಗಿರಿ. ಕೆಲಸವನ್ನು ತಪ್ಪಿಸಬೇಡಿರಿ" ಎಂದು ಅತ್ಯಂತ ಕಳಕಳಿಯಿಂದ ಮಾತನಾಡಿದರು.

ಲೋಕಮಾನ್ಯರು ಈ ಅಧಿವೇಶನದಲ್ಲಿ ಇರದಿದ್ದರೆ, ಜಾತಿವಾರ ಪ್ರಾತಿನಿಧ್ಯವುಳ್ಳ ಈ ಗೊತ್ತುವಳಿಯು ಮಾನ್ಯವೇ ಆಗುತ್ತಿದ್ದಿಲ್ಲ. ಸಂಯುಕ್ತ ಪ್ರಾಂತ ಹಾಗೂ ಬಂಗಾಲಗಳು ವಿರುದ್ಧವಿದ್ದವು. ಹಿಂದೂ ಮಹಾಸಭೆಯು ವಿರುದ್ಧವಿದ್ದಿತು. ಜಿನ್ನಾರವರು ಸರಿಸಮಾನ ಹಕ್ಕುಗಳನ್ನು ಕೇಳುತ್ತಿದ್ದರು. ಲೋಕಮಾನ್ಯರು ರಾಷ್ಟ್ರಹಿತದ ದೂರ ದೃಷ್ಟಿಯಿಂದ ವಿಚಾರಮಾಡಿ, ತಮ್ಮ ಪುಣ್ಯವನ್ನೆಲ್ಲ ವೆಚ್ಚಮಾಡಿ, ಮಾಲವೀಯ ಹಾಗೂ ಜಿನ್ನಾ ಈ ಇಬ್ಬರನ್ನು ಒಪ್ಪಿಸಿ, ಏಕಮುಖವಾದ ಬೇಡಿಕೆಯನ್ನು ಮಂಡಿಸಲು ಹಚ್ಚಿದರು. ಲೋಕಮಾನ್ಯರು ಸಾಧಿಸಿದ ಹಿಂದೂ ಮುಸಲ್ಮಾನರ ಐಕ್ಯವು ಅವರ ಜೀವಮಾನದಲ್ಲಿಯೇ ಮಹತ್ವದ ಸಂಗತಿಯು. ಇದು ಲೋಕಮಾನ್ಯರ ದಿಗ್ವಿಜಯವು. ಲೋಕಮಾನ್ಯರು ಆನಂದಭರಿತರಾಗಿ ಈ ಕಾಂಗ್ರೆಸ್ಸನ್ನು ಕುರಿತು ಕೇಸರಿಯಲ್ಲಿ ಕೆಳಗಿನಂತೆ ಬರೆದಿದ್ದಾರೆ.

“೧೯೧೯ ನೇ ಡಿಸೆಂಬರ ೨೯ ನೇ ದಿನಾಂಕವು ಹಿಂದೀ ರಾಷ್ಟ್ರದ ಬ್ರಿಟಿಶರ ಆಳಿಕೆಯ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡುವದರಲ್ಲಿ ಸಂಶಯವಿಲ್ಲ. ಏಕೆಂದರೆ ನಾವು ಅಂದು ಹಿಂದೀ ಸ್ವರಾಜ್ಯದ ಧ್ವಜವನ್ನು ಗೋಮತಿ ತೀರದಲ್ಲಿ ನಿಲ್ಲಿಸಿದ್ದೇವೆ. ಐತಿಹಾಸಿಕ ಹಿಂದಿನ ಒಂದು ಪ್ರಸಂಗವನ್ನು ಕಾಲ್ಪನಿಕವಾಗಿ, ಅದ್ಭುತ ರಮ್ಯವಾಗಿ ವರ್ಣಿಸುವ ಕವಿಗಳೂ ಕತೆಗಾರರೂ ವರ್ತಮಾನಕಾಲದಲ್ಲಿಯೇ ನಮ್ಮ ಕಣ್ಣೆದುರಿಗೆ ನಡೆದ ರೋಮಾಂಚಕಾರಿಯಾದ ಈ ದಿನದ ಮಹತ್ವವನ್ನು ಅರಿಯಬೇಕು. ೨೯ ನೇ ದಿನಾಂಕದ ಗೊತ್ತುವಳಿಯೆಂದರೆ ಭಾರತೀಯರ ರಾಷ್ಟ್ರೀಯ ಆಕಾಂಕ್ಷೆಗಳ ಮುಕುಟಮಣಿಯು! ಈ ಸಮಾರಂಭಕ್ಕೆ ಸರ್ವ ಪ್ರಜರೂ ತಮ್ಮ ತಮ್ಮ ಕಾಣಿಕೆಗಳೊಡನೆ ಬಂದಿದ್ದರು. ಭಾರತದಲ್ಲಿಯ ಎಲ್ಲ ವರ್ಗಗಳೂ ಉಪಸ್ಥಿತವಿದ್ದವು. ಜಾತಿಭೇಧ, ಮತವೈಚಿತ್ರ್ಯ, ವ್ಯಕ್ತಿದ್ವೇಷ ಮೊದಲಾದ ರಾಷ್ಟ್ರೀಯ ಕಾರ್ಯೋಚ್ಛೇದಕ ಪಿಶಾಚಿಗಳು ಗೋಮತಿಯ ಸ್ನಾನದಿಂದ ಮುಕ್ತಿ ಹೊಂದಿ, ಶುಭ ದೇಹವನ್ನು ಸ್ವೀಕರಿಸಿ, ಮಂಗಲಪ್ರದವಾದ ಆಶೀರ್ವಾದವನ್ನು ಮಾಡಿದವು. ಬ್ರಿಟಿಶ ಇತಿಹಾಸಕಾರರೂ ಇದಕ್ಕಿಂತ ಹೆಚ್ಚಿಗೆ ಏನು ಬರೆಯಬಲ್ಲರು? ನಮ್ಮ ರಾಜಕೀಯ ಹೃದ್ಗತವನ್ನು ಹುಡುಕಲು ಮತ್ತು ಅದಕ್ಕೆ ಯೋಗ್ಯ ಶಬ್ದವನ್ನು ರೂಪಿಸಲು ೨೦-೨೫ ವರ್ಷಗಳು ರಾಷ್ಟ್ರಕ್ಕೆ ಹತ್ತಿರಬಹುದು. ಆದರೆ ಅದು ಪೂರ್ಣವಾಗಿ ಬಿಂಬಿಸಿದೆ. ತನ್ನ ಹೃದ್ಗತವನ್ನು ರಾಷ್ಟ್ರವು ಏಕಮುಖದಿಂದ ಉಚ್ಚರಿಸಿದೆ. ಅದರ ವಿಸ್ಮರಣೆಯಾಗುವದೇ ಶಕ್ಯವಿಲ್ಲ. ಇನ್ನು ಮುಂದೆ ನಡೆಯುವ ರಾಷ್ಟ್ರದ ಕಾರ್ಯಗಳೆಲ್ಲ ಅದರ ಸಿದ್ಧಿಗಾಗಿಯೇ.

ನಾವು ಊರಿದ ಈ ಧ್ವಜವನ್ನು ಯಾರೂ ಕೀಳಲಾರರು! ಸರಕಾರವು ಇಲ್ಲಿಯವರೆಗೆ ಭೇದ ನೀತಿಯಿಂದ ಹಿಂದೂ ಮುಸಲ್ಮಾನರಲ್ಲಿ ಒಡಕು ಹುಟ್ಟಿಸಿತು. ಹಿಂದು ಹಿಂದುಗಳಲ್ಲಿಯೇ ಇಬ್ಬಣ ಮಾಡಿತು. ಸ್ವರಾಜ್ಯವಾದಿಗಳನ್ನು ಹೀಯಾಳಿಸಿತು. ಹಿಂದೂ ಮುಸಲ್ಮಾನರಲ್ಲಿ ವೈರವು ಬಹುಕಾಲದಿಂದ ಇದ್ದರೂ ಅದಕ್ಕಿಂತ ರಾಷ್ಟ್ರೀಯ ಹಾಗೂ ಮಂದಪಕ್ಷಗಳಲ್ಲಿಯ ದ್ವೇಷವು ಅಂತ್ಯತ ಅಸಹ್ಯವಾಗಿದ್ದಿತು. ಆದರೆ ಕಾಲಗತಿಯೇ ಈಗ ಪಲ್ಲಟವಾಗಿದೆ. ಹಿಂದೂ ಮುಸಲ್ಮಾನರಲ್ಲಿ ಎಂದೂ ಇಲ್ಲದ ಐಕ್ಯವು ಉಂಟಾಗಿದೆ.

ಪಕ್ಷಭೇದಗಳು ಮಾಯವಾಗಿ ಬಂಧು ಭಾವಗಳು ತಲೆ ಎತ್ತಿವೆ. ಒಂದೇ ಸಭಾ ಪೀಠದ ಮೇಲೆ ಸರ್ವರೂ ಕೂಡಿ ಸ್ವರಾಜ್ಯದ ಬೇಡಿಕೆಯನ್ನು ಒಮ್ಮುಖದಿಂದ ಮಂಡಿಸುತ್ತಿದ್ದಾರೆ. ಇದರ ಅರ್ಥವು ಇಷ್ಟೆ! ಆಳರಸರ ಕಾಲವು ಇನ್ನು ಮುಗಿಯಿತು. ಎಂದರು

ಲೋಕಮಾನ್ಯರ ಈ ವಿಜಯವನ್ನು ಟಾಯಿಮ್ಸ ಪತ್ರಿಕೆಯು ಒಪ್ಪಿಕೊಂಡಿತು. "ಕಾಂಗ್ರೆಸ್ಸಿನ ಅಧಿವೇಶನವು ಪ್ರಾರಂಭವಾಯಿತು. ಟಿಳಕ ಹಾಗು ಬಿಝಂಟರೇ ಮುಖಂಡರುಳ್ಳ ರಾಷ್ಟ್ರೀಯ ಪಕ್ಷವು ಮಂಡಪದಲ್ಲಿ ಬಹುಮತವನ್ನು ದೊರಕಿಸಿದುದು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಆದುದರಿಂದ ಇನ್ನು ಮುಂದೆ ಸರಕಾರವು ಕಾಂಗ್ರೆಸ್ಸಿನ ಬೇಡಿಕೆಯ ಕಡೆಗೆ ಲಕ್ಷಗೊಟ್ಟು, ಟಿಳಕರಂಥ ಮುಖಂಡರ ಅಭಿಪ್ರಾಯಗಳನ್ನು ಕೇಳಿಕೊಳ್ಳದೆ, ಗತ್ಯಂತರ ವಿಲ್ಲ." ಎಂದು ಬರೆಯಿತು. ಸರಕಾರವೂ ಒಪ್ಪಿಕೊಂಡಿತು. ಇದು ಟಿಳಕರ ದಿಗ್ವಿಜಯವಲ್ಲದೆ ಮತ್ತೇನು?

ಕಾಂಗ್ರೆಸ್ಸು ಮುಗಿದ ಮರುದಿವಸ ಸ್ವರಾಜ್ಯ ಸಂಘದ ಪರಿಷತ್ತು ಬಿಝಂಟಮ್ಮನವರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಸಭೆಯಲ್ಲಿ ಟಿಳಕರು ಭಾಷಣ ಮಾಡುವಾಗ "ಲಖನೌ ಕಾಂಗ್ರೆಸ್ಸು ಎರಡು ಮಹತ್ವದ ಕಾರ್ಯ ಗಳನ್ನು ಸಾಧಿಸಿದೆ. ಸ್ವರಾಜ್ಯದ ಬೇಡಿಕೆ ಹಾಗೂ ಹಿಂದೂ ಮುಸಲ್ಮಾನರ ಐಕ್ಯ, ಇಬ್ಬರೂ ಕೂಡಿ ಸ್ವರಾಜ್ಯದ ಬೇಡಿಕೆಯನ್ನು ಇಟ್ಟಿದ್ದೇವೆ. ಈ ಐಕ್ಯವು ಸ್ವರಾಜ್ಯಕ್ಕೆ ಆವಶ್ಯಕ. ಖಟ್ಲೆಯನ್ನು ಗೆದಿಯಬೇಕೆಂಬ ಪಕ್ಷಗಾರನು ತನ್ನ ಪ್ರಾಪ್ತಿಯ ಬಹುಭಾಗವನ್ನು ವಕೀಲನಿಗೆ ಕೊಡಲು ಒಪ್ಪುವಂತೆ, ಸ್ವರಾಜ್ಯದ ಬೇಡಿಕೆಯಲ್ಲಿ ಮುಸಲ್ಮಾನ ಬಂಧುಗಳು ಬೆರೆಯಬೇಕೆಂಬ ದೃಷ್ಟಿಯಿಂದ ಅವರಿಗೆ ಅಧಿಕಾರ ಹೆಚ್ಚು ಕೊಟ್ಟಿದೆ. ಆದರಿಂದ ಅವರ ಹೊಣೆಯೂ ಹೆಚ್ಚಿದೆ. ಮೂವರಲ್ಲಿ ಯುದ್ಧ ನಡೆದರೆ ಇಬ್ಬರು ಒಂದಾಗದೆ ಮೂರನೆಯವನಿಗೆ ಸೋಲು ಇಲ್ಲ. ಆದುದರಿಂದ ಈ ಸ್ವರಾಜ್ಯದ ಹೋರಾಟದಲ್ಲಿ ನಾವಿಬ್ಬರೂ ಒಂದಾಗಲೇಬೇಕು. ಇದೇ ಅದರ ಗುಟ್ಟು" ಎಂದು ಹೇಳಿದರು.

ಮರುದಿನ ೩೧ ನೇ ಡಿಸೆಂಬರ ದಿನಾಂಕ ಮುಸ್ಲಿಂಲೀಗಿನ ಅಧಿವೇಶನ ವಿದ್ದಿತು. ಟಿಳಕರು ಆಮಂತ್ರಿಸಲ್ಪಟ್ಟಿರು. ಟಿಳಕರ ಉದಾರ ಧೋರಣವು ಮುಸಲ್ಮಾನರ ಅಂತಃಕರಣವನ್ನು ಗೆದ್ದ ಪ್ರತೀಕವಿದು. ಟಿಳಕರಿಗೆ ಪ್ರೇಮದ

ಸ್ವಾಗತವಾಯಿತು. ಗಾಂಧೀಜಿಯವರ ಪರಮ ಮಿತ್ರರಾದ ಡಾ. ಅನ್ಸಾರಿ ಯವರು ಲಖನೌ ಕಾಂಗ್ರೆಸ್ಸಿನಲ್ಲಿ ಸಂಭವಿಸಿದ ಹಿಂದೂ ಮುಸ್ಲಿಂ ಐಕ್ಯದ ಬಗ್ಗೆ ತಮ್ಮ ಗ್ರಂಥದಲ್ಲಿ ಕೆಳಗಿನಂತೆ ಉಲ್ಲೇಖಿಸಿದ್ದಾರೆ.

"ಮುಸಲ್ಮಾನರ ಮನ ಒಲಿಸಿ ಲಖನೌ ಕರಾರಿಗೆ ಒಪ್ಪಿಗೆ ಕೊಡುವಂತೆ ಮಾಡಿದ ಶ್ರೇಯಸ್ಸು ಟಿಳಕರ ಉದಾರ ಧೋರಣಕ್ಕೆಂಬುದರಲ್ಲಿ ಸಂಶಯ ವಿಲ್ಲ. ಈ ಕರಾರು ಇದ್ದ ಗೊತ್ತುವಳಿಯ ಮೇಲೆ ಮಾತನಾಡುವಾಗ ಟಿಳಕರು 'ಎಷ್ಟೋ ಜನರು ಮುಸಲ್ಮಾನರಿಗೆ ಬಹಳ ಕೊಟ್ಟೆನೆಂದು ನನಗೆ ಅನ್ನುತ್ತಾರೆ. ನಾನು ಭಾರತದಲ್ಲಿಯ ಹಿಂದುಗಳ ಮುಖಂಡನೆಂದು ನಾನು ಬಲ್ಲೆ. ಇದನ್ನು ತಿಳಿದ ನಾನೇ ಮುಸಲ್ಮಾನರಿಗೆ ಹೆಚ್ಚು ಕೊಡಲು ಸಾಧ್ಯ ವಾಗಲಿಲ್ಲವೆಂದು ಅನ್ನುತ್ತಿದ್ದೇನೆ. ಇದರಲ್ಲಿಯೇ ಅಲ್ಪ ಸಂಖ್ಯಾಕರಲ್ಲಿ ವಿಶ್ವಾಸ ಉತ್ಪನ್ನ ಮಾಡುವ ರಹಸ್ಯವಿದೆ" ಹಿಂದುಗಳ ಅಧಿಕಾರವನ್ನು ಪ್ರಸ್ಥಾಪಿಸ ಬೇಕೆಂದು ಎಳ್ಳಷ್ಟೂ ಟಿಳಕರ ಅಭಿಪ್ರಾಯವಿದ್ದಿಲ್ಲ. ಎಷ್ಟೋ ಜನರು ಹಾಗೆ ಭಾವಿಸಿರುವರು. ಅದು ತಪ್ಪು. ಹಿಂದುಸ್ತಾನದಲ್ಲಿಯ ಸರ್ವರೂ ಒಂದಾಗಿ ಹೋರಾಡಬೇಕೆಂಬುದೇ ಟಿಳಕರ ಅಭಿಮತವಿದ್ದಿತು."

ಅಂದೇ ಹಿಂದೂ ಮಹಾ ಸಭೆಯೂ ಇದ್ದಿತು. ಅವರ ಆಮಂತ್ರಣದ ಮೇರೆಗೆ, ಟಿಳಕರು ಅಲ್ಲಿಗೂ ಹೋಗಿ ಎಲ್ಲರನ್ನು ಸಮಾಧಾನಪಡಿಸಿದರು. ಅಂದು ಲಖನೌದಲ್ಲಿಯೇ ಉಳಿದರು. ಕಾಂಗ್ರೆಸ್ಸಿನ ಅಧ್ಯಕ್ಷರೂ ಅಧಿಕಾರಿ ಗಳೂ ಮಂದಪಕ್ಷೀಯರೂ ಹಿಂದುಗಳೂ ಮುಸಲ್ಮಾನರೂ ಎಲ್ಲರೂ ಬಂದು ಟಿಳಕರ ನಿರೋಪ ತೆಗೆದುಕೊಂಡರು. ಭಾರತದ ಹಿರಿಯ ಮುಖಂಡರ ಸ್ಥಾನವು ಟಿಳಕರಿಗೆ ಪ್ರಾಪ್ತವಾಯಿತು. ಅಂದಿನಿಂದ ಭಾರತವು ಮುಖಂಡ ರೆಂದರೆ ಟಿಳಕರೇ ಎಂದು ಭಾವಿಸಹತ್ತಿತು.

---

# ಲೋಕಮಾನ್ಯರ ಜೈತ್ರಯಾತ್ರೆ

ಲಖನೌ ಕಾಂಗ್ರೆಸ್ಸಿನಿಂದಲೇ ಲೋಕಮಾನ್ಯರ ಜೈತ್ರಯಾತ್ರೆಯು ಪ್ರಾರಂಭವಾಯಿತು. ಟಿಳಕರ ಪ್ರಕೃತಿಯು ನೆಟ್ಟಗಿರದಿದ್ದರೂ ಸ್ವರಾಜ್ಯದ ಸಂದೇಶವನ್ನು ದೇಶದ ಮೂಲೆಮೂಲೆಗೆ ಮುಟ್ಟಿಸುವದಕ್ಕಾಗಿ ಬಿರುಗಾಳಿಯಂತೆ ಪ್ರಚಂಡವಾದ ಪ್ರವಾಸವನ್ನು ಕೈಕೊಂಡರು. ಕಾನಪೂರ, ಕಲಕತ್ತಾ, ನಾಗಪೂರ, ಉಮರಾವತಿ, ಯಾವತಮಾಳ, ಕಾರಂಜಾ ಮೊದಲಾದ ನೂರಾರು ಸ್ಥಳಗಳನ್ನು ಸಂದರ್ಶಿಸಿದರು. ಎಲ್ಲೆಡೆಗೂ ಅಪೂರ್ವವಾದ ಸ್ವಾಗತವಾಯಿತು. ಟಿಳಕರ ಮಾತುಗಳನ್ನು ಕೇಳಲು ಜನರು ಹಗಲು ರಾತ್ರಿಗಳೆನ್ನದೆ, ಹಸಿವೆ, ನೀರಡಿಕೆಗಳ ಪರಿವೆಯಿಲ್ಲದೆ ದಾರಿಯುದ್ದಕೂ, ಕಾದುಕೊಂಡಿರುತ್ತಿದ್ದರು. ಟಿಳಕರು ೧೨೫ ಮೈಲುಗಳ ಪ್ರವಾಸವನ್ನು ಒಂದೇ ದಿವಸದಲ್ಲಿ ಮುಗಿಸಿದರು. ವರ್ಹಾಡದ ಈ ಸುಪ್ರಸಿದ್ಧ ಪ್ರವಾಸದಲ್ಲಿಯೇ 'ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು. ಅದನ್ನು ದೊರಕಿಸಿಯೇ ತಿರುವೆನೆಂಬ' ಮಹಾಮಂತ್ರವನ್ನು ಉಚ್ಚರಿಸಿದರು.

ಚಳವಳಿಗೆ ಕಾವು ಏರಿ ಏರಿದಂತೆ ಸ್ವರಾಜ್ಯದ ವ್ಯಾಖ್ಯೆಯೂ ಹಿಗ್ಗಹತ್ತಿತು. ಕಾನಪೂರದ ಪ್ರಚಂಡ ಸಭೆಯಲ್ಲಿ ಮಾತನಾಡುವಾಗ ಟಿಳಕರು "ನಾವು ಸಾಮ್ರಾಜ್ಯದಲ್ಲಿ ಚಿಕ್ಕ ಹುಡುಗರು ಎಂದು ಇರಲು ಸಿಕ್ಕರೂ ನಮಗೆ ಸಾಮ್ರಾಜ್ಯವು ಬೇಕು. ಆದರೆ ಅದರ ಆಳುಮಕ್ಕಳೆಂದು ಇರುವದು ಮಾತ್ರ ನಮಗೆ ಬೇಡವಾಗಿದೆ. ಕುರಿ ಹಿಂಡಿನಲ್ಲಿರುವ ಹುಲಿಯಮರಿಗೆ ನೀರಿನಲ್ಲಿ ತನ್ನ ಸ್ವರೂಪ ಕಂಡಂತೆ ನಮಗೂ ನಮ್ಮ ಶಕ್ತಿಯು ಅರಿವಾಗಿದೆ. ಏಶಿಯಾ ಖಂಡದಲ್ಲಿರುವ ಜಪಾನಿಗಳು ಸ್ವರಾಜ್ಯವನ್ನು ಸಂಪಾದಿಸಿರುವಾಗ ನಮಗೇಕೆ ಬೇಡ? ಯಾರಿಗೆ ಏನೂ ಮಾಡಲು ಶಕ್ಯವಿಲ್ಲವೋ ಅವರು ಕೊನೆಗೆ ಸ್ವರಾಜ್ಯಕ್ಕಾಗಿ ಪ್ರಾರ್ಥನೆಯನ್ನಾದರೂ ಮಾಡಿರಿ" ಎಂದು ಬಿನ್ನವಿಸಿದರು ಹೀಗೆ ಟಿಳಕರ ಉಪನ್ಯಾಸಗಳು ಹೊಸ ರೀತಿ, ಹೊಸ ಉಪಮೆಗಳಿಂದ ವಿಲಕ್ಷಣ ಪರಿಣಾಮಗಳನ್ನುಂಟು ಮಾಡಹತ್ತಿದವು. ಲೋಕಮಾನ್ಯರು

ಪುಣೆಗೆ ಬಂದರು. ೨೮ನೇ ಜನವರಿಯ ದಿನ ಟಿಳಕರ ವಾಡೆಯಲ್ಲಿ ಸ್ವರಾಜ್ಯ ಸಂಘದ ಸಭೆ ಜರುಗಿ, ಇಂಗ್ಲಂಡದಲ್ಲಿ ಚಳವಳಿಯನ್ನು ಮಾಡಲು ಶಿಷ್ಟ ಮಂಡಳ ಕಳಿಸಬೇಕೆಂದೂ ಅದಕ್ಕಾಗಿ ನಿಧಿ ಕೂಡಿಸಬೇಕೆಂದೂ ನಿರ್ಣಯ ವಾಯಿತು.

## ಸೈನ್ಯ ಭರತಿಯ ಉಪದೇಶ

ಯುದ್ಧ ಪ್ರಾರಂಭದಿಂದಲೂ ಟಿಳಕರು ಜನತೆಯು ಯುದ್ಧಕ್ಕೆ ಸಹಾಯ ಮಾಡಬೇಕೆಂತಲೂ ಸೈನ್ಯದಲ್ಲಿ ಸೇರಬೇಕೆಂತಲೂ ಉಪದೇಶಿಸು ತ್ತಿದ್ದರಷ್ಟೇ! ಆದರೆ ವ್ಹಾಯಿಸ್‌ರಾಯರಾಗಿದ್ದ ಚೇಮ್ಸಫೋರ್ಡರಿಗೆ ಸುಶಿಕ್ಷಿತ ಭಾರತೀಯರು ಸೈನ್ಯದಲ್ಲಿ ಬಹುಜನರು ಸೇರುವದು ಇಷ್ಟವಿರಲಿಲ್ಲ. ಆದುದರಿಂದ ಅವರು ಕಣ್ಣುಮುಚ್ಚಾಲೆಯ ಆಟವನ್ನು ನಡೆಸಿದ್ದರು. ಇದನ್ನು ಟಿಳಕರು ನಿರೀಕ್ಷಿಸುತ್ತಲೇ ಇದ್ದರು. ಲಾಯಿಡ ಜಾರ್ಜರ ಒತ್ತಾಯದಿಂದ ಇಲ್ಲಿ ಕಾರ್ಯ ನಡೆದಿತ್ತು. ಸರಕಾರವು ೬ ಸಾವಿರ ಸೈನಿಕರು ಬೇಕೆಂದು ಕೇಳಿತು. ಸರಕಾರದ ಹೃದ್ಗತವನ್ನು ಬಲ್ಲ ಟಿಳಕರು, ನೀವು ಭಾರತೀಯರನ್ನು ವಿಶ್ವಾಸದಿಂದ ನೋಡಿದರೆ ೬ ಸಾವಿರ ಏಕೆ? ೬ ಲಕ್ಷ ಜನರನ್ನೂ ಪೂರೈಸುವೆವೆಂದು ಘೋಷಿಸಿದರು. ವಿಶ್ವಾಸದಿಂದ ನೋಡದಿದ್ದರೆ ಮಾತ್ರ ಸೈನೀಕರಣವು ಕುಂಠಿತವಾಗುವದೆಂದು ಸರಕಾರಕ್ಕೆ ಎಚ್ಚರಿಸಿದರು. ತಾವೂ ಸಂಚಾರ ಕೈಕೊಂಡು ಅಖಂಡ ಪ್ರಚಾರ ನಡೆಸಿದರು. ಫೆಬ್ರುವರಿ ೧೭ ನೇ ತಾರೀಖಿನ ದಿವಸ ಪುಣೆಯಲ್ಲಿ ನಡೆದ ಜಾಹೀರ ಸಭೆಯಲ್ಲಿ ಟಿಳಕರು "ನಾಳೆ ೨೧ ನೇ ತಾರೀಖಿನ ದಿವಸ ಸರಕಾರವು ಹಿಂದೀಯರಿಗೆ ಸ್ವಯಂ ಸೈನಿಕರಲ್ಲಿ ಸೇರಲು ಅಧಿಕಾರ ಕೊಡುತ್ತಿದೆ. ಕಮಿಶನ್ ಸಿಗಲಿ, ಬಿಡಲಿ, ಭಾರತೀಯ ತರುಣರು ಈ ಸಂಧಿಯನ್ನು ವ್ಯರ್ಥ ಹೋಗಗೊಡಬಾರದು. ಸ್ವರಾಜ್ಯದ ಬೇಡಿಕೆಯನ್ನು ಮಂಡಿಸುವ ನಾವು, ದೇಶ ರಕ್ಷಣೆಗಾಗಿ ಸೈನಿಕ ಶಿಕ್ಷಣವನ್ನು ಪಡೆದು, ಅದರ ಹೊಣೆಯನ್ನು ಹೊರಲು ಸಿದ್ಧರಾಗಬೇಕು. ಆ ಹಕ್ಕನ್ನು ನಾವು ಪಡೆಯಲೇ ಬೇಕು. ನಮ್ಮನ್ನು ನಿಶ್ಶಸ್ತ್ರರನ್ನಾಗಿ ಮಾಡಿದ ಸರಕಾರವು ತನ್ನ ಧೋರಣವನ್ನು ಬದಲಿಸಿ, ಪುನಃ ನಮಗೆ ಸೈನಿಕ ಶಿಕ್ಷಣ ಕೊಡಲು ಸಿದ್ಧವಾಗಿದೆ. ಆದ್ದರಿಂದ ಮನದಲ್ಲಿ ಯಾವ ಶಂಕೆಗಳನ್ನು

ತರದೆ, ಮಾತೃಭೂಮಿಯ ಸಂರಕ್ಷಣೆಗಾಗಿ 'ಸೈನಿಕ ಶಿಕ್ಷಣ ಪಡೆಯುವದು ನಮ್ಮ ಪವಿತ್ರ ಕರ್ತವ್ಯವಾಗಿದೆ" ಎಂದು ಜನರನ್ನು ಹುರಿದುಂಬಿಸಿದರು.

ಟಿಳಕರು ಹೀಗೆ ಜನರನ್ನು ಸೈನ್ಯದಲ್ಲಿ ಸೇರಲು ಪ್ರೇರಿಸುತ್ತಿದ್ದರೂ ಸರಕಾರವು ಮಾತ್ರ ಅವರನ್ನು ಪ್ರತಿಬಂಧಿಸಹತ್ತಿತ್ತು. ಡಿಫೆನ್ಸ ಆಫ್ ಇಂಡಿಯಾ ಆಕ್ಟಿನಂತೆ ಟಿಳಕರು ಪಂಜಾಬದಲ್ಲಿ ಕಾಲಿಡಕೂಡದೆಂದು ಹುಕುಮನ್ನು ಹೊರಡಿಸಿತು. ದಿಲ್ಲಿ ಪ್ರಾಂತವೂ ಅದೇ ಕಿತ್ತೆಯನ್ನೇ ತೀಡಿತು. ಇದರಂತೆಯೇ ಅನಿಬಿರೆಝಂಟರು ಮುಂಬಯಿ ಪ್ರಾಂತ, ಪಂಜಾಬ ಪ್ರಾಂತಗಳಲ್ಲಿ ಸಂಚರಿಸಕೂಡದೆಂದು ನಿರ್ಬಂಧಿಸಿತ್ತು. ಆದರೆ ಟಿಳಕರು ಮಾತ್ರ ತಮ್ಮ ಕಾರ್ಯವನ್ನು ಬಿಡಲಿಲ್ಲ. ಮೇ ೨ ನೇ ತಾರೀಖಿನ ದಿವಸ ಮುಂಬಯಿಯಲ್ಲಿ ಪ್ರಚಂಡ ಸಭೆ ಜರುಗಿತು. ಅದರ ಅಧ್ಯಕ್ಷಸ್ಥಾನದಿಂದ ಟಿಳಕರು 'ನಮಗೆ ಸಿಕ್ಕ ಅಲ್ಪ ಸ್ವಲ್ಪ ಅವಕಾಶವನ್ನು ನಾವು ವ್ಯರ್ಥ ಕಳೆಯಬಾರದು. ಸೈನ್ಯದಲ್ಲಿ ಕಷ್ಟಪಡಬೇಕಾಗುವದು. ಆದರೆ ಸೈನಿಕ ಶಿಕ್ಷಣ ಪಡೆದ ಜನರು ರಾಷ್ಟ್ರದಲ್ಲಿ ಬಾಳಹತ್ತಿದರೆ, ಅದರ ಪರಿಣಾಮವು ಸರಕಾರದ ಮೇಲೆ ಆಗದೆ ಹೋಗುವದಿಲ್ಲ. ಹೋಮರೂಲ ಹಾಗೂ ಸೈನ್ಯದಲ್ಲಿಯ ದೊಡ್ಡ ದೊಡ್ಡ ಹುದ್ದೆಗಳು ಮುಂದಾದರೂ ನಿಮಗೆ ಸಿಗಬೇಕೆಂದು ನೀವು ಅಪೇಕ್ಷಿಸುತ್ತಿದ್ದರೆ, ಇಂದೇ ಸೈನ್ಯದಲ್ಲಿ ಸೇರಿರಿ. ನಾನು ಒಬ್ಬ ಮಗನನ್ನು ಕಳಿಸಲು ಸಿದ್ಧನಿರುವೆ. ಬಿಳಿಯ ಕೂದಲಿನ ನನ್ನಂಥ ಮುದುಕನನ್ನು ಸೈನ್ಯದಲ್ಲಿ ತೆಗೆದುಕೊಳ್ಳುತ್ತಿದ್ದರೆ, ನಾನು ನನ್ನ ಕರ್ತವ್ಯವನ್ನು ಮಾಡಲು ಸಿದ್ಧನಿರುವೆ" ಎಂದರು. ಟಿಳಕರ ಬಾಯಿಂದ ಈ ಮಾತು ಹೊರಬೀಳುವದೇ ತಡ, ೮೦೦ ಜನ ಯುವಕರು ಸೈನ್ಯದಲ್ಲಿ ಸೇರಲು ಸಿದ್ಧರಾದರು. ಈ ಪ್ರಸಂಗದಲ್ಲಿಯೇ ಮುಂದಿನ ಎರಡು ಘಟನೆಗಳನ್ನು ಇಲ್ಲಿ ಹೇಳಿಬಿಡುತ್ತೇವೆ ೧೯೧೮ ನೇ ಇಸ್ವಿಯಲ್ಲಿ ದಿಲ್ಲಿಯಲ್ಲಿ ಯುದ್ಧಪರಿಷತ್ತು ಕೂಡಿತ್ತು. ರಾಷ್ಟ್ರದೊಳಗಿನ ಗಾಂಧಿ ಮೊದಲಾದ ಎಲ್ಲ ಮುಖಂಡರಿಗೆ ಆಮಂತ್ರಣವಿದ್ದರೂ ಟಿಳಕರಿಗೆ ಮಾತ್ರ ಇರಲಿಲ್ಲ. ಮುಂದೆ ಮುಂಬಯಿ ಗವ್ಹರ್ನರರು ಇಂತಹ ಪರಿಷತ್ತನ್ನು ಕೂಡಿಸಿದರು. ಅವರು ಟಿಳಕರಿಗೂ ಆಮಂತ್ರಣ ಕೊಟ್ಟಿದ್ದರು. ಸರಕಾರದ ಸೈನಿಕ ಧೋರಣಕ್ಕೆ ಟಿಳಕರು ಬೆಂಬಲ ಕೊಟ್ಟರು. ಆದರೆ ತಮ್ಮ ಬೆಂಬಲವನ್ನು ಕೊಡುವಾಗ ಅವರು "ಸ್ವರಾಜ್ಯವನ್ನು ಕೊಡುವ

ಆಶ್ವಾಸನವನ್ನು ಸರಕಾರವು ಕೊಟ್ಟರೆ ಬಹು ಜನರು ಒಳ್ಳೇ ಹುರುಪಿನಿಂದ ಸೈನ್ಯದಲ್ಲಿ ಸೇರುವರು" ಎಂದು ಹೇಳಿದರು. ಸ್ವರಾಜ್ಯ ಶಬ್ದವು ಕಿವಿಗೆ ಬಿದ್ದೊಡನೆಯೇ ಲಾರ್ಡ ವಿಲಿಂಗ್ಡನ್ನರು ಬೆದರಿ, ಟಿಳಕರಿಗೆ ಕುಳಿತುಕೊಳ್ಳಲು ಹೇಳಿದರು. ಆದರೆ ಟಿಳಕರು ಈ ಅಪಮಾನವನ್ನು ಸಹಿಸುವದು ಶಕ್ಯವೇ ಇದ್ದಿಲ್ಲ ಅವರು ಗಂಭೀರವಾಗಿ 'ಈ ಸಭೆಯಲ್ಲಿ ನನ್ನ ಮತವನ್ನು ಸ್ಪಷ್ಟ ಗೊಳಿಸಲು ಅವಕಾಶ ಕೊಡದಿದ್ದರೆ, ನಾನು ಈ ಸಭೆಯನ್ನು ಬಿಟ್ಟು ಎದ್ದು ಹೋಗದೆ ನನಗೆ ಬೇರೆ ಮಾರ್ಗವೇ ಇಲ್ಲ' ಎಂದು ಸ್ಪಷ್ಟವಾಗಿ ಹೇಳಿ ಎದ್ದೇ ಬಿಟ್ಟರು. ಅವರು ಎದ್ದೊಡನೆ ಗಾಂಧೀಜಿ, ಹಾರ್ನಿಮನ್, ಬಮನಜಿ, ಜಮ್ನಾದಾಸ ದ್ವಾರಕಾದಾಸ, ತಾತ್ಯಾಸಾಹೇಬ ಮೊದಲಾದವರೂ ಸಭಾತ್ಯಾಗ ಮಾಡಿದರು.

ಈ ಬಗ್ಗೆ ಗಂಗಾಧರರಾವ ದೇಶಪಾಂಡೆಯವರು ಒಂದು ಮನೋರಂಜಕ ಸಂಗತಿಯನ್ನು ಉಲ್ಲೇಖಿಸಿದ್ದಾರೆ. "ಈ ಪರಿಷತ್ತಿನ ಮೊದಲನೆಯ ದಿವಸ ಟಿಳಕರು ಗಾಂಧೀಜಿಯವರನ್ನು ಕರೆದಿದ್ದರು. ತಾವು ಮರುದಿವಸ ಏನು ಮಾತಾಡುವದಿದೆ ಎಂಬುದನ್ನು ಗಾಂಧೀಜಿಯವರಿಗೆ ತೋರಿಸಿದರು. ಇದಕ್ಕೆ ತಮ್ಮ ಬೆಂಬಲವಿದೆಯೋ ಎಂದು ಕೇಳಿದರು. ತಮ್ಮ ಭಾಷಣದಲ್ಲಿ ಯುದ್ಧಾನಂತರ ಸರಕಾರವು ಸ್ವರಾಜ್ಯದ ಘೋಷಣೆಯನ್ನು ಮಾಡಬೇಕೆಂದು ಟಿಳಕರು ಬರೆದಿದ್ದರು. ಯಾವ ಕರಾರುಗಳೂ ಇಲ್ಲದೆ ಸಹಾಯ ಮಾಡಬೇಕೆಂದು ಗಾಂಧೀಜಿಯವರ ಅಭಿಪ್ರಾಯವಿದ್ದಿತು. ಇಬ್ಬರಲ್ಲಿಯೂ ಮತೈಕ್ಯ ವಾಗಲಿಲ್ಲ. ಗಾಂಧೀಜಿ ಹೊರಟರು. ಅವರನ್ನು ಕಳಿಸಲು ಟಿಳಕರು ಬಾಗಿಲ ವರೆಗೆ ಬಂದರು. ಗಾಂಧೀಜಿಯವರ ಹೆಗಲ ಮೇಲೆ ಟಿಳಕರು ಕೈಯಿಟ್ಟಿದ್ದರು. 'ದಾರಿಯಲ್ಲಿ ನನಗೆ ಬೆಂಬಲ ಕೊಡಲು ನಾನು ನಿಮ್ಮನ್ನು ಒತ್ತಾಯಪಡಿಸುವದಿಲ್ಲ. ಆದರೆ ನಾನು ತಿಂದಷ್ಟು ಪೆಟ್ಟುಗಳನ್ನು ನೀವೂ ತಿಂದರೆ, ಒಮ್ಮೆ ಈ ಆಳರಸರ ಗುಟ್ಟು ನಿಮಗೆ ತಿಳಿದರೆ, ಖಂಡಿತವಾಗಿ ನೀವೂ ನನ್ನ ಹಾದಿಗೇ ಬರುವಿರಿ ಎಂಬುದರಲ್ಲಿ ಸಂಶಯವಿಲ್ಲ" ಎಂದರು. ಆಗ ಗಾಂಧೀಜಿ ಯವರು ತಿರುಗಿ ನೋಡಿ "ಟಿಳಕ ಮಹಾರಾಜ ನಿಮ್ಮೊಡನೆ ನನ್ನ ಸಹಮತ ವಾಗದ್ದಕ್ಕಾಗಿ ವಿಷಾದವಾಗುತ್ತದೆ. ಆದರೆ ನಾಳಿನ ಸಭೆಯಲ್ಲಿ ಮಾತನಾಡ

ಬಾರದೆಂದು ನಿರ್ಧರಿಸಿದ್ದೇನೆ" ಎಂದು ಹೇಳಿದರು. ಅದರಂತೆ ಮನೆಗೆ ಹೋದ ಕೂಡಲೇ ಗವ್ಹರ್ನರರಿಗೆ ತಿಳಿಸಿದರು.

ಟಿಳಕರಿಗೆ ಆದ ಈ ಅಪಮಾನದ ನಿಷೇಧಕ್ಕಾಗಿ ಮುಂಬಯಿಯಲ್ಲಿ ೧೬ನೇ ಜೂನಕ್ಕೆ ಸಾರ್ವಜನಿಕ ಸಭೆ ಜರುಗಿತು. ಗಾಂಧೀಜಿಯವರು ಅಧ್ಯಕ್ಷರಿದ್ದರು. ಲಾರ್ಡ ವಿಲಿಂಗ್ಡನ್ನರ ಕೃತಿಯನ್ನು ಅತ್ಯಂತ ಕಟುಶಬ್ದ ಗಳಿಂದ ನಿಷೇಧಿಸಿದರು. ಕೇಳಕರ, ಜಿನ್ನಾ, ಹಾರ್ನಿಮನ್ ಮೊದಲಾದವರ ಭಾಷಣಗಳಾದವು. ಎಲ್ಲರೂ ಸರಕಾರದ ಕೃತಿಯನ್ನು ನಿಷೇಧಿಸಿ, ಸರಕಾರಕ್ಕೆ ಜನತೆಯ ಸಹಕಾರವು ಬೇಡವಾಗಿದೆ ಎಂದು ಘೋಷಿಸಿದರು. ಲೋಕಮಾನ್ಯರ ಭಾಷಣವು ಅತ್ಯಂತ ಪರಿಣಾಮಕಾರಿಯಾಯಿತು. "ಸರಕಾರವು ನಮ್ಮ ಪ್ರಾಮಾಣಿಕತೆಯ ಬಗ್ಗೆ ಶಂಕೆ ತಾಳಿದೆ. ಆದರೆ ಸರಕಾರವು ಸ್ವತಃ ಪ್ರಾಮಾಣಿಕವಿರುವುದೇ? ಅದರ ಅಪ್ರಾಮಾಣಿಕತನ ವನ್ನು ಸಿದ್ಧಗೊಳಿಸಲು ನನ್ನಲ್ಲಿ ಸಾಕಷ್ಟು ಆಧಾರಗಳಿವೆ. ತಾವೇ ಹಗ್ಗ ಕೊಟ್ಟು ತಮ್ಮ ಕುತ್ತಿಗೆಗೆ ಉರುಲನ್ನು ಯಾರಾದರೂ ಹಾಕಿಸಿಕೊಳ್ಳುವರೇ? ಎಂದು ನಾನು ಅವರನ್ನು ವಿಚಾರಿಸುತ್ತೇನೆ. ಸರಕಾರವು ನಮ್ಮ ತರುಣರಿಗೆ ಕಮಿಶನ್ ಮತ್ತು ದೊಡ್ಡ ಅಧಿಕಾರದ ಸ್ಥಳಗಳನ್ನು ಕೊಡಲು ಸಿದ್ಧವಿದ್ದರೆ, ನಾನು ಅವರಿಗೆ ೫ ಸಾವಿರ ತರುಣರನ್ನು ಪೂರೈಸುವೆನು. ಇಷ್ಟು ಜನರನ್ನು ಪೂರೈಸುವದು ನನ್ನಿಂದ ಆಗದಿದ್ದರೆ ಕಡಿಮೆ ಬಿದ್ದಷ್ಟು ಜನಕ್ಕೆ ಪ್ರತಿಯೊಬ ರಿಗೆ ೧೦೦ ರೂಪಾಯಿಗಳಂತೆ ತಪ್ಪುದಂಡ ತೆತ್ತುವೆನು. ನನ್ನ ವಚನವ ಸತ್ಯತೆಗಾಗಿ ಗಾಂಧೀಜಿಯವರ ಕಡೆಗೆ ೫೦೦೦೦ ರೂಪಾಯಿಗಳ ಚೆಕ್ಕನ್ನು ಕಳಿಸುವೆ" ಎಂದರು. ಮರುದಿನ ಅದರಂತೆಯೇ ಚೆಕ್ಕನ್ನು ಕಳಿಸಿಕೊಟ್ಟರು. ಟಿಳಕರ ಈ ಆಶ್ವಾಸನವನ್ನು ಕೇಳಿ ಸರಕಾರವು ಚಕಿತವಾಯಿತು. ಆದರೆ ಟಿಳಕರ ಸಹಕಾರವನ್ನು ಮಾತ್ರ ಸರಕಾರವು ಸ್ವೀಕರಿಸಲಿಲ್ಲ.

---

## ಲೋಕಮಾನ್ಯರೂ ಕರ್ನಾಟಕವೂ

ಲೋಕಮಾನ್ಯರು ೧೯೧೭ರ ಎಪ್ರಿಲ್ ತಿಂಗಳಲ್ಲಿ ಕರ್ನಾಟಕದ ಸಂಚಾರವನ್ನು ಕೈಕೊಂಡರು. ಕರ್ನಾಟಕವು ಲೋಕಮಾನ್ಯರಿಗೆ ಅಪೂರ್ವ ವಾದ ಸ್ವಾಗತವನ್ನಿತ್ತಿತು. ಕರ್ನಾಟಕದ ರಾಜಕೀಯ ಜೀವನವು ಲೋಕಮಾನ್ಯರಿಂದಲೇ ಒಂದು ಬಗೆಯಿಂದ ಪ್ರಾರಂಭವಾಯಿತೆಂದು ಹೇಳಬಹುದು. ಅದರ ಸಿಂಹಾವಲೋಕನವನ್ನು ಇಲ್ಲಿ ಮಾಡುವದು ಅಪ್ರಸ್ತುತವಾಗಲಾರದು

೧೮೫೭ರ ಬಂಡಾಯದಿಂದಲೇ ಕರ್ನಾಟಕದಲ್ಲಿ ರಾಷ್ಟ್ರೀಯತ್ವದ ಬೀಜಗಳು ಬಿತ್ತಲ್ಪಟ್ಟವು. ಲಾರ್ಡ ಲಿಟನ್ನನ ದುರ್ದಮನೀಯವಾದ ದಬ್ಬಾಳಿಕೆಯ ನಿಷೇದಾರ್ಥವಾಗಿ ರಾಷ್ಟ್ರದಲ್ಲಿ ಉಂಟಾದ ಬಹಿಷ್ಕಾರ ಚಳವಳಿಯಲ್ಲಿಯೇ ೧೮೭೭ರಲ್ಲಿ ಧಾರವಾಡ ವ್ಯಾಪಾರೋತ್ತೇಜಕ ಕಂಪನಿಯು ಹೊರಟಿದೆ ಎಂಬುದು ಕನ್ನಡಿಗರಿಗೆ ಹೆಮ್ಮೆಯ ಮಾತಾಗಿದೆ. ಮಹಾರಾಷ್ಟ್ರ, ಕರ್ನಾಟಕಗಳಲ್ಲಿ ಒಂದೇ ರಕ್ತ ಹರಿಯುತ್ತಿದೆ ಎಂದು ಲೋಕಮಾನ್ಯರು ಹೇಳುತ್ತಿದ್ದುದು ಯತಾರ್ಥವಾಗಿದೆ. ೧೮೮೦ರಲ್ಲಿ ಅಗರಕರ, ಟಿಳಕ, ಚಿಪಳೂಣಕರ ಮೊದಲಾದ ಪ್ರಭೃತಿಗಳಿಂದ ಪುಣೆಯಲ್ಲಿ 'ನ್ಯೂ ಇಂಗ್ಲೀಷ ಸ್ಕೂಲ'ವೆಂಬ ಸಂಸ್ಥೆಯು ಪ್ರಾರಂಭಿಸಲ್ಪಟ್ಟಿತು. ಧಾರವಾಡ ದಲ್ಲಿಯೂ ಮುಂದೆ ಒಂದೆರಡು ವರ್ಷಗಳಲ್ಲಿಯೇ ನ್ಯೂ ಇಂಗ್ಲೀಷ ಸ್ಕೂಲ ವೆಂಬ ಸಂಸ್ಥೆಯು ಹೊರಟಿತು. ಅದೇ ಈಗ ವಿದ್ಯಾರಣ್ಯ ಹಾಯಸ್ಕೂಲ ಎಂಬ ಹೆಸರಿನಿಂದ ನಡೆಯುತ್ತಲಿದೆ. ವಿಜಾಪೂರದಲ್ಲಿ ಸದರ್ನ ಮರಾಠಾ ಹೈಸ್ಕೂಲು ಹೊರಟಿತು. ಧಾರವಾಡದಲ್ಲಿಯೂ ಕೇಸರಿಯ ಮರಿಯಾದ 'ಧಾವಾ' ಎಂಬ ಪತ್ರಿಕೆಯು ಹೊರಟಿತು. ಭಾರತದ ರಾಜಕೀಯ ಜೀವನ ವನ್ನು ರೂಪಗೊಳಿಸಿದ ಕಾಂಗ್ರೆಸ್ಸಿನ ಪ್ರತಿಷ್ಠಾಪಕರಲ್ಲಿ ಕಾರವಾರದ ದಿವಂಗತ ಚಂದಾವರಕರರೂ ಒಬ್ಬರೆಂಬುದು ನಮಗೆ ಅಭಿಮಾನದ ಸಂಗತಿಯು. ಮುಂಬಯಿಯಲ್ಲಿ ಸೇರಿದ ಮೊದಲನೇ ಕಾಂಗ್ರೆಸ್ಸಿಗೆ ಬಳ್ಳಾರಿಯ ಸುಪ್ರಸಿದ್ಧ ವಕೀಲರಾದ ದಿ. ಕೋಲಾಚಲಂ ವೆಂಕಟರಾಯರು

# ಲೋಕಮಾನ್ಯ ಟಿಳಕರ ಕಾಲದ ಈಗಿರುವ ಕರ್ನಾಟಕದ ಮುಖಂಡರು



೧. ಶ್ರೀ ಆಲೂರ ವೆಂಕಟರಾಯರು.



೨. ಶ್ರೀ ಗಂಗಾಧರರಾವ ದೇಶಪಾಂಡೆ.



೩. ಶ್ರೀ ದತ್ತಾತ್ರಯ ವೆಂಕಟೇಶ ಬೆಳವಿ.

ಪ್ರತಿನಿಧಿಗಳಾಗಿದ್ದರು. ಕಾಂಗ್ರೆಸ್ಸಿನ ಜನಕರಾದ ಸರ್ ಎ. ಓ. ಹ್ಯೂಮರು ಧಾರವಾಡ, ಬೆಳಗಾವಿಗಳಿಗೆ ೧೮೯೩ರಲ್ಲಿ ದರ್ಶನವಿತ್ತು, ಕಾಂಗ್ರೆಸ್ಸಿನ ಬಗ್ಗೆ ಭಕ್ತಿವಿಶ್ವಾಸಗಳು ಉಂಟಾಗುವಂತೆ ಮಾಡಿದರು.

೧೮೯೫ ರಲ್ಲಿ ಬೆಳಗಾವಿಯಲ್ಲಿ ದಿನಶಾ ವಾಚ್ಛಾರವರ ಅಧ್ಯಕ್ಷತೆಯಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತು ಕೂಡಿತ್ತು. ಶ್ರೀ ವಿಷ್ಣುಪಂತ ನಾತುರೆಂಬು ವವರು ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀಪಾದರಾವ ಛತ್ರೆ, ಸದಾಶಿವರಾವ ಭಾಟೆ, ನಾತು ಮೊದಲಾದವರು ಕಾಂಗ್ರೆಸ್ಸಿನ ಮುಖಂಡರಾಗಿದ್ದರು. ಇದೇ ಸುಮಾರಿಗೆ ಮಹಾರಾಷ್ಟ್ರದಲ್ಲಿ ಲೋಕಮಾನ್ಯರು ಗೋರಕ್ಷಣ ಚಳವಳಿ ಯನ್ನು ಪ್ರಾರಂಭಿಸಿದರು. ಧಾರವಾಡದಲ್ಲಿ ಶ್ರೀ ಗುರೂಜಿಯವರು ಗೋಶಾಲೆ ಯನ್ನು ತೆರೆದರು. ಹುಬ್ಬಳ್ಳಿ, ಬಾಗಲಕೋಟೆ, ಗದಗ ಮೊದಲಾದ ಕಡೆಯ ಲ್ಲೆಲ್ಲ ಗೋಶಾಲೆಗಳು ಪ್ರಾರಂಭವಾದವು. ತರುಣರಾದ ಮುದವೀಡು ಕೃಷ್ಣರಾಯರೂ ಹೊಸಕೇರಿ ಅಣ್ಣಾಚಾರ್ಯರೂ ಶಿವರಾಮಪಂತ ಖಾನೋಳಕರರೂ ಈ ಚಳವಳಿಯಲ್ಲಿ ಗುರೂಜಿಯವರಿಗೆ ನೆರವಾಗುತ್ತಿದ್ದರು. ಟಿಳಕರು ಶಿವಾಜಿ ಹಾಗೂ ಗಣಪತಿ ಉತ್ಸವಗಳನ್ನು ಪ್ರಾರಂಭ ಮಾಡಿದ ಕೂಡಲೇ ಕರ್ನಾಟಕದಲ್ಲಿ ಬೆಳಗಾವಿ, ಕಿತ್ತೂರ, ಧಾರವಾಡ, ಹುಬ್ಬಳ್ಳಿ, ಗದಗ, ಬಾಗಲಕೋಟೆ, ವಿಜಾಪೂರ, ಗುಳೇದಗುಡ್ಡ, ನರಗುಂದಗಳಲ್ಲಿ ಈ ಉತ್ಸವಗಳು ಪ್ರಾರಂಭವಾದವು. ವಿದ್ಯಾರ್ಥಿಗಳಾದ ಆಲೂರ ವೆಂಕಟ ರಾಯರು ಈ ಸಂದರ್ಭದಲ್ಲಿಯೇ ಮುಂದೆ ಬಂದರು. ಲಕ್ಷ್ಮಣ ಘಟಿಕಾರ ರೆಂಬುವವರು 'ಗಜಾನನ ಸ್ತವನ' ಎಂಬ ಕವನಗಳನ್ನು ಕಟ್ಟಿದರು. ಕಿತ್ತೂರ ನಾಡಿಗೆ ಪ್ರಸಿದ್ಧರಾದ ಕಾವ್ಯಾನಂದರು (ನರಸಿಂಹಾಚಾರ್ಯ ಪುಣೇಕರರು) ಇದೇ ಸಮಯದಲ್ಲಿ ರಾಷ್ಟ್ರೀಯ ಕವಿಗಳೆಂದು ಪ್ರಸಿದ್ಧರಾದರು. ಭಾರತದ ಸೇನಾನಾಯಕರೆಂದು ಹೆಸರಾದ ಡಾ| ಹರಡೀಕರರು ಈ ಆಂದೋಲನದಲ್ಲಿ ಗಜಾನನ ಮೇಳಗಳನ್ನು ಸಂಘಟಿಸುತ್ತಿದ್ದರು. ಧಾರವಾಡದಲ್ಲಿ ದೇಶೀ ಆಟಗಳನ್ನೇ ಆಡಬೇಕೆಂಬ ಉದ್ದೇಶದಿಂದ ನಾಟ್ಯಕ್ರೀಡಾ ಸಂವರ್ಧಕ ಮಂಡಲವೆಂಬ ಸಂಸ್ಥೆಯು ಪ್ರಾರಂಭಿಸಲ್ಪಟ್ಟಿತು. ಪ್ಲೇಗ ಪ್ರತಿಬಂಧಕ ಉಪಾಯಗಳ ನಿಷ್ಘೃಣತೆಯನ್ನು ತಗ್ಗಿಸುವಲ್ಲಿ 'ಸತ್ಯಕ್ಕಾಗಿ ಸತ್ತರೂ ಚಿಂತೆ ಯಿಲ್ಲ, ಅಸತ್ಯಕ್ಕೆ ಮಣಿದು ಶರಣಾಗತರಾಗಬೇಡಿರಿ' ಎಂಬ ಲೋಕಮಾನ್ಯರ

ಉಪದೇಶವು ತಾರಕಮಂತ್ರವಾಗಿತ್ತು. ಧಾರವಾಡದಲ್ಲಿ ನಡೆದ ಸಾರ್ಜಂಟರ ಅತ್ಯಾಚಾರಗಳನ್ನು ಸಹಿಸದೆ, ಹಯಗ್ರೀವಾಚಾರ್ಯರೆಂಬುವವರು ಮಂದಿಹಾಳ ದಲ್ಲಿ ಭಾವಿ ಹಾರಿಕೊಂಡು ಆತ್ಮಹತ್ಯ ಮಾಡಿಕೊಂಡರು. ಈ ಪ್ರಶ್ನೆಯು ಪಾರ್ಲಿಮೆಂಟಿನವರೆಗೂ ಹೋಯಿತು. ಲೋಕಮಾನ್ಯರ ರಾಜದ್ರೋಹದ ಖಟ್ಲೆಗೆ ಕಾರಣವಾದ ಬರೆಹಗಳಲ್ಲಿ 'ಭವಾನಿ ತಲವಾರ' ಎಂಬುದೂ ಒಂದು. ಅದನ್ನು ಬರೆದವರು ಧಾರವಾಡದ ಗುರೂಜಿಯವರೇ. ಅದಕ್ಕಾಗಿ ರಾಜಹಂಸ ಮುದ್ರಣಾಲಯವನ್ನು ಸರಕಾರವು ಶೋಧಿಸಿತು. ಹೀಗೆ ಲೋಕಮಾನ್ಯರ ನೆರಳಿನಂತೆ ಕರ್ನಾಟಕವು ಅವರನ್ನು ಹಿಂಬಾಲಿಸಿತ್ತು.

೧೯೦೩ ರಲ್ಲಿ ಧಾರವಾಡದಲ್ಲಿ ಮುಂಬಯಿ ಪ್ರಾಂತಿಕ ಪರಿಷತ್ತು ದಾಜಿ ಆಬಾಜಿ ಖರೆಯವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಪಾಂಡುರಂಗರಾವ ಆಠವಲೆ ಎಂಬುವವರು ಸ್ವಾಗತಾಧ್ಯಕ್ಷರಾಗಿದ್ದರು. ಈ ಸಭೆಗೆ ಲೋಕಮಾನ್ಯರು ಆಗಮಿಸಿದ್ದರು. ಧಾರವಾಡದಲ್ಲಿ ಲೋಕಮಾನ್ಯರಿಗೆ ಆದ ಸ್ವಾಗತವು ಅಲೌಕಿಕವಾಗಿತ್ತು. ಕರ್ನಾಟಕದ ಅಂತಃಕರಣದಲ್ಲಿ ಲೋಕಮಾನ್ಯರ ಬಗೆಗಿದ್ದ ಶ್ರದ್ಧಾಭಕ್ತಿಗಳು ಆ ಕಾಲಕ್ಕೆ ವ್ಯಕ್ತವಾದವು. ಕರ್ನಾಟಕದಲ್ಲಿ ಮಂದಪಕ್ಷೀಯರಿಗೆ ಸ್ಥಾನವಿಲ್ಲೆಂದು ಟಿಳಕರು ಮನಗಂಡರು. ಕರ್ನಾಟಕದ ಮುಖಂಡರಾದ ಗಂಗಾಧರರಾಯರ ಒಲವು ಮೊದ ಮೊದಲು ಗೋಖಲೆಯವರ ಕಡೆಗೆ ಇದ್ದಿತು. 'ಧುರೀಣ' ವೆಂಬ ಪತ್ರಿಕೆಯ ಮುಖಾಂತರ ಆ ವಿಚಾರಗಳನ್ನು ಪ್ರಚಾರ ಮಾಡುತ್ತಿದ್ದರು. ಆದರೆ ಲೋಕಮಾನ್ಯರ ಅಲೌಕಿಕ ವ್ಯಕ್ತಿತ್ವವು ಲೋಹಚುಂಬಕದಂತೆ ಗಂಗಾಧರರಾಯರನ್ನು ಸೆಳೆದು ಬಿಟ್ಟಿತು. ಅಂದಿನಿಂದ ಅವರು ಲೋಕಮಾನ್ಯರ ಏಕನಿಷ್ಠ ಭಕ್ತರಾದರು.

ಭಾರತದ ರಾಷ್ಟ್ರೀಯ ಜೀವನದಲ್ಲಿ ಸುವರ್ಣಯುಗವೆಂದು ಪ್ರಸಿದ್ಧ ವಾದ ವಂಗಭಂಗದ ಆಂದೋಲನದ ತೆರೆಗಳು ಕರ್ನಾಟಕಕ್ಕೆ ಬಂದು ಅಪ್ಪಳಿಸದೆ ಬಿಡಲಿಲ್ಲ. ಲೋಕಮಾನ್ಯರ ಶಿಷ್ಯಪರಂಪರೆಯೂ ಸಾಕಷ್ಟು ಬೆಳೆದಿದ್ದಿತು. ಬನಾರಸದ ಕಾಂಗ್ರೆಸ್ಸಿನಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಪಕ್ಷದ ಸಂದೇಶವನ್ನು ಬೀರಲು ಗಂಗಾಧರರಾವ ದೇಶಪಾಂಡೆಯವರಿಗೆ ಟಿಳಕರು ಆಜ್ಞಾಪಿಸಿದರು. ಹೊಸ ಕಾಲಕ್ಕೆ ಹೊಸ ಮುಖಂಡರು, ಈ ಆಂದೋಲನದಲ್ಲಿ

ಹೊಸಬರು ಮುಂದೆ ಬಂದರು. ಕಲಕತ್ತಾ ಕಾಂಗ್ರೆಸ್ಸಿನ ಸ್ವರಾಜ್ಯ, ಬಹಿಷ್ಕಾರ ಸ್ವದೇಶಿ, ರಾಷ್ಟ್ರೀಯಶಿಕ್ಷಣ ಈ ಚತುಸ್ಸೂತ್ರಗಳ ಚಳವಳಿಯಿಂದ ಕರ್ನಾಟಕದಲ್ಲಿ ನವಚೈತನ್ಯವುಂಟಾಯಿತು. ಬೆಳಗಾವಿಯಲ್ಲಿ ಗಂಗಾಧರರಾವ ದೇಶಪಾಂಡೆಯವರೂ ಯಾಳಗೀ ಬಂಧುಗಳೂ ಧಾರವಾಡದಲ್ಲಿ ಪಿತ್ರೆ, ವಕೀಲರೂ ಮುದವೀಡು ಕೃಷ್ಣರಾಯರೂ ಹೊನ್ನಾಪೂರಮಠ ಗದಿಗೆಯ್ಯನವರೂ ವಿಠ್ಠಲರಾವ ಜೋಶಿಯವರೂ ಮುತಾಲೀಕ ಬಿಂದೂರಾಯರೂ, ವಿಜಾಪುರದಲ್ಲಿ ಕೌಜಲಗಿ ಶ್ರೀನಿವಾಸರಾಯರೂ ಬಾಗಿಲುಕೋಟೆಯಲ್ಲಿ ನರಗುಂದ ಜಯರಾಯರೂ ಮುಂದಾಳುಗಳಾಗಿ ನಿಂತರು. ಅನಂತರಾವ ದಾಬಡೆಯವರು ಬಿರುಗಾಳಿಯಂತೆ ಪ್ರಚಾರ ಕಾರ್ಯವನ್ನು ಕೈಕೊಂಡರು. ಊರೂರಿಗೆ, ಓಣಿ ಓಣಿಗೆ ಸಭೆಗಳಾದವು. ಬಾಗಿಲುಕೋಟೆಯಲ್ಲಿ ಕೃಷ್ಣರಾವ ಜೋರಾಪೂರ, ಪಟವರ್ಧನ, ನರಗುಂದ ನಾರಿ ಮೊದಲಾದವರು ರಾಷ್ಟ್ರೀಯ ದೀಕ್ಷೆಯನ್ನು ಪಡೆದುದು ಈ ಆಂದೋಲನದಲ್ಲಿಯೇ!

### ಸ್ವದೇಶಿ ಆಂದೋಲನ

ಸ್ವದೇಶಿ ಚಳವಳಿಯು ಭರದಿಂದ ಹಬ್ಬಿತು. ಕಿತ್ತೂರಿನಲ್ಲಿ ಸ್ವದೇಶಿ ಬಟ್ಟೆಗಳ ನೇಯ್ಗೆಯ ಕಾರಖಾನೆಯನ್ನು ಹೆಬ್ಬಾಳದ ದೇಶಪಾಂಡೆ ವಿಠ್ಠಲರಾಯರು ಸುರುವು ಮಾಡಿ, ಸ್ವದೇಶಿ ಬಟ್ಟೆಗಳನ್ನು ಬಂಗಾಲಕ್ಕೂ ಪೂರೈಸಿದರು. ಗುಳೇದಗುಡ್ಡ ಇಳಕಲ್ಲುಗಳ ಸೀರೆ, ಖಣಗಳು ಮಹಾರಾಷ್ಟ್ರ, ವರ್ಹಾಡಗಳಲ್ಲಿ ಪ್ರಚಾರವಾದವು. ಧಾರವಾಡದಲ್ಲಿ ಆಳಗವಾಡಿ ರಾಮರಾಯರು ತಮ್ಮ ಸ್ವಂತ ಕಲ್ಪಕತೆಯಿಂದ ಯಂತ್ರಗಳನ್ನು ನಿರ್ಮಿಸಿಕೊಂಡು ಕಡ್ಡೀ ಪೆಟ್ಟಿಗೆಯ ಕಾರಖಾನೆಯನ್ನು ಪ್ರಾರಂಭಿಸಿದರು. ಕಾಮುಲಾಪೂರ ಹಣಮಂತರಾಯರು ಸರಕಾರಿ ನೌಕರಿಗೆ ಶರಣು ಹೊಡೆದು ಸೀಸಪೆನ್ಸಿಲ್, ಪಾಟಿಗಳ ಉದ್ದಿಮೆಯನ್ನು ಸುರುವುಮಾಡಿ ಯಶಸ್ವಿಯಾಗಿ ಮಾಡಿ ತೋರಿಸಿದರು. ಖಾನಾಪೂರದಲ್ಲಿ ಮಂಗಳೂರ ಹಂಚಿನ ಕಾರ್ಖಾನೆಯನ್ನು ಆಲೂರ ರಾಮರಾಯರು ತೆರೆದರು. ಈ ಎಲ್ಲವುಗಳಲ್ಲಿ ಆಲೂರ ವೆಂಕಟರಾಯರು ಆಂತರಿಕ ಶಕ್ತಿಯಾಗಿದ್ದರು. ಲಕ್ಷ್ಮೇಶ್ವರದಲ್ಲಿ ವಿವಿಧ ಮಣ್ಣಿನ ಪಾತ್ರೆಗಳೂ ಕಪ್ಪು ಬಸಿಗಳೂ ಹುಟ್ಟಹತ್ತಿದವು. ಮುರಗೋಡ, ಘೋಡಗೇರಿಗಳಲ್ಲಿ ಸ್ವದೇಶಿ ಬಳೆಗಳೂ ಜನ್ಮವೆತ್ತಿದವು. ನರಗುಂದ ಜಯರಾಯರು

'ಕೃಷಿ ಕರ್ಮೋತ್ತೇಜಕ ಮಂಡಲ' ವೆಂಬ ಸಂಸ್ಥೆಯನ್ನು ಸ್ಥಾಪಿಸಿ, ಮುಣಸಿಗಿಯಲ್ಲಿ ಸಕ್ಕರೆಯ ಕಾರಖಾನೆಯನ್ನು ತೆರೆಯಲು ಪ್ರಯತ್ನಿಸಿದರು.

**ರಾಷ್ಟ್ರೀಯ ಶಿಕ್ಷಣ**

ಸ್ವದೇಶಿ ಚಳವಳಿಯಂತೆಯೇ ರಾಷ್ಟ್ರೀಯ ಶಿಕ್ಷಣದ ಚಳವಳಿಯು ಚನ್ನಾಗಿ ಪ್ರಸಾರವಾಯಿತು ಬೆಳಗಾವಿಯಲ್ಲಿ 'ಗಣೇಶ ವಿದ್ಯಾಲಯ'ವನ್ನು ಶಾಶಾ ಕಾಲೇಲಕರರು ಸುರುವು ಮಾಡಿದರು. ಧಾರವಾಡದಲ್ಲಿ ಆಲೂರ ವೆಂಕಟರಾಯರು ವಕೀಲಿ ಬಿಟ್ಟು, 'ಕರ್ನಾಟಕ ನೂತನ ವಿದ್ಯಾಲಯ'ವನ್ನು ಪ್ರಾರಂಭಿಸಿದರು. ರಾಜಪುರೋಹಿತರು ಕಲಘಟಗಿಯಲ್ಲಿ ರಾ. ಶಾಲೆಯಲ್ಲಿ ಶಿಕ್ಷಕರಾದರು. ಹುಬ್ಬಳ್ಳಿ, ನವಲಗುಂದ, ಹಾನಗಲ್ಲ, ಅಗಡಿಗಳಲ್ಲಿ ರಾಷ್ಟ್ರೀಯ ಶಾಲೆಗಳು ಸ್ಥಾಪಿಸಲ್ಪಟ್ಟವು. ನರಗುಂದದಲ್ಲಿ ಥೋಂಡೋಪಂತ ಸಹಸ್ರಬುದ್ಧೆಯವರು ರಾ. ಶಾಲೆಯನ್ನು ಸುರುವು ಮಾಡಿದರು. ಬಾಗಿಲುಕೋಟೆಯಲ್ಲಿ ನರಗುಂದ ಜಯರಾಯರಿಂದ ರಾಷ್ಟ್ರೀಯ ಶಾಲೆಯು ಪ್ರಾರಂಭಿಸಲ್ಪಟ್ಟಿತು. ಯಲಗುರ್ದರಾವ ಧಾರವಾಡಕರರು ಈ ಶಾಲೆಯಲ್ಲಿ ಶಿಕ್ಷಕರಾಗಿದ್ದರೆಂಬ ಮಾತು ಹೊಸಪೀಳಿಗೆಯವರಿಗೆ ಆಶ್ಚರ್ಯಕರವಾಗಬಹುದು. ವಿಜಾಪುರದಲ್ಲಿ ಕೌಜಲಗಿ ಶ್ರೀನಿವಾಸರಾಯರಿಂದ ಶ್ರೀ ಕೃಷ್ಣಪಾಠಶಾಲೆಯು ಪ್ರಾರಂಭಿಸಲ್ಪಟ್ಟಿತು. ಬಾಲಕರಾದ ನಾರಾಯಣ ಹರಡೀಕರರು ಧಾರವಾಡ, ಹುಬ್ಬಳ್ಳಿ, ಶಾಲೆಯಲ್ಲಿಯ ತರುಣರಿಗೆ ವ್ಯಾಯಾಮದ, ಶಿಕ್ಷಣ ಕೊಡುತ್ತಿದ್ದರು. ಲೋಕಮಾನ್ಯರು ೧೯೦೬-೭ರಲ್ಲಿ ಧಾರವಾಡ, ಗುರ್ಲಹೊಸೂರ, ಬೆಳಗಾವಿಗಳಿಗೆ ದರ್ಶನವಿತ್ತರು. ಆಯಾ ಸ್ಥಳಗಳ ಜನತೆಯ ಧರ್ಮ, ಭಾಷೆ, ಸಂಸ್ಕೃತಿಗಳನ್ನು ಅಭ್ಯಸಿಸಿ, ಅವರವರ ಮಾತೃಭಾಷೆಯಲ್ಲಿಯೇ ಚಳವಳಿಯನ್ನು ನಡೆಯಿಸಬೇಕೆಂದು, ಮುಖಂಡರಿಗೆ ಕಿವಿಮಾತು ಹೇಳಿದರು. ಸುರತ ಕಾಂಗ್ರೆಸ್ಸಿಗೆ ಕರ್ನಾಟಕದ ಬಹುಜನರು ಹೋದ ಸಂಗತಿಯು ಹಿಂದೆಯೇ ಬಂದಿದೆ.

**ಸರಕಾರದ ದಬ್ಬಾಳಿಕೆ**

ಆ ಕಾಲಕ್ಕೆ ಕರ್ನಾಟಕದಲ್ಲಿಯ ಎಲ್ಲ ವೃತ್ತಪತ್ರಗಳು ರಾಷ್ಟ್ರೀಯ ಪಕ್ಷದವೇ ಇದ್ದವು. 'ಕರ್ನಾಟಕ' ಪತ್ರವನ್ನು ಅಂಕಲಗಿ ಕೃಷ್ಣರಾಯರೂ

‘ಕರ್ನಾಟಕ ವೃತ್ತ’ವನ್ನು ಮುದವೀಡುಕರರೂ ‘ಕನ್ನಡ ಕೇಸರಿ’ಯನ್ನು ಮುತಾಲೀಕ ಬಿಂದೂರಾಯರೂ ‘ಚಂದ್ರೋದಯ’ವನ್ನು ಹೊನ್ನಾಪೂರ ಮಠರೂ ನಡೆಸುತ್ತಿದ್ದರು. ಕರ್ನಾಟಕವೃತ್ತದಲ್ಲಿ ಆಲೂರ ವೆಂಕಟರಾಯರಿಂದ ಬರೆಯಲ್ಪಟ್ಟ ‘ಚಳವಳಿಗಳ ಆತ್ಮವು’ ಹಾಗೂ ಕರ್ನಾಟಕ ಪತ್ರದಲ್ಲಿಯ ‘ವಿನಾಶಕಾಲೆ ವಿಪರೀತ ಬುದ್ಧಿ’ ಎಂಬ ಲೇಖಗಳ ಬಗ್ಗೆ ಆಕ್ಷೇಪವು ಎತ್ತಲ್ಪಟ್ಟಿತು. ಅವು ಜಪ್ತು ಮಾಡಲ್ಪಟ್ಟವು. ೧೯೧೦ ರ ಮುದ್ರಣ ಕಾಯದೆಯಿಂದ ಚಂದ್ರೋದಯ, ಹಿಂದುಸ್ತಾನ ಸಮಾಚಾರ, ರಾಜಹಂಸ ಮೊದಲಾದ ಪತ್ರಿಕೆಗಳು ನಿಂತು ಹೋದವು. ಕನ್ನಡ ಕೇಸರಿಯು ಅಜ್ಞಾತವಾಸವನ್ನು ಕಂಡಿತು.

## ಕ್ರಾಂತಿಕಾರಕ ಚಳವಳಿ

ಕರ್ನಾಟಕದಲ್ಲಿ ಈ ಚಳವಳಿಯು ಅಷ್ಟು ನೆಲೆ ಊರಲಿಲ್ಲ. ಆದರೂ ಇದ್ದಿದ್ದಿಲ್ಲವೆಂದು ಹೇಳಲು ಬರುವಂತಿಲ್ಲ. ಮೂರ್ತರೂಪ ತಾಳಲಿಲ್ಲವೆಂದು ಮಾತ್ರ ಹೇಳಬಹುದು. ಮುದವೀಡು ಕೃಷ್ಣರಾಯರೂ ಶಿವರಾಮಪಂತ ಖಾನೋಳಕರರೂ ಈ ವೃತ್ತಿಯವರಿದ್ದರು. ಇವರು ಹೈದರಾಬಾದ ಸಂಸ್ಥಾನದಿಂದ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದ್ದರು. ಚಳವಳಿಯು ಸ್ತಬ್ಧವಾದೊಡನೆಯೇ ಅವೆಲ್ಲವೂ ಮದಿಹಾಳದ ಭಾವಿಯನ್ನು ಕಂಡವು. ಪೇರ್ಜಾಬಾದಿ ಬಂಧುಗಳು ಗೋವೆಯಲ್ಲಿಯ ಕ್ರಾಂತಿಕಾರಕ ಗುಂಪಿನಲ್ಲಿ ಶಿಕ್ಷಣ ಪಡೆಯಲು ಹೋಗಿದ್ದರು. ಸುಪ್ರಸಿದ್ಧ ಗಾಂಧೀಭಕ್ತರಾದ ಕೌಜಲಗಿ ಹನುಮಂತರಾಯರು ಬಾಂಬುಗಳನ್ನು ಮಾಡಿ ಹಾರಿಸಿದ್ದರು. ನರಗುಂದ ನಾರಿಯವರು ಈ ಬಗೆಯ ಗುಂಪು ಸಂಘಟಿಸಲು ಯತ್ನಿಸಿದರು. ಕೌಜಲಗಿ ಶ್ರೀನಿವಾಸರಾಯರಿಗೆ ಇದರ ಬಗೆಗೆ ಸಹಾನುಭೂತಿಯಿದ್ದಿತು. ಅವರು ‘ವಂದೇ ಮಾತರಂ’ ಶಬ್ದದ ಅರ್ಥವನ್ನು ಹೇಗೆ ಮಾಡುತ್ತಿದ್ದರೆಂಬುದು ಮನೆಯ ಮಾತಾಗಿತ್ತು. ‘ವಂದೇ ಮಾತು, ಬ್ರಿಟಿಶ್‌ರನ್ನು ರಂ ಎನಿಸುವದು’ ಎಂದು ಹೇಳುತ್ತಿದ್ದರಂತೆ.

ಲೋಕಮಾನ್ಯ ಟಿಳಕರು ಮಂಡಾಲೆಯಿಂದ ಮರಳಿ ಬಂದ ಬಳಿಕ ಬೆಳಗಾವಿಯ ಪ್ರಾಂತಿಕ ಪರಿಷತ್ತಿನಲ್ಲಿಯೇ ರಾಷ್ಟ್ರೀಯ ಪಕ್ಷವು ಕಾಂಗ್ರೆಸ್ಸಿ

ನಲ್ಲಿ ಸೇರಬೇಕೆಂಬ ನಿರ್ಣಯ ಸ್ವೀಕರಿಸಿತು. ಈ ಮುಂದಿನ ಟಿಳಕರ ಜೀವನದಲ್ಲಿ ಶ್ರೀ ಬೆಳವಿ ಹಾಗೂ ಗಂಗಾಧರರಾಯರು ಮಹತ್ವದ ಪಾತ್ರ ವನ್ನು ವಹಿಸಿದ ಸಂಗತಿಯನ್ನು ಆಯಾ ಪ್ರಸಂಗಗಳಲ್ಲಿ ವಿವರಿಸಿದ್ದೇವೆ. ೧೯೧೬ ರಲ್ಲಿ ಗದಗ, ಹುಬ್ಬಳ್ಳಿ, ಧಾರವಾಡಗಳಿಗೆ ಟಿಳಕರು ಭೆಟ್ಟಿಕೊಟ್ಟರು. ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಾರೂಢ ಸ್ವಾಮಿಗಳ ದರ್ಶನವನ್ನು ತೆಗೆದುಕೊಂಡು ಅವರ ಆಶೀರ್ವಾದವನ್ನು ಪಡೆದರು. ೧೯೧೭ ರಲ್ಲಿ ಚಿಕ್ಕೋಡಿ, ನಿಪ್ಪಾಣಿ ಮೊದಲಾದ ಸ್ಥಳಗಳಲ್ಲಿ ನಡೆದ ಸಮಾರಂಭವು ಅಪೂರ್ವವಾದುದು. ಈ ಸಂದರ್ಭದಲ್ಲಿ ಇಬ್ಬರು ಮಹಾವಿಭೂತಿಗಳ ಸಂವಾದವಾಯಿತು. ಅದನ್ನು ಮುಂದೆ ವಿವರಿಸಿದೆ. ಮುಂದೆ ವಿಲಾಯತಿಗೆ ಹೋಗುವಾಗ ವಿಜಾಪೂರಕ್ಕೆ ದರ್ಶನವಿತ್ತರು.

---



ಶ್ರೀ ಶ್ರೀ ೧೦೮ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರು

## ಶ್ರೀ ಶ್ರೀ ೧೦೮ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರೂ ಲೋಕಮಾನ್ಯರೂ*

ಲೋಕಮಾನ್ಯರು ಸ್ವಾವಲಂಬನ ತತ್ವವನ್ನು ರಾಜಕಾರಣದಲ್ಲಿ ತಂದು ಕ್ರಾಂತಿಯನ್ನು ಉಂಟುಮಾಡಿದಂತೆಯೇ, ಗೀತಾರಹಸ್ಯವನ್ನು ಬರೆದು ವೇದಾಂತದಲ್ಲಿ ಬಿರುಗಾಳಿಯನ್ನೆಬ್ಬಿಸಿದರು. ಆದರಲ್ಲಿ ಆಚಾರ್ಯತ್ರಯರ ಮೇಲೆಯೂ ಗದೆ ಇದ್ದಿತು. ವೈದಿಕರಲ್ಲಿ ಅಲ್ಲೋಲ ಕಲ್ಲೋಲವಾಯಿತು. ಶ್ರೀ ಮಾಧ್ವಭಾಷ್ಯದ ಮೇಲಿರುವ ಆಕ್ಷೇಪಗಳ ಬಗ್ಗೆ, ಆ ಕಾಲದ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೮ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರು ಲೋಕಮಾನ್ಯರೊಡನೆ ಚರ್ಚಿಸಲು ಅಪೇಕ್ಷಿಸಿದರು. ಲೋಕಮಾನ್ಯರು ಚಿಕ್ಕೋಡಿಗೆ ಬಂದಾಗ ಈ ಸಂದರ್ಭವು ಒದಗಿ ಬಂದಿತು. ಇದೊಂದು ಅಪೂರ್ವವಾದ ಯೋಗವು. ಇಬ್ಬರೂ ಲೋಕೋತ್ತರ ಪುರುಷರು. ಒಬ್ಬರು ರಾಜಕಾರಣದ ಮುಕುಟಮಣಿಗಳಾಗಿದ್ದರೆ, ಇನ್ನೊಬ್ಬರು ವೇದಾಂತ ಸಾಮ್ರಾಜ್ಯದ ಅಧಿಪತಿಗಳೂ ಶ್ರೇಷ್ಠ ಆಧ್ಯಾತ್ಮ ಜೀವಿಗಳೂ ಆಗಿದ್ದರು. ಇಬ್ಬರೂ ಅಪ್ರತಿಮ ಮೇಧಾವಿಗಳು. 'ಸಜ್ಜನರ ಸಂಗವದು ಹೆಜ್ಜೇನು ಸವಿದಂತೆ' ಎಂಬ ನಾಡನುಡಿಯು ಸತ್ಯವಾದುದು. ಈ ಇಬ್ಬರ ಚರ್ಚೆಯು ಉದ್ಬೋಧಕವಾಗಿದ್ದಿತು. ೨ ದಿನ ಅತ್ಯಂತ ಸೌಹಾರ್ದದಿಂದ ಚರ್ಚೆ ನಡೆಯಿತು. ಪರಸ್ಪರರಲ್ಲಿ ಪ್ರೇಮಾದರಗಳು ಉಂಟಾದವು. ಟಿಳಕರು ಅತ್ಯಂತ ಶ್ರದ್ಧಾಭಕ್ತಿಗಳಿಂದ ಶ್ರೀ ಶ್ರೀಗಳವರಿಗೆ ಪುಣೆಗೆ ಬರಲು ಆಮಂತ್ರಣ ವಿತ್ತರು. ಈ ಸುಯೋಗದ ವರ್ಣನೆಯನ್ನು ಕೆಳಗೆ ಕೊಡಲಾಗಿದೆ.

---

* ಪೂಜ್ಯ ಗಲಗಲಿ ರಾಮಾಚಾರ್ಯರು ಬರೆದ ಪ್ರಕಟನೆಗಳಿಂದ ಈ ಸಂಗತಿಗಳನ್ನು ಸಂಗ್ರಹಿಸಲಾಗಿದೆ. ಚರ್ಚೆಯ ಕಾಲಕ್ಕೆ ಉಪಸ್ಥಿತರಿದ್ದ ಪಂಡಿತ ಗಲಗಲಿ ಯವರು ತೆಗೆದುಕೊಂಡ ಟಿಪ್ಪಣಿಗಳಿಂದ ಈ ಪ್ರಕಟನೆಗಳನ್ನು ಪ್ರಕಟಿಸ ಲಾಗಿದೆ. ಅವುಗಳು ಟಿಳಕರಿಗೆ ಕಳಿಸಲ್ಪಟ್ಟಿದ್ದವು.

ಈ ಸಭೆ ಸೇರುವ ಮೊದಲು ಟಿಳಕರು ಶ್ರೀ ಆಲೂರ ವೆಂಕಟರಾಯರನ್ನು ಶ್ರೀಗಳವರ ಕಡೆಗೆ ಕಳಿಸಿದರು. 'ಜಯಪತ್ರ ಮೊದಲಾದವುಗಳ ಗೊಂದಲವಿದೆಯೇ ?' ಎಂದು ವೆಂಕಟರಾಯರು ಶ್ರೀಗಳವರನ್ನು ವಿಚಾರಿಸಿದರು. ಅದಕ್ಕೆ ಶ್ರೀಗಳವರು "ಅದೇನೂ ಇಲ್ಲ ಟಿಳಕರಂಥ ದೊಡ್ಡ ಮನುಷ್ಯರೊಡನೆ ವೇದಾಂತ ವಿಷಯದ ಮೇಲೆ ಮಾತಾಡುವದಕ್ಕೆ ಇದೊಂದು ಸುಸಂಧಿ ಮಾತ್ರ" ಎಂದು ಹೇಳಿದರು. ದೊಡ್ಡವರ ಮನಸ್ಸು ದೊಡ್ಡದೇ ಅಲ್ಲವೇ ! ಲೋಕಮಾನ್ಯ ಟಿಳಕರೊಡನೆ ಈ ಚರ್ಚೆ ನಡೆದಾಗ ಶ್ರೀ ನ. ಚಿ. ಕೇಳಕರ, ಶಿ. ಮ. ಪರಾಂಜಪೆ, ದತ್ತೋಪಂತ ಬೆಳವಿ, ಆಲೂರ ವೆಂಕಟರಾವ ಮೊದಲಾದ ರಾಜಕಾರಣಿಗಳ ತಂಡವೂ ಪೂಜ್ಯ ಪಾಂಡುರಂಗಿ ಕೃಷ್ಣಾಚಾರ್ಯರೂ ವೇ. ವರಖೇಡಿ ಬಂಧುಗಳೂ ಡಂಬಳ ಶಯನಾಚಾರ್ಯರೂ ಗಲಗಲಿ ರಾಮಾಚಾರ್ಯರೂ ಕೂರ್ಮಾಚಾರ್ಯರೂ ಮೊದಲಾದ ವಿದ್ವಾಂಸರು ಉಪಸ್ಥಿತರಿದ್ದರು.

ಶ್ರೀ ಜಗದ್ಗುರು ಮಧ್ವಾಚಾರ್ಯ ಸಂಸ್ಥಾನದ ಶ್ರೀ ಉತ್ತರಾದಿ ಮಠಾಧೀಶರಾದ ಶ್ರೀ ಶ್ರೀ ೧೦೮ ಶ್ರೀ ಸತ್ಯಧ್ಯಾನ ತೀರ್ಥ ಶ್ರೀಪಾದಂಗಳವರು ಗೋಕಾಕಕ್ಕೆ ಬಂದಾಗ, ಅಲ್ಲಿಯ ಪ್ರತಿಷ್ಠಿತ ಶಿಷ್ಯರು ಗೀತಾರಹಸ್ಯದಲ್ಲಿ ಮಧ್ವಮತದ ಮೇಲೆ ಆಪಾದಿಸಲ್ಪಟ್ಟ ದೋಷಗಳ ಕಡೆಗೆ ಶ್ರೀಗಳವರ ಲಕ್ಷ್ಯವನ್ನು ಸೆಳೆದರು. ಶ್ರೀಗಳವರು ತಾವು ಅದನ್ನು ನೋಡಿದ್ದು, ಆ ಆಪಾದನೆಯಲ್ಲಿ ಹುರುಳಿಲ್ಲವೆಂದೂ ಗೀತೆಯು ಮಧ್ವಸಿದ್ಧಾಂತವನ್ನೇ ಸಾರುವದೆಂದೂ ತಿಳಿಸಿ, ಇದನ್ನು ಸಿದ್ಧಮಾಡಿ ತೋರಿಸುವದಾಗಿ ತಾವು ಲೋಕಮಾನ್ಯ ಟಿಳಕರಿಗೆ ಬಾಗಿಲುಕೋಟೆ ಮುಕ್ಕಾಮಿನಿಂದ ತಿಳಿಸಿರುವದಾಗಿಯೂ ಉತ್ತರಿಸಿದರು. ಇಷ್ಟರಲ್ಲಿಯೇ ಚಿಕ್ಕೋಡಿಯಲ್ಲಿ ಬೆಳಗಾವಿ ಜಿಲ್ಹಾ ಪರಿಷತ್ತು ನೆರೆಯಲಿದ್ದು, ಅದಕ್ಕೆ ಲೋಕಮಾನ್ಯ ಟಿಳಕರು ಬರಲಿರುವದರಿಂದ ಆ ಕಾಲಕ್ಕೆ ಚಿಕ್ಕೋಡಿಯಲ್ಲಾಗಲೀ ಸಮೀಪದ ಊರಿನಲ್ಲಾಗಲೀ ಸಭೆ ಸೇರಿಸಿ, ಈ ವಿಷಯದ ಮೇಲೆ ಚರ್ಚಿಸಬೇಕೆಂಬ ಇಚ್ಛೆಯನ್ನು ಶ್ರೀ ಅಣ್ಣಾರಾವ ದೇವಳೇ ಪ್ರಭೃತಿಗಳು ತಿಳುಹಿ, ಈ ಬಗ್ಗೆ ಲೋಕಮಾನ್ಯ ಟಿಳಕರಿಗೆ ಪತ್ರ ಬರೆದರು. ಅದಕ್ಕೆ ಲೋಕಮಾನ್ಯ ಟಿಳಕರಿಂದ ಕೆಳಗಿನಂತೆ ಉತ್ತರ ಬಂದಿತು.

ಪುಣೆ
೩-೪-೧೯೧೭

"ಪ್ರಿಯ ಮಹಾರಾಜ,

ತಮ್ಮ ಹಾಗೂ ಇತರ ವಕೀಲರ ಪತ್ರಗಳು ಕೈಸೇರಿದವು. ಚಿಕ್ಕೋಡಿಯಲ್ಲಿ ಶ್ರೀಗಳವರ ಭೆಟ್ಟಿಯಾಗಲು ನನ್ನದೇನೂ ಅಡ್ಡಿಯಿಲ್ಲ. ಆದರೆ ದ್ವೈತಾದ್ವೈತ ವಿವಾದವು ಬೇರುಬಿಟ್ಟ ಹಳೇ ವಾದವಾಗಿದ್ದು, ಈ ವಿಷಯದಲ್ಲಿ ಯಾರಿಗೂ ಮನವರಿಕೆ ಮಾಡಿಕೊಡುವ ಆಶೆ ನಮಗಿಲ್ಲ. ಆದರೂ ಯಾವುದೇ ಇತರ ಪಂಥಕ್ಕಿಂತ ನನ್ನ ಅಭಿಪ್ರಾಯವು ಸಯುಕ್ತಿಕವೂ ಗೀತೆಗೆ ಸಮ್ಮತವೂ ಆಗಿದೆಯೆಂದು ನಾನು ತೋರಿಸಿ ಕೊಡುವೆ. ಇದಕ್ಕೂ ಹೆಚ್ಚು ನನ್ನಿಂದೇನು ಸಾಧ್ಯ? ಅಲ್ಲದೆ, ನನ್ನ ಗೀತಾರಹಸ್ಯದಲ್ಲಿ ಮಧ್ವಮತದ ಬಗ್ಗೆ ಯಾವುದೇ ತಪ್ಪು ತಿಳುವಳಿಕೆ ಮಾಡಿಕೊಟ್ಟಿಲ್ಲವೆಂದೂ ನಾನು ತೋರಿಸಬಲ್ಲೆ. ಇದರಿಂದ ಶ್ರೀಗಳವರಿಗೆ ಹಾಗೂ ನಿಮ್ಮ ಮಿತ್ರರಿಗೆ ಸಮಾಧಾನವಾಗುವದಾದರೆ ಚಿಕ್ಕೋಡಿಯಲ್ಲಿ ಶ್ರೀಗಳವರ ಭೆಟ್ಟಿಯಾಗಲು ಅಡ್ಡಿಯಿಲ್ಲ."

ತಮ್ಮ
ಬಾ. ಗಂ. ಟಿಳಕ

ಶ್ರೀಗಳವರು ೧೨-೪-೧೯೧೭ ಕ್ಕೆ ಚಿಕ್ಕೋಡಿಗೆ ದಯಮಾಡಿಸಿದರು. ಮರುದಿನ ಶ್ರೀ ಟಿಳಕರ ಆಗಮನವಾಯಿತು. ಶ್ರೀಗಳವರು ಇಳಿದ ಸ್ಥಳದಲ್ಲಿಯೇ ಸಭೆಸೇರಿತು. ಶ್ರೀಗಳವರು ಅನೇಕ ಪ್ರಶ್ನೆಗಳು ವಿಚಾರಾರ್ಹವಿದ್ದರೂ ಪ್ರಕೃತ ಕೆಲವೇ ವಿಷಯಗಳನ್ನಷ್ಟೇ ವಿಚಾರಿಸುವಾ ಎಂದು ಆರಂಭಿಸಿದರು:—

ಗೀತಾರಹಸ್ಯದ ಆಧ್ಯಾತ್ಮ ಪ್ರಕರಣದ ೨೩೨-೩೩ನೇ ಪುಟದಲ್ಲಿ "ಉಪನಿಷತ್ತುಗಳಲ್ಲಿ ದ್ವೈತ ಹಾಗೂ ಅದ್ವೈತಪರ ವರ್ಣನೆಗಳಿರುತ್ತವೆ ಈ ಎರಡಕ್ಕೂ ಒಂದೇ ಬಗೆಯ ಗತಿ ಕಲ್ಪಿಸುವದು ಅಗತ್ಯ. ಅದ್ವೈತವು ಮುಖ್ಯವೆಂದು ಗ್ರಹಿಸಿ, ಬ್ರಹ್ಮನು ನಿರ್ಗುಣನಿದ್ದರೂ ಸಗುಣನಾದಾಗ ಮಾತ್ರ ಮಾಯಿಕವಾಗಿ ದ್ವೈತಸ್ಥಿತಿ ಉಂಟಾಗುತ್ತದೆಂದು ನಿರೂಪಿಸಿದರೆ

ಎಲ್ಲ ಸರಿಹೋಗುವದು. ದ್ವೈತವನ್ನು ಮುಖ್ಯವಾಗಿಟ್ಟುಕೊಂಡರೆ ಸರಿಯಾಗುವದಿಲ್ಲ. ಇದಕ್ಕೆ 'ತತ್ವಮಸಿ' ವಾಕ್ಯವೇ ಉದಾಹರಣೆ. ಇಲ್ಲಿ ಅದ್ವೈತಪರವಾದ ಅನ್ವಯವು ಸರಾಗವಾಗುವದು. ದ್ವೈತಿಗಳಿಗೆ ಇದರ ಅರಿವಾಗದೇ ಇಲ್ಲ. ಆದರೆ ಅವರು ಇಲ್ಲಿ ತತ್ವಂ ಎಂದರೆ ತಸ್ಯ ತ್ವಂ ಮುಂತಾಗಿ ಅರ್ಥ ಮಾಡಿಕೊಂಡು ಸಮಾಧಾನ ಹಚ್ಚಿಕೊಳ್ಳುವರು. ಆದರೆ ಸ್ವಲ್ಪ ಸಂಸ್ಕೃತ ಬಲ್ಲ ಯಾರೇ ಆಗಲೀ ಈ ಅರ್ಥವನ್ನು ಬಲಾತ್ಕಾರದಿಂದ ಎಳೆದಾಡಿ (ಓಢಾತಾಣೀಚೆ ಅರ್ಥ) ಹಚ್ಚಲಾಗಿದೆಯೆಂದು ಹೇಳಬಲ್ಲರು" ಎಂದು ಬರೆದಿದ್ದೀರಿ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಈ ವಾಕ್ಯವು ದ್ವೈತಕ್ಕೇ ಹೊಂದಿಕೆಯಾಗುತ್ತದೆ. ಅದ್ವೈತಿಗಳೇ ಬಲಾತ್ಕಾರದ ಅರ್ಥ ಮಾಡಿರುವರು. ಯಾಕಂದರೆ ಈ ವಾಕ್ಯದ ಹಿಂದೆಲ್ಲ ಸೃಷ್ಟಿ, ಸ್ಥಿತಿ ಮುಂತಾದವುಗಳ ಕಾರಣನೆಂದು ಬ್ರಹ್ಮನ ವರ್ಣನೆ ಬಂದಿದೆ. ಅಲ್ಲಿ ಅನೇಕ ವಿಧವಾಗಿ ದ್ವೈತವೇ ನಿರೂಪಿತವಾಗಿದೆ. ಈ ಮುಂದಿನ 'ತತ್ವಮಸಿ' ವಾಕ್ಯವೂ ಹಿಂದಿನದಕ್ಕೆ ಅನುಸರಿಸಿ ದ್ವೈತಪರವೇ ಇರುವದು. ಇಲ್ಲಿ 'ಸ ಆತ್ಮಾ ಅತತ್ ತ್ವಮಸಿ' ಎಂದಾಗಲೀ ತತ್ ಎಂಬುದು ವಿಭಕ್ತಿ ಲೋಪದಿಂದ ಎಲ್ಲ ವಿಭಕ್ತಿಗಳ ಅರ್ಥವನ್ನೂ ಹೇಳಿ, ಆ ಬ್ರಹ್ಮನಿಗೂ ಜೀವನಿಗೂ ಇರುವ ಬಗೆಬಗೆಯ ಸಂಬಂಧ ತಿಳಿಸುವದು ಎಂದು ಆಗಲೀ ದ್ವೈತವನ್ನೇ ಕಾಣಬಹುದು. ಅದ್ವೈತಿಗಳು ಮಾತ್ರ ಈ ವಾಕ್ಯದ ಅರ್ಥಮಾಡುವಾಗ "ಜಹದಜಹಲ್ಲಕ್ಷಣೆಗೆ" ಶರಣು ಹೋಗಿ ಅತಿ ಕ್ಲಿಷ್ಟ ಕಲ್ಪನೆ ಮಾಡಿರುವರು. ಇದರಿಂದ ಯಾರದು ಸರಳ ಅರ್ಥ, ಯಾರದು ಬಲಾತ್ಕಾರದ ಅರ್ಥ ಎಂಬುದು ತಾನೇ ಗೊತ್ತಾಗುವದು. ಎಂದು ಮುಂತಾಗಿ ಪ್ರತಿಪಾದಿಸಿದರು. ಇದರ ಬಗ್ಗೆ ವಿಶೇಷ ಚರ್ಚೆಯಾಗಿ, ಲೋಕಮಾನ್ಯ ಟಿಳಕರು "ಏನೇ ಆದರೂ ಮಧ್ವಮತದಲ್ಲಿ ವಿಭಕ್ತಿಯ ಮಟ್ಟಿಗಾದರೂ ಎಳೆದೆಳೆದು ಅರ್ಥ ಹಚ್ಚಬೇಕಾಗಿ ಬರುವದು" ಎಂದರು. ಆಗ ಶ್ರೀಗಳು "ಹೇಗೆ ಆಗಲಿ, ಅದ್ವೈತಿಗಳಂತೆ ತತ್ ಮತ್ತು ತ್ವಂ ಎರಡೂ ಪದಗಳನ್ನು ಎಳೆದು ಅರ್ಥ ಮಾಡುವದಕ್ಕಿಂತ ಒಂದಷ್ಟು ವಿಭಕ್ತಿ ಎಳೆದರೆ ಹೆಚ್ಚಲ್ಲ; ಮೇಲಾಗಿ ವ್ಯಾಕರಣ ನಿಯಮದಂತೆ ವಿಭಕ್ತಿಲೋಪದ ಅನುಸಂಧಾನ ಮಾಡುವದರಿಂದ ನಮ್ಮ ಮತದಲ್ಲಿ ವಿಭಕ್ತಿ ಎಳೆಯಬೇಕಾದ ಪ್ರಸಂಗವೂ ಇಲ್ಲ" ಎಂದು ಉಪಸಂಹಾರ ಮಾಡಿದರು.

* * * *

"ಯಜ್ಞಾರ್ಥಾತ್ಕರ್ಮಣೋऽನ್ಯತ್ರ ಲೋಕೋऽಯಂ ಕರ್ಮಬಂಧನಃ"
(ಗೀ. ೩-೯)

ಇಲ್ಲಿ ಶ್ರೀ ಮಧ್ವಾಚಾರ್ಯರು ಯಜ್ಞಾರ್ಥಾತ್ = ವಿಷ್ಣು ಪ್ರೀತ್ಯರ್ಥ ಎಂದು ಎಳೆದು ಅರ್ಥ (ಗೌಣಾರ್ಥ) ಹಚ್ಚಿರುವರು ಎಂದು ಗೀತಾರಹಸ್ಯ ದಲ್ಲಿ ಬರೆದಿರುವದು ಸರಿಯಲ್ಲ. ಈ ಅರ್ಥವು ಗೌಣ ಹೇಗೆ? ಯಜ್ಞವೆಂದರೆ ವಿಷ್ಣು ಅಲ್ಲವೇ? "ಯಜ್ಞೋ ಯಜ್ಞಪತಿಃ ಯಜ್ವಾ ಯಜ್ಞಾಂಗೋ ಯಜ್ಞವಾಹನಃ |" ಎಂದು ವಿಷ್ಣುಸಹಸ್ರನಾಮದಲ್ಲಿದೆಯಷ್ಟೇ? ಎಂದು ಶ್ರೀಗಳವರು ನಿರೂಪಿಸಿದರು. ಈ ವಿಷಯದ ಮೇಲೆ ಚರ್ಚೆಯಾಗಿ ವಿಷ್ಣು ಪ್ರೀತ್ಯರ್ಥ ಕರ್ಮವೇ ತಾರಕ; ಬೇರೆಯದೆಲ್ಲ ಬಂಧಕ ಎಂದು ಶ್ರೀಗಳವ ರಿಂದ ಮುಗಿಸಲ್ಪಟ್ಟಿತು.

ಇದೇ ರೀತಿಯ ಚರ್ಚೆಯು "ನಾಸತೋ ವಿದ್ಯತೇ ಭಾವೋ ನಾ ಭಾವೋ ವಿದ್ಯತೇ ಸತಃ" ಹಾಗೂ "ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ದುಷ್ಕೃತೇ" ಎಂಬ ಶ್ಲೋಕಗಳ ಶ್ರೀ ಮಧ್ವಾಚಾರ್ಯರ ವ್ಯಾಖ್ಯಾನದ ಮೇಲೆ ನಡೆಯಿತು.

*　　*　　*　　*

ಜ್ಞಾನೋತ್ತರ ಕರ್ಮಾಚರಣೆಯ ವಿಷಯದ ಮೇಲೆ ಚರ್ಚೆ ನಡೆದಾಗ ಗೀತಾರಹಸ್ಯದ ೩೦೭ನೇ ಪುಟದಲ್ಲಿ ಶ್ರೀ ಮಧ್ವಾಚಾರ್ಯರ ಮೇಲೆ ಆಪಾದಿ ಸಿದ ದೂಷಣೆಗಳನ್ನು ಶ್ರೀಗಳವರು ನಿರಾಕರಿಸಿದರು. ಶ್ರೀ ಮಧ್ವಾಚಾರ್ಯರು ಜ್ಞಾನೋತ್ತರ ಕರ್ಮತ್ಯಾಗ ಹೇಳಿಯೇ ಇಲ್ಲ; ಪ್ರತಿಯಾಗಿ ಜ್ಞಾನವಾದರೂ ಕರ್ಮ ಮಾಡಬೇಕೆಂದೇ ಶ್ರೀ ಮಧ್ವಾಚಾರ್ಯರ ಮತ. ಶ್ರೀ ಮಧ್ವಾಚಾರ್ಯರು ಗೀತೆಯ ಮೇಲೆ ಎರಡು ಗ್ರಂಥಗಳನ್ನು (ಗೀತಾಭಾಷ್ಯ ಹಾಗು ಗೀತಾ ತಾತ್ಪರ್ಯ) ಬರೆದಿದ್ದು, ಅವರು ಗೀತಾತಾತ್ಪರ್ಯದಲ್ಲಿ ೩-೩೧ನೇ ಶ್ಲೋಕದ ವ್ಯಾಖ್ಯಾನದಲ್ಲಿ ಇದೇ ವಿಷಯವನ್ನು ಸುಂದರವಾಗಿ ವರ್ಣಿಸಿರುವರು. ಇದರಂತೆಯೇ, "ಸ್ವಕೀಯ ಜನರೊಡನೆ ಯುದ್ಧ ಮಾಡುವದು ತಪ್ಪು ಎಂದು ವಿಷಣ್ಣನಾದ ಅರ್ಜುನನನ್ನು ಯುದ್ಧದಲ್ಲಿ ಪ್ರವರ್ತಿಸಲು ಹೊರಟ ಗೀತೆಯಲ್ಲಿ ಮೋಕ್ಷ ಮಾರ್ಗದ ವಿವೇಚನೆ ಏಕೆ? ಎಂಬುದಕ್ಕೆ ಯಾರೂ

ಉತ್ತರ ಕೊಟ್ಟಿಲ್ಲ'' ಎಂದು ಗೀತಾರಹಸ್ಯದಲ್ಲಿ ತಾವು ಎತ್ತಿದ ಪ್ರಶ್ನೆಗೆ ಶ್ರೀ ಮಧ್ವಾಚಾರ್ಯರು ಗೀತಾತಾತ್ಪರ್ಯ ಗ್ರಂಥದಲ್ಲಿ

'' ತತ್ರ ಸಾಕ್ಷಾದಿಂದ್ರಾವತಾರಮುತ್ತಮಾಧಿಕಾರಿಣಮಾತ್ಮನಃ ಪ್ರಿಯತಮಮರ್ಜುನಂ ಕ್ಷತ್ರಿಯಾಣಾಂ ವಿಶೇಷತೋಽಪಿ ಪರಮಧರ್ಮಂ ನಾರಾಯಣದ್ವಿಟ್ ತದನುಬಂಧಿನಿಗ್ರಹಂ ಬಂಧುಸ್ನೇಹಾದಧರ್ಮತ್ವೇ ನಾಶಂಕ್ಯ ತತೋ ನಿವೃತ್ತಪ್ರಾಯಂ ಸ್ವವಿಹಿತ ವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋಧರ್ಮಸ್ತದ್ವಿರುದ್ಧಃ ಸರ್ವೋಽಪ್ಯಧರ್ಮೋ ಭಗವದಧೀನತ್ವಾತ್ ಸರ್ವಸ್ಯೇತಿ ಬೋಧಯತಿ ಭಗವನ್ನಾರಾಯಣಃ''

ಎಂದು ಅತಿ ಸಮಂಜಸವಾಗಿ ಉತ್ತರ ಕೊಟ್ಟಿದ್ದಾರೆ, ಎಂದು ಹೇಳಿ ಗೀತಾತಾತ್ಪರ್ಯ ಗ್ರಂಥದಲ್ಲಿದ್ದ ವರ್ಣನೆಗಳನ್ನು ತೋರಿಸಿದರು. ಅದನ್ನು ಓದಿ ಟಿಳಕರು ಅತ್ಯಂತ ಸಂತಸಬಟ್ಟು ತಾವು ಗೀತಾತಾತ್ಪರ್ಯವನ್ನು ನೋಡಿದ್ದಿಲ್ಲವೆಂದೂ ಮುಂದಿನ ಆವೃತ್ತಿಯಲ್ಲಿ ಈ ವಿಷಯವನ್ನು ಸರಿಪಡಿಸುವೆವೆಂದೂ ಹೇಳಿದರು. ಆಗ ಲೋಕಮಾನ್ಯರ ಮಹಾನ್ ವ್ಯಕ್ತಿತ್ವವನ್ನೂ ಉದಾರ ಹೃದಯವನ್ನೂ ಕಂಡು ಶ್ರೀಗಳವರು ಅತ್ಯಂತ ಹರ್ಷಗೊಂಡರು.

* * * *

ಶ್ರೀಗಳವರು— ಗೀತಾರಹಸ್ಯದ ೨೮೧ನೇ ಪುಟದಲ್ಲಿ "ನಾರದನಿಗೆ ವಿಶ್ವರೂಪವನ್ನು ತೋರಿಸಿದಾಗ ಶ್ರೀಹರಿಯು ಹೇಳುವ ರೀತಿಯಲ್ಲಿಯೇ (ಶಾಂತಿ ಪರ್ವ ೩೩೯–೪೪–೪೮) ಅರ್ಜುನನಿಗಾದರೂ ಶ್ರೀಕೃಷ್ಣನು ತೋರಿಸಿದ ವಿಶ್ವರೂಪವು ಮಾಯಿಕವಾಗಿದೆ" ಎಂದು ಹೇಳಲಾಗಿದೆ. ಆದರೆ ಆ ರೂಪವು ಮಾಯಿಕವಲ್ಲ. ಸತ್ಯವಾದುದು. ಶಾಂತಿಪರ್ವದ ೩೩೯ನೇ ಅಧ್ಯಾಯವನ್ನು ತಾವು ಪೂರ್ಣ ನೋಡಿದಂತಿಲ್ಲ. ಹಿಂದಿನ ಶ್ಲೋಕಗಳಲ್ಲಿ ''ಏವಂ ಸ್ತುತಃ ಸ ಭಗವಾನ್ ಗುಹ್ಯೈಸ್ತಥ್ಯೈಶ್ಚನಾಮಭಿಃ | ದರ್ಶಯಾಮಾಸ ಮುನಯೇ ರೂಪಂ ತತ್ಪರಮಂ ಹರಿಃ" ಎಂದು ತಥ್ಯವಾದ ನಾಮರೂಪಗಳನ್ನು ಬಣ್ಣಿಸಿ ಅದನ್ನೇ ತೋರಿಸಿದ ಎಂದು ಉಕ್ತವಾಗಿದೆ ಎಂದು ಸಾಧಾರವಾಗಿ ವಿವರಿಸಿದರು.

\+ \+ \+ \+

ಶ್ರೀಗಳವರು— ಸರ್ವಂ ಮಿಥ್ಯಾ ಎನ್ನುವ ಅದ್ವೈತಮತವನ್ನು ಒಪ್ಪಿದರೆ ಕರ್ಮಯೋಗವು ಅಸಂಗತವಾಗುವದು. ತಾವು ಗೀತಾರಹಸ್ಯದಲ್ಲಿ ಅದ್ವೈತವನ್ನು ಒಪ್ಪಿ, ಕರ್ಮಯೋಗವನ್ನು ಹೇಳಿದ್ದೀರಿ. ಇದು ಹೇಗೆ?

ಲೋ. ಟಿಳಕ— ನಾನು ಶಂಕರಾದ್ವೈತಿಯಲ್ಲ. ಜಗತ್ತು ಮಿಥ್ಯಾ ಎಂದರೆ ವಿನಾಶಿ ಎಂದು ನನ್ನ ಅರ್ಥ.

ಶ್ರೀಗಳವರು— ನೀವು ಹೀಗೆ ಹೇಳುತ್ತಿದ್ದರೂ ಗೀತಾರಹಸ್ಯದ ಅಧ್ಯಾತ್ಮ ಪ್ರಕರಣದಲ್ಲಿ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬುದನ್ನು ಪ್ರತಿಪಾದಿಸಿದ್ದೀರಿ. ತ್ರಿಕಾಲದಲ್ಲಿ ಇಲ್ಲ, ಮಿಥ್ಯಾ ಎಂದು ಹೇಳಿದ ಮೇಲೆ ಆ ಶಂಕರಾದ್ವೈತ ಹಾಗೂ ನಿಮ್ಮಮತದಲ್ಲಿ ಭೇದವೇನು?

* * * *

ಶ್ರೀಗಳವರು— ಅದ್ವೈತದಲ್ಲಿ ಪ್ರಮಾಣವೇನು?

ಲೋ. ಟಿಳಕ— 'ಅಧಿಯಜ್ಞೋಹಮೇವಾತ್ರ ದೇಹೇದೇಹಭೃತಾಂವರ' ಎಂಬುದೇ ಪ್ರಮಾಣ (ಗೀ. ೮-೪)

ಶ್ರೀಗಳವರು— 'ಅಧಿಯಜ್ಞಃ ಕಥಂ ಕೋತ್ರ ದೇಹೇಸ್ಮಿನ್ ಮಧುಸೂದನ' ಎಂಬ ಅರ್ಜುನನ ಪ್ರಶ್ನೆಕ್ಕೆ ಉತ್ತರ ರೂಪವಾಗಿ ಈ ಶ್ಲೋಕವು ಭಗವಂತನನ್ನು ವರ್ಣಿಸುವದು. ಇಲ್ಲಿ ಐಕ್ಯದ ಸಂಬಂಧವೇ ಇಲ್ಲ.

ಲೋ. ಟಿಳಕ— 'ಯದಾ ಭೂತ ಪೃಥಗ್ಭಾವಮೇಕಸ್ಥಮನುಪಶ್ಯತಿ' (ಏಕಸ್ಥಮನುಪಶ್ಯತಿ = ಏಕತ್ವದಿಂದ ನೋಡುವದು) ಇಲ್ಲಿ ಅದ್ವೈತವು ಪ್ರತಿಪಾದಿಸಲ್ಪಟ್ಟಿದೆ.

ಶ್ರೀಗಳವರು— ಏಕಸ್ಥಂ = ಎಂದರೆ ಒಂದೆಡೆಯಲ್ಲಿ ಇರುವದು. ಏಕತ್ವೇನ ಎಂಬ ಅರ್ಥ ಬಲಾತ್ಕಾರದ್ದೇ ಸರಿ.

ಲೋ. ಟಿಳಕ— ಈ ಶ್ಲೋಕದಲ್ಲಿ ಸ್ಪಷ್ಟ ಅದ್ವೈತದಪ್ರತಿಪಾದನೆ ಇಲ್ಲದಿದ್ದರೂ "ಅವಿಭಕ್ತಂ ವಿಭಕ್ತೇಷು ವಿಭಕ್ತಮಿವಚ ಸ್ಥಿತಮ್" ಇಲ್ಲಿ 'ವಿಭಕ್ತಮಿವ' ಎಂದು ಹೇಳಿದ್ದರಿಂದ ಜಗತ್ತು ವಿಭಕ್ತವಲ್ಲ, ವಿಭಕ್ತದಂತೆ ಎಂದು ತಿಳಿಯಬೇಕು.

ಶ್ರೀಗಳವರು—'ಏಕಸ್ಥ ಮನುಪಶ್ಯತಿ' ಎಂಬುದು ೧೩ನೇ ಅಧ್ಯಾಯದ ೩೦ನೇ ಶ್ಲೋಕವು. 'ವಿಭಕ್ತ ಮಿವಚ ಸ್ಥಿತಮ್' ಎಂಬುದು ಅದೇ ಅಧ್ಯಾಯದ ೧೬ನೇ ಶ್ಲೋಕವು. ಬೇರೆ ಬೇರೆ ಪ್ರಕರಣಗಳಲ್ಲಿ ಬಂದವು. ಒಂದಕ್ಕೊಂದು ಸಂಬಂಧವೇ ಇಲ್ಲ. ಮೇಲಾಗಿ ಪರಮಾತ್ಮನ ವರ್ಣನೆಯೇ "ವಿಭಕ್ತಮಿವ" ಎಂಬುದು. ಪರಮಾತ್ಮನು ಸರ್ವತ್ರ ಅವಿಭಕ್ತನಾಗಿದ್ದರೂ = ಒಬ್ಬನೇ ಆಗಿದ್ದರೂ ವಿಭಕ್ತನಂತೇ ಕಾಣುತ್ತಾನೆ ಎಂದು ಅರ್ಥವು. ಹೀಗಿರಲು ಇಲ್ಲಿ ಅದ್ವೈತದ ಪ್ರಶ್ನೆಯೇ ಇಲ್ಲವಲ್ಲ!

× × × ×

ಶ್ರೀಗಳು—'ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್' ಗೀತಾರಹಸ್ಯದ ೪೯೨ನೇ ಪುಟದಲ್ಲಿ ನೀವು ವರ್ಣಾಶ್ರಮ ಧರ್ಮವೇ ಆಗಲೀ ಅಥವಾ ತನ್ನ ಒಲವಿನಿಂದ ಸ್ವೀಕರಿಸಿದ ಯಾವುದೇ ವೃತ್ತಿ ಯಾಗಲೀ ಸ್ವಧರ್ಮ ಎಂದು ಮುಂತಾಗಿ ಬರೆದಿದ್ದೀರಿ. ತನಗೆ ಬೇಕಾದದ್ದೆಲ್ಲ ಸ್ವಧರ್ಮವೆನಿಸಲಾರದು. ಸ್ವಧರ್ಮ ಎಂದರೆ ಶಾಸ್ತ್ರೋಕ್ತ ಧರ್ಮವೇ ಆಗುವದು.

ಲೋ. ಟಿಳಕರು— ಗೀತೆಯ ಅಭಿಪ್ರಾಯ ತಮ್ಮಂತೆಯೆ! ಅದೇ ಅರ್ಥ ವನ್ನು ನಾನು ವ್ಯಾಖ್ಯಾನದಲ್ಲಿ ಬರೆದಿದ್ದೇನೆ. ಆದರೆ ಕಾಲಮಾನಾ ನುಸಾರ ಬೇಕಾಗಿರುವದನ್ನು ಉಪಸಂಹಾರದಲ್ಲಿ ಅಭಿಪ್ರಾಯರೂಪ ವಾಗಿ ಬರೆದಿದ್ದೇನೆ.

ಶ್ರೀಗಳವರು— ನಿಮಗೆ ಬೇಕಾದ ಅಭಿಪ್ರಾಯ ಬರೆಯಲು ಸ್ವಾತಂತ್ರ್ಯವಿದೆ. ಆದರೆ ಗೀತೆಯ ಅಭಿಪ್ರಾಯವಿದು ಎಂದು ಬರೆಯಬಹುದೇ? ಗೀತೆ ಯಲ್ಲಿ ಹೀಗೆ ಹೇಳಿದ್ದರೂ ಕಾಲಾನುಸಾರ ಹೀಗೆ ಮಾಡಬಹುದು ಎಂದು ನೀವು ಬರೆದಿದ್ದರೆ ಸರಿಯಾಗುತ್ತಿತ್ತಲ್ಲವೆ?

* * * *

ಚರ್ಚೆಯ ಕೊನೆಯಲ್ಲಿ ಶ್ರೀ ಬೆಳವಿಯವರು "ತುಂಬ ಸಮಯ ವಾಯಿತು, ಶ್ರೀ ಟಿಳಕರಿಗೆ ಆಯಾಸವಾಗಿದೆ. ಆದ್ದರಿಂದ ಇನ್ನುಳಿದ ವಿಷಯಗಳ ಮೇಲೆ ಶ್ರೀಗಳವರು ಪತ್ರವ್ಯವಹಾರ ಮಾಡಬಹುದು" ಎಂದು

ಸೂಚಿಸಿದರು. ಶ್ರೀಗಳವರು "ಗೀತಾರಹಸ್ಯ ಬರೆಯಲು ಶ್ರೀ ಟಿಳಕರು ೭-೮ ವರ್ಷ ಶ್ರಮವಹಿಸಿದ್ದಾರೆ. ಅದರಲ್ಲಿ ಪ್ರತಿಪಾದಿಸಿದ ವಿಷಯಗಳನ್ನು ಸಮರ್ಥಿಸಿಕೊಳ್ಳಲು ೭-೮ ದಿನಗಳಾದರೂ ಬೇಡವೇ ?" ಎಂದು ನಗೆಯಾಡಿದರು. ಸಮಕ್ಷಮದಲ್ಲಿ ಆಗುವ ಮಾತುಗಳಿಂದ ವಿಚಾರವಿನಿಮಯ ಎಷ್ಟು ಸುಲಭವೋ ಅಷ್ಟು ಲೇಖದಿಂದ ಆಗುವದಿಲ್ಲ ಎಂದರು.

ಇಲ್ಲಿಗೆ ಶ್ರೀ ಟಿಳಕ ಮೊದಲಾದ ಜನರು ಶ್ರೀಗಳವರ ಅಪ್ಪಣೆ ಪಡೆದು ತೆರಳಿದರು.

ಶ್ರೀ ಶ್ರೀ ಸತ್ಯಧ್ಯಾನ ಶ್ರೀಪಾದಂಗಳವರು ಪುಣೆಗೆ ಹೋದಾಗ ಲೋಕಮಾನ್ಯರು ಅವರಿಗೆ ಅಪೂರ್ವವಾದ ಸ್ವಾಗತವನ್ನಿತ್ತರು. ಶ್ರೀಪಾದಂಗಳವರು ಲೋಕಮಾನ್ಯರನ್ನೂ ಅವರ ಅನುಯಾಯಿಗಳನ್ನೂ ಮಠಕ್ಕೆ ಕರೆಯಿಸಿ ಶ್ರೀ ರಾಮದೇವರ ದರ್ಶನ ಮಾಡಿಸಿ, ತೀರ್ಥ ಪ್ರಸಾದಗಳನ್ನು ಇತ್ತು, ಶೇಷ ವಸ್ತ್ರವನ್ನೂ, ಫಲಮಂತ್ರಾಕ್ಷತೆಗಳನ್ನೂ ಕೊಟ್ಟು ಆಶೀರ್ವದಿಸಿದರು. ಶ್ರೀ ನ. ಚಿ. ಕೇಳಕರರು ಅಂಗಾರಾಕ್ಷತೆಗಳನ್ನು ಹಚ್ಚಿಕೊಂಡು ಮಠದಿಂದ ಹೊರಬಿದ್ದರು. ಈ ವೇಷವನ್ನು ಕಂಡು 'ಕೇಳಕರ ವೈಷ್ಣವ ಝಾಲೆ' ಎಂದು ಊರೆಲ್ಲ ನಗೆಗಡಲಲ್ಲಿ ಮುಳುಗಿತು.



## ಇತರ ಚಟುವಟಿಕೆಗಳು

### ಸ್ವರಾಜ್ಯ ಸಂಘದ ಹುಟ್ಟುಹಬ್ಬ

ಕರ್ನಾಟಕದ ಸಂಚಾರ ಮುಗಿಸಿಕೊಂಡು, ಸ್ವರಾಜ್ಯ ಸಂಘದ ವಾರ್ಷಿಕೋತ್ಸವಕ್ಕಾಗಿ ಟಿಳಕರು ನಾಸಿಕಕ್ಕೆ ಹೋದರು. ಹೋಮರೂಲ ಲೀಗಿನ ವರದಿಯು ಒಪ್ಪಿಸಲ್ಪಟ್ಟಿತು. ವರದಿಯು ಟಿಳಕರ ಭವ್ಯ ಕಾರ್ಯವ್ಯಾಪ್ತಿಯನ್ನೂ ಸುವ್ಯವಸ್ಥಿತವಾದ ಕಾರ್ಯಪದ್ಧತಿಯನ್ನೂ ಅವರ ಮಹಾನ್ ಯೋಗ್ಯತೆಯನ್ನೂ ವ್ಯಕ್ತಪಡಿಸುತ್ತಿತ್ತು. ಒಂದು ವರ್ಷದಲ್ಲಿ ೧೪೨೧೮ ಜನ ಸಭಾಸದರೂ ೯೦೦೦ ರೂಪಾಯಿಗಳ ವರ್ಗಣಿಯೂ ೬೦೦೦ ರೂಪಾಯಿಗಳ ನಿಧಿಯೂ ಕೂಡಿತ್ತು. ೬ ಮರಾಠಿ ಹಾಗೂ ೨ ಇಂಗ್ಲೀಷ ಗ್ರಂಥಗಳನ್ನು ಪ್ರಕಟಿಸಿ, ಸ್ವರಾಜ್ಯದ ಬೇಡಿಕೆಯನ್ನು ಮಂಡಿಸಿತು, ಟಿಳಕರ ಭಾಷಣದ ೭೫ ಸಾವಿರ ಪ್ರತಿಗಳನ್ನು ಕನ್ನಡ, ಮರಾಠಿ, ಇಂಗ್ಲೀಷ, ಗುಜರಾಥಿ ಭಾಷೆಗಳಲ್ಲಿ ಮುದ್ರಿಸಿ ಹಂಚಲಾಗಿದ್ದಿತು.

ಲೋಕಮಾನ್ಯರು ಈ ಸಭೆಯಲ್ಲಿ ಮಾತನಾಡುವಾಗ "ಮುಂದಿನ ವರ್ಷ ೫೦ ಸಾವಿರ ಸಭಾಸದರನ್ನೂ ೫೦ ಸಾವಿರ ರೂಪಾಯಿಗಳನ್ನೂ ನಾವು ಕೂಡಿಸಬೇಕು. ಇಂಗ್ಲಂಡದಲ್ಲಿ ನಾವು ಬಹಳ ಕಾರ್ಯವನ್ನು ಹೂಡಬೇಕಾಗಿದೆ. ನಾವು ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಕೇಳುತ್ತಿದ್ದೇವೆ. ಅದಕ್ಕೆ ತಕ್ಕ ಯೋಗ್ಯತೆಯನ್ನೂ ತ್ಯಾಗವನ್ನೂ ರಾಷ್ಟ್ರವು ತೋರಿಸಬೇಕು" ಎಂದು ಹೇಳಿದರು.

### ಸರಕಾರದ ತಲೆ ತಿರುಗಿತು

ದೇಶದಲ್ಲಿ ನಡೆದ ಹೋಮರೂಲ ಚಳವಳಿಯು ಸರಕಾರಕ್ಕೆ ತಲೆಶೂಲೆಯನ್ನು ಎಬ್ಬಿಸಿತು. ಅತ್ತ ಯುರೋಪದಲ್ಲಿ ಯುದ್ಧದ ಒತ್ತಡ. ಇತ್ತ ಹೋಮರೂಲ ಲೀಗಿನ ಚಳುವಳಿ. ಹೀಗಾಗಿ ಸರಕಾರಕ್ಕೆ ದಿಕ್ಕು ತೋಚದಾಯಿತು. ರಾಷ್ಟ್ರದಲ್ಲಿ ಒಡಕನ್ನು ಹುಟ್ಟಿಸಲು ಸಂಸ್ಥಾನಿಕರನ್ನೂ ಬ್ರಾಹ್ಮಣೇತರರನ್ನೂ ಚಳವಳಿಯ ವಿರುದ್ಧ ಹುರಿದುಂಬಿಸಿದರು. ಭಾರತ ಸಂರಕ್ಷಕ

ಸೈನಿಕ ಯೋಜನೆಯು ಚಳವಳಿಗಾರರ ಮೂಲಕ ಯಶಸ್ವಿಯಾಗಲೊಲ್ಲದು. ಇದರ ದೋಷವು ಮುಖಂಡರ ಮೇಲಿದೆ ಎಂದು ಸಾರಿತು. ಮದ್ರಾಸದ ಗವರ್ನರರಾದ ಲಾರ್ಡ ಪೆಟ್ಲಿಂಡರು ಸಾಮ್ರಾಜ್ಯಾಂತರ್ಗತ ಸ್ವರಾಜ್ಯವನ್ನು ಕೂಡಲೇ ಚಳವಳಿಗಾರರು ಕೇಳುತ್ತಿದ್ದಾರೆ. ಯುದ್ಧಾನಂತರ ಇಂಗ್ಲಂಡವು ಕೊಡಮಾಡಿದ ಸುಧಾರಣೆಗಳು ಹೋಮರೂಲ ಲೀಗಿನಕಿಂತ ಕಡಿಮೆಯಿವೆ ಎಂಬುದನ್ನು ತಿಳಿದೂ ಈ ರೀತಿ ಚಳವಳಿ ಮಾಡುವದೆಂದರೆ, ಸರಕಾರದ ವಿರುದ್ಧ ಬಂಡೆಬ್ಬಿಸಿದಂತೆ. ಇದರ ಪರಿಣಾಮವು ನೆಟ್ಟಗಾಗಲಿಕ್ಕಿಲ್ಲ ಎಂದು ಮೇ ೨೪ ಕ್ಕೆ ಎಚ್ಚರಿಕೆ ಕೊಟ್ಟರು. ವಿದ್ಯಾರ್ಥಿಗಳು ಚಳವಳಿಯಲ್ಲಿ ಭಾಗವಹಿಸಬಾರದೆಂದು ಸಾರಿದರು. ಆನಿಬಿಝೆಂಟ, ಹಾಗು ಅವರ ಅನುಯಾಯಿಗಳಾದ ಅರುಂಡೇಲ ಮತ್ತು ವಾಡಿಯಾರನ್ನು ಬಂಧಿಸಿ ಸ್ಥಾನಬದ್ಧತೆಯಲ್ಲಿಟ್ಟರು. ಪೆಟ್ಲಿಂಡರ ಈ ಕೃತಿಯು ನಿಷೇಧವು ಭಾರತದಲ್ಲೆಲ್ಲ ನಡೆಯಿತು. ಸರ ಸುಬ್ರಹ್ಮಣ್ಯ ಅಯ್ಯರ, ಸುರೇಂದ್ರನಾಥ ಬ್ಯಾನರ್ಜಿ, ಜಿನ್ನಾ, ಸರ ಚಿಂತಾಮಣಿ ಮೊದಲಾದವರು ಇದರ ನಿಷೇದಾರ್ಥವಾಗಿ ಹೋಮರೂಲ ಲೀಗಿನ ಸಭಾಸದರಾದರು. ಲಕ್ಷಾವಧಿ ಜನರು ಸ್ವರಾಜ್ಯ ಪತ್ರಿಕೆಯ ಮೇಲೆ ಸಹಿ ಮಾಡಿ ಪೆಟ್ಲಿಂಡರಿಗೆ ಉತ್ತರವಿತ್ತರು. ಅತ್ತ ಇಂಗ್ಲಂಡದ ಮುಖ್ಯ ಪ್ರಧಾನರು ಸ್ವಯಂ ನಿರ್ಣಯ ತತ್ವದೊಡನೆ ಭಾರತದ ತಳಕು ಹಾಕುತ್ತಿರುವಾಗ ಆಳರಸರು ಭಾರತೀಯರನ್ನು ಕೆರಳಿಸುತ್ತಿದ್ದರು. ಮಹಾತ್ಮಾ ಗಾಂಧೀಯವರು ಚಂಪಾರಣ್ಯದಲ್ಲಿ ಸತ್ಯಾಗ್ರಹ ಹೂಡಿದ್ದರು. ಟಿಳಕರು ತಮ್ಮ ಸ್ವರಾಜ್ಯ ಸಂಘದ ವತಿಯಿಂದ ಬ್ಯಾ. ಬ್ಯಾಪ್ಟಿಸ್ಟರವರನ್ನೂ ಬಿಝೆಂಟರ ಸಂಘದಿಂದ ಬ್ಯಾ. ಅಯ್ಯರರನ್ನೂ ಕಾಂಗ್ರೆಸ್ ಯೋಜನೆಯ ಪ್ರಚಾರಕ್ಕಾಗಿ ಇಂಗ್ಲಂಡಿಗೆ ಕಳಿಸಿಕೊಟ್ಟರು.

ಜುಲೈ ತಿಂಗಳ ಕೊನೆಯಲ್ಲಿ ಮುಂಬಯಿಯಲ್ಲಿ ಅ. ಭಾ. ಕಾ. ಕಮಿಟಿಯ ಹಾಗೂ ಮುಸ್ಲಿಂ ಲೀಗಿನ ಸಂಯುಕ್ತ ಸಭೆ ನಡೆಯಿತು. ಸರಕಾರದ ದಬ್ಬಾಳಿಕೆಗೆ ಉತ್ತರವೆಂದು ಅಸಹಕಾರವನ್ನು ಸಾರಬೇಕೆಂದು ಟಿಳಕರು ಪ್ರತಿಪಾದಿಸಿದರು. ಅದನ್ನು ಪ್ರಾಂತಿಕ ಕಾಂಗ್ರೆಸ್ ಕಮಿಟಿಗಳ ಕಡೆಗೆ ಅಭಿಪ್ರಾಯಕ್ಕೆ ಕಳಿಸಬೇಕೆಂದು ಗೊತ್ತಾಯಿತು. ಸ್ಥಾನಬದ್ಧತೆಯು ನಿಷೇಧಿಸಲ್ಪಟ್ಟಿತು. ಅಲ್ಲೀ ಬಂಧುಗಳನ್ನು ಕೂಡಲೇ ಬಿಡಬೇಕೆಂದು ಸಾರಿತು.

ಲೋಕಮಾನ್ಯರು ಮುಂದಿನ ಕಾಂಗ್ರೆಸ್ಸಿಗೆ ಡಾ. ಆನಿಬಿಝೆಂಟರನ್ನೇ ಅಧ್ಯಕ್ಷರನ್ನಾಗಿ ಮಾಡಬೇಕೆಂಬ ಗೊತ್ತುವಳಿಯನ್ನು ಮುಂಡಿಸಿ ಪಾಸು ಮಾಡಿಕೊಂಡರು. ಇದು ಸರಕಾರಕ್ಕೆ ಆವ್ಹಾಹನವಾಗಿದ್ದಿತು.

## ಮೊಂಟೆಗ್ಯೂ ಚೇಮ್ಸಫೋರ್ಡರ ಘೋಷಣೆ

೨೦ ನೇ ಅಗಸ್ಟಕ್ಕೆ ಭಾರತದ ಮಂತ್ರಿಗಳಾದ ಮೊಂಟೆಗ್ಯೂರವರು "ಭಾರತಕ್ಕೆ ಹೊಣೆಗಾರಿಕೆಯ ಸ್ವರಾಜ್ಯವನ್ನು ಕೊಟ್ಟು ಸಾಮ್ರಾಜ್ಯ ದಲ್ಲಿಯ ಒಂದು ಘಟಕವನ್ನು ಮಾಡುವದೇ ಬ್ರಿಟಿಶ ಸರಕಾರದ ಧೋರಣವಿದ್ದು, ಈ ವಿಷಯವಾಗಿ ಭಾರತ ಸರಕಾರದೊಡನೆಯೂ ಹಾಗು ಜನತೆಯೊಡನೆಯೂ ವಿಚಾರವಿನಿಮಯ ಮಾಡಲು ಭಾರತಕ್ಕೆ ಬರುತ್ತೇವೆ" ಎಂದು ಘೋಷಣೆ ಹೊರಡಿಸಿದರು. ಮದ್ರಾಸ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಆನಿಬಿಝೆಂಟರನ್ನು ಕೂಡಲೇ ಬಿಡಬೇಕೆಂದೂ ಇಂತಹ ಅನ್ಯಾಯದ ಅಪ್ಪಣೆಗಳು ಮುಂದೆ ಹೊರಡಿಸಲ್ಪಟ್ಟರೆ ಅವೆಲ್ಲವುಗಳನ್ನು ಮುರಿದು ಸತ್ಯಾಗ್ರಹ ಮಾಡಲಾಗುವದೆಂದೂ ಸಾರಿತು. ೧೭ ನೇ ಸಪ್ಟಂಬರಕ್ಕೆ ಆನಿಬಿಝೆಂಟರು ಬಿಡಲ್ಪಟ್ಟರು. ಸಂಭ್ರಮದ ಸ್ವಾಗತವಾಯಿತು. ೭ ನೇ ಆಕ್ಟೋಬರದಲ್ಲಿ ಅಹಮ್ಮದಾಬಾದಿನಲ್ಲಿ ಸೇರಿದ ಅ. ಭಾ. ಕಾಂಗ್ರೆಸ್ ಕಮಿಟಿಗೆ ಟಿಳಕ ಹಾಗೂ ಬಿಝೆಂಟರಿಬ್ಬರೂ ಉಪಸ್ಥಿತರಿದ್ದರು. ೨೭ ನೇ ಆಕ್ಟೋಬರಕ್ಕೆ ನಡೆದ ಜೋತಿಷ ಸಮ್ಮೇಲನದಲ್ಲಿ ಟಿಳಕರು ಭಾಗವಹಿಸಿದರು.

ಲೋಕಮಾನ್ಯರ ಹಾಗೂ ಬಿಝೆಂಟಮ್ಮನವರ ಎರಡೂ ಲೀಗುಗಳು ಮೊಂಟೆಗ್ಯೂ ಅವರ ಕಡೆಗೆ ಶಿಷ್ಟಮಂಡಲ ಕಳಿಸಲು ನಿಶ್ಚಯಿಸಿದವು. ಲೋಕಮಾನ್ಯರು ಖಾಪರ್ಡೆ, ಬೆಳವಿ, ಗಂಗಾಧರರಾವ ದೇಶಪಾಂಡೆ, ಕೇಳಕರ ಮೊದಲಾದವರೊಡನೆ ೨೩ನೇ ತಾರೀಖಿಗೆ ದಿಲ್ಲಿಗೆ ಹೊರಟರು. ದಿಲ್ಲಿಯು ಅವರಿಗಿತ್ತ ಸನ್ಮಾನವು ಎಂತಹ ಸಾಮ್ರಾಟನಿಗೂ ಮತ್ಸರವನ್ನು ಉಂಟು ಮಾಡುವಂತಹದಿತ್ತು. ೨೬ನೇ ತಾರೀಖಿನ ದಿವಸ ಭೆಟ್ಟಿಯಾಗಿ ತಮ್ಮ ಮನವಿಯನ್ನು ಒಪ್ಪಿಸಿದರು. ಬಿಝೆಂಟರೂ, ಕಾಂಗ್ರೆಸ್ಸು, ಮುಸ್ಲಿಂ ಲೀಗು ಮೊದಲಾದವರೂ ತಮ್ಮ ತಮ್ಮ ಮನವಿಗಳನ್ನು ಒಪ್ಪಿಸಿದರು. ಮಾಂಟೆಗ್ಯೂರವರು ಬಿಝೆಂಟರನ್ನೂ, ಟಿಳಕರನ್ನೂ ವ್ಯಕ್ತಿಗತವಾಗಿ ಕರೆ ಯಿಸಿಕೊಂಡು ವಿಚಾರವಿನಿಮಯ ಮಾಡಿದರು. ಟಿಳಕರು ಬರುವ ಮುಂದೆ

ಅನೇಕ ಸ್ಥಳಗಳಿಗೆ ಭೆಟ್ಟಿಯನ್ನಿತ್ತರು. ೨೨ನೇ ಡಿಸೆಂಬರದಲ್ಲಿ ಆನಿಬಿಝೆಂಟರ ಅಧ್ಯಕ್ಷತೆಯಲ್ಲಿ ಕಲಕತ್ತೆಯಲ್ಲಿ ನಡೆದ ಸಂಭ್ರಮದ ಕಾಂಗ್ರೆಸ್ಸನ್ನು ಮುಗಿಸಿ ಕೊಂಡು ಲೋಕಮಾನ್ಯರು ಮರುಳಿದರು.

## ಸುವರ್ಣ ವೃಷ್ಟಿ

ಲೋಕಮಾನ್ಯರು ಕಲಕತ್ತೆಯಿಂದ ಮರುಳಿದೊಡನೆಯೇ ಸುಪ್ರಸಿದ್ಧ ವಾದ ವರ್ಹಾಡ, ನಾಗಪೂರಗಳ ಸಂಚಾರವನ್ನು ಕೈಕೊಂಡರು. ನೂರಾರು ಊರುಗಳಿಗೆ ದರ್ಶನ ಕೊಟ್ಟರು. ಲಕ್ಷಾವಧಿ ಜನರಿಗೆ ಸ್ವರಾಜ್ಯದ ಸಂದೇಶ ವನ್ನು ಮುಟ್ಟಿಸಿದರು. ವಿಲಾಯತಿಯಲ್ಲಿ ಆಂದೋಲನ ಹೂಡುವ ಯೋಜ ನೆಯನ್ನು ಜನರ ಮುಂದೆ ಇಟ್ಟು, ಸ್ವರಾಜ್ಯದ ಕಾರ್ಯಸಾಧನೆಗಾಗಿ ನಿಧಿ ಬೇಕೆಂದರು. ಲೋಕಮಾನ್ಯರ ದರ್ಶನದಿಂದ ಪುನೀತವಾದ ಜನ ಅವರನ್ನು ದೇವರಂತೆ ಭಾವಿಸಿತು. ವೀರಪೂಜೆ ಮಾಡಿತು. ಅವರ ಮೇಲೆ ಸುವರ್ಣ ವೃಷ್ಟಿಯನ್ನು ಸುರಿಸಿತು ಸ್ತ್ರೀಯರ, ವಿದ್ಯಾರ್ಥಿಗಳ, ರೈತರ ಸಭೆಗಳಲ್ಲಿ ನಿಧಿಯು ಅರ್ಪಿಸಲ್ಪಡಹತ್ತಿತು. ಎಷ್ಟೋ ಜನರು ಆಭರಣಗಳನ್ನು ಕೊಟ್ಟರು. ಜಳಗಾಂವದಲ್ಲಿ ಒಬ್ಬ ಲಿಂಗವಂತರು ಆಶೀರ್ವಾದವೆಂದು ತಮ್ಮ ಕೊರಳಲ್ಲಿಯ ಗುಂಡಗಡಿಗೆಯನ್ನು ಕೊಟ್ಟರು. ಮುಂಬಯಿಯಲ್ಲಿಯ ಕೂಲಿಕಾರರು, ವ್ಯಾಪಾರಸ್ಥರು, ಗುಜರಾಥಿಗಳು, ಮಾರವಾಡಿಗಳು, ವೈದಿಕರು ಎಲ್ಲರೂ ಟಿಳಕರನ್ನು ಸತ್ಕರಿಸಿ ನಿಧಿಯನ್ನು ಅರ್ಪಿಸಿದರು. ಮುಂಬಯಿ ಬಂದರದಲ್ಲಿಯೇ ೨ ದಿನಗಳಲ್ಲಿ ೪೮ ಸಾವಿರ ರೂಪಾಯಿ ಕೂಡಿದವು. ಒಟ್ಟು ಈ ಪ್ರವಾಸದಲ್ಲಿ ೨ ಲಕ್ಷ ರೂಪಾಯಿಗಳು ಕೂಡಿದವು.

## ಕೋಲಂಬೊ ಪ್ರವಾಸ

ಲೋಕಮಾನ್ಯರು ಬಿಪಿನಚಂದ್ರಪಾಲ, ಕೇಳಕರ ಮೊದಲಾದ ಶಿಷ್ಟಮಂಡಳದೊಡನೆ ಕೋಲಂಬೋಕ್ಕೆ ಹೊರಟರು. ಕೋಲಂಬೋ ಮುಟ್ಟಿದೊಡನೆ ಅಲ್ಲಿಯ ಜನತೆಯೂ ಹಾರ್ದಿಕ ಸ್ವಾಗತವೀಯಿತು. ಲೋಕ ಮಾನ್ಯರ ಹಾಗು ಪಾಲ ಬಾಬುಗಳ ವ್ಯಾಖ್ಯಾನಗಳು ಆದವು. ಮರುದಿವಸ ಪಾಸಪೋರ್ಟಗೆ ಸಹಿ ತೆಗೆದುಕೊಳ್ಳಲು ಹೋದಾಗ, ನಿಮ್ಮ ಪಾಸಪೋರ್ಟು ಗಳು ರದ್ದಾಗಿವೆ ಎಂದು ಹೇಳಲ್ಪಟ್ಟಿತು. ಟಿಳಕರು ವ್ಹಾಯಿಸರಾಯ

ರಿಗೆ ತಾರು ಮಾಡಿದರು. ವ್ಯರ್ಥವಾಯಿತು. ಈ ಸುದ್ದಿಯು ಮುಂಬಯಿಗೆ ತಿಳಿದೊಡನೆ ದೇಶದಲ್ಲೆಲ್ಲ ನಿಷೇಧಪರ ಸಭೆಗಳಾದವು. ವಿಲಾಯತಿಯಲ್ಲಿ ಚಳವಳಿಯಾಯಿತು. ಎಲ್ಲವೂ ವ್ಯರ್ಥವಾಗಿ ಬಂದ ದಾರಿಗೆ ಸುಂಕವಿಲ್ಲೆಂದು ಟಿಳಕರು ಮರಳಿ ಬರಬೇಕಾಯಿತು. ಎಪ್ರಿಲ್ ತಿಂಗಳ ೩ನೇ ವಾರದಲ್ಲಿ ಭಾರತ ಸರಕಾರವು "ಯುದ್ಧವು ನಿಕರಕ್ಕೆ ಬಂದಿದ್ದು, ಇಂತಹ ಸಮಯದಲ್ಲಿ ವಿಲಾಯತಿಯಲ್ಲಿ ಹೋಮರೂಲ ಚರ್ಚೆ ನಡೆಸುವದು ಅನಿಷ್ಟವಾದ ಮೂಲಕ, ಟಿಳಕರ ಪಾಸಪೋರ್ಟ ತಿರುಗಿ ತಕ್ಕೊಳ್ಳಲ್ಪಟ್ಟಿತೆಂದು ಸಮರ್ಥಿಸಿಕೊಂಡಿತು ಮತ್ತು ಎಪ್ರಿಲ್ ೨೮ ಕ್ಕೆ ಯುದ್ಧಪರಿಷತ್ತನ್ನು ಕರೆಯಿತು. ಈ ಯುದ್ಧ ಪರಿಷತ್ತಿನ ಮತ್ತು ಮುಂಬಯಿ ಪರಿಷತ್ತಿನ ಕಥೆಯನ್ನು ಹಿಂದೆಯೇ ಹೇಳಿದ್ದೇವೆ.

ಜೂನ ತಿಂಗಳ ಮೂರನೇ ವಾರದಲ್ಲಿ ಮೊಂಟೆಗ್ಯೂರವರ ಯೋಜನೆಯು ಕರಡು ಪ್ರಸಿದ್ಧವಾಯಿತು. ಅದರಲ್ಲಿ ಭಾರತಕ್ಕೆ ಏನು ದೊರೆಯುವದೆಂಬುದು ಸ್ಪಷ್ಟವಾಗಿತ್ತು. ಅದನ್ನು ಉದ್ದೇಶಿಸಿ ಟಿಳಕರು "ಬೆಳಗಾಯಿತು ಸೂರ್ಯನೆಲ್ಲಿ?" "ರಾಯರೆ ದಿಲ್ಲಿ ಇನ್ನೂ ದೂರವಿದೆ" "ಸಮ್ಮತಿ ಹಾಗೂ ಅಸಮ್ಮತಿ" ಎಂಬ ಮೂರು ಅಗ್ರಲೇಖಗಳನ್ನು ಬರೆದು, ಸುಧಾರಣೆಗಳ ಹೂರಣವನ್ನು ಹೊರಗೆಡವಿದರು. ಸುಧಾರಣೆಗಳು ಅಪೂರ್ಣವಿರುವ ಮೂಲಕ ಒಪ್ಪಿಗೆಯಿಲ್ಲ. ಆದರೂ ಸರ್ವಸ್ವವನ್ನು ಅಸಮ್ಮತಿಸದೆ, ನಮಗೆ ಬೇಕಾದುದನ್ನೆಲ್ಲ ಸೂಚಿಸಿ, ಸಮ್ಮತಿಸದಿರುವದು ಒಳ್ಳೇದು ಎಂದು ಧೋರಣೆವನ್ನು ಸ್ಪಷ್ಟೀಕರಿಸಿದರು. ಕೊನೆಗೆ ಕಾಂಗ್ರೆಸ್ಸು ಮಾಡಿದ್ದು ನಮಗೆ ಮಾನ್ಯ ಎಂದು ಹೇಳಿದರು.

### ವಿಲಾಯತಿಗೆ ಪ್ರಯಾಣ

ಚಿರೋಲರ ಪ್ರಕರಣದ ಬಗ್ಗೆ ಪಾಸುಪೋರ್ಟು ದೊರಕಿಸಲು ಪ್ರಯತ್ನ ನಡೆಸಿದರು. "ವಿಲಾಯತಿಯಲ್ಲಿ ಯಾವ ರಾಜಕೀಯ ಚಳವಳಿಯನ್ನೂ ಹೂಡಕೂಡದು" ಎಂಬ ಕರಾರಿನ ಮೇಲೆ ಒಬ್ಬ ವಕೀಲ, ಇಬ್ಬರು ಸಂಗಡಿಗರನ್ನು ಕರೆದುಕೊಂಡು ಹೋಗಬಹುದು ಎಂದು ಸರಕಾರವು ಅಪ್ಪಣೆಯನ್ನು ಕೊಟ್ಟಿತು. ಆದರ ಉಪಯೋಗ ಮಾಡಿಕೊಳ್ಳುವ ಸಮಯ ನಿರೀಕ್ಷಿಸುತ್ತಿದ್ದರು. ೨೨ನೇ ಜೂನಕ್ಕೆ ಸರಕಾರವು ಸೈನ್ಯಭರತಿಗೆ ಟಿಳಕರಿಂದ

ಆತಂಕವಾಗುವದೆಂದು ಅವರ ಕೆಲವು ಭಾಷಣಗಳಲ್ಲಿಯ ವಾಕ್ಯಗಳನ್ನು ತೋರಿಸಿ, ನೀವು ಯಾವುದೇ ಜಿಲ್ಹೆಯಲ್ಲಿ ಮಾತನಾಡಬೇಕಿದ್ದರೆ ಆ ಜಿಲ್ಹೆಯ ಮುಖ್ಯಾಧಿಕಾರಿಯ ಮುಂಬಯಿ ಪೋಲೀಸ ಕಮಿಶನರರ ಅಪ್ಪಣೆ ಯನ್ನು ಮೊದಲು ತೆಗೆದುಕೊಳ್ಳಬೇಕು ಎಂದು ಹುಕುಮು ಹೊರಡಿಸಿದ್ದಿತು. ಆದರೆ ಈ ಮೊದಲು ಮುಂಬಯಿಯಲ್ಲಿ ಸುಧಾರಣೆಗಳನ್ನು ವಿಚಾರಿಸುವದ ಕ್ಕಾಗಿ ಕಾಂಗ್ರೆಸ್ಸಿನ ವಿಶೇಷ ಅಧಿವೇಶನ ಕೂಡಿಸಬೇಕೆಂದು ನಿರ್ಣಯ ವಾಗಿತ್ತು. ಮೇಲಿನ ಅಪ್ಪಣೆಯಲ್ಲಿ ವಿಶೇಷ ಅಧಿವೇಶನದಲ್ಲಿ ಸುಧಾರಣೆಯ ಯೋಜನೆಯ ಸಂಬಂಧದಲ್ಲಿ ಟಿಳಕರು ಭಾಷಣ ಮಾಡಬಹುದೆಂದು ಅವಕಾಶ ಕೊಟ್ಟಿದ್ದರು. ಟಿಳಕರಿಗೆ ಕೊಟ್ಟ ಅಪ್ಪಣೆಯಿಂದ ಸ್ವೈನ್ಯಭರತಿ ಕಾರ್ಯಕ್ಕೆ ಬಹಳ ತೊಂದರೆಯಾಗಿದೆ ಎಂದು ಗಾಂಧೀಜಿಯವರು ಸರಕಾರಕ್ಕೆ ದೂರು ಮುಟ್ಟಿಸಿದರು. ಮುಂಬಯಿಯ ವಿಶೇಷ ಅಧಿವೇಶನ ದಲ್ಲಿ ಸರ್ವಸಮ್ಮತವಾದ ಯೋಜನೆಯನ್ನು ಸಿದ್ಧಪಡಿಸಿ, ಟಿಳಕರೇ ಅದನ್ನು ಮಂಡಿಸಿ ಪಾಸು ಮಾಡಿಕೊಂಡರು. ಹೀಗೆ ರಾಷ್ಟ್ರೀಯ ಸಭೆಯ ಯೋಜನೆ ಸಿದ್ಧಪಡಿಸಿದ ಮೂಲಕ ಟಿಳಕರ ಭಾರತದಲ್ಲಿಯ ಕಾರ್ಯ ಮುಗಿದಿತ್ತು. ಇಂಗ್ಲಂಡಕ್ಕೆ ಹೋಗಲು ಒಳ್ಳೇ ಅನುಕೂಲ ಕಾಲ ಒದಗಿತು. ೧೯೧೮ರ ಸಪ್ಟಂಬರ ೧೯ರಂದು ಯಾವ ಸಮಾರಂಭಗಳಿಗೂ ಅವಕಾಶ ಕೊಡದೆ, ವಕೀಲರೆಂದು ದಾದಾಸಾಹೇಬ ಕರಂದೀಕರ, ಗೆಳೆಯರೆಂದು ವಾಸುದೇವ ರಾವ ಜೋಶಿ, ಪರಿಚಾರಕರೆಂದು ನಾಮುಜೋಶಿಯವರನ್ನು ಕರೆದುಕೊಂಡು ವಿಲಾಯತಿಗೆ ಪ್ರಯಾಣ ಬೆಳಸಿದರು.

---

## ಚಿರೋಲ ಪ್ರಕರಣ

ಲೋಕಮಾನ್ಯರಿಗೆ ಇಂಗ್ಲಂಡಿಗೆ ಹೋಗಲು ಅಪ್ಪಣೆ ಕೊಟ್ಟರೂ ಸಾರ್ವಜನಿಕ ಉಪನ್ಯಾಸಗಳನ್ನು ಕೊಡಕೂಡದೆಂದು ನಿರ್ಬಂಧವನ್ನು ಹಾಕಲಾಗಿತ್ತು. ಇಂಗ್ಲಂಡದಲ್ಲಿ ಹೋಮರೂಲ ಲೀಗಿನ ಆಂದೋಲನವನ್ನು ಹೂಡಿ ಬ್ರಿಟಿಶರನ್ನೆಲ್ಲ ಒಲಿಸಿಕೊಳ್ಳುವರು ಎಂದು ಸರಕಾರಕ್ಕೆ ಭೀತಿ. ಗೆಳೆಯರೆಲ್ಲರೂ ಈ ಬಂಧನಕ್ಕೊಳಗಾಗುವದೆಂದರೆ ರಾಜಕೀಯ ಆತ್ಮಘಾತ ವೆಂದೂ ಇದಕ್ಕೆ ಒಪ್ಪಬಾರದೆಂದೂ ಹೇಳಹತ್ತಿದರು. ಚಿರೋಲ ಪ್ರಕರಣವು ಹದಗೆಟ್ಟರೂ ಚಿಂತೆಯಿಲ್ಲವೆಂದು ಅವರ ಮತ. ಆದರೆ ಟಿಳಕರ ಎಣಿಕೆಯೇ ಬೇರೆ ಇದ್ದಿತು. ರಾಷ್ಟ್ರದ ಪ್ರಶ್ನೆಯ ಮುಂದೆ ವ್ಯಕ್ತಿಯು ತೀರ ಕ್ಷುಲ್ಲಕವೆಂದು ಅವರು ಭಾವಿಸುತ್ತಿದ್ದರು. ಇಂಗ್ಲಂಡದಲ್ಲಿ ತಮ್ಮ ಸ್ವಭಾವದಿಂದಲೇ ಜನಮತ ವನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವೆನೆಂದು ಅವರಿಗೆ ಆತ್ಮವಿಶ್ವಾಸವಿದ್ದಿತು. ಈ ಧೈರ್ಯದಿಂದಲೇ ಅವರು ಇಂಗ್ಲಂಡಕ್ಕೆ ಹೊರಡುವ ನಿಶ್ಚಯ ಮಾಡಿದರು. ನೀವು ಹೇರಿದ ಬಂಧನವನ್ನು ನಾನು ನಿಷೇಧಿಸದೆ, ಅವುಗಳನ್ನು ಪಾಲಿಸುವೆ. ಆದರೆ ಇಂಗ್ಲಂಡಕ್ಕೆ ಹೋದನಂತರ ಈ ನಿಮ್ಮ ನಿರ್ಬಂಧವು ದೂರಾಗ ಬೇಕೆಂದು ಖಂಡಿತವಾಗಿ ಪ್ರಯತ್ನಿಸುವೆ." ಎಂದು ಸರಕಾರಕ್ಕೆ ಬರೆದು ತಿಳಿಸಿ, ಬಂಧನಕ್ಕೆ ಸಮ್ಮತಿಸಿದರು. ಲೋಕಮಾನ್ಯರ ಈ ಬುದ್ಧಿಮತ್ತೆಗಾಗಿ ಸರಕಾರವು ಬೊಟ್ಟುಕಚ್ಚಿತು.

ಈ ಬಗೆಯ ನಿರ್ಬಂಧ ಹೇರುವದರಲ್ಲಿ ಆಳರಸರಿಗೆ ಒಂದು ವಿಶಿಷ್ಟ ಉದ್ದೇಶವಿದ್ದಿತು. ಇದೇ ಸಮಯಕ್ಕೆ 'ಸಿಡಿಶೆಸ್ ಕಮಿಟಿ'ಯು ವರದಿಯನ್ನು ಹೊರಗೆಡವಿತು. ಅದರಲ್ಲಿ ಟಿಳಕರಿಗೂ ಕ್ರಾಂತಿಕಾರಕ ಚಳವಳಿಗೂ ಗಂಟು ಹಾಕಲು ಪ್ರಯತ್ನಿಸಲಾಗಿತ್ತು. ಇದರ ಉದ್ದೇಶವಿಷ್ಟೆ! ಚಿರೋಲರ ಪ್ರಕರಣ ದಲ್ಲಿ ಜೂರಿಗಳ ಮನಸ್ಸು ಕಲುಷಿತವಾಗಬೇಕೆಂಬುದು. ಟಿಳಕರೆಂದರೆ ಒಂದು ಭಯಂಕರ ಪ್ರಾಣಿಯೆಂಬ ಭಾವನೆ ಬ್ರಿಟಿಶರಲ್ಲಿ ಉತ್ಪನ್ನವಾಗಬೇಕೆಂದು

ಇದ್ದಿತು. ಇಷ್ಟೆಲ್ಲ ಪೂರ್ವ ಸಿದ್ಧತೆ ಮಾಡಿ ಟಿಳಕರಿಗೆ ವಿಲಾಯತಿಗೆ ಹೋಗಲು ಅಪ್ಪಣೆಯನ್ನು ಕೊಟ್ಟಿತ್ತು. ಈ ಹಿನ್ನೆಲೆಯಲ್ಲಿ ಈ ಪ್ರಕರಣ ನೋಡಬೇಕು.

ಚಿರೋಲ ಪ್ರಕರಣವು ಟಿಳಕರ ಜೀವನದಲ್ಲಿ ಮರೆಯಲಾರದ ಘಟನೆ. ಟಿಳಕರು ಆರು ವರ್ಷ ಕಾಲ ಮಂಡಾಲೆಯ ಸೆರಮನೆಯಲ್ಲಿ ನರಳುತ್ತಿರುವಾಗ, ಲಂಡನ್ 'ಟಾಯಿಮ್ಸ್'ದ ಚಿರೋಲರು ಭಾರತಕ್ಕೆ ಬಂದು ಇಲ್ಲಿಯ ರಾಜಕೀಯ ಚಟುವಟಿಕೆಗಳನ್ನು ಅಭ್ಯಸಿಸಿ, ಅವುಗಳನ್ನು ಕುರಿತು ಲೇಖ ಮಾಲೆಯನ್ನೇ ಪತ್ರಿಕೆಯಲ್ಲಿ ಪ್ರಕಟಿಸಿದರು. ಮುಂದೆ ೧೯೧೦ ರಲ್ಲಿ ಅವುಗಳನ್ನು ಸಂಗ್ರಹಿಸಿ 'Indian Unrest' (ಭಾರತದ ಅಸಂತೋಷ) ಎಂಬ ಗ್ರಂಥವನ್ನೇ ಪ್ರಕಟಿಸಿದರು. ತಾವು ಆ ಲೇಖನಗಳನ್ನು ಏಕೆ ಬರೆಯಬೇಕಾಯಿತೆಂಬುದನ್ನು ಕುರಿತು ತಾವೇ ಒಂದೆಡೆ ಹೇಳಿದ್ದಾರೆ.

"೧೯೦೧ ರಲ್ಲಿ ನಾನು ಟಾಯಿಮ್ಸದ ಡಾಯರೆಕ್ಟರನೆಂದು ಕಾರ್ಯ ಮಾಡುತ್ತಿದ್ದಾಗ ಭಾರತಕ್ಕೆ ಬಂದು, ರಾಜದ್ರೋಹ ಮಾಡುತ್ತಿದ್ದ ಬೇರೆ ಬೇರೆ ರಾಜಕೀಯ ಗುಂಪುಗಳ ಚಟುವಟಿಕೆಗಳನ್ನು ಅಭ್ಯಸಿಸಿದೆ. ಇಲ್ಲಿಯ ವಾತಾವರಣವನ್ನು ಎದುರಿಸಲು, ಬ್ರಿಟಿಶ್ ಸರಕಾರವು ಆಡಳಿತೆಯ ಶಕ್ತಿಯನ್ನು ಹೆಚ್ಚಿಸಲು ಪ್ರಯತ್ನಿಸುತ್ತಿತ್ತು. ರಾಜಕೀಯ ಧುರೀಣರೆಲ್ಲರೂ ಸರಕಾರದ ಉದಾರ ಧೋರಣೆಯನ್ನು ವಿರೋಧಿಸುತ್ತಿದ್ದರು. ಅಂತಲೇ ನಾನು ರಾಜಕೀಯ ಮತ್ತು ಸಾಮಾಜಿಕ ಆಂದೋಲನಗಳ ಮೂಲವನ್ನು ಕಂಡು ಹಿಡಿಯಲು ಪ್ರಯತ್ನಿಸಿದೆ. ನನ್ನ ಕಾರ್ಯಕ್ಕೆ ಸಹಕಾರ ನೀಡಲು ಭಾರತ ಸರಕಾರವನ್ನೂ ಮತ್ತು ಸ್ಥಾನಿಕ ಸರಕಾರಗಳನ್ನೂ ಕೇಳಿಕೊಂಡೆ. ಅಲ್ಲದೆ, ಭಾರತೀಯರಿಂದ ಮತ್ತು ಅನೇಕ ಆಂಗ್ಲರಿಂದ ಅನೇಕ ಸಂಗತಿಗಳನ್ನು ಕಲೆಹಾಕಿದೆ.

ಬ್ರಿಟಿಶ ಜನತೆ ಹಾಗೂ ಸರಕಾರದ ಎದುರು ಸತ್ಯವಾದ ಪರಿಸ್ಥಿತಿಯ ಒಂದು ವರದಿಯನ್ನು ಇಡಬೇಕೆಂದು ಅನಿಸಿದ್ದರಿಂದ, ನಾನು ಮಾಡಹೊರಟ ಈ ಕಾರ್ಯಕ್ಕೆ ಸಹಾಯಮಾಡಲು ಸರಕಾರವು ನಿರ್ಧರಿಸಿತು. ತನ್ನಲ್ಲಿದ್ದ ಗುಪ್ತಕಾಗದಗಳನ್ನೊಳಗೊಂಡು, ಅನೇಕ ಮಹತ್ವದ

ಕೇಳಿಲ್ಲ. ಒಬ್ಬ ಉತ್ತಮ ಮನುಷ್ಯನನ್ನು ನಾನು ವಿನಾಕಾರಣ ಕೊಂದಂತಾಯಿತು" ಇದಕ್ಕಿಂತಲೂ ಹೆಚ್ಚಿನ ಮಾತಿನಿಂದ ಯಾರಾದರೂ ತಮ್ಮ ತಪ್ಪನ್ನು ಒಪ್ಪಿಕೊಳ್ಳುತ್ತಾರೆಯೆ? ಕಾನ್ಹೇಯು ಹೇಳಿದ ಮೂರೂ ಪತ್ರಿಕೆಗಳೂ ಟಿಳಕರ ಅಭಿಪ್ರಾಯದವುಗಳೇ! ಕಾನ್ಹೇಯನು ಜಾಕ್‌ಸನ್‌ನನ್ನು ಬುದ್ಧಿಪೂರ್ವಕವಾಗಿ ಕೊಂದಿಲ್ಲ. ಆದರೆ ಟಿಳಕರ ಪತ್ರಿಕೆಯಲ್ಲಿಯ ವಿಚಾರಗಳಿಂದ ಉದ್ದೀಪನಗೊಂಡು ಕೊಲೆಮಾಡಲು ಸಿದ್ಧನಾದನು. ಕಾನ್ಹೇಯ ಕೈಯೇ ಅವರನ್ನು ಕೊಲೆ ಮಾಡಿದಾಗ್ಯೂ, ನಿಜವಾದ ಕೊಲೆಗಾರರು, ಕೊಲೆಗೆ ಪ್ರಚೋದನೆ ಮಾಡಿದ ಟಿಳಕರಲ್ಲವೇ?''

ಮಂಡಾಲೆಯಿಂದ, ಸೆರೆಮನೆಯ ಆತಿಥ್ಯವನ್ನು ಕೊನೆಗೊಳಿಸಿ ಟಿಳಕರು ಪುಣೆಗೆ ಬಂದ ಮರುದಿವಸವೇ ಚಿರೋಲರು ಬರೆದ ಪುಸ್ತಕವನ್ನು ಅವರ ಕೈಗೆಕೊಟ್ಟರು. ಅದನ್ನು ನೋಡಿದ ಕೂಡಲೇ ಅವರ ಮೇಲೆ ಮಾನಹಾನಿಯ ಮೊಕದ್ದಮೆಯನ್ನು ಹಾಕಲು ನಿಶ್ಚಯಿಸಿದರು. ಆದರೆ ಚಿರೋಲರ ವಿರುದ್ಧ ಕ್ರಮತೆಗೆದುಕೊಳ್ಳಲು ಕೆಲಕಾಲ ಹಿಡಿಯಿತು. ೧೯೧೫ ಅಕ್ಟೋಬರ ೧ ಕ್ಕೆ ಟಿಳಕರು ತಮ್ಮ ವಕೀಲರ ಮುಖಾಂತರ ಚಿರೋಲರ ಮೇಲೂ ಹಾಗು ಅದನ್ನು ಪ್ರಕಟಿಸಿದ 'ಮ್ಯಾಕ್‌ಮಿಲನ್ ಆ್ಯಂಡ ಕಂಪನಿಯು' ಮೇಲೂ ನೋಟೀಸನ್ನು ಜಾರೀಮಾಡಿಸಿದರು. ಅವರು ಕ್ಷಮೆ ಬೇಡಬೇಕೆಂದು ಅದರಲ್ಲಿ ಕಾಣಿಸಿದ್ದರು. ಅವರಿಂದ ಸರಿಯಾಗಿ ಉತ್ತರಬಾರದ್ದರಿಂದ, ೧೯೧೫ ಅಕ್ಟೋಬರ ೨೭ ಕ್ಕೆ ಲಂಡನ್ನದ ನ್ಯಾಯಾಲಯದೆದುರು ವ್ಯಾಜ್ಯವನ್ನೊಯ್ದರು. ವಕೀಲರ ಮುಖಾಂತರ ಅಂದೇ ನೋಟೀಸನ್ನು ಕೊಟ್ಟು, ನವ್ಹೆಂಬರ ೧೪ ಕ್ಕೆ ನ್ಯಾಯವನ್ನು ಕೋರ್ಟಗೊಯ್ಯಲಾಯಿತು. ಚಿರೋಲರು ಒಮ್ಮೆಲೇ ಧಾವಿಸಿ, ತಮ್ಮ ಸಹಾಯಕ್ಕೆ ಬೇಕಾಗುವ ಕಾಗದಪತ್ರಕ್ಕೂಮತ್ತು ಸಾಕ್ಷಿಗಳಿಗೂ ಭಾರತಕ್ಕೆ ಬಂದರು. ಮುಂಬೈ ಸರಕಾರಕ್ಕೆ ಆ ಎಲ್ಲ ಗುಪ್ತ ಕಾಗದ ಪತ್ರಗಳ ಬಗ್ಗೆ ಮತ್ತು ನ್ಯಾಯಖಾತೆಯ ಕಾರ್ಯದರ್ಶಿಗಳ ಕಡೆಗೆ ಟಿಳಕರ ವ್ಯಾಜ್ಯಗಳಿಗೆ ಸಂಬಂಧಿಸಿದ ಕಾಗದ ಪತ್ರಗಳ ಬಗ್ಗೆ ಭೆಟ್ಟಿಯಾದರು. ಟಿಳಕರ ರಾಜಕೀಯ ಜೀವನವನ್ನು ಚಿರೋಲರು-೧೮೯೯ರಲ್ಲಿಯ ಇನ್‌ಸ್ಪೆಕ್ಟರ ಜನರಲ್-ಆಫ್ ಪೋಲೀಸರು ಸಿದ್ಧಪಡಿಸಿದ ವರದಿ ಮತ್ತು ಗುಪ್ತಪೋಲೀಸ ಖಾತೆಯವರಿತ್ತ ವರದಿ ಇವೆರಡನ್ನು ಅವಲಂಬಿಸಿ ಬರೆದಿದ್ದರಿಂದ ಅವುಗಳನ್ನು

ಸರಕಾರದೆದುರು ಹಾಜರಪಡಿಸಲು ಕೇಳಿದರು. ಅದೇ ರೀತಿ ಕೆಲ ವೃತ್ತಪತ್ರಿಕೆಗಳಲ್ಲಿ ಪ್ರಕಟವಾದ ಸಂಗತಿಗಳನ್ನು ಕಲೆಹಾಕಿದ್ದರು. ಚಿರೋಲರು ಈ ರೀತಿ ಸಹಾಯ ಮಾಡಲು ಕೇಳಿಕೊಂಡೊಡನೆಯೇ, ಮುಂಬೈ ಸರಕಾರದವರು ಭಾರತ ಸರಕಾರಕ್ಕೆ ಕೇಳಿಕೊಂಡರು.

ಸರಕಾರದವರು ಆಯ್. ಜಿ. ಪಿ ಯವರಿಗೆ ಪರಿಸ್ಥಿತಿಯ ಬಗ್ಗೆ ಕೇಳಿದಾಗ ಅವರು ಸರಕಾರಕ್ಕೆ ಮುಂದೆ ಕಾಣಿಸಿದಂತೆ ತಿಳಿಸಿದರು.

"ಭಾರತ ಸರಕಾರದ ಗೃಹಶಾಖೆಗೆ ೧೮೯೯ ಅಗಸ್ಟ ೨೫ ಕ್ಕೆ ಆಯ್. ಜಿ. ಪಿ. ಯುವರು ಈ ರೀತಿ ಪತ್ರಬರೆದರು. "೧೮೯೯ ಮಾರ್ಚ ೨೮ಕ್ಕೆ ಪುಣೆ ಜಿಲ್ಹೆಯ ಪೋಲೀಸ ಅಧಿಕಾರಿಗಳು ದಕ್ಷಿಣದಲ್ಲಿಯ ರಾಜಕೀಯ ವಾತಾವರಣವನ್ನು ಸರಿಗೊಳಿಸಲು ಕೆಲಸೂಚನೆಗಳನ್ನು ಮಾಡಲು ಪತ್ರ ಬರೆದರು. ಅವರು ಸ್ಥಾನಿಕ ಪತ್ರಿಕೆಗಳು ಪ್ರಕಟಿಸುವ ರಾಜದ್ರೋಹದ ವಾರ್ತೆಗಳ ಬಗ್ಗೆಯೂ, ಪುಣೆಯ ಪೋಲೀಸ ಖಾತೆಯನ್ನು ಪುನರ್ಘಟಿಸುವ ಬಗ್ಗೆಯೂ, ಮತ್ತು ಚಾಫೇಕರ ಕ್ಲಬ್ಬಿನ ಬಗ್ಗೆ ಕ್ರಮತೆಗೆದುಕೊಳ್ಳುವ ಬಗ್ಗೆಯೂ ಕೆಲ ಸೂಚನೆಗಳನ್ನು ಮಾಡಿದ್ದರು." ಈ ವರದಿಯ ಮೇಲೆಯೇ ಚಿರೋಲರು ತಮ್ಮ ಎಲ್ಲ ಭಾರವನ್ನು ಹಾಕಿ ಟಿಳಕರ ಚಿತ್ರವನ್ನು ಚಿತ್ರಿಸಿದ್ದರು.

ಇಲ್ಲಿ ಒಂದು ಮಹತ್ವದ ಸಂಗತಿಯೆಂದರೆ, ಉಚ್ಚ ಅಧಿಕಾರಿಗಳು ಈ ವಿಷಯದಲ್ಲಿ ಚಿರೋಲರೊಡನೆ ಎಷ್ಟು ಸಹಕರಿಸಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯ ತಾಳಿದರು.

ಗೃಹಶಾಖೆಯ ಕಾರ್ಯದರ್ಶಿಗಳು ೨೮-೨-೧೯೧೬ ರಲ್ಲಿ "ಚಿರೋಲರು ತಮ್ಮ ಪುಸ್ತಕವನ್ನು ಆ ಸರಕಾರೀ ಕಾಗದಪತ್ರಗಳ ಮೇಲಿಂದ ಬರೆದಿದ್ದಾರೆ. ಇದು ಸರಿಯೋ ತಪ್ಪೋ ಗೊತ್ತಿಲ್ಲ. ಟಿಳಕರು ರಾಜಕೀಯ ಗಂಡಾಂತರವನ್ನೊಡ್ಡುವ ವ್ಯಕ್ತಿಗಳೆಂದು ನಾವು ತಿಳಿದಿದ್ದೇವೆ. ಅಂತಲೇ ಅವರ ಈ ಮೊಕದ್ದಮೆಯಲ್ಲಿ ನಮಗೆಲ್ಲರಿಗೂ ಅಭಿರುಚಿಯಿದೆ."

ಗೃಹಖಾತೆಯ ಸದಸ್ಯರೊಬ್ಬರು ೨೮-೨-೧೬ ಕ್ಕೆ ತಮ್ಮ ಅಭಿಪ್ರಾಯವನ್ನು ಕೊಟ್ಟಿದ್ದಾರೆ "ವ್ಹಿ. ಚಿರೋಲರ ವಿರುದ್ಧ ಟಿಳಕರು ನ್ಯಾಯವನ್ನು ದೊರಕಿಸಬಾರದೆಂದು ನನ್ನ ಮತವಿದೆ. ಚಿರೋಲರು ತಮ್ಮ ಪುಸ್ತಕದಲ್ಲಿ ಚಿತ್ರಿಸಿದಂತೆಯೇ ಟಿಳಕರು ನಿಜವಾಗಿಯೂ ಇರುವರು. ಟಿಳಕರು ಸರಕಾರದ

ಶತ್ರುಗಳು. ಅವರ ಭಾಷಣಗಳಿಂದ ಜನರು ಹಿಂಸೆಗೆ ಸಿದ್ಧರಾಗಿರುತ್ತಾರೆ, ಟಿಳಕರು ಇದರಲ್ಲಿ ವಿಜಯ ಸಂಪಾದಿಸಿದರೆ, ಈ ವಿಜಯವು ಒಂದು ವ್ಯಕ್ತಿ ಇನ್ನೊಂದು ವ್ಯಕ್ತಿಯ ಮೇಲೆ ಸಂಪಾದಿಸಿದಂತಾಗದೆ, ಸರಕಾರದ ಮೇಲೆ ಸಂಪಾದಿಸಿದಂತಾಗುತ್ತದೆ. ಸರಕಾರವು, ಚಿರೋಲರಿಗೆ, ಸುದ್ದಿಯನ್ನು ಒದಗಿಸಿ ಪುಸ್ತಕ ಬರೆಯಲು ಸಹಾಯ ಮಾಡಿದರೆ, ಇದರಲ್ಲಿ ಸರಕಾರವು ಭಯ ಪಡುವ ಕಾರಣವೇಯಿಲ್ಲ.''

ಗವ್ಹರ್ನರ್ ಜನರಲ್‌ರು ಎಚ್ಚರಿಕೆಯನ್ನು ಕೊಡುತ್ತ ''ನಾವು ಜಾಗೃತರಾಗಿರಬೇಕು. ಸದ್ಯಕ್ಕೆ ಮಾಡುವ ತಪ್ಪುಗಳಿಂದ ನಾವು ಹೆಚ್ಚಿನ ತಪ್ಪನ್ನು ಮಾಡಲು ಹೊರಟಂತಾಗುವದಿಲ್ಲವೆ? ಇದೊಂದು ಅತಿ ತೊಂದರೆದಾಯಕ ಸಂಗತಿಯಾಗಿ ಘಟಿಸುವದರಿಂದ ನಾವು ಜಾಗೃತರಿರಬೇಕು.'' ಎಂದು ಹೇಳಿ, ಭಾರತಮಂತ್ರಿಗೆ ಮುಂದಿನ ಮಾರ್ಗಕ್ಕಾಗಿ ಸಲಹೆಯನ್ನು ಕೇಳಿದರು. ಈ ವಿಷಯದ ಮೇಲೆ ಗೃಹಶಾಖೆಯ ಸದಸ್ಯರು ಮತ್ತು ಕಾಯದೆ ಶಾಖೆಯ ಸದಸ್ಯರು ತಮ್ಮ ಅಭಿಪ್ರಾಯಗಳನ್ನು ಹೀಗೆ ಕೊಟ್ಟರು.

''ಈ ಮಾನಹಾನಿಯ ಮೊಕದ್ದಮೆಯಲ್ಲಿ ಸರ್. ವ್ಹಿ. ಚಿರೋಲರು ಪ್ರತಿವಾದಿಯಾಗಿದ್ದಾರೆ. ಟಿಳಕರಿಗೆ ವಿಜಯ ಸಿಕ್ಕರೆ, ಸಾರ್ವಜನಿಕ ಸೇವೆ ಮಾಡಿದ ಚಿರೋಲರಿಗೆ ಶಿಕ್ಷೆಯನ್ನು ವಿಧಿಸಿದಂತಾಗುತ್ತದಲ್ಲದೆ, ಟಿಳಕರ ರಾಜಕೀಯ ಪ್ರಭಾವವು ಹೆಚ್ಚು ಬೆಳೆಯುತ್ತದೆ ಆದಕ್ಕೆ ಚಿರೋಲರನ್ನು ನಾವು ಈ ರೀತಿ ಕೈಬಿಡುವದು ಒಳಿತಲ್ಲ. ಟಿಳಕರಿಗೆ ಜಯದೊರೆತದ್ದಾದರೆ, ಅದರಿಂದ ದುಷ್ಪರಿಣಾಮವಾದೀತು. ಇವೆರಡೇ ಅಂಶಗಳನ್ನು ನಾವು ಗಮನಿಸಿಕೊಳ್ಳದೆ ಮೂರನೇಯ ಅಂಶವೊಂದನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ"

"ಈ ಮೊಕದ್ದಮೆಯಲ್ಲಿ, ಚಿರೋಲರು ತಮ್ಮ ಪುಸ್ತಕ ಬರೆಯಲು ಸರಕಾರದ ಎಲ್ಲ ಕಾಗದಪತ್ರಗಳನ್ನು ಬಳಸಿರುವರೆಂಬುದು ಪ್ರಕಟವಾಗಿದೆ. ಟಿಳಕರಿಗೆ ಚಿರೋಲರ ಮೇಲೆ ವಿಜಯ ಸಂಪಾದಿಸಲು ಈ ವಾರ್ತೆ ಸಹಾಯವಾಗುವದಲ್ಲದೆ, ಮುಂದೆ ಸರಕಾರದ ಮೇಲೂ ಟಿಳಕರು ಕ್ರಮವನ್ನು ತೆಗೆದುಕೊಳ್ಳಲು ಪ್ರಯತ್ನಿಸಬಹುದು. ನಾವು ಗುಪ್ತಪೋಲೀಸಖಾತೆಯ ವರದಿ

ಗಳನ್ನು ಅವರ ಕೈಗಿತ್ತಿರುವೆವು. ಈ ರೀತಿ ಬೇರೆಯವರಿಗೆ ಅಂಥ ಕಾಗದ ಪತ್ರಗಳನ್ನು ನಾವು ತೋರಿಸಬಾರದು.

ಅಂತಲೇ ನಾವು ಚಿರೋಲರಿಗೆ ಈ ವ್ಯಾಜ್ಯದಲ್ಲಿ ವಿಜಯವು ದೊರೆಯುವಂತೆ ನೋಡಬೇಕು. ಚಿರೋಲರಿಗೆ ಎಲ್ಲ ರೀತಿಯ ಸಹಾಯ ಮತ್ತು ಆರ್ಥಿಕ ಸಹಕಾರಗಳನ್ನಿತ್ತು ಅವರು ಅಪಜಯವನ್ನು ಹೊಂದದಂತೆ ಮಾಡಿದರೆ, ನಾವು ಸಾರ್ವಜನಿಕರಿಗೆ ಸಹಾಯ ಮಾಡಿದಂತಾಗುತ್ತದೆ. ಅವರಿಗೆ ಅಪಜಯವಾದರೆ ರಾಜಕೀಯ ವಾತಾವರಣವೇ ಕದಡುತ್ತದೆ. ಚಿರೋಲರಿಗೆ ಜಯಸಿಕ್ಕರೆ, ಅದರಿಂದ ಕದಡುವ ರಾಜಕೀಯ ವಾತಾವರಣಕ್ಕೆ ಕಡಿವಾಣವನ್ನು ಸರಿಯಾಗಿ ಹಾಕಲಿಕ್ಕೆ ಬರುತ್ತದೆ"

ಮುಂದೆ ಅವರು ಚಿರೋಲರಿಗೆ ಸಹಾಯವಾಗುವಂಥ ಕಾಗದಪತ್ರಗಳನ್ನು ಸಿದ್ಧಪಡಿಸಲು ಮತ್ತು ಸಂಗ್ರಹಿಸಲು ಒಬ್ಬ ವಿಶೇಷಾಧಿಕಾರಿಯನ್ನು ನಿಯಮಿಸಬೇಕೆಂದು ಸರಕಾರಕ್ಕೆ ಸೂಚಿಸಿದರು.

ಚಿರೋಲರಿಗೆ ಕೊಡಮಾಡಿದ ಎಲ್ಲ ಸವಲತ್ತುಗಳನ್ನು ಭಾರತಮಂತ್ರಿಗಳು ಸಮ್ಮತಿಸಿದರು. ಚಿರೋಲರು ಸಾರ್ವಜನಿಕ ಸೇವೆಯನ್ನು ಮಾಡಿರುವರೆಂದು, ಭಾರತಮಂತ್ರಿಯಾದ ಮಿಸ್ಟರ ಚೆಂಬರಲೇನರು ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸಿ, ಸಾಧ್ಯವಿದ್ದ ಎಲ್ಲ ಸಹಕಾರಗಳನ್ನು ಒದಗಿಸಲು ಆಶ್ವಾಸನವಿತ್ತರು. ಮಿ. ಏ. ಮಾಂಟಿಗೋಮರಿ ಎಂಬ ನ್ಯಾಯಾಧೀಶರನ್ನು ವಿಶೇಷ ಅಧಿಕಾರಿಯೆಂದು ನಿಯಮಿಸಿ, ಚಿರೋಲರಿಗೆ ಅನುಕೂಲವಾಗುವಂಥ ಸಾಕ್ಷಿಗಳನ್ನು ಸಿದ್ಧಪಡಿಸಲು ಅವರಿಗೆ ಅಪ್ಪಣೆಯನ್ನಿತ್ತರು.

ಮಾಂಟಿಗ್ಯೂಮರಿಯವರು ವಿಚಾರಣೆ ನಡೆಸಿದಾಗ ಚಿರೋಲರ ಅನೇಕ ಅಪಾದನೆಗಳಿಗೆ ಆಧಾರ ಇಲ್ಲವೆಂದು ಮನಗಂಡರು. ಚಿರೋಲರಿಗೆ ಸಹಾಯವಾಗುವಂತೆ ಅನೇಕ ಕಾಗದಪತ್ರ ಮತ್ತು ಮತ್ತು ಸಾಕ್ಷಿಗಳನ್ನು ಸಿದ್ಧಪಡಿಸಿದರು. ತಮ್ಮ ಎಲ್ಲ ಕಾರ್ಯವನ್ನು ಮುಗಿಸಿ ಕೊನೆಗೆ ಈ ರೀತಿ ಉಪಸಂಹಾರ ಮಾಡಿದ್ದಾರೆ.

"ಈ ಮೊಕದ್ದಮೆಯಲ್ಲಿ ವಾದಿಯು ವ್ಯಾಜ್ಯಮಾಡಲು ಸಾಕಷ್ಟು ಬಲವತ್ತರವಾದ ಅಂಶಗಳಿವೆ. ನ್ಯಾಯಾಲಯವು ಸಾಕಷ್ಟು ಸಾಕ್ಷಿಗಳನ್ನು ಕರೆಯಲು ಅನುವು ಮಾಡಿಕೊಟ್ಟರೆ, ಪ್ರತಿವಾದಿಗೆ ಜಯದೊರೆಯುವ

ಸಂಭವವಿದೆ. ಇನ್ನು ವಾದಿಯು ಹೊರಿಸಿದ ಎಲ್ಲ ಅಪಾದನೆಗಳನ್ನು ಸೂಕ್ಷ್ಮ
ವಾಗಿ ನ್ಯಾಯಾಲಯವು ಪರಿಶೀಲಿಸಿದರೆ, ನ್ಯಾಯವು ವಾದಿಯಂತಾಗುವದ
ರಲ್ಲಿ ಸಂದೇಹವಿಲ್ಲ. ಮಾನಹಾನಿಯಲ್ಲಿ ವಾದಿಗೆ ದೊರೆಯಬೇಕಾದ ಹಾನಿಯ
ಹಣವು ನ್ಯಾಯಾಲಯದಲ್ಲಿ ನಿಲ್ಲುವ ಗಟ್ಟಿಸಾಕ್ಷಿಗಳನ್ನು ಅವಲಂಬಿಸಿದೆ.
ವಾದಿಯು ಬ್ರಿಟಿಶ ವಿರೋಧಿ ಸಹಾನುಭೂತಿಯುಳ್ಳವರನ್ನು ನ್ಯಾಯಾಲ
ಯಕ್ಕೆ ಕರೆತರದಂತೆ ಮಾಡಬೇಕಲ್ಲದೆ, ಬ್ರಿಟಿಶ ಅಧಿಕಾರಿಗಳ ಅವಮಾನ
ವಾದಾಗ ವಾದಿಯು ಅವರ ಬಗ್ಗೆ ತನ್ನ ಸಹಾನುಭೂತಿಯನ್ನು ವ್ಯಕ್ತ
ಪಡಿಸಿಲ್ಲವೆಂದು ನಾವು ಸಿದ್ಧಗೊಳಿಸಬೇಕು" ಎಂದು ಮಾಂಟೀಗೊಮರಿ
ಯವರು ಹೇಳಿ, ಕೇಸರಿ ಮತ್ತು ಮರಾಠಾ ಪತ್ರಿಕೆಗಳಲ್ಲಿ ಬ್ರಿಟಿಶರ ವಿರುದ್ಧ
ವಾಗಿ ಬರೆದ ಅನೇಕ ಲೇಖನಗಳನ್ನು ಕಲೆಹಾಕಿದರು. ಗೃಹಶಾಖೆಯ
ಸದಸ್ಯರು ಮಾಂಟಿಗೋಮರಿಯವರ ವರದಿಯಿಂದ ಪ್ರತಿವಾದಿಗೆ ಜಯ
ದೊರೆಯುವದಿಲ್ಲವೆಂದೂ ಮತ್ತು ಈ ವರದಿ ತುಂಬಾ ನಿರಾಶಾಜನಕವಿದೆ
ಯೆಂದೂ ಉದ್ಗಾರಗಳನ್ನು ತೆಗೆದರು.

ಮೇಲೆ ಹೇಳಿದಂತೆ, ನ್ಯಾಯಾಲಯಕ್ಕೆ ವ್ಯಾಜ್ಯವು ಹೋಗಿ,
ಪ್ರತಿವಾದಿಯು ತನ್ನ ಹೇಳಿಕೆಯನ್ನು ೧೯೧೬ ಮಾರ್ಚ ೩ ನೇ ದಿನಾಂಕಕ್ಕೆ
ಕೊಟ್ಟನು. ಈ ವ್ಯಾಜ್ಯಕ್ಕಾಗಿ ನಿಯಮಿಸಿದ ಕಮೀಶನ್ ಮುಂಬೈ
ಹಾಯಕೋರ್ಟ ಸನ್ಮುಖದಲ್ಲಿ ಸಾಕ್ಷಿಗಳನ್ನು ತೆಗೆದುಕೊಂಡಿತು. ಪ್ರತಿ
ವಾದಿಯ ಪರವಾಗಿ ೪೩ ಮತ್ತು ವಾದಿಯ ಪರವಾಗಿ ೧೮ ಸಾಕ್ಷಿ
ಗಳನ್ನು ಪರೀಕ್ಷಿಸಲಾಯಿತು. ಈ ಕಮೀಶನ್ನು ತನ್ನ ಕಾರ್ಯವನ್ನು
ಪ್ರಾರಂಭಿಸುವ ಮೊದಲು, ಟಿಳಕರು ಸರಕಾರದ ವಶದಲ್ಲಿದ್ದ ಕೆಲಕಾಗದ
ಪತ್ರಗಳನ್ನು ತಮಗೆ ತೋರಿಸಬೇಕೆಂದು ಕೇಳಿಕೊಂಡರು. ಆದರೆ
ಆ ಕಾಗದ ಪತ್ರಗಳು ಗುಪ್ತಕಾಗದಪತ್ರಗಳೆಂಬ ಕಾರಣದಿಂದ ಅವುಗಳನ್ನು
ತೋರಿಸಲಿಕ್ಕೆ ಬರುವದಿಲ್ಲೆಂದು ನ್ಯಾಯಾಲಯವು ಹೇಳಿತು. ಮುಂದೆ
ಟಿಳಕರು ಮುಂಬೈ ಸರಕಾರಕ್ಕೆ, ನ್ಯಾಯಾಲಯದ ಮುಂದಾದರೂ ಹಾಜರ
ಪಡಿಸಲು ಕೇಳಿದರು. ಆದರೆ ಅವರ ಈ ಬೇಡಿಕೆಗೂ ಮನ್ನಣೆಯು ದೊರೆಯ
ಲಿಲ್ಲ. ಯಾವ ಕಾಗದ ಪತ್ರಗಳು ಗುಪ್ತಕಾಗದಪತ್ರಗಳೆಂದು ಟಿಳಕರಿಗೆ
ನೋಡಲಿಕ್ಕೆ ಅಪ್ಪಣೆ ದೊರೆಯಲಿಲ್ಲವೋ ಆ ಎಲ್ಲ ಕಾಗದಪತ್ರಗಳನ್ನು

ಚಿರೋಲರಿಗೆ ಈ ಮೊದಲೇ ತೋರಿಸಿದ್ದರು. ಈ ಎಲ್ಲ ಹೇಳಿಕೆಗಳನ್ನು ತೆಗೆದುಕೊಂಡ ಮೇಲೆ ಮೊಕದ್ದಮೆಯು ೧೯೧೯ ನೇ ಜಾನೇವಾರಿ ೨೯ ಕ್ಕೆ ನ್ಯಾಯಾಧಿಪತಿ ಡಾರ್ಲಿಂಗ ಮತ್ತು ವಿಶೇಷ ಪಂಚರ (ಜ್ಯೂರಿಗಳ) ಮುಂದೆ ನಿರ್ಣಯಕ್ಕಾಗಿ ಬಂದಿತು. ಹನ್ನೊಂದು ದಿವಸಗಳವರೆಗೆ ವ್ಯಾಜ್ಯವು ನ್ಯಾಯಾಲಯದಲ್ಲಿ ನಡೆದ ೧೯೧೯ ಫೆಬ್ರುವರಿ ೨೧ರಂದು ವಾದಿಯು ಹೊರಿಸಿದ ಯಾವ ಆಪಾದನೆಗಳಲ್ಲಿಯೂ ಹುರುಳಿಲ್ಲವೆಂದು ನ್ಯಾಯಾಲಯದಲ್ಲಿ ಸಿದ್ಧವಾಗಿ ಮೊಕದ್ದಮೆಯು ಕಿತ್ತೊಗೆಯಲ್ಪಟ್ಟಿತು.

ಟಿಳಕರ ಪರವಾಗಿ ಸರ್ ಜಾನ್ ಸಾಯಮನ್ನರು, ‘‘ಚಿರೋಲರು ತಮ್ಮ ಗ್ರಂಥದಲ್ಲಿ ಕಾಣಿಸಿದ ಅನೇಕ ಆಕ್ಷೇಪಾರ್ಹ ಸಂಗತಿಗಳ ಬಗ್ಗೆ ವಾದಗಳನ್ನು ಪ್ರಾರಂಭಿಸಿದರು. ಗೋವಧೆ ಪ್ರತಿಬಂಧಕ ಸಂಘವನ್ನು ಟಿಳಕರು ಸಂಸ್ಥಾಪಿಸಲಿಲ್ಲ. ಮತ್ತು ಆ ಸಂಘದೊಡನೆ ಅವರು ಯಾವ ಸಂಬಂಧವನ್ನು ಇಟ್ಟುಕೊಂಡಿಲ್ಲವೆಂದು ಸಿದ್ಧಪಡಿಸಿದರು. ಮತ್ತು ಈ ಸಂಘದಿಂದ ಹಿಂದು ಮುಸಲ್ಮಾನರಿಗೆ ಭಿನ್ನಾಭಿಪ್ರಾಯಗಳು ತಲೆ ಎತ್ತಿದವೆಂಬ ಚಿರೋಲರ ಮಾತಿಗೆ ಆಧಾರಗಳಿಲ್ಲವೆಂದು ಹೇಳಿದರು. ಅಲ್ಲದೆ ಈ ಗೋರಕ್ಷಣೆಯಿಂದ ಮುಂಬೈಯಲ್ಲಿ ಗಲಭೆಗಳೆದ್ದವೆಂದು ಹೇಳಿದ ಮಾತನ್ನು ನೋಡಿದರೆ ಉದ್ದೇಶಪೂರ್ವಕವಾಗಿ ಟಿಳಕರ ಮೇಲೆ ಆಪಾದನೆಗಳನ್ನು ಹೊರಿಸಬೇಕೆಂಬ ಸಂಚಿತ್ತೆಂದು ಸಿದ್ಧವಾಗುತ್ತಿದೆ ಎಂದು ನುಡಿದರು. ರ್‍ಯಾಂಡ್ ಮತ್ತು ಆಯರಸ್ಟರ ಪ್ರಕರಣಗಳನ್ನೆತ್ತಿ, ಚಿರೋಲರು ಅವರ ಕೊಲೆಗೆ ಟಿಳಕರ ಪತ್ರಿಕೆಯಲ್ಲಿ ಬಂದ ಲೇಖನಗಳೇ ಕಾರಣವೆಂದು ಹೇಳಿದ್ದಾರೆ. ಆದರೆ ಈ ರೀತಿ. ಟಿಳಕರ ಪತ್ರಿಕೆಯಿಂದ ಉದ್ರೇಕಗೊಂಡು ಕೊಲೆಗೆ ಅವನು ಸಿದ್ಧನಾದನೆಂದು ಹೇಳುವಲ್ಲಿ ಯಾವ ಸಾಕ್ಷಿಗಳೂ ಇಲ್ಲ. “ಟಿಳಕರು ಅನೇಕ ತಪ್ಪುಗಳನ್ನು ಮಾಡಿರಬಹುದು, ರಾಜದ್ರೋಹವನ್ನು ಬಗೆಯುವಂತೆ ಬರೆದಿರಬಹುದು. ಆದರೆ ದೇಶದಲ್ಲಿ ನಡೆದ ಅತ್ಯಾಚಾರ ಹಿಂಸೆಗಳಿಗೆ ಇವರ ಬರಹಗಳೇ ಕಾರಣವೆಂದು ಹೇಳುವಲ್ಲಿ ಯಾವ ತಥ್ಯವೂ ಇಲ್ಲ” ಟಿಳಕರು ರ್‍ಯಾಂಡರ ಕೊಲೆ ಮಾಡಿದವರನ್ನು ಶೋಧಿಸಲು ಜನತೆಗೆ ಕೇಳಿಕೊಂಡರಲ್ಲದೆ, ವಿದ್ಯಾರ್ಥಿಗಳು ಯೋಗ್ಯರೀತಿಯಿಂದ ವರ್ತಿಸಬೇಕೆಂದುಕೇಳಿಕೊಂಡರು. ಅಂದಮೇಲೆ ಟಿಳಕರ ಹಸ್ತಕ್ಷೇಪವು ಈ ಮೊಕದ್ದಮೆಯಲ್ಲಿ ಇದೆಯೆಂದು ಯಾವ ಆಧಾರಗಳೂ ಹೇಳುವದಿಲ್ಲ” ಎಂದು ವಾದಿಸಿದರು.

ಟಿಳಕರೇ ಮುಖ್ಯವಾದಿಗಳಾದ್ದರಿಂದ ಚಿರೋಲರ ಬ್ಯಾರಿಸ್ಟರಾದ ಸರ ಎಡ್ವರ್ಡ ಕಾರ್ಸನ್ನರು ಅನೇಕ ಪ್ರಶ್ನೆಗಳನ್ನು ಮಾಂಟೆಗೋಮರಿಯವರು ಸೂಚಿಸಿದ ದಿಶೆಯಲ್ಲಿಯೇ ಟಿಳಕರನ್ನು ಪ್ರಶ್ನಿಸಿದರು.

ಪ್ರ— ನೀವು ಲಂಡನ್ನಕ್ಕೆ ಬಂದು ವ್ಯಾಜ್ಯವನ್ನು ಹೂಡುವದಕ್ಕಿಂತ ಭಾರತದಲ್ಲಿಯೇ ನ್ಯಾಯುವನ್ನು ಹೂಡಿದ್ದರೆ ಹೆಚ್ಚು ಮಹತ್ವವೆನಿಸುತ್ತಿರ ಲಿಲ್ಲವೆ? —ಮೊಕದ್ದಮೆಯು ಇಲ್ಲಿಯೇ ನಡೆಯುವದು ಮಹತ್ವದ್ದೆಂದು ನನಗನಿಸಿದೆ.

ಪ್ರ—ವಸಾಹತುಗಾರರನ್ನು ನಾವು ಸರಿಯಾಗಿ ನಡೆಯಿಸಿಕೊಳ್ಳುವ ದಿಲ್ಲವೆಂದು ನಿಮ್ಮ ಅಭಿಪ್ರಾಯವೆ? —ಇದಕ್ಕೆ ಆ ಕಾರಣವಲ್ಲ.

ಪ್ರ— ಆದರೆ ನೀವಿಲ್ಲಿ ಬಂದ ಕಾರಣವೇನು? —ಈ ಚಿರೋಲರ ಗ್ರಂಥವನ್ನು ಸಾಮ್ರಾಜ್ಯದ ತುಂಬಾ ಜನರು ಓದುತ್ತಾರೆ. ಅಂತಲೇ, ಇಂಗ್ಲಿಷ ನ್ಯಾಯಾಲಯವು ನ್ಯಾಯುವನ್ನಿತ್ತು, ಈ ಪುಸ್ತಕವನ್ನು ಇಡೀ ಸಾಮ್ರಾಜ್ಯದ ತುಂಬಾ ಪ್ರತಿಬಂಧಿಸಬೇಕೆಂದು ನಾನಿಲ್ಲಿ ಬಂದಿದ್ದೇನೆ.

ಪ್ರ— ಅಲ್ಲಿಯ ಜನತೆ ಕಾನೂನನ್ನು ಮುರಿದಾಗ ನೀವು ಅವರನ್ನೇಕೆ ತುಂಬಾ ಹೊಗಳುತ್ತೀರಿ?— ಅವರನ್ನು ನಾನು ಹೊಗಳು ವದು ಅವರು ಕಾನೂನನ್ನು ಭಂಗಿಸಿದ್ದಕ್ಕಲ್ಲ, ಆದರೆ ಸರಕಾರದ ಹಿಂಸೆಯನ್ನು ವಿರೋಧಿಸಿದರೆಂದು. ಪ್ರ— ಬಂಗಾಲದ ವಿಭಜನೆಯೇ ಬಂಗಾಲದಲ್ಲಿ ಬಾಂಬನ್ನು ಹುಟ್ಟಿಸಿತೆ? —ವಿಭಜನೆಯಿಂದ ಅವರಿಗೆ ಅನೇಕ ಅಡಚಣಿ ಗಳಾಗಿವೆ. ಪ್ರ— ಈ ಅಡಚಣಿಗಳಿಂದ ಬಾಂಬು ಹುಟ್ಟಿದ್ದು ನ್ಯಾಯುವೇ— ನ್ಯಾಯವಲ್ಲ. ಆದರೆ ಅದು ಬಾಂಬಿನ ಉದ್ಭವಕ್ಕೆ ಕಾರಣವಾಯಿತು. ಪ್ರ— ಒಬ್ಬ ಬ್ರಿಟಿಶ ಅಧಿಕಾರಿಯು ತನ್ನ ಅನಿರ್ಬಂಧ ಅಧಿಕಾರಗಳನ್ನು ಉಪಯೋಗಿಸಿದರೆ ಅವನು ಬಾಂಬನ್ನು ನಿರೀಕ್ಷಿಸಬೇಕೆ? —ಬಾಂಬನ್ನು ಅವನು ನಿರೀಕ್ಷಿಸಬೇಕಿಲ್ಲ. ಆದರೆ ದೇಶದಲ್ಲಿ ಅದು ತಾನಾಗಿಯೇ ಉದ್ಭವ ವಾಗುತ್ತಿದೆ. ಇದಕ್ಕೆ ಆಯರ್ಲಂಡವೇ ಸಾಕ್ಷಿ. ಪ್ರ— ಅಂತೂ ನಿಮ್ಮ ಅಭಿ ಪ್ರಾಯದ ಮೇರೆಗೆ ವಿಭಜನೆಯು ಬಾಂಬಿಗೆ ಕಾರಣವೇ? —ಅಹುದು. ಆ ಬಂಗಾಲದ ವಿಭಜನೆಯೇ ಬಾಂಬನ್ನು ಹುಟ್ಟಿಸಿತು.

ಪ್ರ— ಜಾಸನ್ನರ ಕೊಲೆಮಾಡಿದವನು ನಿಮ್ಮ ಜಾತಿಯ ಮನುಷ್ಯ ನಲ್ಲವೇ ? —ಇದ್ದಿರಬಹುದು ಪ್ರ - ನೀವು ಚಿತ್ಪಾವನ ಬ್ರಾಹ್ಮಣರ ಮುಖಂಡರಲ್ಲವೆ ? —ನಾನು ಆ ೩ ಲಕ್ಷ ಜನರಲ್ಲಿಯ ಒಬ್ಬ ವ್ಯಕ್ತಿ. ನಾನು ಚಿತ್ಪಾವನ ಬ್ರಾಹ್ಮಣ. ನನ್ನ ಜಾತಿಯನ್ನು ನಾನು ಅಲ್ಲಗಳೆಯಲಾರೆ. ನಾನು ಎಲ್ಲ ಜನರ ಮುಖಂಡ, ಆದರೆ ಚಿತ್ಪಾವನ ಬ್ರಾಹ್ಮಣರ ಮುಖಂಡನಲ್ಲ. ಪ್ರ— ಭಾರತಕ್ಕೆ ಸ್ವರಾಜ್ಯವನ್ನು ಕೊಡಬಾರದೆಂದು ಸರಕಾರವು ನಿರ್ಧರಿಸಿದೆ ಎಂದು ತಿಳಿಯಿರಿ. ಅದಕ್ಕೆ ನೀವೇನು ಮಾಡುತ್ತೀರಿ? —ಈ ರೀತಿ ಸರಕಾರವು ಛಲ ಹಿಡಿದರೆ ಅದು ಅವರ ತಪ್ಪು. ಈ ರೀತಿ ಮಾಡಿದರೆ ಜನತೆಯಲ್ಲಿಯೂ ಮತ್ತು ಸರಕಾರದಲ್ಲಿಯೂ ತಾಳವೇ ಉಳಿ ಯುವದಿಲ್ಲ.

ಮುಂದುವರಿದು ಕಾರ್ಸನ್ನರು ರ್‍ಯಾಂಡರಕೊಲೆ, ಹಿಂದೂ ಮುಸಲ್ಮಾನ ಗಲಭೆ, ತಾಯೀ ಮಹಾರಾಜ ಪ್ರಕರಣ ಮತ್ತು ಟಿಳಕರ ಲೇಖನಗಳ ಬಗ್ಗೆ ಪ್ರಶ್ನಿಸಿದಾಗ, ಟಿಳಕರು ಸಮರ್ಪಕ ಉತ್ತರವನ್ನಿತ್ತರು. ಸರ್ ಎಡ್ವರ್ಡ ಕಾರಸನ್‌ರು ಟಿಳಕರನ್ನು ಕುರಿತು “ಅವರು ಯೋಗ್ಯ ವ್ಯಕ್ತಿ, ವಕೀಲರು, ಪ್ರಾಧ್ಯಾಪಕರು, ಪತ್ರಿಕೋದ್ಯೋಗಿಗಳು ಮತ್ತು ರಾಜ ಕಾರಣಿಗಳಿರುವರು. ಅವರ ಯೋಗ್ಯತೆಯನ್ನು ಕುರಿತು ಯಾರಿಗೂ ಮಾತನಾಡುವ ಶಕ್ತಿಯಿಲ್ಲ. ಅವರು ತಮ್ಮ ಮತದವರಲ್ಲಾಗಲಿ ಅಥವಾ ಹಿಂದುಗಳಲ್ಲಾಗಲಿ ಉತ್ತಮ ಸ್ಥಾನವನ್ನು ದೊರಕಿಸಿರುವರೆಂಬ ಬಗ್ಗೆ ಸಂಶಯವೇಯಿಲ್ಲ. ೧೮೯೩ ರಿಂದ ೧೯೧೮ ರ ವರೆಗೆ ಹಿಂದುಸ್ತಾನ ಮತ್ತು ಬ್ರಿಟಿಶ ಸರಕಾರದ ನಡುವೆ ತಲೆಯೆತ್ತಿದ ಕಠಿಣ ಪರಿಸ್ಥಿತಿಗಳ ಪೂರ್ಣ ಲಾಭವನ್ನು ಮಾಡಿಕೊಂಡಿದ್ದಾರೆ. ಸಾಮ್ರಾಜ್ಯದ ತುಂಬಾ ಬ್ರಿಟಿಶ ಸರಕಾರದ ಪ್ರಭಾವವು ಕಡಿಮೆಯಾಗುವಂತೆ ಒಳಸಂಚನ್ನು ಅವರು ನಡೆಸಿ ದ್ದಾರೆ. ಅವರು ತಮ್ಮ ಈ ಮಾನಹಾನಿಯ ಖಟ್ಲೆಯ ಬಗ್ಗೆ ಇಂಗ್ಲಂಡದ ವರೆಗೂ ಬಂದ ಕಾರಣವು ತಮ್ಮ ಇತಿಹಾಸವೆಂದು ಹೇಳುತ್ತಾರೆ. ಈ ನ್ಯಾಯಾ ಲಯದಲ್ಲಿ ಅವರಿಗೆ ಯಾವ ಚಾರಿತ್ರ್ಯವಿದೆ? ಟಿಳಕರು ಬ್ರಿಟಿಶ ಅಧಿಕಾರಿ ಗಳನ್ನು ಮತ್ತು ಸರಕಾರವನ್ನು ಮಾನಹಾನಿ ಮಾಡುವಲ್ಲಿ ನಿಷ್ಣಾತ ರಿರುವರು.”

ಕೊನೆಗೆ ಕಾರಸನ್ನರು ಜ್ಯೂರಿಯವರಿಗೆ ಹೇಳುವಾಗ "ಟಿಳಕರ ಬೋಧನೆಗೂ ಈ ಕೊಲೆಗಳಿಗೂ ತರ್ಕರಿತ್ಯಾ ಸಂಬಂಧವನ್ನು ಕಲ್ಪಿಸಲು ಬಾರದಿದ್ದರೂ, ಆದರ ಪರಿಣಾಮವು ಸಾಮಾನ್ಯವಾಗಿ ಜನರ ಮೇಲೆ ಆಗಿರಲಿಕ್ಕೇಬೇಕು'' ಎಂದು ಹೇಳಿದರು.

ಸಧ್ಯದ ಸಾಕ್ಷಿಗಳನ್ನು ನೋಡಿಕೊಂಡು ಪಂಚರು ತೀರ್ಮಾನಕ್ಕೆ ಬರಬೇಕು. ಟಿಳಕರ ಬಗ್ಗೆ ಚಿರೋಲರು ತುಂಬಾ ಆಕ್ಷೇಪಾರ್ಹ ಆಧಾರ ವಿಲ್ಲದ ವಿಷಯಗಳನ್ನು ಬರೆದಿದ್ದಾರೆ. ಆದನ್ನು ಈ ನ್ಯಾಯಾಲಯವು ಸರಿಯಾಗಿ ಪರೀಕ್ಷಿಸಬೇಕು'' ಎಂದರು.

ಮುಂದೆ ನ್ಯಾಯಾಧೀಶ ಡಾರ್ಲಿಂಗರು ಪ್ರತಿವಾದಿಯ ಮೇಲೆ ಹೊರಿಸಿದ ಆರೋಪಗಳನ್ನು ಕುರಿತು ಉತ್ತರವನ್ನಿತ್ತರು. ಟಿಳಕರು ಪತ್ರಿಕೆಯಲ್ಲಿ ಬರೆದ ಭಾಷಣಗಳು ಮತ್ತು ಅವುಗಳ ಪರಿಣಾಮದಿಂದಾದ ಕೊಲೆಗಳ ಸಂಬಂಧವನ್ನು ಕುರಿತು "ಇವರು ಪತ್ರಿಕೆಗಳಲ್ಲಿ ಮೇಲಿಂದ ಮೇಲೆ ಕೆಟ್ಟ ಬರಹವನ್ನು ಬರೆದು ಬರೆದು, ಆದಕ್ಕಾಗಿ ಎರಡು ಸಲ ಶಿಕ್ಷೆಯನ್ನು ಅನುಭವಿಸಿದರಲ್ಲದೆ ಎರಡನೆ ಸಲ ಆರು ವರ್ಷ ಶಿಕ್ಷೆಯನ್ನು ಅನುಭೋಗಿಸ ಬೇಕಾಯಿತು. ಇವರು ಬರೆದುದನ್ನು ಜನತೆ ಓದಿ ಓದಿ, ಅವರೊಳಗಿನೊಬ್ಬರು ಕೊಲೆ ಮಾಡಿದರು. ಈ ರೀತಿ ಅವರ ಬರಹ ಮತ್ತು ಕೊಲೆಗೆ ಸಂಬಂಧವನ್ನು ಸ್ಥಾಪಿಸಿ, ಅವರಿಗೆ ದೋಷಾರೋಪಣೆಯನ್ನು ಮಾಡುವದು ಅನ್ಯಾಯವೆನಿಸಿದರೂ, ಕೊಲೆಗೆ ಪೂರ್ಣ ಕಾರಣರು ಇವರಿದ್ದಿರಬಹುದೇ ?" ಎಂದು ಹೇಳಿ, ಪಂಚರಿಗೆ ಅಲ್ಲಿಯ ಸಂಗತಿಗಳನ್ನು ಲಕ್ಷಿಸಿ ನಿರ್ಣಯಕ್ಕೆ ಬರಲು ಬಿನ್ನವಿಸಿದರು. ಮುಂದುವರಿದು "ನೀವು ವಾದಿಯ ಪರವಾಗಿ ನ್ಯಾಯವನ್ನೀಯಬೇಕಿದ್ದರೆ, ವಾದಿಯು ಯಾರು? ಅವನ ಚಾರಿತ್ರ್ಯವೆಂಥದು? ವೈಯಕ್ತಿಕವಾಗಲಿ ಅಥವಾ ಸಾರ್ವಜನಿಕವಾಗಲಿ ಅವರು ಯಾವ ರೀತಿಯಲ್ಲಿ ಇರುವರು? ಅಲ್ಲದೆ ಪ್ರತಿವಾದಿಯು ಅವರಿಗೆ ಯಾವ ಅನ್ಯಾಯವನ್ನು ಮಾಡಿದ್ದಾನೆ? ಎಂಬ ಬಗ್ಗೆ ವಿಚಾರಿಸಬೇಕು. ಅಲ್ಲದೆ ಅವರ ದೇಶದ ನ್ಯಾಯಾಧೀಶರಾದ ಡಾವರರು ವ್ಯಕ್ತಪಡಿಸಿದ ಮಾತುಗಳನ್ನು ನೀವು ಲಕ್ಷ್ಯಕ್ಕೆ ತರಬೇಕು" ಎಂದು ಹೇಳಿ ಮುಂದುವರಿದು "ಟಿಳಕರು ಈ ಹತ್ತು ವರ್ಷ ಕಾಲವೂ ಆಳುವ ವರ್ಗವನ್ನು ದ್ವೇಷಿಸುತ್ತಲೇ ಬಂದಿದ್ದಾರೆ.

ಉದ್ದೇಶಪೂರ್ವಕವಾಗಿ ವಾರವಾರವೂ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತ ಬಂದಿದ್ದಾರೆ. ಇದರಿಂದ ತುಂಬಾ ಕೆಟ್ಟ ಪರಿಣಾಮವು ಜನತೆಯ ಮೇಲಾಗಿದೆ. ಇಂಥ ಪತ್ರಿಕೋದ್ಯಮವು ನಾಡಿಗೊಂದು ಶಾಪವಾಗಿದೆ" ಎಂದು ಹೇಳಿದರು. ಆ ಮೇಲೆ ಗರ್ನಲರಲ್ಲಿ ಟಿಳಕರು ಬ್ರಿಟಿಶ ಸೈನ್ಯವನ್ನು ಸೇರುವದರ ವಿರುದ್ಧ ಮಾತನಾಡುವರೆಂಬ ನೆವದಿಂದ ಅವರಿಗೆ ಭಾಷಣ ಗಳನ್ನು ಮಾಡದಿರಲು ಪ್ರತಿಬಂಧಕಾಜ್ಞೆಯನ್ನು ಹಾಕಿದ್ದನ್ನೂ ವಿವರಿಸಿದರು.

ತಮ್ಮ ಸಮರ್ಥನೆಯನ್ನು ಮಾಡಿಕೊಂಡಮೇಲೆ ಎಲ್ಲ ಆಕ್ಷೇಪಾರ್ಹ ಭಾಷಣಗಳ ಸಮಗ್ರ ವರದಿಯನ್ನು ಅವರ ಮುಂದೆ ನ್ಯಾಯಾಧೀಶರಿತ್ತರು. ಆ ಮೇಲೆ ಎಲ್ಲ ಪಂಚರು ೨೭ ನಿಮಿಷಗಳವರೆಗೆ ಸೇರಿ, ಚರ್ಚೆಮಾಡಿ ಪ್ರತಿವಾದಿ ಚಿರೋಲರು ನಿರ್ದೋಷಿಗಳೆಂದೂ ಮತ್ತು ಅವರ ಮೇಲೆ ಪರಿ ಹಾರಕ್ಕೆ ವಾದಿಯು ಹೊರಿಸಿದ ಆರೋಪಗಳಲ್ಲಿ ಹುರುಳಿಲ್ಲವೆಂದೂ ನಿರ್ಣಯ ವನ್ನಿತ್ತರು. ಅದೇ ರೀತಿ ಚಿರೋಲರ ಆ ಗ್ರಂಥವನ್ನು ಪ್ರಕಟಿಸಿದ ಮ್ಯಾಕಮಿಲನ್ ಕಂಪನಿಯವರೂ ನಿರ್ದೋಷಿಗಳೆಂದು ಹೇಳಿದರು.

ಈ ಚಿರೋಲ ಮಾನಹಾನಿ ಪ್ರಕರಣವು, ಟಿಳಕರಿಗೆ ಬ್ರಿಟಿಶ ಜನತೆ ಮಾಡುತ್ತಿದ್ದ ಅನ್ಯಾಯವನ್ನು ಜನತೆಗೆ ಎತ್ತಿ ತೋರಿಸುತ್ತದೆ. ಇಂದು ಜಗತ್ತು ಯಾವದು ಸತ್ಯ, ಯಾವದು ಅಸತ್ಯ ಎಂಬ ಮಾತನ್ನು ನಿದಾ೯ ಕ್ಷಿಣ್ಯವಾಗಿ ತೂಗಿ ನೋಡಬಲ್ಲದು. ಯಾವ ಸರಕಾರದ ಗುಪ್ತ ಕಾಗದ ಪತ್ರಗಳು ಯಾರಿಗೂ ತೋರಿಸಲಿಕ್ಕೆ ಬಾರದವುಗಳೆಂದು ಸರಕಾರವು ಹೇಳಿ ಟಿಳಕರು ತಮಗೆ ತೋರಿಸಲು ಅನುಮತಿ ಬೇಡಿದಾಗ ಅವರಿಗೆ ನಿರಾಕರಿ ಸಿತೋ, ಅಂಥ ಎಲ್ಲ ಕಾಗದಪತ್ರಗಳನ್ನು ಅವರು ಚಿರೋಲರಿಗೆ ತೋರಿಸಿದ ರಲ್ಲದೆ, ಅವುಗಳನ್ನು ಉಪಯೋಗಿಸಿ ಗ್ರಂಥ ಬರೆಯಲು ಅನುಮತಿಯನ್ನಿ ತ್ತರು. ಮುಂದೆ ಚಿರೋಲರ ಮೇಲೆ ಟಿಳಕರು ಮಾನಹಾನಿ ಮೊಕದ್ದಮೆ ಯನ್ನು ತಂದರೆ, ಸರಕಾರವೇ ಬೆಂಬಲಕ್ಕೆ ಬಂದಿತು. ಆರ್ಥಿಕ ಸಹಾಯವನ್ನು ನೀಡಿತು. ಚಿರೋಲರ ಅವಮಾನವೆಂದರೆ ತಮ್ಮ ಅವಮಾನವೆಂದೇ ಸರಕಾರವು ಯೋಚಿಸಿ, ಸಾಧ್ಯವಿದ್ದ ಎಲ್ಲ ಸಹಾಯ ಸಹಕಾರಗಳನ್ನು ಅವರಿಗೆ ಕೊಟ್ಟಿತು. ಈ ರೀತಿ ಟಿಳಕರನ್ನು ಬ್ರಿಟಿಶ ಸಾಮ್ರಾಜ್ಯವು ಹತ್ತಿಕ್ಕಲು ಪ್ರಯತ್ನಿಸಿತು. ಚಿರೋಲರನ್ನು ಈ ನ್ಯಾಯದಿಂದ ನಿರ್ಮುಕ್ತರನ್ನಾಗಿ ಮಾಡಲು ಸಮಗ್ರ ಆಂಗ್ಲ ಸರಕಾರವೇ ಟೊಂಕ ಕಟ್ಟಿಕೊಂಡು ನಿಂತಿತ್ತು. ಅಂದಮೇಲೆ ಒಂದೇ

ಒಂದು ವ್ಯಕ್ತಿ ಟಿಳಕರು ಅಂಥ ಸಾಮ್ರಾಜ್ಯದೆದುರು ನಿಂತು ಹೋರಾಡುವ ಬಗೆಯೆಂತು?

ನ್ಯಾಯಾಧೀಶರ ನಿರ್ಣಯವು ಹೊರಬಿದ್ದೊಡನೆಯೇ ಆಂಗ್ಲೋ ಇಂಡಿಯನ್, ಲಂಡನ್ ಟಾಯಿಮ್ಸ್ ಮೊದಲಾದ ಸಾಮ್ರಾಜ್ಯ ಪಕ್ಷಪಾತಿ ಪತ್ರಗಳ ಹೊರತು, ಉಳಿದ ಎಲ್ಲ ಪತ್ರಗಳು ಜ್ಯೂರಿಗಳ ನಿರ್ಣಯವನ್ನು 'ನ್ಯಾಯದೇವತೆಯ ಕೊಲೆ, ಭಯಂಕರ ಅನ್ಯಾಯ, ನಾಚಿಕೆಗೇಡು' ಎಂಬ ವಿಶೇಷಣವನ್ನು ಕೊಟ್ಟು ಧಿಕ್ಕರಿಸಿದವು. ಇಂಗ್ಲಂಡದಲ್ಲಿಯ ಸೋಶಾಲಿಸ್ಟ ಪಾರ್ಟಿಯ 'ಡೇಲಿ ಹೆರಾಲ್ಡ' ಎಂಬ ಪತ್ರಿಕೆಯು 'ನ್ಯಾಯಮೂರ್ತಿಗಳೂ ಪಂಚರೂ ಟಿಳಕರ ವಿರುದ್ಧವಾಗಿ ನಿರ್ಣಯಕೊಟ್ಟಿದ್ದರೂ ಟಿಳಕರು ಹಿಂಸಾತ್ಮಕ ಕೃತಿಗಳಿಗೆ ಅನುಕೂಲರಿದ್ದರೆಂಬ ಮಾತನ್ನು ನಾವು ಒಂದು ಕ್ಷಣ ಕೂಡ ಒಪ್ಪಲು ಸಿದ್ಧರಿಲ್ಲ. ಈ ವಿಷಯದಲ್ಲಿ ಟಿಳಕರ ಯೋಗ್ಯತೆಯು ಎಡ್ವರ್ಡ ಕರ್ಸನ್ನ ಇವರಿಗಿಂತ ಸಾವಿರಪಟ್ಟು ಮೇಲಾಗಿದೆ. ಮತ್ತು 'ಲಾರ್ಡ ಹಾಯ ಚಾನ್ಸೆಲರಕ್ಕಿಂತ ಕಡಿಮೆ ರಾಜದ್ರೋಹಿಗಳು' ಎಂದು ಬರೆಯಿತು.

ಈ ಪ್ರಕರಣದಲ್ಲಿ ಬ್ರಿಟಿಶರು ನ್ಯಾಯ ನಿಃಪ್ಪಕ್ಷತನಗಳನ್ನು ತುಳಿದು ರಾಜಕೀಯ ಉಪಯುಕ್ತತೆ ಹಾಗೂ ಸಾಮ್ರಾಜ್ಯದ ಹಿತವನ್ನೇ ಸಾಧಿಸಲು ಯತ್ನಿಸಿದ್ದರಿಂದ ಭಾರತೀಯ ಮಂದಪಕ್ಷೀಯರ ವಿಶ್ವಾಸವೂ ಹಾರಿ ಹೋಯಿತು. ಸರ್. ಸಿ. ವಾಯ್. ಚಿಂತಾಮಣಿಯವರು ತಮ್ಮ 'ಲೀಡರ' ಎಂಬ ಪತ್ರಿಕೆಯಲ್ಲಿ "ಲಾರ್ಡ ಕರ್ಸನ್ನರಿಗೆ ಬ್ರಿಟಿಶರಿಂದ ಯೋಗ್ಯ ನ್ಯಾಯ ದೊರೆಯಿತೆಂದು ಅನಿಸಬಹುದು. ಆದರೆ ಭಾರತೀಯರಿಗೆ ಹಾಗೆ ಅನಿಸುವದಿಲ್ಲ. ಬ್ರಿಟಿಶ ರಾಜ್ಯದೊಡನೆ ಹೋರಾಡಿದಾಗೆಲ್ಲ ದುರ್ದೈವದಿಂದ ಅವರಿಗೆ ನ್ಯಾಯ ದೊರೆತಿಲ್ಲ. ಈ ಪ್ರಕರ್ಣದಲ್ಲಿಯಂತೂ ಮುಂಬಯಿ ಸರಕಾರವೂ ಭಾರತ ಸರಕಾರವೂ ತಮ್ಮ ಎಲ್ಲ ಗುಪ್ತಕಾಗದ ಪತ್ರಗಳನ್ನೂ ಸಾಕ್ಷಿಪುರಾವೆಗಳನ್ನೂ ಆರ್ಥಿಕ ಸಹಾಯವನ್ನೂ ಸರಕಾರಿ ಅಧಿಕಾರಿಗಳನ್ನೂ ಚಿರೋಲರ ನೆರವಿಗೆ ಕೊಟ್ಟಿದೆ. ಇದಕ್ಕೆಲ್ಲ ಬ್ರಿಟಿಶರ ಉಚ್ಚ ನ್ಯಾಯ ಎಂಬ ಹೆಸರನ್ನೂ ಕೊಡುವದಾದರೆ ಅದರ ಬೆಲೆಯನ್ನೂ ಬೇರೆ ರೀತಿಯಿಂದ ಕಟ್ಟ ಬೇಕಾಗುವದು............ಯೋಗ್ಯತೆ, ಧೈರ್ಯ, ದೇಶಭಕ್ತಿ, ಧೃಡನಿಶ್ಚಯ ಇತ್ಯಾದಿ ಗುಣವಿಶಿಷ್ಟರಾದ ಲೋಕಮಾನ್ಯರನ್ನು ಅವರ ದೇಶಬಾಂಧವರು ಪೂಜಿಸುವದರಲ್ಲಿ ಎಂದೂ ಹಿಂಜರಿಯಲಾರರು" ಎಂದು ಬರೆದರು.

---

## ಹೋಮರೂಲ ನಿಯೋಗ: ಬ್ರಿಟಿಶ ಪಾರ್ಲಿಮೆಂಟಿನ ಎದುರು (೧೯೧೮)



ಬಾಬು ಬಿ. ಸಿ. ಪಾಲ, ಡಾ. ಪಿ. ಜೆ. ಮೆಹತಾ, ಲೋಕಮಾನ್ಯ ಟಿಳಕ, ಆನರೆಬಲ್ ಖಾಪರಡೆ
ಆನರೆಬಲ್ ವಿಠ್ಠಲಭಾಯಿ ಪಟೇಲ, ಮತ್ತು ಶ್ರೀ ಎನ್. ಸಿ. ಕೇಳಕರ

# ಇಂಗ್ಲಂಡದಲ್ಲಿಯ ಮಹಾಕಾರ್ಯ

ಚಿರೋಲ ಪ್ರಕರ್ಣದಲ್ಲಿ ಟಿಳಕರಿಗೆ ಸೋಲು ಬಂದುದರಿಂದ ಆರ್ಥಿಕ ಸಂಕಟದಲ್ಲಿ ಟಿಳಕರು ಸಿಕ್ಕರು. ಈ ವಿಷಯದಲ್ಲಿ ಟಿಳಕರ ಲೆಕ್ಕ ತಪ್ಪಿತು. ೭೦–೭೫ ಸಾವಿರ ರೂಪಾಯಿಗಳ ವೆಚ್ಚ ಬರಬಹುದೆಂದು ಅವರು ಎಣಿಸಿದ್ದರು. ಆದರೆ ಅದು ೩ ಲಕ್ಷ ರೂಪಾಯಿಗಳಷ್ಟು ಬಂದಿತು. ಇಂಗ್ಲಂಡಕ್ಕೆ ಹೋಗುವ ಮೊದಲೇ ಮನೆಮಾರುಗಳನ್ನು ವತ್ತೀಹಾಕಿ, ಕಾಯಿದೆ ಸಲಹೆಗಾರರಿಗೂ ವಕೀಲರಿಗೂ ಹಣ ತುಂಬಿದ್ದರು. ಮೇಲಾಗಿ ಕೋರ್ಟ ಖರ್ಚನ್ನು ಚಿರೋಲರಿಗೆ ಕೊಡುವ ಪ್ರಸಂಗ. ವಿರುದ್ಧವಾದ ತೀರ್ಪು. ಈ ಆರ್ಥಿಕ ಸಂಕಟಗಳಿಂದ ಟಿಳಕರ ಪ್ರಕೃತಿಯ ಮೇಲೆ ಏನು ಪರಿಣಾಮವಾಗುವದೋ ಎಂದು ಅವರ ಮಿತ್ರರೂ ಆಪ್ತರೂ ಚಿಂತೆಗೊಳಗಾದರು. ಆದರೆ ಟಿಳಕರು ಮಾತ್ರ ಈ ಸಂಕಟಗಳಿಂದ ಧೃತಿಗೆಡಲಿಲ್ಲ. ಅವರ ಮತಿ ಮುಸಣಿಸಲಿಲ್ಲ. ಸ್ಥಿತಪ್ರಜ್ಞರಂತೆ ಶಾಂತವಾಗಿದ್ದರು. ಪರಿಸ್ಥಿತಿಯನ್ನು ಎದುರಿಸಲು ಕೂಡಲೇ ಧೋಂಡೋಪಂತರಿಗೆ "ನನ್ನ ಉಳಿದ ಎಲ್ಲ ಆಸ್ತಿಯನ್ನೂ ಗವ್ಹರ್ನಮೆಂಟ ಸೆಕ್ಯೂರಿಟಿಗಳನ್ನೂ ಮಾರಿ, ಬೇಕಾದ ಹಣವನ್ನು ಸಿದ್ಧಪಡಿಸಿರಿ. ನನ್ನ ಪ್ರಕೃತಿಯ ಬಗ್ಗೆ ಏನೂ ಚಿಂತೆ ಮಾಡುವ ಕಾರಣವಿಲ್ಲ. ವಿರುದ್ಧ ತೀರ್ಪಿನಿಂದ ನನ್ನ ಮೇಲೆ ಯಾವ ಪರಿಣಾಮವೂ ಆಗಿಲ್ಲ. ಇಂತಹ ಅನೇಕ ಸಂಕಟಗಳನ್ನು ಎದುರಿಸಿದ್ದೇನೆ. ನಾನು ಸಂಕಟಗಳಿಗೆ ಬೆದರಿದ್ದರೆ ಎಂದೊ ನನ್ನ ಸಮಾಧಿಯು ಆಗುತ್ತಿತ್ತು. ದೇವರ ದಯೆಯಿಂದ ಮೊದಲಿನಂತೆ ಈ ಸಂಕಟದಿಂದಲೂ ಪಾರಾಗುವೆನೆಂದು ಎಲ್ಲ ನನ್ನ ಜನರಿಗೆ ತಿಳಿಸಿರಿ. ನಾನು ಹೋಮರೂಲು ಲೀಗಿನ ಶಿಷ್ಟಮಂಡಳದ ದಾರೀ ಕಾಯುತ್ತಿದ್ದೇನೆ." ಎಂದು ಸ್ಪಷ್ಟವಾಗಿ ಬರೆದರು. ಎಂತಹ ಧೈರ್ಯ!

ಲೋಕಮಾನ್ಯರು ಇಂಗ್ಲಂಡದಲ್ಲಿ ಸುಮಾರು ೧೪ ತಿಂಗಳು ಕಳೆದರು. ಮುಪ್ಪಿನವರೂ ರೋಗಪೀಡಿತರೂ ಆಗಿದ್ದರೂ ಅವರ ಉತ್ಸಾಹವು ಮಾತ್ರ ತಾರುಣ್ಯವನ್ನು ಪಡೆದಿದ್ದಿತು. ಅವರ ಅಲ್ಲಿಯ ತೆರವಿಲ್ಲದ ಕಾರ್ಯಕ್ರಮಗಳೇ

ಆದಕ್ಕೆ ಸಾಕ್ಷಿ. ಹೋಮರೂಲ ಲೀಗಿನ ಚಳವಳಿಯೇ ಇಂಗ್ಲಂಡ ಪ್ರವಾಸದ ಮುಖ್ಯ ಉದ್ದೇಶ, ಖಟ್ಲೆ ನೆವ ಮಾತ್ರ. ಅನೇಕರಿಗೆ ಭೆಟ್ಟಿಯಾದರು. ಉಪನ್ಯಾಸಗಳನ್ನಿತ್ತರು. ವಿದ್ವಾಂಸರೊಡನೆ ವೈದಿಕ ಸಂಸ್ಕೃತಿಯ ಬಗ್ಗೆ ಚರ್ಚೆ ಮಾಡಿದರು. ರಾಜಕಾರಣಿಗಳ ಮನ ಒಲಿಸಿದರು. ಶಿಲೆಕ್ಟ ಕಮಿಟಿಯ ಮುಂದೆ ಸಾಕ್ಷಿ ನುಡಿದರು. ಒಂದಲ್ಲ, ಎರಡಲ್ಲ ಎಷ್ಟೆಂದು ವರ್ಣಿಸಬೇಕು ?

ಲೋಕಮಾನ್ಯರು ಇಂಗ್ಲಂಡದಲ್ಲಿ ಕಾಲಿಡುವ ಸಮಯವೂ ಕ್ರಾಂತಿ ಕಾಲವಾಗಿದ್ದಿತು. ಯುದ್ಧ ಮುಗಿಯುತ್ತ ಬಂದಿತ್ತು. ರಶಿಯಾದ ರಾಜ್ಯ ಕ್ರಾಂತಿಯು ಕೂಲಿಕಾರರಲ್ಲಿ ಭಯಂಕರ ಕ್ರಾಂತಿಯನ್ನುಂಟುಮಾಡಿತ್ತು. ಅವರು ಅಶಾಂತರಾಗಿದ್ದರು. ಪ್ಯಾರಿಸಿನಲ್ಲಿ ಒಪ್ಪಂದದ ಮಾತು ಕತೆಗಳು ನಡೆದಿದ್ದವು. ಪಾರ್ಲಿಮೆಂಟಿನ ಚುನಾವಣೆಯು ನಡೆಯುವದಿದ್ದಿತು. ಇವೆಲ್ಲವುಗಳ ಉಪಯೋಗವನ್ನು ಟಿಳಕರು ಮಾಡಿಕೊಂಡರು.

## ಭಾಷಣ ಪ್ರತಿಬಂಧವು ದೂರಾಯಿತು

ಅನುಕೂಲ ವಾತಾವರಣವಿದ್ದರೂ ಟಿಳಕರಿಗೆ ಭಾಷಣದ ಬಂಧನದ ಮೂಲಕ ಬಹಿರಂಗವಾಗಿ ಏನೂ ಮಾಡಲು ಬರುವಂತಿದ್ದಿಲ್ಲ. ಹೋಮರೂಲ ಲೀಗಿನ ವಿರುದ್ಧವಾಗಿ ಆಂದೋಲನ ಹೂಡಲು, ಡಾಕ್ಟರ ನಾಯರರು ಇಂಗ್ಲಂಡಕ್ಕೆ ಬಂದಿದ್ದರು. ಅವರಿಗೂ ಮದ್ರಾಸ ಸರಕಾರವು ಮಾತನಾಡಲು ಪ್ರತಿಬಂಧಿಸಿದ್ದಿತು. ಅವರು ಯುದ್ಧ ಮಂತ್ರಿಗಳಿಗೆ ಅರ್ಜಿ ಮಾಡಿ ಪ್ರತಿಬಂಧಕವನ್ನು ದೂರಮಾಡಿಕೊಂಡರು. ಇದೇ ಸಂಧಿಯನ್ನು ಸಾಧಿಸಿ, ಟಿಳಕರ ಸಾಲಿಸಿಟರರು ಅರ್ಜಿಮಾಡಿ ಭಾಷಣ ಪ್ರತಿಬಂಧವನ್ನು ದೂರಮಾಡಿದರು. ಪ್ರತಿಬಂಧಕವು ದೂರಾದೊಡನೆಯೇ ಲೋಕಮಾನ್ಯರ ಉತ್ಸಾಹವು ಉಕ್ಕೇರಿತು.

## ಅಭಿನಂದನಪತ್ರ

"ಇಂಗ್ಲಂಡ ಹಾಗೂ ಮಿತ್ರರಾಷ್ಟ್ರಗಳು ದೊರಕಿಸಿದ ವಿಜಯಕ್ಕಾಗಿ ರಾ ಸಭೆ ಹಾಗೂ ಹೋಮರೂಲ ಲೀಗಿನ ಮತ್ತು ವಯ್ಯಕ್ತಿಕವಾಗಿ ಅಭಿನಂದಿಸುವೆ. ತಮ್ಮ ಚತುರ ನೇತೃತ್ವದಿಂದ ಒಪ್ಪಂದವಾಗಿ, ಸರ್ವರಾಷ್ಟ್ರಗಳಲ್ಲಿ ಶಾಂತತೆ, ಪ್ರಗತಿ, ಬಂಧುಭಾವಗಳು ನೆಲೆಗೊಳ್ಳುವವೆಂದು ಆಶಿಸುವೆ.

ನಮ್ಮ ರಾಜನಿಷ್ಠೆ ಪೂರ್ವಕ ಸಂದೇಶವನ್ನು ಬಾದಶಹರಿಗೂ ರಾಣಿಯವರಿಗೂ ತಿಳಿಸಬೇಕು" ಎಂದು ಓಲೆ ಬರೆದು, ಕಾರ್ಯಕ್ಕೆ ಪ್ರಾರಂಭ ಮಾಡಿದರು.

**ಬ್ರಿಟಿಶ ಕಾಂಗ್ರೆಸ್ ಕಮಿಟಿಯ ಸಂಘಟನೆ**

ಕಾಂಗ್ರೆಸ್ಸಿನ ಚಳವಳಿಯನ್ನು ಇಂಗ್ಲಂಡದಲ್ಲಿ ನಡೆಯಿಸುವದಕ್ಕಾಗಿ 'ಬ್ರಿಟಿಶ ಕಾಂಗ್ರೆಸ್ ಕಮಿಟಿ' ಹಾಗೂ 'ಇಂಡಿಯಾ' ಎಂಬ ವೃತ್ತಪತ್ರ ಪ್ರಾರಂಭಿಸಲ್ಪಟ್ಟಿದ್ದವು. ಇಲ್ಲಿಯ ಕಾರ್ಯಕ್ಕಾಗಿ ಭಾರತವು ೬೦ ಸಾವಿರ ರೂ.ಗಳನ್ನು ಪ್ರತಿವರ್ಷ ತೆತ್ತುತ್ತಿತ್ತು. ಮೊದಲು ಮಂದಪಕ್ಷೀಯರೇ ಕಾಂಗ್ರೆಸ್ಸಿನ ಮುಖಂಡರಿರುತ್ತಿದ್ದ ಮೂಲಕ ಬ್ರಿಟಿಶರ ಸಲಹೆಯಂತೆಯೇ ನಡೆಯುತ್ತಿದ್ದರು. ಆದರೆ ಲಖನೌ ಕಾಂಗ್ರೆಸ್ಸಿನ ನಂತರ ಕಾಂಗ್ರೆಸ್ಸಿನಲ್ಲಿ ಪಲ್ಲಟವಾಯಿತು. ರಾಷ್ಟ್ರೀಯರು ಅದನ್ನು ವಶಪಡಿಸಿಕೊಂಡಿದ್ದರು. ಧೋರಣದಲ್ಲಿಯೂ ಬದಲಾವಣೆಯಾಯಿತು. 'ಇಂಡಿಯಾ' ವೃತ್ತಪತ್ರವು ಕಾರ್ಯಕಾರೀ ಮಂಡಳದಿಂದ ಅಧಿಕೃತರಾದ ಡಾಯರೆಕ್ಟರರ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದಿತು. ಇದರ ಸಂಪಾದಕರಾದ ಪೋಲಕರು ಅಹಂಮನ್ಯರಿದ್ದು, ಅವರ ವರ್ಚಸ್ಸು ಮಂಡಳದ ಮೇಲೆ ಬಹಳವಿದ್ದಿತು. ಮೊಂಟೆಗ್ಯೂರವರು ಪೋಲಕರನ್ನು ಬಗಲಿಗೆ ಹಾಕಿದ್ದರು. ಪೋಲಕರು ಇಂಡಿಯಾ ಬಿಲ್ಲಿಗೆ ಮಾನ್ಯತೆ ಕೊಟ್ಟಿದ್ದರು. ಈ ಬಗೆಯಾಗಿ ಬ್ರಿ. ಕಮಿಟಿಯ ಕೈಗಳು ಕಟ್ಟಲ್ಪಟ್ಟಿದ್ದವು. ಟಿಳಕರಿಗಾಗಲೀ ಶಿಷ್ಟಮಂಡಳಕ್ಕಾಗಲಿ ಸ್ಥಾನಿಕ ಪರಿಸ್ಥಿತಿಯ ಜ್ಞಾನವಿಲ್ಲದ ಮೂಲಕ ಕಮಿಟಿಯ ಅನುಭವಿಕ ಜನರ ಅಭಿಪ್ರಾಯದಂತೆಯೇ ಎಲ್ಲರೂ ನಡೆಯಬೇಕೆಂಬುದೇ ಪೋಲಕರವರ ಮತ. ಮಂದಪಕ್ಷಿಯರಾದ ಸುರೇಂದ್ರನಾಥ ಬ್ಯಾನರ್ಜಿ ವಾಚ್ಛಾರವರಿಗೆ ಇದು ಸತ್ಯವೆಂದೇ ಅನಿಸುತ್ತಿದ್ದಿತು. ಟಿಳಕರು ಅನುಭವಿಗಳ ಸಲಹೆಗಳನ್ನು ಕೇಳಲು ಸಿದ್ಧರಿದ್ದರೂ ಸ್ವತಂತ್ರ ರೀತಿಯಿಂದ ನಡೆಯಬೇಕೆಂದು ಪ್ರತಿಪಾದಿಸಹತ್ತಿದರು. ಕಾಂಗ್ರೆಸ್ಸಿನವರು ಬಿಲ್ಲಿನಲ್ಲಿದ್ದುದಕ್ಕಿಂತಲೂ ಹೆಚ್ಚಿಗೆ ಬೇಡಿದರೆ ಏನೂ ಸಿಗಲಿಕ್ಕಿಲ್ಲವೆಂಬ ಬೆದರಿಕೆಗೆ ಬಗ್ಗದೆ, ಶಿಷ್ಟಮಂಡಳಕ್ಕೆ ಏನೂ ಕೇಳಲು ಅಧಿಕಾರವಿದೆ ಎಂದು ಪ್ರತಿಪಾದಿಸಹತ್ತಿದರು. ಮೊದ ಮೊದಲು ಟಿಳಕರ ಮಾತಿಗೆ ದಾದು ಮಾಡಲಿಲ್ಲ. ಕೇಳಲಿಕ್ಕೆ ಇವರಾರು ? ಕಾಂಗ್ರೆಸ್ಸು ಇವರಿಗೆ ಅಧಿಕಾರವೆಲ್ಲಿ ಕೊಟ್ಟದೆ ? ಎಂದು ಪೋಲಕರು ಯಮುಕಿನ ಮಾತುಗಳನ್ನು ಆಡಹತ್ತಿ

ದರು. ಆದರೆ ದಿಲ್ಲಿ ಕಾಂಗ್ರೆಸ್ಸಿನಲ್ಲಿ ಟಿಳಕರು ಶಿಷ್ಟಮಂಡಲದಲ್ಲಿ ಆರಿಸಲ್ಪಟ್ಟ ರಲ್ಲದೆ, ಶಾಂತತಾ ಪರಿಷತ್ತಿಗೆ ಟಿಳಕ, ಗಾಂಧೀ, ಹಸನ ಇಮಾಮರು ಪ್ರತಿನಿಧಿಗಳೆಂದು ಚುನಾಯಿಸಲ್ಪಟ್ಟರು. ಇದರಿಂದ ಪೋಲಕರಿಗೆ ಮಾತ ನಾಡಲು ಕಠಿಣವಾಯಿತು. ಟಿಳಕರು ದಿಲ್ಲಿ ಕಾಂಗ್ರೆಸ್ಸಿನ ಗೊತ್ತುವಳಿಯು ವಿರುದ್ಧವಾಗಿ, ಪೋಲಕರು ಕಣ್ಣುಮುಚ್ಚಿ ಮಾಂಟೆಗ್ಯೂರವರಿಗೂ ಅವರ ಬಿಲ್ಲಿಗೂ ಸಮ್ಮತಿಕೊಟ್ಟಿರುವರೆಂದೂ ಆದರಂತೆಯೇ ಮುಂಬಯಿ ಕಾಂಗ್ರೆಸ್ಸಿನ ಗೊತ್ತುವಳಿಯು ಚೇಷ್ಟೆಯನ್ನು ಅತ್ಯಂತ ಗರ್ಹ್ಯವಾದ ರೀತಿಯಲ್ಲಿ ಮಾಡಿ ರುವರೆಂದೂ ಕಮಿಟಿಯ ಕಾರ್ಯದರ್ಶಿಗಳಾದ ಕ್ಲಾರ್ಕರಿಗೂ ರೂಥರ ಫೋರ್ಡರಿಗೂ ಮನಗಾಣಿಸಿಕೊಟ್ಟರು. ಕಾಂಗ್ರೆಸ್ಸಿನ ಗೊತ್ತುವಳಿಯನ್ನು ಇಂಡಿಯಾ ಪತ್ರದಲ್ಲಿ ಪ್ರಸಿದ್ಧವಾಗದ ಬಗ್ಗೆ ೬ ವಾರ ಚರ್ಚೆ ನಡೆದು ಕೊನೆಗೆ 'ಇಂಡಿಯಾ' ಪತ್ರವು ರಾಷ್ಟ್ರೀಯ ಸಭೆಯ ಮುಖಪತ್ರವೆಂದೂ ಕಮಿಟಿಯ ಪುನರ್ರಚನೆಯಾಗಬೇಕೆಂದೂ ಟಿಳಕರು ಗೊತ್ತುವಳಿಯನ್ನು ಮಂಡಿಸಿ ಪಾಸುಮಾಡಿಕೊಂಡರು.

ಈ ಚರ್ಚೆಯಲ್ಲಿ ವಿಠ್ಠಲಭಾಯಿ ಪಟೇಲರೂ ಕೇಳಕರರೂ ಭಾಗ ವಹಿಸಿದ್ದರು. ಕಾಂಗ್ರೆಸ್ಸಿನ ಸಂಬಳದಿಂದ ಜೀವಿಸುತ್ತಿದ್ದ ಪೋಲಕರು ವಿರೋಧಿಸಿದರು. ಕಮಿಟಿಯು ಪುನರ್ಘಟಿಸಲ್ಪಟ್ಟಿತು. ಉಪಸಂಪಾದಕರಿದ್ದ ಬ್ಯಾ. ಮಿಸ್ ಹೆಲಿನಾ ನಾರ್ಮಂಟನ್ನರು ಸಂಪಾದಕರಾಗಿಯೂ ಅಲ್ಲಿರುವ ವರೆಗೆ ಕೇಳಕರರು ಸಹ ಸಂಪಾದಕರಾಗಿಯೂ ಕಾರ್ಯಮಾಡಬೇಕೆಂದು ಗೊತ್ತಾಯಿತು. ಈ ಬಗೆಯಾಗಿ 'ಇಂಡಿಯಾ' ಪತ್ರವು ನಿಜವಾದ ಭಾರತದ ಪ್ರಚಾರ ಸಾಧನವಾಗಿ ಪರಿಣಮಿಸಿತು. ಟಿಳಕರು ಮಾಡಿದ ಈ ಬದಲಾವಣೆ ಯಿಂದ ಬ್ರಿಟಿಶ ಜನಾಂಗವು ಬೆರಗಾಯಿತು.

### ಪ್ರಚಾರ ಕಾರ್ಯ

ಬ್ರಿಟಿಶ ಜನಾಂಗದಲ್ಲಿ ಭಾರತದಲ್ಲಿಯ ಬ್ರಿಟಿಶರ ಆಳಿಕೆಯಿಂದ ಉಂಟಾದ ಭಾರತದ ದಾರಿದ್ರ್ಯ ಮೊದಲಾದವುಗಳ ಬಗ್ಗೆ ಪ್ರಚಾರ ಮಾಡಿ ದವರಲ್ಲಿ ಟಿಳಕರೇ ಮೊದಲಿಗರೆಂದು ಹೇಳಬಹುದು. ಈ ಮೊದಲು ಪ್ರಚಾರ ವನ್ನು ಕೈಕೊಂಡ ದಾದಾಭಾಯಿ, ಗೋಖಲೇ ಮೊದಲಾದವರ ಪ್ರಚಾರವು

ಅರಮನೆಯಲ್ಲಿ, ಸಂತೋಷ ಕೂಟಗಳಲ್ಲಿ ನಡೆದ ಚರ್ಚೆಗಳಿಂದು ಹೇಳ ಬಹುದು. ಇಂಗ್ಲಂಡದ ಜನತೆಯೇ ಇಂಗ್ಲಂಡದ ಧೋರಣವನ್ನು ರೂಪಿಸುವದು. ಆದುದರಿಂದ ಭಾರತದ ಬೇಡಿಕೆಗಳೇನು? ಅದರ ಅವಶ್ಯಕತೆ ಎಷ್ಟಿದೆ? ಎಂಬುದನ್ನು ಸಾಮಾನ್ಯ ಜನರಲ್ಲಿ ಬಿಂಬಿಸಿದರೆ ಮಾತ್ರ, ತಮ್ಮ ಕಾರ್ಯವಾಗುವದೆಂಬ ದೂರ ದೃಷ್ಟಿಯಿಂದ ಈ ಕಾರ್ಯಕ್ಕೆ ಕೈಹಾಕಿದರು. ಕೂಲಿಕಾರ ಮುಖಂಡರನ್ನು ಹಿಡಿದರು. ಕೂಲಿಕಾರ ಪಕ್ಷದ ಪ್ರಮುಖರಾದ ಮಿಸ್ ಬ್ಯಾಟೀಹಾಲರು "ಬ್ರಿಟಿಶ ಜನಾಂಗದ ಶಕ್ತಿ ಎಲ್ಲಿದೆ ಎಂಬುದನ್ನು ಟಿಳಕರು ಕಂಡುಹಿಡಿದಿದ್ದು ಉದಾರ ಹಾಗೂ ಶ್ರೀಮಂತ ಪಕ್ಷಗಳು ಮುಖಾಳವಾಗುತ್ತ ನಡೆದಿದ್ದು, ಕೂಲಿಕಾರ ಪಕ್ಷವು ಉದಯೋನ್ಮುಖವಾಗಿದೆ ಯೆಂದೂ ಅವರು ಮನಗಂಡಿದ್ದರು. ಬ್ರಿಟಿಶ ಕೂಲಿಕಾರರ ಸಭೆ, ಟ್ರೇಡ ಯೂನಿಯನ್. ಮೊದಲಾದ ಬಹು ಸಂಖ್ಯಾಕ ಕೂಲಿಕಾರರಿರುವಲ್ಲೆಲ್ಲ ಟಿಳಕರು ಕಾಣಹತ್ತಿದ್ದರು." ಜಾರ್ಜ ಲ್ಯಾನ್ಸಬರಿ, ಅರ್ಥರ ಹ್ಯಾಂಡರಸನ್, ರಾಮ್ಸೆ ಮ್ಯಾಕ್ಡೋನಾಲ್ಡ, ವೆಜಉಡ್ ಮೊದಲಾದವರು ವಿಶ್ವಾಸಾರ್ಹರೆಂದೂ ಸ್ವಾರ್ಥತ್ಯಾಗಿಗಳೆಂದೂ ಟಿಳಕರು ಅರಿತಿದ್ದರು. ಅವರೂ ಕೂಡ ಟಿಳಕರ ಬುದ್ಧಿಯನ್ನೂ ಸಹೃದಯತೆಯನ್ನೂ ಕಂಡು ಕೌತುಕಗೊಂಡಿದ್ದರು. ಅವರ ಸ್ವಾತಂತ್ರ್ಯಪ್ರೇಮ ಹಾಗೂ ಸ್ವಾವಲಂಬನವನ್ನು ಕಂಡು ಅವರು ಆಶ್ಚರ್ಯಪಡುತ್ತಿದ್ದರು. ಮೆಕ್ಡೊನಾಲ್ಡರು ಗ್ಲಾಸಗೋದಲ್ಲಿ ನಡೆದ ಸಭೆಯಲ್ಲಿ "ಲೋಕಮಾನ್ಯರು ಸುದೈವದಿಂದ ಇಂದು ನಮ್ಮೊಡನೆ ಇರುವರು. ಕಷ್ಟಕ್ಕೀಡಾದ ಭಾರತದ ಮೂರ್ತಿಯೇ ಅವರು. ಭಾರತದಲ್ಲಿ ಇಂದು ಕಾಣುವ ಪ್ರತಿಕಾರಕ ಶಕ್ತಿಯೆಂದರೆ ಟಿಳಕರು. ಅವರು ನಡೆಸಿರುವ ಸ್ವರಾಜ್ಯದ ಹೋರಾಟದಲ್ಲಿ ನಿಮ್ಮೆಲ್ಲರ ನೆರವು ಹಾಗೂ ಸಹಾನುಭೂತಿಯನ್ನು ದೊರಕಿಸಲು ಬಂದಿದ್ದಾರೆ. ವಿಶ್ವಬಂಧುತ್ವವೇ ನಮ್ಮ ಧ್ಯೇಯವಾಗಿರುವದರಿಂದ ಸ್ವತಂತ್ರ ಕೂಲಿಕಾರ ಪಕ್ಷವು ನಿಮ್ಮ ಹೋರಾಟದಲ್ಲಿ ಸಂಪೂರ್ಣ ಸಹಾಯ ನೀಡುವದೆಂದು ಎಲ್ಲರ ಪರವಾಗಿ ಆಶ್ವಾಸನ ಕೊಡುವೆನು. ನ್ಯಾಯ ಹಾಗೂ ಲೋಕಮತದ ಮೇಲೆಯೇ ಜಗತ್ತಿನಲ್ಲೆಲ್ಲ ಜನತಾರಾಜ್ಯವಾಗಬೇಕೆಂಬುದೇ ನಮ್ಮ ಗುರಿಯು" ಎಂದು ಮಾತನಾಡಿದರು."

ಟಿಳಕರ ಪ್ರಭಾವವು ಲ್ಯಾನ್ಸಬರಿಯವರ ಮೇಲೆ ಬಹಳ ಬಿದ್ದಿತು. ಅವರಿಂದ ಇಂಗ್ಲಂಡ ಜರ್ಮನಿಗಳಲ್ಲಿ ಭಾರತದ ಪ್ರಚಾರ ಮಾಡಲು ಬಹಳ ಅನುಕೂಲವಾಯಿತು. ಟಿಳಕರು ಕೂಲಿಕಾರ ಪಕ್ಷದ ನಿಧಿಗೆ ೨೦೦೦ ಪೌಂಡು ಸಹಾಯವನ್ನು ಕೊಟ್ಟು, ಸಾಪ್ತಾಹಿಕ ಹೆರಾಲ್ಡ ಪತ್ರವನ್ನು ದೈನಿಕವಾಗಿ ಮಾರ್ಪಡಿಸಿದರು. ಅದಕ್ಕೆ ಕೋಶಾಧ್ಯಕ್ಷರು, ಕೂಲಿಕಾರ ಪಕ್ಷವು ಈ ನಿಮ್ಮ ಉಪಕಾರವನ್ನು ಎಂದೂ ಮರೆಯುವದಿಲ್ಲ. ಅಲ್ಲದೆ ನಿಮ್ಮ ಕಾರ್ಯದಲ್ಲಿ ಪೂರ್ಣ ನೆರವಾಗುವದು ಎಂದು ಬರೆದು ಪಾವತಿಯನ್ನು ಕಳಿಸಿದರು. ಇದು ಕೇವಲ ಶಾಬ್ದಿಕ ಸಹಾನುಭೂತಿ ಇರಲಿಲ್ಲ. ಭಾರತದ ಸ್ವರಾಜ್ಯದ ಬೇಡಿಕೆಗೆ ಸಂಪೂರ್ಣ ಬೆಂಬಲ ಕೊಟ್ಟಿತು. ಟಿಳಕರ ಬರೆಹ ಗಳನ್ನೆಲ್ಲ ಪ್ರಕಟಿಸಿತು. ದೇಶದಾತ್ಯಂತ ನಡೆದ ಕೂಲಿಕಾರರ ಪಕ್ಷದ ಸಭೆ ಗಳಲ್ಲೆಲ್ಲ ಟಿಳಕ, ಕೇಳಕರ, ಬ್ಯಾಪ್ಟಿಸ್ಟಾ, ಕರಂದೀಕರ, ಪಾಲ, ಪಟೇಲ ಮೊದಲಾದವರ ಉಪನ್ಯಾಸಗಳಾದವು.

ಲೋಕಮಾನ್ಯರು ಹೋಮರೂಲ ಲೀಗಿನ ಕೇಂದ್ರವನ್ನು ಅಡೆಲ್ಫಿ ಎಂಬಲ್ಲಿ ಅಟ್ಟದಮೇಲೆ ತೆಗೆದಿದ್ದರು. ಇಂಡಿಯಾ ಬಿಲ್ಲು ಹಾಗೂ ಹೋಮ ರೂಲ ಲೀಗಿನ ವಿಷಯದಲ್ಲಿ ಅನೇಕ ಹಸ್ತಪತ್ರಿಕೆಗಳನ್ನು ಮುದ್ರಿಸಿ ಹಂಚಿಸಿ ದರು. ಪಾರ್ಲಿಮೆಂಟಿನ ಚುನಾವಣೆಯ ಕಾಲಕ್ಕೆ 'ಭಾರತದ ಬೇಡಿಕೆ' ಏನೆಂಬ ಬಗ್ಗೆ ಜನರಲ್ಲಿ ತಿಳುವಳಿಕೆಯಾಗಬೇಕೆಂದು ಒಂದು ಚಿಕ್ಕ ಪುಸ್ತಕ ವನ್ನು ಪ್ರಸಿದ್ಧಿಸಿ, ಅದರ ಲಕ್ಷಾಂತರ ಪ್ರತಿಗಳನ್ನು ಇಂಗ್ಲಂಡದಲ್ಲಿಯೂ ಆಯರ್ಲಂಡದಲ್ಲಿಯೂ ಹಂಚಿಸಿದರು. ಅದರಂತೆಯೇ ಸ್ವಯಂ ನಿರ್ಣಯ ತತ್ವವನ್ನು ಭಾರತಕ್ಕೆ ಅನ್ವಯಿಸಬೇಕೆಂಬ (ಸೆಲ್ಫ ಡಿಟರ್ಮಿನೇಶನ್ ಫಾರ್ ಇಂಡಿಯಾ) ಬಗ್ಗೆ ಇನ್ನೊಂದು ಪ್ರಕಟನೆಯನ್ನು ಪ್ರಕಟಿಸಿದರು. ಅದನ್ನು ಯುರೋಪ, ಅಮೇರಿಕೆಗಳಲ್ಲಿ ಹಂಚಿಸಿದರು. ಭಾರತಕ್ಕೆ ಕೂಡಲೇ ಸ್ವರಾಜ್ಯ ವನ್ನು ದೊರಕಿಸುವ ಹಕ್ಕಿದೆ ಎಂದು ಅದರಲ್ಲಿ ಪ್ರತಿಪಾದಿಸಿದ್ದರು. ಭಾರತ ಸರಕಾರವು ಇದರಲ್ಲಿ ಭಾರತೀಯರ ಅಂತಃಕರಣದ ನಿಜವಾದ ಚಿತ್ರವಿದೆ ಎಂದು ಒಪ್ಪಿಕೊಂಡಿತು.

ಈ ಪ್ರಕಟನೆಯ ಬಗ್ಗೆ ಅನೇಕರಿಂದ ಗೌರವಪರ ಪತ್ರಗಳು ಬಂದವು. ಜಸ್ಟೀಸ ಪತ್ರದ ಸಂಪಾದಕರಾದ ಹಾಯಿಡಮನ್ನರು 'ಸ್ವಯಂ ನಿರ್ಣಯದ

ಹಕ್ಕು ಭಾರತಕ್ಕೂ ಅನ್ವಯಿಸಬೇಕೆಂಬ ನಿಮ್ಮ ಮಾತು ನನಗೆ ಪೂರ್ಣ ಮಾನ್ಯವಿದೆ' ಎಂದು ಬರೆದರು. ಬ್ರಿಟನ್ ಆ್ಯಂಡ ಇಂಡಿಯಾ ಸೊಸಾಯಿಟಿಯ ಮಿಸ್ ಜೊಸೆಫಾಯಿನ್‌ರನಸಮ್ ಎಂಬುವವರು "ನಿಮ್ಮ ಪುಸ್ತಕವು ಸ್ವಯಂ ನಿರ್ಣಯ ತತ್ವದ ಸುಂದರವಾದ ಪ್ರತಿಪಾದನವಿದೆ. ಆದರ ೨೦೦ ಪ್ರತಿಗಳನ್ನು ಹಂಚಲು ಬಯಸುವೆ" ಎಂದು ಬರೆದರು. ಹೀಗೆ ಟಿಳಕರ ಪ್ರಚಂಡವಾದ ಚಳವಳಿಯು ಇಂಗ್ಲಂಡದಲ್ಲೆಲ್ಲ ಪ್ರತಿಧ್ವನಿಗೈದಿತು.

## ಸಿಲೆಕ್ಟ ಕಮಿಟಿಯ ಮುಂದೆ ಟಿಳಕರ ಹೇಳಿಕೆ

ಪಾರ್ಲಿಮೆಂಟಿನ ಮುಂದೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಕಾಂಗ್ರೆಸ್ಸು ಶಿಷ್ಟಮಂಡಳವನ್ನು ಕಳಿಸಿತ್ತು. ಹೋಮರೂಲ ಲೀಗಿನ ವತಿಯಿಂದ ಟಿಳಕರು ಹೋಗಿದ್ದರು. ಬಿಸೆಂಟಮ್ಮನವರೂ ಮಂದಪಕ್ಷೀಯರೊಡನೆ ಆಗಮಿಸಿದ್ದರು. ಕಾಂಗ್ರೆಸ್ ಹಾಗೂ ಅಮ್ಮನವರಲ್ಲಿ ದಿಲ್ಲಿಯಲ್ಲಿಯೇ ಮತಭೇದವು ಕಂಡುಬಂದಿತ್ತು. ಮೂವರಲ್ಲಿ ಏಕಮತವನ್ನುಂಟುಮಾಡಲು ಟಿಳಕರು ವಿಶ್ವಪ್ರಯತ್ನಪಟ್ಟರು. ಕಾಂಗ್ರೆಸ ಪಕ್ಷವನ್ನು ಎತ್ತಿ ಹಿಡಿದರು. ಪಟೇಲರು ಟಿಳಕರ ಸಲಹೆಯಂತೆ ಕಾರ್ಯ ನಡೆಸಹತ್ತಿದರು. ಕಾಂಗ್ರೆಸ್ಸಿನ ವತಿಯಿಂದ ಪಟೇಲ, ದಿವಾಣ ಮಾಧವರಾವರವರ ಸಾಕ್ಷಿಗಳಾದವು. ಹೋಮರೂಲ ವತಿಯಿಂದ ಖಾಪರ್ಡೆ, ಕರಂದೀಕರ, ಟಿಳಕರು ಹೋಗಿದ್ದರು. ಟಿಳಕರು ತಮ್ಮ ಹೇಳಿಕೆಯನ್ನು ಮೊದಲೇ ಬರಹದ ಮೂಲಕ ತಿಳಿಸಿದ್ದರು. ಅದಕ್ಕಿಂತಲೂ ಹೆಚ್ಚಿಗೆ ಹೇಳುವದಿದೆಯೇ ಎಂದು ವಿಚಾರಿಸಿದರು. ಅದಕ್ಕೆ ಟಿಳಕರು ಶಾಂತರೀತಿಯಿಂದ ಉತ್ತರಕೊಡುತ್ತ "ಭಾರತಕ್ಕೆ ಎಷ್ಟು ಹಪ್ತೆಗಳಿಂದ ಸ್ವರಾಜ್ಯವನ್ನು ಕೊಡಬೇಕೆಂಬುದನ್ನು ಭಾರತ ಸರಕಾರದ ಸಲಹೆಯಿಂದ ಪಾರ್ಲಿಮೆಂಟು ನಿರ್ಧರಿಸಬೇಕೆಂಬ ಜಾಹೀರನಾಮೆಗೆ ಲೀಗಿನ ಸಮ್ಮತಿಯಿದೆ. ಜಾಹೀರನಾಮೆಯನ್ನು ಅನುಸರಿಸಿಯೂ ಭಾರತಕ್ಕೆ ಹೆಚ್ಚಾಗಿ ಸ್ವರಾಜ್ಯದ ಅಧಿಕಾರಗಳನ್ನು ಕೊಡಬೇಕು. ಮತ್ತು ಚೇಮ್ಸಫೋರ್ಡರು ಸೂಚಿಸಿದ ಮೆಟ್ಟಲುಗಳನ್ನು ಕಡಿಮೆ ಮಾಡಬೇಕು. ಅಲ್ಲದೆ ಪೂರ್ಣ ಸ್ವರಾಜ್ಯದ ದಿನವನ್ನು ನಿಶ್ಚಿತಗೊಳಿಸಿ ಕಾಯಿದೆಯಲ್ಲಿ ನಿರ್ದಿಷ್ಟಪಡಿಸಬೇಕೆಂದು ಬಲವಾಗಿ ಸಮರ್ಥಿಸಿದರು. ೧೫ ವರ್ಷದ ಅವಧಿಯು ಮಾನ್ಯವೆಂದು ಹೇಳಿದರು. ಪ್ರಾಂತಿಕ ಸ್ವಾಯತ್ತತೆಯನ್ನು ಕೂಡಲೇ ಕೊಡಬೇಕೆಂದೂ ಯಾವ ಖಾತೆಗಳು ಜನತೆಗೆ ಒಪ್ಪಿಸಲ್ಪಡುವವೋ

ಅವು ಮಧ್ಯವರ್ತಿಸರಕಾರದಲ್ಲಿಯೂ ಹೊಣೆಗಾರ ಮಂತ್ರಿಗಳಿಗೆ ಒಪ್ಪಿಸ ಬೇಕೆಂದೂ ಸೂಚಿಸಿದರು. ಸರಕಾರದಿಂದ ಅಧಿಕಾರಗಳು ಜನರ ಕೈಸೇರ ಬೇಕೆಂಬುದೇ ಟಿಳಕರ ಅಪೇಕ್ಷೆ. ಈಗ ಕೊಟ್ಟ ಅಧಿಕಾರಗಳಿಗೆ ಕಾಯದೆಯ ರೂಪ ಕೊಡಬೇಕು" ಎಂದು ಹೇಳಿ ತಮ್ಮ ಮಾತು ಮುಗಿಸಿದರು. ಟಿಳಕರಿಗೆ ಮರುಪ್ರಶ್ನೆಯನ್ನು ಎಲ್ಲರಂತೆ ಕೇಳಬೇಕಿದ್ದಿತು. ಆದರೆ ಕಮಿಟಿಯ ಅಧ್ಯಕ್ಷರು ಪ್ರಶ್ನೆಗಳನ್ನು ಕೇಳಿ ಟಿಳಕರಿಗೆ ತೊಂದರೆಕೊಡುವದಿಲ್ಲವೆಂದರು. ಎಲ್ಲರಿಗೂ ಆಶ್ಚರ್ಯವಾಯಿತು. ಅದಕ್ಕೆ ಕಾರಣವೇ ಬೇರೆ ಇದ್ದಿತು. ಲಾರ್ಡ ಸಿಡೆನ್‌ಹ್ಯಾಮರಂಥ ಕಟ್ಟಾ ಟಿಳಕರ ದ್ವೇಷಿಗಳು ಕಮಿಟಿಯಲ್ಲಿದ್ದರು. ಬ್ರಿಟಿಶ ಸಾಮ್ರಾಜ್ಯದ ಕಟ್ಟಾ ಶತ್ರುಗಳೂ ರಾಜದ್ರೋಹಿಗಳೂ ಆದ ಟಿಳಕರ ಸಾಕ್ಷಿಯನ್ನೇ ತೆಗೆದುಕೊಳ್ಳಬಾರದೆಂದು ಅವರು ಪ್ರತಿಪಾದಿಸಿದರು. ಮೊಂಟೆಗ್ಯೂ ಜೇನ್ಸ್‌ಫೊರ್ಡರೂ ವೆಜವುಡ್ಡರೂ ಟಿಳಕರು ಭಾರತದ ದೊಡ್ಡ ಮುಂದಾಳುಗಳೆಂದೂ ನಮಗೆ ರುಚಿಸಲಿ, ರುಚಿಸದಿರಲಿ, ಅವರ ಸಾಕ್ಷಿಯನ್ನು ತೆಗೆದುಕೊಳ್ಳದಿರುವದು ಶಿಷ್ಟಾಚಾರಕ್ಕೆ ವಿರುದ್ಧವಿರುವದೆಂದೂ ವಾದಿಸಿದರು. ಅಧ್ಯಕ್ಷರಾದ ಸೇಲಬೋರ್ನರು ಹಾಮೇರಿ ನ್ಯಾಯಮಾಡಿ ಸಾಕ್ಷಿ ತೆಗೆದುಕೊಳ್ಳಬೇಕೆಂದೂ ಮರುಪ್ರಶ್ನೆ ಕೇಳದೆ ಕಮಿಟಿಯು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಬೇಕೆಂದೂ ಸೂಚಿಸಿದರು. ಅದು ಎಲ್ಲರಿಗೂ ಒಪ್ಪಿತವಾಯಿತು. ಅಂತೂ ಬ್ರಿಟಿಶ ಜನಾಂಗದಲ್ಲಿ ಟಿಳಕರ ಬಗ್ಗೆ ದ್ವೇಷವು ಎಷ್ಟಿತ್ತೆಂಬುದು ಇದರಿಂದ ವ್ಯಕ್ತವಾಗುವದು ಈ ಕತೆಯನ್ನು ವೆಜವುಡ್ಡರು ಕೇಳಕರರಿಗೆ ತಿಳಿಸಿದರು.

## ದ್ವೇಷಾಗ್ನಿಯ ಇನ್ನೊಂದು ಪ್ರಸಂಗ

'ಬ್ರಿಟನ್ ಆ್ಯಂಡ ಇಂಡಿಯಾ' ಸಂಸ್ಥೆಯ ವತಿಯಿಂದ ಟಿಳಕರಿಗೆ ಸನ್ಮಾನ ಮಾಡಲ್ಪಟ್ಟಿತು. ಮುಖ್ಯಮಂತ್ರಿ ಮೊದಲಾದ ಪ್ರಮುಖರೆಲ್ಲರೂ ಆಮಂತ್ರಿಸಲ್ಪಟ್ಟಿದ್ದರು. ಟಿಳಕರು ಮಹಾದ್ವಾರದಲ್ಲಿ ಪ್ರವೇಶಿಸಿದೊಡನೆಯೇ ಅಲ್ಲಿಯೇ ನಿಂತಿದ್ದ ಸಿಡೆನ್‌ಹ್ಯಾಮರ ಹೆಂಡತಿಗೆ ಅವರನ್ನು ಕಂಡು ತಲೆಯೇ ತಿರುಗಿತು ಟಿಳಕರು ರಾಜದ್ರೋಹಿಗಳು. ನನ್ನ ಗಂಡನು ಅವರಿಗೆ ೬ ವರ್ಷ ಶಿಕ್ಷೆಯನ್ನು ವಿಧಿಸಿ ಕರಿನೀರಿಗೆ ಕಳಿಸಿದ್ದನು. ಅಂತಹ ದ್ರೋಹಿಗೆ ಸನ್ಮಾನ. ಆ ಸಭೆಗೆ ನಮಗೆ ಆಮಂತ್ರಣ. ಇದು ನಮ್ಮ ಅಪಮಾನವೆಂದು

ಕೂಗುತ್ತ ವಿಷ ಕಾರಿದಳು. ಅಲ್ಲಿಯೇ ಪ್ರಿವ್ಹಿ ಕೌನ್ಸಿಲ್ಲಿನ ನ್ಯಾಯಾಧೀಶರಾದ ಲಾರ್ಡ ಶಾ ರವರು ಇದ್ದರು. ಇವರೇ ತಾಯೀ ಮಹಾರಾಜರ ವಾದದಲ್ಲಿ ಟಿಳಕರಿಗೆ ನ್ಯಾಯವಿತ್ತವರು. ಬ್ಯಾಪ್ಟಿಸ್ಟಾರವರು ಟಿಳಕರನ್ನು ಕರೆದು ಶಾರವರಿಗೆ ಪರಿಚಯ ಮಾಡಿಕೊಟ್ಟರು. ಶಾರವರಿಗೆ ಬಹಳ ಆನಂದವಾಯಿತು. ಟಿಳಕರ ಹಸ್ತಾಂದೋಲನವನ್ನು ಮತ್ತೆ ಮತ್ತೆ ಮಾಡಿ ಇವರೇ ಟಾಯಿಲಕರೋ! 'ದಿ ಗ್ರೇಟ ಮ್ಯಾನ ಆಫ್ ಇಂಡಿಯಾ' ಎಂದು ಉದ್ಗಾರ ತೆಗೆದರು. ಅಲ್ಲಿಯೇ ನಿಂತಿದ್ದ, ಮಿಸ್ ಸಿಡೆನ್‌ಹ್ಯಾಮರಿಗೆ ಮೋರೆಯಮೇಲೆ ಹೊಡೆದಂತಾಯಿತು. ಆಕೆಗೆ ಅದು ಸಹನವಾಗದೆ ಮನೆಗೆ ಹೊರಟೇ ಬಿಟ್ಟಳು.

**ಶಾಂತತಾ ಪರಿಷತ್ತು**

ಶಾಂತತಾ ಪರಿಷತ್ತಿಗೆ ಟಿಳಕರು ಪ್ರತಿನಿಧಿಗಳೆಂದು ಕಾಂಗ್ರೆಸ್ಸು ಆರಿಸಿದೊಡನೆಯೇ ಟಿಳಕರು ಪಾಸಪೋರ್ಟಗೆ ಅರ್ಜಿ ಮಾಡಿದರು. ಅಪ್ಪಣೆ ದೊರೆಯಲಿಲ್ಲ. ಸುದ್ದಿಗಾರರೆಂದು ಹೋಗಲು ಕೇಳಿದರು. ಅದಕ್ಕೂ ಮನ್ನಣೆ ದೊರೆಯಲಿಲ್ಲ. ಭಾರತದ ಸ್ಥಿತಿಯನ್ನು ಪರಿಷತ್ತಿನ ಕಣ್ಣಿಗೆ ಹಾಕುವ ನಿಶ್ಚಯ ಮಾಡಿ ಕ್ಲೆಮೆಂಕೊ ಹಾಗೂ ಅಧ್ಯಕ್ಷ ವುಯಿಲ್ಸನ್ನರಿಗೆ ಒಂದು ಪತ್ರ ಬರೆದು, ಎಡಗಾರ ವಾಲೇಸರೊಡನೆ ಪ್ಯಾರಿಸಕ್ಕೆ ಕಳಿಸಿ ಕೊಟ್ಟರು. ಅದರಲ್ಲಿ ಅವರು "ಸರಕಾರದ ಹಾಗೂ ಜನತೆಯ ಎರಡೂ ಹೇಳಿಕೆಗಳನ್ನು ತಮ್ಮ ಮುಂದೆ ಇಟ್ಟಿದ್ದೇವೆ. ಅವುಗಳ ಗುಣದೋಷಗಳನ್ನು ಪರಿಶೀಲಿಸಿ, ಈ ಸ್ವಯಂ ನಿರ್ಣಯ ತತ್ವದಂತೆ ಭಾರತಕ್ಕೆ ಬೇಗನೆ ಸ್ವರಾಜ್ಯ ದೊರೆಯಬೇಕೆಂದು ಬಿನ್ನವಿಸಿಕೊಂಡಿದ್ದರು. (೧) ಬ್ರಿಟಿಶ ವಸಾಹತುಗಳಂತೆ ರಾಷ್ಟ್ರಸಂಘದ ಮುಂದೆ ಬೇಡಿಕೆಗಳನ್ನು ಮಂಡಿಸಲು ಭಾರತಕ್ಕೆ ಅಧಿಕಾರವಿರಬೇಕು. (೨) ಹಿಂದೀಯರು ಸ್ವತಃ ರಾಜ್ಯ ನಡೆಸಲು ಯೋಗ್ಯರಿದ್ದು ಅವರಿಗೆ ಸ್ವಯಂ ನಿರ್ಣಯದ ಹಕ್ಕು ಇದೆ. ಅದರಂತೆ ರಾಜ್ಯರಚಿಸಿಕೊಳ್ಳುವ ಅಧಿಕಾರವೂ ಅವರಿಗೆ ಇದೆ ಎಂದು ಸಾರಬೇಕು. ಇಂತಹ ಗೊತ್ತುವಳಿಯಿಂದ ಮೂವತ್ತು ಕೋಟಿ ಭಾರತೀಯರಲ್ಲಿ ಉತ್ಸಾಹ ಹಾಗೂ ಕೃತಜ್ಞತೆಗಳು ಉಂಟಾಗುವವೆಂದು ಆಶ್ವಾಸನ ಕೊಡುವೆ. ಇದರಿಂದ ಜಗತ್ತಿನಲ್ಲಿ ಶಾಂತತೆ ಉಂಟಾಗಿ ಭಾರತದ ಕಲ್ಯಾಣವಾಗುವದು" ಎಂದು ಬರೆದಿದರು.

## ಇತರ ಚಟುವಟಿಕೆಗಳು

ಟಿಳಕರು ಲಂಡನ್ನದಲ್ಲಿರುವಾಗ ಬರ್ನಾರ್ಡಶಾ, ಸಿಡನ್‌ವೆಬ್ಬ ಎಂಬ ವಿದ್ವಾಂಸರ ಭೆಟ್ಟಿಯಾದರು. ಅವರ ಫೇಬಿಯನ್ ಸಂಸ್ಥೆಯ ಅನೇಕ ಸಭೆಗಳಲ್ಲಿ ಉಪನ್ಯಾಸ ಕೊಟ್ಟರು. ಸುಪ್ರಸಿದ್ಧ ಲೇಖಕರಾದ ಎಡಗಾರ ವಾಲೇಸರ ಸ್ನೇಹ ಸಂಪಾದಿಸಿದರು. ವೇದದ ಪ್ರಾಚೀನತ್ವದ ಸಂಶೋಧನೆಯಿಂದ ಎಡಗಾರರು ಮುಗ್ಧರಾಗಿದ್ದರು. ಅವರಿಂದ ಯಾವ ಬಗೆಯ ಕಾರ್ಯ ತೆಗೆದುಕೊಂಡರೆಂಬುದನ್ನು ಹಿಂದೆ ಹೇಳಿದ್ದೇವೆ. ಲೋಕಮಾನ್ಯರ ಸಮಯವೆಲ್ಲವೂ ರಾಜಕಾರಣದಲ್ಲಿಯೇ ಹೋಗುತ್ತಿದ್ದಿತು. ಒಮ್ಮೆ ಕಾಲು ಜಾರಿ ಬಿದ್ದರು. ಕಾಲು ಒಳೆದು ಬಾತಿತು. ಏಳಲು ಬರುತ್ತಿರಲಿಲ್ಲ. ಆದರೆ ಒಂದು ಸಭೆಯ ಆಮಂತ್ರಣ ಸ್ವೀಕರಿಸಿದ್ದರು. ಟಿಳಕರನ್ನು ಹೊತ್ತುಕೊಂಡು ಹೋಗಿ ಸಭೆಯಲ್ಲಿ ಕೂಡಿಸಿದರು. ಅಂತಹ ಸ್ಥಿತಿಯಲ್ಲಿಯೇ ಉಪನ್ಯಾಸವಿತ್ತು ಬಂದರು. ಇದೇ ಸಂಧಿಯ ದುರುಪಯೋಗ ಮಾಡಿಕೊಂಡು 'ಇಂಗ್ಲಿಷಮನ್' ಎಂಬ ಕಲಕತ್ತೆಯ ಪತ್ರಿಕೆಯು 'ಟಿಳಕರು ಬಿದ್ದು ಮಿದುಳಿನಿಂದ ರಕ್ತಸ್ರಾವವಾಗಿ ಬೇನೆಯಿಂದ ನರಳುತ್ತಿರುವರು' ಎಂದು ಪ್ರಸಿದ್ಧಿಸಿತು. ಭಾರತದಲ್ಲೆಲ್ಲ ಹಾಹಾಕಾರವಾಯಿತು, ಟಿಳಕರು ನಿಜಸಂಗತಿಗಳನ್ನು ತಿಳಿಸಿ ಶಾಂತಮಾಡಬೇಕಾಯಿತು.

ಟಿಳಕರು ಲಂಡನ್ನಿಗೆ ಹೋದೊಡನೆ ವೈದಾಹಾಲ ವಿಭಾಗದ ೧೦ ಹಾಲೆ ಪ್ಲೇಸ ಎಂಬ ಮನೆಯಲ್ಲಿ ವಾಸ ಮಾಡುತ್ತಿದ್ದರು. ಮುಂದೆ ಕೆಲವು ದಿನಗಳ ನಂತರ ಸುರತದ ವ್ಯಾಪಾರಿಗಳಾದ ದೀಪಚಂದ ಜವ್ಹೇರಿಯವರು ಟೂಲಬಾಟದಲ್ಲಿರುವ ತಮ್ಮ ಬಂಗಲೆಯನ್ನು ತೆರವು ಮಾಡಿಕೊಟ್ಟರು. ಮ್ಯಾಕನಲ್ಟಿಯವರ ಪತ್ನಿ ಹಾಗೂ ಮಗಳು ಟಿಳಕರ ಸೇವೆಯನ್ನು ಮಾಡುತ್ತಿದ್ದರು. ಅವರು ಆಯರೀಶರು. ಆಯರ್ಲಂಡ ಹಾಗೂ ಭಾರತಗಳೆರಡೂ ಸ್ವರಾಜ್ಯಕ್ಕಾಗಿ ಹೋರಾಡುತ್ತಿವೆ ಎಂಬುದೇ ಇವರ ಸೇವೆಗೆ ಮುಖ್ಯ ಕಾರಣ. ಇಂಗ್ಲಂಡದಲ್ಲಿಯ ಟಿಳಕರ ಜೀವನವು ತೀರ ಸರಳವಾಗಿದ್ದಿತು. ಮಿತಾಹಾರಿಗಳಾಗಿದ್ದರು. ಯಾವಾಗಲೂ ಕಾರ್ಯದಲ್ಲಿಯೇ ನಿರತರಾಗಿರುತ್ತಿದ್ದರು. ಉಳಿದ ಯುರೋಪದ ಪ್ರವಾಸಿಗಳಂತೆ ಊರೆಲ್ಲ ಸುತ್ತಾಡಲಿಲ್ಲ

ಪ್ರಸಿದ್ಧವಾದ ಸ್ಥಳಗಳನ್ನು ನೋಡಲು ಯಾವಾಗಾದರೊಮ್ಮೆ ಹೊರಬೀಳು ತ್ತಿದ್ದರು. ಬ್ರಿಟಿಶ ವಸ್ತು ಸಂಗ್ರಹಾಲಯ, ಇಂಡಿಯಾ ಆಫೀಸ, ಲಾಯಬ್ರರಿ, ಪಾರ್ಲಿಮೆಂಟುಗಳಲ್ಲಿಯೇ ಅವರ ಸಮಯ ಹೋಯಿತು.

ಸಂಯುಕ್ತ ಪಾರ್ಲಿಮೆಂಟರಿ ಕಮಿಟಿಯ ವರದಿಯು ಮುಗಿಯುತ್ತ ಬಂದಿತ್ತು. ಅದು ಕಾಯದೆಯಲ್ಲಿ ರೂಪಾಂತರವಾಗಲಿತ್ತು. ಇತ್ತ ಅಮೃತಸರದ ಕೊಲೆಯಾಯಿತು. ಅದನ್ನು ನಿಷೇಧಿಸಿದರು. ಇಂತಹ ಸಂಕಟ ಸಮಯವಲ್ಲಿ ತಮ್ಮ ಬಾಂಧವರ ಮಧ್ಯದಲ್ಲಿ ಇರಬೇಕೆಂದು ಅವರಿಗೆ ಅನಿಸಹತ್ತಿತು. ತಮ್ಮ ೧೩ ತಿಂಗಳದ. ದೀರ್ಘ ಲಂಡನ್ನದ ಪ್ರವಾಸವನ್ನು ಮುಗಿಸಿ ಇಜಿಪ್ತವೆಂಬ ಹಡಗವನ್ನೇರಿ, ೩ನೇ ಅಕ್ಟೋಬರ ದಿನ ಲಂಡನವನ್ನು ಬಿಟ್ಟು, ೨೭ ನೇ ನವ್ಹಂಬರಕ್ಕೆ ಮಾತೃಭೂಮಿಗೆ ಮರುಳಿದರು. ಅವರ ಇಂಗ್ಲಂಡದ ಈ ಯಾತ್ರೆಯು ಅಪೂರ್ವವಾಗಿದ್ದಿತು.



## ಪ್ರತಿಯೋಗಿ ಸಹಕಾರ

**ನಿಧಿ ಸಂಗ್ರಹ**

ಚಿರೋಲ ಪ್ರಕರಣದಲ್ಲಿ ಟಿಳಕರಿಗೆ ಅಪಜಯವಾದೊಡನೆ ಟಿಳಕರ ನೆರವಿಗೆ ಅವರ ಮಿತ್ರರು ಧಾವಿಸಿದರು. ಟಿಳಕರ ಖಟ್ಲೆಯು ವೈಯಕ್ತಿಕವಾಗಿ ಕಂಡರೂ ಅದು ರಾಷ್ಟ್ರದ ಪ್ರಶ್ನೆ ಎಂದೇ ತಿಳಿಯಬೇಕೆಂದೂ ಅವರನ್ನು ಋಣ ಮುಕ್ತರನ್ನಾಗಿ ಮಾಡಬೇಕೆಂದೂ ಮಿತ್ರರು ಒಂದು ಘೋಷಣೆಯನ್ನು ಹೊರ ಡಿಸಿದರು. ಆದರ ಮೇಲೆ ಗಂಗಾಧರರಾವ ದೇಶಪಾಂಡೆ, ಬೆಳವಿ, ಖಾಪರ್ಡೆ ಮೊದಲಾದವರ ಸಹಿಗಳಿದ್ದವು. ಮಹಾತ್ಮಾ ಗಾಂಧಿಯವರೂ ತಮ್ಮ ಬೆಂಬಲ ವನ್ನು ಕೊಟ್ಟು, ಎಲ್ಲರೂ ಸಹಾಯ ಮಾಡಬೇಕೆಂದು ಬಿನ್ನವಿಸಿದರು.

**ವಿಲಾಯತಿಯಿಂದ ಟಿಳಕರ ಆಗಮನ**

ಲೋಕಮಾನ್ಯರು ೨೭ನೇ ನವ್ಹಂಬರಕ್ಕೆ ಮುಂಬಯಿಗೆ ಬಂದು ಮುಟ್ಟಿ ದರು. ಅವರ ಸ್ವಾಗತಕ್ಕಾಗಿ ಲಕ್ಷಾವಧಿ ಜನರು ನೆರೆದಿದ್ದರು. ಟಿಳಕರನ್ನು ಕಂಡು ಜನ ಆನಂದಸಾಗರದಲ್ಲಿ ಮುಳುಗಿತು. ಸಂಜೆ ೬|| ಗಂಟೆಗೆ ಬ್ಯಾಪ್ಟಿಸ್ಟಾರವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ಜರುಗಿತು. ಮಾನ ಪತ್ರವು ಅರ್ಪಿಸಲ್ಪಟ್ಟಿತು. ಟಿಳಕರು ಅದಕ್ಕೆ ಉತ್ತರವಾಗಿ ಸಹಾಯ ಮಾಡಿದ ಎಲ್ಲರ ಆಭಾರವನ್ನು ಮನ್ನಿಸಿ, “ಇಂದು ಕೊಡಮಾಡಿದ ಅಧಿಕಾರ ಗಳು ಅಲ್ಪವಿದ್ದರೂ ನಿರಾಶರಾಗುವ ಕಾರಣವಿಲ್ಲ. ಕೂಲಿಕಾರ ಪಕ್ಷವು ಹೋಮರೂಲ ಬಿಲ್ಲನ್ನು ಪಾರ್ಲಿಮೆಂಟಿನ ಮುಂದೆ ಮಂಡಿಸುವ ಆಶ್ವಾಸನ ಕೊಟ್ಟಿದೆ. ಸಿಕ್ಕಷ್ಟನ್ನು ಸ್ವೀಕರಿಸಿ ಉಳಿದುದಕ್ಕೆ ಪ್ರಯತ್ನಿಸೋಣ. ಭಾರತ ದಲ್ಲಿ ನಡೆದ ಸಂಗತಿಗಳು ನನಗೆ ತಿಳಿದಿವೆ. ಗಾಂಧೀಜಿಯವರು ಸತ್ಯಾಗ್ರಹ ಸುರುವು ಮಾಡಿದಾಗ ನಾನು ಇರಲಿಲ್ಲವೆಂದು ಖೇದವೆನಿಸುತ್ತದೆ” ಎಂದು ಹೇಳಿದರು. ಕೂಲಿಕಾರರು, ಹೋಮರೂಲ ಲೀಗಿನವರು, ವಿದ್ಯಾರ್ಥಿಗಳು ಪೈಸಾಫಂಡ ಸಂಸ್ಥೆ, ಗೋರಕ್ಷಣ ಸಂಸ್ಥೆ ಮೊದಲಾದ ಅನೇಕ ಜನರು ಮಾನಪತ್ರಗಳನ್ನು ಅರ್ಪಿಸಿದರು. ಸಂತೋಷಕೂಟವನ್ನೇರ್ಪಡಿಸಿದರು.

೧ನೇ ಡಿಸೆಂಬರಕ್ಕೆ ಟಿಳಕರು ಪುಣೆಗೆ ಬಂದರು. ಅಲ್ಲಿ ಅಪೂರ್ವವಾದ ಸ್ವಾಗತವಾಯಿತು. ಮುನಸಿಪಾಲ್ಟಿಯು ಮಾನಪತ್ರವನ್ನು ಅರ್ಪಿಸಿತು. ಪ್ರಿನ್ಸಿಪಾಲ ಪರಾಂಜಪೆ ಮೊದಲಾದ ಕೆಲವರು ವಿರೋಧ ಮಾಡಿದರು. ನಗೆಗೀಡಾದರು. ಮಾನಪತ್ರಕ್ಕೆ ಉತ್ತರ ಕೊಡುವಾಗ 'ಈಗಿನ ಸಮಯದಲ್ಲಿ ನಮ್ಮಲ್ಲಿ ಒಕ್ಕಟ್ಟು ಅವಶ್ಯವಿದೆ. ಸಿಕ್ಕಷ್ಟು ಸ್ವೀಕರಿಸಿ, ಹೆಚ್ಚಿನದಕ್ಕಾಗಿ ಹೋರಾಡಿರಿ' ಎಂದು ಟಿಳಕರು ಸೂಚಿಸಿದರು.

## ಮದ್ರಾಸದಲ್ಲಿ ಮಾನಪತ್ರ

ಅಮೃತಸರ ಕಾಂಗ್ರೆಸ್ಸಿಗೆ ಹೋಗುವ ಮೊದಲು, ಮದ್ರಾಸದ ಆಮಂತ್ರಣವನ್ನು ಮನ್ನಿಸಿ ಅಲ್ಲಿಗೆ ಹೋದರು. ಹಿಂದೂ ಪತ್ರದ ಸಂಪಾದಕರಾದ ಕಸ್ತೂರಿ ರಂಗ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ಸಭೆ ಜರುಗಿತು. ಅನೇಕ ಸಂಸ್ಥೆಗಳು ಮಾನಪತ್ರವನ್ನು ಅರ್ಪಿಸಿದವು. ಅದರಲ್ಲಿ ಬ್ರಾಹ್ಮಣೇತರ ಪಕ್ಷದ ಮಾನಪತ್ರವು ಮಹತ್ವದ್ದಾಗಿತ್ತು. ಏಕೆಂದರೆ ಸರಕಾರವು ನಿರ್ಮಿಸಿದ ಕೈಗೂಸು ಅದು. 'ತಮ್ಮ ಪರಿಶ್ರಮದಿಂದ ಬ್ರಿಟಿಶ ಛತ್ರದಲ್ಲಿ ದೊರೆಯುವ ಸ್ವರಾಜ್ಯದ ಫಲವು ಎಲ್ಲರಿಗೂ ಸರಿಯಾಗಿ ಸವಿಯಲು ಸಿಗಲಿ' ಎಂದು ಅದರಲ್ಲಿ ಕಾಣಿಸಿದ್ದರು. ಅದಕ್ಕೂ ಟಿಳಕರು ಮೇಲಿನಂತೆಯೇ ಉತ್ತರ ಕೊಟ್ಟರು.

## ಅಮೃತಸರ ಕಾಂಗ್ರೆಸ

೨೭ನೇ ಡಿಸೆಂಬರಕ್ಕೆ ಅಮೃತಸರದಲ್ಲಿ ಕಾಂಗ್ರೆಸ್ ನೆರೆಯುವದಿದ್ದಿತು. ರಾಷ್ಟ್ರದ ಮುಂದೆ ಅನೇಕ ಮಹತ್ವದ ಪ್ರಶ್ನೆಗಳಿದ್ದವು. ಟಿಳಕರು ಹೊರಟರು. ದಾರಿಯಲ್ಲಿಯೇ ಒಂದು ಸ್ಟೇಶನ್ನಿನ ಮೇಲೆ ಬಾದಶಹರ ಜಾಹೀರನಾಮೆಯು ಕೈಗೆಬಿದ್ದಿತು. ಟಿಳಕರು ಕೂಡಲೇ "ಜಾಹೀರನಾಮೆಯ ಬಗ್ಗೆಯೂ ಕೈದಿಗಳಿಗೆ ದಯೆ ತೋರಿಸಿದ ಬಗ್ಗೆಯೂ ಹೋಮರೂಲ ಲೀಗು ಹಾಗೂ ಹಿಂದುಸ್ತಾನದ ಜನತೆ, ತನ್ನ ಕೃತಜ್ಞತೆಗಳನ್ನೂ ರಾಜನಿಷ್ಠೆಪೂರ್ವಕ ಆಭಾರವನ್ನೂ ಮನ್ನಿಸುತ್ತದೆ. ಮತ್ತು ಈ ವಿಷಯದಲ್ಲಿ ಜನರಿಂದ ಪ್ರತಿಯೋಗಿ ಸಹಕಾರವು ಸಿಗುವದು." ಎಂದು ಬಾದಶಹರಿಗೆ ತಿಳಿಸಬೇಕೆಂದು ವ್ಹಾಯಿಸರಾಯರಿಗೂ ಮಾಂಟೆಗ್ಯೂರವರಿಗೂ ತಂತಿ ಮಾಡಿದರು. ಪ್ರತಿಯೋಗಿ ಸಹಕಾರದ ಬಗ್ಗೆ ಟೀಕೆ, ಟಿಪ್ಪಣಿಗಳಾದವು. ಟಿಳಕರು 'ಜನತೆಯು ತನ್ನ ಕಲ್ಯಾಣಕ್ಕೆ

ತಾನೇ ವಿಘ್ನ ಮಾಡುವದಿಲ್ಲ. ಮಾಡುವವರು ಆಳರಸರು. ಆದುದರಿಂದ ಅವರು ಸಹಕಾರ ನೀಡಿದರೆ ಜನರೂ ಸಹಕಾರ ನೀಡುವರು' ಎಂದು ವಿವರಣೆ ಕೊಟ್ಟರು.

ಅಮೃತಸರದಲ್ಲಿ ಟಿಳಕರಿಗೆ ಅಪೂರ್ವ ಸ್ವಾಗತವಾಯಿತು. ಎಲ್ಲ ಪಕ್ಷಗಳ ಜನರೂ ಉಪಸ್ಥಿತರಿದ್ದರು. ಆದೇ ಬಿಡಲ್ಪಟ್ಟ ಡಾ. ಕಿಚಲೂ ಸತ್ಯಪಾಲ, ರಾಮಭುಜದತ್ತ ಮೊದಲಾದವರೂ ಬಂದಿದ್ದರು. ಸ್ವಾಗತಾಧ್ಯಕ್ಷರಾದ ಸ್ವಾಮಿ ಶ್ರದ್ಧಾನಂದರು ರಾಷ್ಟ್ರೀಯ ಭಾವನೆಗಳನ್ನು ಪ್ರಚಾರ ಮಾಡಿದವರಲ್ಲಿ ಟಿಳಕರು ಅಗ್ರಗಣಿಗಳೆಂದೂ ಅವರ ನೇತೃತ್ವದಲ್ಲಿ ರಾಷ್ಟ್ರವು ಮುಂದುವರಿಯಬೇಕೆಂದೂ ಹೇಳಿದರು. ಮೋತಿಲಾಲರು ಅತ್ಯಾಚಾರವನ್ನು ನಿಷೇಧಿಸಿ, ಬಿಲ್ಲಿನ ವಿಷಯಕ್ಕೆ ತುಚ್ಛತೆ ತೋರದೆ, ನಿಮಗೆ ಸಿಕ್ಕಷ್ಟನ್ನು ಉಪಯೋಗಿಸಕೊಳ್ಳಬೇಕೆಂದರು.

ವಿಷಯ ನಿಯಾಮಕ ಕಮಿಟಿಯಲ್ಲಿ ಅನೇಕ ಗೊತ್ತುವಳಿಗಳು ಚರ್ಚೆಯಿಲ್ಲದೆ ಪಾಸಾದವು. ಸುಧಾರಣೆಯ ಗೊತ್ತುವಳಿಯ ಮೇಲೆ ಮತಭೇದವಾಯಿತು. ಸುಧಾರಣೆಗಳಿಗೆ ಅಸಮಾಧಾನಕಾರಕ, ನಿರಾಶಾಜನಕ ಎಂಬ ವಿಶೇಷಣ ಜೋಡಿಸಬೇಕೋ ಬೇಡವೋ ಎಂಬ ಬಗ್ಗೆ ಇಬ್ಬಣಗಳಾದವು. ಗಾಂಧೀಜಿ, ಮೋತೀಲಾಲ, ಮಾಲವೀಯ ಶಾಸ್ತ್ರಿ, ಬಿಶೆಂಟಮ್ಮ ಒಂದೆಡೆಗೆ; ಲೋಕಮಾನ್ಯರು, ಪಾಲ, ದಾಸಬಾಬು ಮೊದಲಾದವರು ಇನ್ನೊಂದೆಡೆಗೆ. ಎರಡುದಿನ ಚರ್ಚೆಯಾಗಿ ಟಿಳಕರ ಅಪೇಕ್ಷೆಯಂತೆ ವಿಶೇಷಣಗಳು ಜೋಡಿಸಲ್ಪಟ್ಟವು. ಟಿಳಕ, ಗಾಂಧೀಜಿಯುಭಯರ ಅಪೇಕ್ಷೆಯಂತೆ ಸುಧಾರಣೆಗಳನ್ನು ಉಪಯೋಗ ಮಾಡಬೇಕೆಂಬ ಭಾಗ ಸೇರಿಸಲ್ಪಟ್ಟಿತು. ಕೊನೆಗೆ ಎಲ್ಲವೂ ಸಂತೋಷದಲ್ಲಿ ಪರ್ಯವಸಾನವಾಯಿತು. ಎಲ್ಲರೂ ಮರಳಿದರು.

## ಜೋತಿಷ ಸಮ್ಮೇಲನ

ಲೋಕಮಾನ್ಯರು ಮರಳಿ ಬಂದ ಬಳಿಕ ಸಾಂಗಲಿಯಲ್ಲಿಯ ಜೋತಿಷ ಸಮ್ಮೇಲನಕ್ಕೆ ಹೋದರು. ಅಲ್ಲಿ ಮಾತನಾಡುವಾಗ 'ಪಂಚಾಂಗ' ಪಂಚಾಂಗಗಳಲ್ಲಿ ಕಂಡುಬರುವ ಭೇದವು ಹೋಗಿ ಇಡೀ ದೇಶಕ್ಕೆ ಒಂದೇ ಪಂಚಾಂಗವಾಗಬೇಕೆಂದು ನಮ್ಮ ಬಯಕೆ ಇದೆ' ಎಂದು ಹೇಳಿದರು.

**ಪರಿಷತ್ತುಗಳು**

ಮಾರ್ಚ ತಿಂಗಳಲ್ಲಿ ಜುನ್ನರದಲ್ಲಿ ಜಿಲ್ಹಾ ಪರಿಷತ್ತು ನಡೆಯಿತು. ಗಂಗಾಧರರಾಯರು ಅಧ್ಯಕ್ಷರಿದ್ದರು. ಸುಧಾರಣೆಗಳಿಗೆ ವಿಶೇಷಣಗಳನ್ನು ಜೋಡಿಸಬಾರದೆಂದು ಮಂದಪಕ್ಷೀಯರು ಪ್ರಯತ್ನಿಸಿದರು. ಟಿಳಕರ ಮುಂದೆ ಅವರ ಆಟ ಸಾಗಲಿಲ್ಲ ಮಂದಪಕ್ಷೀಯರು ಗೊಂದಲವನ್ನು ಹಾಕಿದರು. ಅದರಂತೆಯೇ ಬೆಳಗಾವಿ ಪರಿಷತ್ತಿನಲ್ಲಿಯೂ ಕಾಂಗ್ರೆಸ್ ಗೊತ್ತುವಳಿಯು ಪಾಸಾಯಿತು. ಅಲ್ಲಿಯೂ ವಿರೋಧವಾಯಿತು. ಟಿಳಕರು ಬ್ರಾಹ್ಮಣ ಬ್ರಾಹ್ಮಣೇತರರ ಚಳವಳಿಯ ಮೇಲೆ ಎರಡು ತಾಸು ಮಾತನಾಡಿ 'ಇಂತಹ ಆಂದೋಲನಗಳಿಂದ ರಾಷ್ಟ್ರಕ್ಕೆ ಹೇಗೆ ವಿಘಾತವಾಗುವದು' ಎಂಬುದನು. ವರ್ಣಿಸಿದರು. ಜೈನರ ಪತಿಯಿಂದಲೂ ಬ್ರಾಹ್ಮಣೇತರರ ಪತಿಯಿಂದಲೂ ಮಾನಪತ್ರಗಳವ ಅರ್ಪಿಸಲ್ಪಟ್ಟವು.

**ಸಿಂಧದ ಪ್ರವಾಸ**

೧೭ ನೇ ಮಾರ್ಚಕ್ಕೆ ಟಿಳಕರು ಮುಂಬಯಿಗೆ ಬಂದರು. ಹಿಂದೀ ಮಹಿಳಾ ಸಮಾಜದಲ್ಲಿ, ಭಾಷಣವಿತ್ತು. ದಿಲ್ಲಿಗೆ ಹೊರಟರು. ಅಲ್ಲಿಯೂ ಅಪೂರ್ವವಾದ ಸನ್ಮಾನವಾಯಿತು ನಂತರ ದಿಲ್ಲಿಯಿಂದ ಅಜಮೀರಕ್ಕೆ ಬಂದರು. ಬೀದಿ ಬೀದಿಗೆ ಕಮಾನುಗಳನ್ನು ಕಟ್ಟಿದ್ದರು. ಮುಸಲ್ಮಾನ ಮುಖಂಡರು ಪುರಾತನ ಮಸೀದೆಯಲ್ಲಿ ಸತ್ಕಾರ ಸಮಾರಂಭ ಮಾಡಿ, ಮಾನ ಪತ್ರವನ್ನು ಅರ್ಪಿಸಿದರು. ವಿಶ್ರಾಂತಿಯಿಲ್ಲದೆ ಕೂಡಲೆ ಸಿಂಧ ಹೈದರಾಬಾದಕ್ಕೆ ಬಂದರು. ಸ್ಟೇಶನ್‌ದಲ್ಲಿ ಮದ್ದು ಹಾರಿಸಲ್ಪಟ್ಟಿತು. ನಗಾರಿ ನೌಬತ್ತುಗಳೊಡನೆ ಮೆರವಣಿಗೆಯು ಹೊರಟಿತು. ದಾರಿಯಲ್ಲಿ ಅನೇಕ ಜನರು ಆರತಿ ಎತ್ತಿ ನಿಧಿ ಅರ್ಪಿಸಿದರು. ಸಿಕಾರಪುರದಲ್ಲಿ ಹಿಂದೀ ಸ್ವರಾಜ್ಯ ಸಂಘ, ಖಿಲಾಪತ ಕಮಿಟಿಗಳು ಮಾನಪತ್ರ ಕೊಟ್ಟು ೬೦೦೦ ರೂಪಾಯಿಗಳ ನಿಧಿ ಅರ್ಪಿಸಿದರು. ಸಕ್ಕರದಲ್ಲಿಯೂ ೩ ಸಾವಿರ ರೂಪಾಯಿಗಳ ನಿಧಿಯು ಅರ್ಪಿಸಲ್ಪಟ್ಟಿತು. ಕರಾಚಿಯಲ್ಲಿಯಂತೂ ಒಬ್ಬ ಬಾದಶಹನನ್ನು ಮೆರಿಸಿದಂತೆ ಮೆರಸಿದರು. ೧೪೦೦ ರೂಪಾಯಿಗಳ ನಿಧಿಯನ್ನು ಸಮರ್ಪಿಸಿದರು.

**ಸೊಲ್ಲಾಪುರ ಪ್ರಾಂತಿಕ ಪರಿಷತ್ತು**

ಈ ಪರಿಷತ್ತಿಗೆ ವಿಶೇಷ ಮಹತ್ವ ಬಂದಿದ್ದಿತು. ಅನಿಬಿಸೆಂಟ, ಪರಾಂಜಪೆ ಮೊದಲಾದವರು ೩ ತಿಂಗಳಿಂದ ಇದನ್ನು ವಿರೋಧಿಸಲು ಸಿದ್ಧತೆ

ನಡೆಸಿದ್ದರು. ಈ ಪರಿಷತ್ತಿಗೆ ೨೦೦೦ ಪ್ರತಿನಿಧಿಗಳು ಬಂದಿದ್ದರು. ವಿಷಯ ನಿಯಾಮಕ ಕಮಿಟಿಯಲ್ಲಿ 'ಅಮೃತಸರ ಕಾಂಗ್ರೆಸ್ಸಿನ ಗೊತ್ತುವಳಿ ಯಾರಿಗೆ ಮಾನ್ಯವಿದೆಯೋ ಅವರನ್ನೇ ಜನರು ಆರಿಸಬೇಕೆಂದು ಗೊತ್ತುವಳಿಯಿದ್ದಿತು. ಅದಕ್ಕೆ ವಿರೋಧವಾದರೂ ಬಹುಮತದಿಂದ ಪಾಸಾಯಿತು. ಮರುದಿನ ಬಹಿರಂಗ ಸಭೆಯಲ್ಲಿ ಗೊತ್ತುವಳಿಯನ್ನು ಟಿಳಕರು ಮಂಡಿಸಿದೊಡನೆಯೆ, ಸ್ವಾಗತಾಧ್ಯಕ್ಷರು ವಿಧಿಬಿಂದುವನ್ನೆತ್ತಿದರು. ಅಧ್ಯಕ್ಷರು ತರಲು ಬರುವದೆಂದು ಅಪ್ಪಣೆಯಿತ್ತರು. ಅದಕ್ಕೆ ಅಮ್ಮನವರು ಬುದ್ಧಿವಂತರೂ ಸರಕಾರಕ್ಕೆ ಅನುಕೂಲವಿದ್ದಂಥ ಜನರನ್ನೇ ಆರಿಸಿ ತರಬೇಕೆಂದು ಉಪಸೂಚನೆ ತಂದರು. ಪರಾಂಜಪೆಯವರು ಅನುಮೋದಿಸಿದರು. ಅನುಕೂಲ ಪ್ರತಿಕೂಲ ಭಾಷಣಗಳಾದವು. ೭೦೦ ವಿರುದ್ಧ ೨೦೦೦ ಮತಗಳಿಂದ ಟಿಳಕರ ಗೊತ್ತುವಳಿಯು ಪಾಸಾಯಿತು. ಈ ಸಭೆಯಲ್ಲಿ ಮಂದಪಕ್ಷೀಯರು, ಅಮ್ಮನವರು ಅತ್ಯಂತ ಗರ್ಹ್ಯರೀತಿಯಿಂದ ವರ್ತಿಸಿದರು. ಸಭೆಯಲ್ಲಿ ಕಲ್ಲು ತೂರಲು ಹಚ್ಚಿದರು. ದಂಗೆ ಹಾಕಿಸಿದರು. ಈ ಕೃತಿಯನ್ನು ಕುರಿತು, ಕೇಸರಿಯಲ್ಲಿ 'ಪರಾಂಜಪೆಯವರು ಪ್ರಿನ್ಸಿಪಾಲರಿದ್ದರು. ಇಲ್ಲಿಯ ವರೆಗೆ ಅವರಿಗೆ ಶಿಶುಪಾಲರೆಂಬ ಹೆಸರು ಶೋಭಿಸುತ್ತಿತ್ತು. ಈಗ ಅವರು ಪಶುಪಾಲರಾದರು? ಬಿಸೆಂಟಮ್ಮನವರನ್ನು ಕುರಿತು 'ಪೂತನೆಯು ಹರಿವಧೆಗೆ ಬಂದು ತಾನೇ ಸತ್ತಳು' ಎಂದು ಉಲ್ಲೇಖಿಸಿದರು.

**ಕಾಂಗ್ರೆಸ್ ಡೆಮೊಕ್ರೆಟಿಕ ಪರಿಷತ್ತಿನ ಜಾಹೀರನಾಮೆ**

ಲೋಕಮಾನ್ಯರು ಈ ವಾದವನ್ನು ಮುಗಿಸಿ ಮುಂದಿನ ಮಾರ್ಗಕ್ಕೆ ಹತ್ತಿದರು. ಕಾಂಗ್ರೆಸ್ ಡೆಮೊಕ್ರೆಟಿಕ್ ಪಾರ್ಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಜಾಹೀರನಾಮೆಯನ್ನು ಎಪ್ರಿಲ ೨೦ಕ್ಕೆ ಹೊರಡಿಸಿದರು. "ಕಾಂಗ್ರೆಸ್ ಡೆಮೊಕ್ರೆಟಿಕ್ ಪಕ್ಷವು ಕಾಂಗ್ರೆಸ್ ನಿಷ್ಠವಾಗಿದ್ದು, ಪ್ರಜಾಪ್ರಭುತ್ವದಲ್ಲಿ ಅದಕ್ಕೆ ಪೂರ್ಣ ವಿಶ್ವಾಸವಿದೆ. ಭಾರತದ ಪ್ರಶ್ನೆಯನ್ನು ಬಿಡಿಸಲು ಇದೇ ತತ್ವವನ್ನು ಅನುಸರಿಸುತ್ತದೆ. ಶಿಕ್ಷಣ ಪ್ರಸಾರ, ಮತದಾನದ ಹಕ್ಕುಗಳೇ ಅದಕ್ಕೆ ಸಾಧನವೆಂದು ಅಭಿಪ್ರಾಯಪಡುತ್ತದೆ. ಜಾತಿ ಹಾಗೂ ರೂಢಿಗಳಿಂದ ಬಂದ ವಿಷಮತೆಯನ್ನು ಇಲ್ಲದಂತೆ ಮಾಡುವದು, ಧರ್ಮದ ಬಗ್ಗೆ ಸಹಿಷ್ಣುತೆ ತಾಳುವದು ಇವುಗಳ ಬಗ್ಗೆ ಈ ಪಕ್ಷವು ಪ್ರಚಾರ ಮಾಡುವದು."

## ನಿಧಿ ಸಮರ್ಪಣೆ

ಮೇ ೨೨ ನೇ ತಾರೀಖಿಗೆ ನಿಧಿ ಸಮರ್ಪಿಸಬೇಕೆಂದು ನಿರ್ಣಯ ವಾಯಿತು. ಅವರ ಮಿತ್ರರೆಲ್ಲರೂ ಸಮ್ಮಿಲಿತರಾದರು. ನಾನಾಸಾಹೇಬ ದೇಶಮುಖರು ಅಧ್ಯಕ್ಷರಿದ್ದರು. ಕೇಳಕರರು ವರದಿಯನ್ನು ಒಪ್ಪಿಸಿದರು. ಅಧ್ಯಕ್ಷರು ೩ ಲಕ್ಷ ರೂಪಾಯಿಗಳ ಹಮ್ಮಿಣಿಯನ್ನು ಅರ್ಪಿಸಿದರು. ಟಿಳಕರ ಕಂಠವು ಬಿಗಿದು ಬಂದಿತು. 'ನಾನು ವೈಯಕ್ತಿಕವಾಗಿ ಮಾಡಿದ ಖಟ್ಲೆಯನ್ನು ನೀವು ನಿಮ್ಮದೆಂದು ತಿಳಿದಿರಿ. ನಿಜವಾಗಿಯೂ ಸರಕಾರ ದೊಡನೆ ಯುದ್ಧವಿದ್ದಿತು. ನೀವು ನಿಧಿಯನ್ನು ಅರ್ಪಿಸಿ, ಜನತೆಯು ನನ್ನನ್ನು ಕೊಂಡು ಕೊಂಡಿತು' ಎಂದರು. ಇದು ಬ್ರಿಟಿಶ ಜನಾಂಗಕ್ಕೆ ಉತ್ತರವಿದ್ದಿತು.

## ಅ. ಭಾ. ಕಾಂಗ್ರೆಸ್

ಕಾಲವು ಪಲ್ಲಟವಾಗಿದ್ದಿತು. ಖಿಲಾಪತ ಅನ್ಯಾಯವು ದೂರವಾಗಲಿಲ್ಲ. ಹಂಟರ ಕಮಿಟಿಯು ಕೊಲೆಗಡಕರನ್ನೇ ಎತ್ತಿ ಹಿಡಿದಿದ್ದಿತು. ಅಮೃತಸರ ಕಾಂಗ್ರೆಸ್ಸಿನಲ್ಲಿ ಸುಧಾರಣೆಗಳನ್ನು ಎತ್ತಿ ಹಿಡಿದ ಗಾಂಧಿಜಿಯವರು ಇಂದು ಅಸಹಕಾರ ಹೂಡಲು ಸಿದ್ಧರಾಗಿದ್ದರು. ಬನಾರಸದಲ್ಲಿ ಕೂಡಿದ ಅ. ಭಾ. ಕಾಂಗ್ರೆಸ್ ಕಮಿಟಿಯಲ್ಲಿ ಅನೇಕ ಪ್ರಶ್ನೆಗಳು ವಿಚಾರ ಮಾಡಲ್ಪಟ್ಟವು. ಲೋಕಮಾನ್ಯರು ಉಪಸ್ಥಿತರಿದ್ದರು. ವಾತಾವರಣವು ಕಾಯುಹತ್ತಿತು. ಅಸಹಕಾರದ ಗೊತ್ತುವಳಿಯೂ ಬಂದಿತು. ಅದರ ವಿಚಾರವು ವಿಶೇಷ ಅಧಿವೇಶನದಲ್ಲಿ ಆಗಬೇಕೆಂದು ನಿರ್ಣಯವಾಯಿತು.

# ಸೂರ್ಯನು ಅಸ್ತಂಗತನಾದನು

ಲೋಕಮಾನ್ಯರು ಬಹಳ ಹಣ್ಣಾಗಿದ್ದರು. ಯಾವ ಹೊಸ ಕಾರ್ಯವನ್ನು ಕೈಯಲ್ಲಿ ತೆಗೆದುಕೊಳ್ಳಲು ಸಿದ್ಧರಿದ್ದಿಲ್ಲ. ಆದರೆ ಅನಿವಾರ್ಯವಾದ ಪ್ರಸಂಗ ಬಂದೊದಗಿತು. ತಾಯೀ ಮಹಾರಾಜರ ಆಸ್ತಿಯು ದಾನ ಕೊಟ್ಟಿದ್ದೆಂದೂ ಅದನ್ನು ತಿರುಗಿ ಕೊಡಬೇಕೆಂದೂ ಕೊಲ್ಹಾಪುರ ಮಹಾರಾಜರು ಹಾಯಕೋರ್ಟಿಗೆ ಅರ್ಜಿಕೊಟ್ಟರು. ಆಗ ಟಿಳಕರು ಇಷ್ಟೆಲ್ಲ ಮಾಡಿದ್ದು ವ್ಯರ್ಥವಾಗುವದೆಂದು ಬಗೆದು, ಮುಂಬಯಿಗೆ ಜುಲೈ ೧೨ ನೇ ತಾರೀಖಿಗೆ ಹೊರಟರು. ಮೈಯಲ್ಲಿ ಜ್ವರವಿದ್ದವು. ಪ್ರತಿಸಲದಂತೆ ಸರದಾರ ಗೃಹದಲ್ಲಿ ಇಳಿದರು. ಕೈಫಿಯತ್ತನ್ನು ಸಿದ್ಧಗೊಳಿಸಿದರು. ಬ್ಯಾರಿಸ್ಟರರ ಮುಖಾಂತರ ಅದನ್ನು ಹೈಕೋರ್ಟಿಗೆ ಕೊಡಿಸಿದರು. ವಿಚಾರಣೆಯು ೧೪ ಕ್ಕೆ ಇದ್ದಿತು. ೨೧ನೇ ತಾರೀಖಿನ ದಿವಸ ಹಾಯಕೋರ್ಟು ಕೊಲ್ಹಾಪುರದ ಮಹಾರಾಜರ ಅರ್ಜಿಯನ್ನು ಕಿತ್ತೊಗೆದು, ಕೋರ್ಟಿನ ಖರ್ಚನ್ನು ಕೊಡಿಸಿತು. ಇದು ಟಿಳಕರ ಕೊನೆಯ ವಿಜಯವು.

ಲೋಕಮಾನ್ಯರ ಮೈಯಲ್ಲಿ ಜ್ವರವಿದ್ದವು. ದಿವಾಣ ಚಮನಲಾಲರು ಭೆಟ್ಟಿಯಾಗಿ ಹವೆ ಬದಲಿಸಲು ಹೇಳಿದರು. ಕಾಶ್ಮೀರಕ್ಕೆ ಹೋಗಲು ಸೂಚಿಸಿದರು. ಆದರೆ ಟಿಳಕರು ಅಷ್ಟುದೂರ ಹೋಗಲು ಶಕ್ಯವಿಲ್ಲ. ಇಲ್ಲಿಯೇ ಎಲ್ಲಿಯಾದರೂ ಹೋಗಲು ಬಯಸುವೆನೆಂದರು. ಮಾತನಾಡುತ್ತಾಡುತ್ತ ಅಸಹಕಾರದ ಪ್ರಶ್ನೆ ಬಂದಿತು. ಅದರ ಮೇಲೆ ನನ್ನ ವಿಶ್ವಾಸವಿದೆ. ಯಾವ ರೀತಿಯಿಂದ ಮಾಡಬೇಕೆಂಬುದೇ ಪ್ರಶ್ನೆ ಎಂದರು. ಜನರು ಸಿದ್ಧರಿದ್ದರೆ, ಆ ಹಾದಿಯು ಸುಲಭ. ಪ್ರಾಗತಿಕರು ನಮ್ಮೊಡನೆ ಇಲ್ಲ. ನಾವು ಕಾಯಿದೆ ಕೌನ್ಸಿಲ್ಲಿನಿಂದ ಅಂಗ ತೆಗೆದುಕೊಂಡರೆ ಆಯೋಗ್ಯರು ಸೇರುವರು. ನಾವೇ ರಾಷ್ಟ್ರದ ಪ್ರತಿನಿಧಿಗಳೆನ್ನುವರು ಎಂದರು. ರಾಷ್ಟ್ರವು ಸಿದ್ಧವಿದೆಯೇ ? ಎಂಬುದನ್ನು ನೋಡಬೇಕೆಂದರು. ಇಬ್ಬರೂ ಕೂಡಿ ತಿರುಗಾಡಲು ಹೋದರು. ಆದರಿಂದ ಜ್ವರ ಹೆಚ್ಚಿದವು. ಜುಲೈ ೨೩ ರಕ್ಕೆ ಅವರ ಹುಟ್ಟಿದ ಹಬ್ಬ

ವಾಯಿತು. ಅಂದು ಅವರಿಗೆ ಸ್ವಲ್ಪ ಗುಣವೆನಿಸಿತು. ಆದರೆ ಪರಮಾತ್ಮನ ಸಂಕಲ್ಪ ವೇ ಬೇರೆ ಇದ್ದಂತೆ ತೋರುತ್ತದೆ. ಗಾಂಧೀಜಿಯವರು ಅಸಹಕಾರದ ಧ್ವಜವನ್ನೆತ್ತಿ ರಾಜಕೀಯ ಕ್ಷಿತಿಜದ ಮೇಲೆ ವಿರಾಜಮಾನರಾಗಿದ್ದರು. ಪ್ರತಿ ಯೋಗಿ ಸಹಕಾರದ ವಿಚಾರಗಳು ಹಿಂದೆ ಬೀಳಹತ್ತಿದವು. ಗಾಂಧೀಜಿಯವರು ರಾಷ್ಟ್ರವನ್ನು ಮುನ್ನಡಿಸುವ ಯೋಜನೆಯನ್ನು ದೇವರು ಮಾಡಿದಂತೆ ಕಂಡಿತು. ಬೇನೆಯು ಮರುಕಳಿಸಿತು. ಡಾಕ್ಟರರು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗ ಲಿಲ್ಲ. ದೇಶದೇಶಗಳಿಂದ ಟಿಳಕರ ಪ್ರಕೃತಿಯ ಬಗೆಗೆ ತಂತಿಗಳು ಬರುತ್ತಿದ್ದವು. ಗಾಂಧೀಜಿಯವರು ಧಾವಿಸಿದರು. ೧೯೨೦ ರ ಜುಲೈ ೩೧ ನೇ ತಾರೀಖಿನ ರಾತ್ರಿ ೧೨ ಹೊಡೆದು ೪೦ ಮಿನೀಟಿಗೆ ಗಾಂಧೀಜಿಯವರ ಕೈಯಲ್ಲಿ ರಾಷ್ಟ್ರ ವನ್ನು ಕೊಟ್ಟು ಲೋಕಮಾನ್ಯರು ಪರಲೋಕಕ್ಕೆ ತೆರಳಿದರು. ದೇದಿಪ್ಯಮಾನ ನಾದ ಸೂರ್ಯನು ಅಸ್ತಂಗತನಾದನು. ಜಗತ್ತೆಲ್ಲವೂ ಶೋಕಸಾಗರದಲ್ಲಿ ಮುಳುಗಿತು. ದೇಹವು ಮಣ್ಣಿನಲ್ಲಿ ಬೆರೆಯಿತು. ಜೀವಾತ್ಮನು ಪರಮಾತ್ಮನ ಸ್ಥಾನಕ್ಕೆ ಹೊರಟನು. ಟಿಳಕರು ಭಾರತೀಯರ ಅಂತಃಕರಣದ ಗದ್ದುಗೆ ಯನ್ನು ಏರಿದರು. ರಾಷ್ಟ್ರಪುರುಷನಿಗೆ ತಕ್ಕಂತೆ ಅವರ ಸ್ಮಶಾನ ಯಾತ್ರೆ ನಡೆಯಿತು. ಅವರ ಚಿತೆಯ ಸಮಕ್ಷಮದಲ್ಲಿಯೇ ರಾಷ್ಟ್ರವು ಸ್ವಾತಂತ್ರ್ಯದ ಪ್ರತಿಜ್ಞೆಗೈಯಿತು. ಗಾಂಧಿಜಿಯವರು ರಾಷ್ಟ್ರದ ಸೂತ್ರಚಾಲಕರಾದರು.

|| ಶ್ರೀ ಕೃಷ್ಣಾರ್ಪಣಮಸ್ತು ||

---